# ಚಿತ್ರದುರ್ಗದ ಐತಿಹ್ಯಗಳು: ಜಾನಪದೀಯ ವಿಶ್ಲೇಷಣೆ

(ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗಕ್ಕೆ
ಪಿಎಚ್.ಡಿ. ಪದವಿಗಾಗಿ ಅರ್ಪಿಸಿದ ಮಹಾಪ್ರಬಂಧ)

ಸಂಶೋಧಕರು
ಪಾಲಯ್ಯ ಜಿ.

ಮಾರ್ಗದರ್ಶಕರು
ಡಾ. ಮಂಜುನಾಥ ಬೇವಿನಕಟ್ಟಿ
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ



ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೭

# ಚಿತ್ರದುರ್ಗದ ಐತಿಹ್ಯಗಳು: ಜಾನಪದೀಯ ವಿಶ್ಲೇಷಣೆ

(ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗಕ್ಕೆ
ಪಿಎಚ್.ಡಿ. ಪದವಿಗಾಗಿ ಅರ್ಪಿಸಿದ ಮಹಾಪ್ರಬಂಧ)

ಸಂಶೋಧಕರು
**ಪಾಲಯ್ಯ ಜಿ.**



ಮಾರ್ಗದರ್ಶಕರು
**ಡಾ. ಮಂಜುನಾಥ ಬೇವಿನಕಟ್ಟಿ**
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ




ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ೫೮೩೨೭೬

೨೦೧೨

# ಮಾರ್ಗದರ್ಶಕರ ದೃಢೀಕರಣ ಪತ್ರ

**ಪಾಲಯ್ಯ ಜಿ.** ಇವರು **ಚಿತ್ರದುರ್ಗದ ಐತಿಹ್ಯಗಳು: ಜಾನಪದೀಯ ವಿಶ್ಲೇಷಣೆ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ ಸಮಾಜ ವಿಜ್ಞಾನಗಳ ನಿಕಾಯದ **ಜಾನಪದ ಅಧ್ಯಯನ ವಿಭಾಗಕ್ಕೆ** ಸಲ್ಲಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 02-11-2017
ಸ್ಥಳ : ವಿದ್ಯಾರಣ್ಯ

**ಡಾ. ಮಂಜುನಾಥ ಬೇವಿನಕಟ್ಟಿ**
ಮಾರ್ಗದರ್ಶಕರು ಹಾಗೂ ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ-೫೮೩ ೨೭೬**

# **ಸಂಶೋಧಕರ ಪ್ರಮಾಣ ಪತ್ರ**

**ಚಿತ್ರದುರ್ಗದ ಐತಿಹ್ಯಗಳು: ಜಾನಪದೀಯ ವಿಶ್ಲೇಷಣೆ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಡಾ. ಮಂಜುನಾಥ ಬೇವಿನಕಟ್ಟಿ,** ಪ್ರಾಧ್ಯಾಪಕರು ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ ಸಮಾಜ ವಿಜ್ಞಾನಗಳ ನಿಕಾಯದ **ಜಾನಪದ ಅಧ್ಯಯನ ವಿಭಾಗಕ್ಕೆ** ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ದಿನಾಂಕ :** 02.11.2017
**ಸ್ಥಳ :** ವಿದ್ಯಾರಣ್ಯ

**ಪಾಲಯ್ಯ ಜಿ.**
ಸಂಶೋಧಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ-೫೮೩ ೨೭೬**

# ಪರಿವಿಡಿ

ಅಧ್ಯಾಯ : ಒಂದು

**ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಸ್ವರೂಪ ಮತ್ತು ಸಮೀಕ್ಷೆ / ೧ – ೧೧**

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ವಿಧಾನ

೧.೪. ಅಧ್ಯಯನದ ಸ್ವರೂಪ

೧.೫. ಅಧ್ಯಯನದ ಸಮೀಕ್ಷೆ

ಅಧ್ಯಾಯ : ಎರಡು

**ಚಿತ್ರದುರ್ಗ ಪರಿಸರದ ಸಾಂಸ್ಕೃತಿಕ ಹಿನ್ನೆಲೆ / ೧೨ – ೩೬**

೨.೧. ಭೌಗೋಳಿಕ ಹಿನ್ನೆಲೆ

೨.೨. ಚಾರಿತ್ರಿಕ ಹಿನ್ನೆಲೆ

೨.೩. ಸಾಂಸ್ಕೃತಿಕ ಹಿನ್ನೆಲೆ

ಅಧ್ಯಾಯ : ಮೂರು

**ಐತಿಹ್ಯ ಅರ್ಥ, ಸ್ವರೂಪ, ಪದನಿಷ್ಪತ್ತಿ, ವ್ಯಾಖ್ಯಾನ**

**ಮತ್ತು ವರ್ಗೀಕರಣ / ೩೭ – ೫೨**

೩.೧. ಐತಿಹ್ಯ ಪದನಿಷ್ಪತ್ತಿ

೩.೨. ಐತಿಹ್ಯ ವ್ಯಾಖ್ಯಾನ

೩.೩. ಐತಿಹ್ಯಗಳ ವರ್ಗೀಕರಣ

ಅಧ್ಯಾಯ : ನಾಲ್ಕು

**ಚಿತ್ರದುರ್ಗ ಪರಿಸರದ ಐತಿಹ್ಯಗಳು / ೫೩ – ೧೧೭**

೪.೧. ಸ್ಥಳ ಪ್ರಧಾನ ಐತಿಹ್ಯಗಳು

೪.೨. ವ್ಯಕ್ತಿ ಪ್ರಧಾನ ಐತಿಹ್ಯಗಳು

೪.೩. ಘಟನಾ ಪ್ರಧಾನ ಐತಿಹ್ಯಗಳು

ಅಧ್ಯಾಯ : ಐದು

**ಪಶುಪಾಲಕರಿಗೆ ಸಂಬಂಧಿಸಿದ ಐತಿಹ್ಯಗಳು / ೧೧೮ – ೧೮೬**

೫.೧. ಬೇಡ ಸಮುದಾಯಕ್ಕೆ ಸಂಬಂಧಿಸಿದ ಐತಿಹ್ಯಗಳು

೫.೨. ಗೊಲ್ಲ ಸಮುದಾಯಕ್ಕೆ ಸಂಬಂಧಿಸಿದ ಐತಿಹ್ಯಗಳು

ಅಧ್ಯಾಯ : ಆರು

**ಪಾಳೆಯಗಾರರಿಗೆ ಸಂಬಂಧಿಸಿದ ಐತಿಹ್ಯಗಳು / ೧೮೭ – ೨೧೩**

೬.೧. ಹಟ್ಟಿ ನಾಯಕರಿಗೆ ಸಂಬಂಧಿಸಿದ ಐತಿಹ್ಯಗಳು

೬.೨. ಹರತಿ ಪಾಳೆಯಗಾರರಿಗೆ ಸಂಬಂಧಿಸಿದ ಐತಿಹ್ಯಗಳು

೬.೫. ಚಿತ್ರದುರ್ಗ ಪಾಳೆಯಗಾರರಿಗೆ ಸಂಬಂಧಿಸಿದ ಐತಿಹ್ಯಗಳು

ಅಧ್ಯಾಯ : ಏಳು

**ಸಮಾರೋಪ / ೨೧೪ – ೨೧೯**

* ಅಧ್ಯಯನದ ಫಲಿತಗಳು

**ಅನುಬಂಧ**

೧. ವಕ್ತೃಗಳ ವಿವರ / ೨೨೦ – ೨೩೧

೨. ಪರಾಮರ್ಶನ ಗ್ರಂಥಗಳು / ೨೩೨ – ೨೪೦

೩. ಸಾಂಸ್ಕೃತಿಕ ಪದಕೋಶ / ೨೪೧ – ೨೪೨

೪. ಚಿತ್ರದುರ್ಗ ಜಿಲ್ಲೆಯ ನಕಾಶೆ / ೨೪೩

೫. ಛಾಯಾಚಿತ್ರಗಳು / ೨೪೪

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಸ್ವರೂಪ ಮತ್ತು ಸಮೀಕ್ಷೆ

೧.೧. ಅಧ್ಯಯನದ ಉದ್ದೇಶ
೧.೨. ಅಧ್ಯಯನದ ವ್ಯಾಪ್ತಿ
೧.೩. ಅಧ್ಯಯನದ ವಿಧಾನ
೧.೪. ಅಧ್ಯಯನದ ಸ್ವರೂಪ
೧.೫. ಅಧ್ಯಯನದ ಸಮೀಕ್ಷೆ

# ಅಧ್ಯಾಯ : ಒಂದು

# ಅಧ್ಯಯನ ಉದ್ದೇಶ, ವ್ಯಾಪ್ತಿ, ವಿಧಾನ, ಸ್ವರೂಪ ಮತ್ತು ಸಮೀಕ್ಷೆ

## ಪ್ರಸ್ತಾವನೆ

ಸಮಾಜ ಮತ್ತು ಸಂಸ್ಕೃತಿಯು ನಿತ್ಯ ಪರಿವರ್ತನಶೀಲವಾದುದು. ಒಂದನ್ನೊಂದು ಬೆಸೆದುಕೊಂಡೇ ಅದರ ಒಳರಚನೆಗಳು ವಿಸ್ತೃತಗೊಳ್ಳುತ್ತಾ, ಬೆಳವಣಿಗೆಯನ್ನು ಹೊಂದುತ್ತವೆ. ಆದರೆ ವ್ಯಕ್ತಿಯ ವ್ಯಕ್ತಿತ್ವ ಮತ್ತು ವಿಕಾಸ ಪರಿಸರವನ್ನು ಆಶ್ರಯಿಸಿರುತ್ತವೆ. ವ್ಯಕ್ತಿ ದೈನಂದಿನ ಬದುಕಿನಲ್ಲುಂಟಾಗುವ ಎಡರು-ತೊಡರುಗಳು, ಅಪಾಯ-ಅವಘಡಗಳು, ಕೋಪ-ಮನಃಸ್ತಾಪಗಳು, ದುಃಖ-ದುಮ್ಮಾನಗಳನ್ನು ಅನುಭವಿಸುತ್ತಾ, ಈ ಅನುಭವದಿಂದ ಬಹಳ ಎಚ್ಚರವಾಗಿಯೇ ವ್ಯಕ್ತಿಯು ಬದುಕುತ್ತಾನೆ. ಅವನಲ್ಲಿರುವ ಅನುಭವದ ಎಚ್ಚರವು ಗತಕಾಲದ ಪರಂಪರೆಯಿಂದ ಜನಿತವಾಗಿದೆ. ಹೀಗೆಯೇ ವ್ಯಕ್ತಿಯ ವಿಕಾಸ ಮತ್ತು ಸಮಾಜದ ಸರ್ವತೋಮುಖ ಬೆಳವಣಿಗೆಗೆ ಬಹುಮುಖ್ಯ ಪಾತ್ರವಹಿಸುವಂತಹ ಜ್ಞಾನದ ಶಿಸ್ತುವಾಗಿದೆ.

ಜನಪದ ಸಮಾಜದಲ್ಲಿ ನೈತಿಕ ಉದ್ದೇಶವಿರುವುದರಿಂದ ಪರಂಪರೆಯನ್ನು ಉಳಿಸಿಕೊಳ್ಳುವ, ಕಾಪಾಡಿಕೊಳ್ಳುವ, ಕಟ್ಟುವ ಪ್ರಯತ್ನಗಳು ಆರಂಭದಿಂದಲೂ ನಡೆದುಕೊಂಡು ಬಂದಿವೆ. ಭೂತಕಾಲದ ಸನ್ನಿವೇಶಗಳು ವರ್ತಮಾನದ ಬದುಕಿಗೆ ತಳಪಾಯವಾಗುವುದರ ಜೊತೆಗೆ ಭವಿಷ್ಯತ್ತನ್ನು ಸೃಷ್ಟಿ ಮಾಡುವ ಸಾಮರ್ಥ್ಯವು ಪರಂಪರೆಯಾಗಿದೆ. ಇಂತಹ ಸದುದ್ದೇಶದಿಂದ ನಮ್ಮ ಹಿರಿಯರು ಪರಂಪರೆ ಅಥವಾ ಚರಿತ್ರೆಯನ್ನು ಕಟ್ಟಿಕೊಂಡಿದ್ದಾರೆ. ಸಾಹಿತ್ಯ ಕಥನಗಳು, ಆಚರಣೆಗಳು, ನಂಬಿಕೆ ಮತ್ತು ಸಂಪ್ರದಾಯಗಳಲ್ಲಿ ತಲೆಮಾರುಗಳ ಇತಿಹಾಸ ಅಡಕವಾಗಿರುತ್ತದೆ. ಯಾವುದೋ ವ್ಯಕ್ತಿಗೆ, ಯಾವುದೋ ಪ್ರದೇಶಕ್ಕೆ, ಯಾವುದೋ ಕಾಲದಲ್ಲಿ ನಡೆದಿರಬಹುದಾದ ಘಟನೆಗಳನ್ನು ಕಥನಗಳ ಮೂಲಕ, ಪ್ರದರ್ಶನ ಕಲೆಗಳ ಮೂಲಕ ಮತ್ತು ಆಚರಣೆಗಳ ಮೂಲಕ ತಲೆಮಾರುಗಳ ಇತಿಹಾಸವು ಜೀವಂತವಾಗಿರುತ್ತದೆ.

ಜನಪದರ ಪಾರಂಪರಿಕ ಕಥನ, ಪ್ರದರ್ಶನವು ಯಾವುದೋ ಕಾಲದಲ್ಲಿ ನಡೆದಿದ್ದರು ಕೂಡ ಗಾಯಕ ಮತ್ತು ಪ್ರದರ್ಶನಕಾರನ ದೃಷ್ಟಿಯಲ್ಲಿ ಮರುಹುಟ್ಟು ಪಡೆದುಕೊಳ್ಳುತ್ತದೆ. ಜೊತೆಗೆ ಅಂದಿನ ವಾಸ್ತವ ಬದುಕಿಗೆ ಕನ್ನಡಿಯಾಗಿರುತ್ತದೆ.

ಸಮಾಜದಲ್ಲಿ ವ್ಯಕ್ತಿ ಪರಂಪರೆಯನ್ನು ಇತ್ಯಾತ್ಮಕವಾಗಿ ಕಟ್ಟಿಕೊಂಡಿದ್ದಾನೆ ಎಂಬುದು ಈ ಮೂಲಕ ತಿಳಿಯುತ್ತದೆ. ಆದರೆ ಭಾರತೀಯ ಸಂದರ್ಭವನ್ನು ದೃಷ್ಟಿಯಾಗಿಟ್ಟುಕೊಂಡಾಗ 'ಚರಿತ್ರೆಯು ಮೌಖಿಕ ಸಂಸ್ಕೃತಿ' ಸ್ವರೂಪದ್ದಾಗಿದೆ. ಈ ಮೌಖಿಕ ಸಂಸ್ಕೃತಿಯಲ್ಲಿ ಕಾಣುವ ಅಭಿವ್ಯಕ್ತಿಯ ಸ್ವಾತಂತ್ರ್ಯವು ಲಿಖಿತ ಸಂಸ್ಕೃತಿಯಲ್ಲಿ ಕಡಿಮೆ. ಜನಪದರಿಗೆ ಮೌಖಿಕ ಸಂಸ್ಕೃತಿಯಲ್ಲಿದ್ದಂತಹ ಆಪ್ತತೆ, ಸ್ವತಂತ್ರತೆಯು ಲಿಖಿತ ಸಂಸ್ಕೃತಿಯಲ್ಲಿ ಸಿಗಲಿಲ್ಲ. ಜನಪದ ಸಮಾಜಗಳನ್ನು ರಾಜಪ್ರಭುತ್ವಗಳು, ಪುರೋಹಿತಶಾಹಿಗಳು ಲಿಖಿತ ಸಂಸ್ಕೃತಿಯಿಂದ ದೂರವಿಟ್ಟವು. ಈ ಕಾರಣದಿಂದಲೇ ನಮ್ಮ ಜನಪದಗಳ ಚಾರಿತ್ರಿಕ ಪರಂಪರೆ ಮೌಖಿಕವಾಗಿಯೇ ಉಳಿದಿದೆ. ಇಂತಹ ಚಾರಿತ್ರಿಕ ಪರಂಪರೆಯನ್ನು ಪಾಶ್ಚಿಮಾತ್ಯ ಚಿಂತನೆಗಳು ಬ್ರಿಟಿಷರ ಆಡಳಿತ ಸಂದರ್ಭದಲ್ಲಿ 'ಭಾರತೀಯರಿಗೆ ಚರಿತ್ರೆಯಿಲ್ಲ' ಎಂದು ನಕರಾತ್ಮಕವಾದಗಳನ್ನು ಮಂಡಿಸಿದವು. ಇಂತಹ ವಾದಗಳು ಕೇವಲ ಲಿಖಿತ ಪರಂಪರೆಯನ್ನು ಲಕ್ಷ್ಯವಿರಿಸಿಕೊಂಡು ಪ್ರತಿಪಾದಿಸಿದ ಧೋರಣೆಯಾಗಿರುತ್ತದೆ. ಬ್ರಿಟಿಷರ ಆಡಳಿತ ಸಂದರ್ಭದಲ್ಲಿನ ಅಧಿಕಾರಿಗಳಿಗೆ ಭಾರತವನ್ನು ಸಂಪೂರ್ಣ ಕೈವಶ ಮಾಡಿಕೊಳ್ಳುವ ಉದ್ದೇಶ ಮತ್ತು ಆಡಳಿತಕ್ಕಾಗಿ ಲಿಖಿತವಾದ ಚರಿತ್ರೆ ಅಪೇಕ್ಷಣೀಯವಾಗಿತ್ತು. ಈ ಮೂಲಕ ಭಾರತದ ಚರಿತ್ರೆಯ ಅಧ್ಯಯನಗಳು ಏಕಮುಖವಾಗಿ ಆರಂಭಗೊಂಡವು. ಈ ಅಧ್ಯಯನ ಶಿಸ್ತುಗಳು ಯಾವುದೇ ತಾತ್ವಿಕತೆಯ ಸಿದ್ಧಾಂತವನ್ನು ಇಟ್ಟುಕೊಂಡು ಮುಂದಾಗಲಿಲ್ಲ. ಅವುಗಳು ಕೇವಲ ಸಂಗ್ರಹಿಸುವ ಅಧ್ಯಯನಗಳಾಗಿದ್ದವು. ಇಂತಹ ಅಧ್ಯಯನಗಳು ಸಮಾಜದಲ್ಲಿ ಉನ್ನತವೆಂದು ಕಾಣಿಸುವ ಪ್ರಭುತ್ವಶಾಹಿಗಳ ಮತ್ತು ಪುರೋಹಿತಶಾಹಿಗಳ ಪರಂಪರೆಯನ್ನು ಕಟ್ಟುವಂತಹ ಕೆಲಸ ಮಾಡುತ್ತವೆ. ಇಂತಹ ಏಕಮುಖ ದೃಷ್ಟಿಕೋನಗಳು ಭಾರತದ ಬಹುಸಂಸ್ಕೃತಿಗಳ ಚರಿತ್ರೆಯ ಬಗ್ಗೆ ನಿರ್ಲಕ್ಷ್ಯ ತೋರಿದೆ. ಆರಂಭದ ಚಾರಿತ್ರಿಕ ಅಧ್ಯಯನಕಾರರು ಕೂಡ ಜನಸಮುದಾಯಗಳ ಅಥವಾ ಕೆಳವರ್ಗಗಳ ಚರಿತ್ರೆಯನ್ನು ಎಲ್ಲಿಯೂ ಕೂಡ ದಾಖಲಿಸುವಂತಹ ಕೆಲಸವನ್ನು ಮಾಡಿಕೊಂಡು ಬರಲಿಲ್ಲ. ಚರಿತ್ರೆಯುದ್ದಕ್ಕೂ ಅವಗಾಹನೆಗೆ ಒಳಗಾದಂತಹ ಕೆಳವರ್ಗಗಳ ಪರಂಪರೆಯಲ್ಲಿಯೇ ನಮ್ಮ ದೇಶದ ಜನಪದ ಐತಿಹ್ಯಗಳ ಪರಂಪರೆಯಿದೆ ಎಂಬುದನ್ನು ಮರೆತವು. ಸಾಮಾಜಿಕತೆ, ರಾಜಕೀಯತೆ, ಧಾರ್ಮಿಕತೆ ಮತ್ತು ಆರ್ಥಿಕತೆ ಹೀಗೆ ಸರ್ವತೋಮುಖ ಅಧ್ಯಯನಗಳು ಹೆಚ್ಚು ಹೆಚ್ಚು ಅವಶ್ಯಕವಾಗಿವೆ. ದಾಖಲಾಗಿರುವ, ಪುರಾಣ ವ್ಯಕ್ತಿಗಳ ಮತ್ತು ರಾಜ ಮಹಾರಾಜರ ಬಗ್ಗೆ ಜನಪದ ಸಮಾಜವು ಮೌಖಿಕ ಕಥನಗಳಲ್ಲಿರುವ ವಾಸ್ತವ ಸತ್ಯವು ಜನಪದ ಬದುಕಿನೊಂದಿಗೆ ತಳುಕು ಹಾಕಿಕೊಂಡಿರುತ್ತದೆ.

ಸಮಾಜದಲ್ಲಿ ಉನ್ನತ ವರ್ಗದವರೆಂದು ಗುರುತಿಸಿಕೊಂಡವರಿಗೆ ಪುರಾಣಗಳೇ ಐತಿಹ್ಯಗಳು. ಉದಾಹರಣೆಗೆ ಪುರಾಣ, ವೇದಗಳು ಮತ್ತು ಆಗಮಗಳು. ಆದರೆ ತಳಸಮುದಾಯಗಳಿಗೆ ದೈನಂದಿನ ವಾಸ್ತವ ಬದುಕೇ ಐತಿಹ್ಯಗಳಾಗಿ ರೂಪುಗೊಂಡಿವೆ. ತರುವಾಯ ತಳಸಮುದಾಯಗಳಲ್ಲಿ ಪುರಾಣಗಳಾಗಿ ಮಾರ್ಪಟ್ಟಿರುವುದು ತಿಳಿಯುತ್ತದೆ. ಈ ಕಾರಣಗಳಿಂದಾಗಿ ಜನಪದರ ಐತಿಹ್ಯಗಳನ್ನು ವೈದೀಕರಣಗೊಳಿಸಲಾಗುತ್ತಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಜನಪದ ದೈವವಾದ

ತಿಪ್ಪಯ್ಯ, ಪ್ರಸ್ತುತ ತಿಪ್ಪೇಸ್ವಾಮಿ ಅಥವಾ ತಿಪ್ಪೆರುದ್ರಸ್ವಾಮಿ ಶೈವದಿಂದ ವೀರಶೈವನಾಗಿ ಮಾರ್ಪಟ್ಟಿರುವುದು. ಐತಿಹ್ಯಗಳ ವ್ಯಾಪ್ತಿ ಇಷ್ಟಕ್ಕೆ ಸೀಮಿತವಾಗಿರುವುದಿಲ್ಲ. ಬದಲಾಗಿ ಇವುಗಳು ವಸ್ತು ಸಾಮಗ್ರಿ, ಕ್ರಿಯಾ ಸಾಮಗ್ರಿ ಮತ್ತು ಭಾಷಾ ಸಾಮಗ್ರಿಗಳ ನೆಲೆಗಳಲ್ಲಿ ಹುಟ್ಟಿಕೊಂಡಿರುವುದುಂಟು. ಅಲ್ಲದೆ ಅವುಗಳನ್ನು ಇಂದಿಗೂ ಹುಟ್ಟು ಹಾಕುತ್ತಲೇ ಮುಂದುವರೆದಿರುವುದು ಸಹ ಗಂಭೀರವಾದುದು. ಅಂದರೆ ಇತಿಹಾಸ ರಚನೆಗೆ ಶಾಸನ, ಸ್ಮಾರಕಗಳು ನೆರವಾದರೆ, ಆಕರಗಳ ಹುಟ್ಟಿನ ಇತಿಹಾಸವನ್ನು ಐತಿಹ್ಯಗಳು ಬಿಚ್ಚಿಡುತ್ತವೆ. ಹೀಗಾಗಿ ಐತಿಹ್ಯಗಳು ಇತಿಹಾಸದ ಆಕರಗಳು ಹೌದು.

ಐತಿಹ್ಯಗಳಲ್ಲಿ ದಂತಕಥೆ, ಊಹೆ, ಪುರಾಣ ಕಲ್ಪನೆಗಳಿವೆ ಎಂಬ ಭಾವನೆಯಿಂದ ಉಪೇಕ್ಷೆ ಮಾಡುತ್ತಾ ಬಂದಿರುವ ಮಡಿವಂತಿಕೆಯ ವಿದ್ವಾಂಸರು, ಅಲ್ಲಿನ ಸತ್ಯವನ್ನು ಕಾವ್ಯ, ಶಾಸನ, ಆಚಾರ, ವಿಚಾರಗಳಂಥ ಅನ್ಯಮೂಲಗಳಿಂದಲೇ ನೈಜತೆಗಳು ಮನವರಿಕೆಯಾಗುತ್ತವೆ ಎಂಬುದನ್ನು ಸಹ ಇಲ್ಲಿ ಪರಿಶೀಲಿಸಲಾಗುವುದು.

ಹಾಗಾಗಿ ಮೌಖಿಕ ಕಥನಗಳಾಗಿರುವ 'ಐತಿಹ್ಯಗಳ' ದಾಖಲೆ ಚರಿತ್ರೆಗಿಂತ ಹೆಚ್ಚು ಪರಿಣಾಮಕಾರಿಯಾದದ್ದು. ಐತಿಹ್ಯಗಳಲ್ಲಿ ಸಮಗ್ರ ದೃಷ್ಟಿಗಳನ್ನು ಕಾಣಬಹುದು. ಭೌಗೋಳಿಕತೆ, ಸಾಮಾಜಿಕತೆ, ಆರ್ಥಿಕತೆ, ರಾಜಕೀಯತೆ, ಸಾಂಸ್ಕೃತಿಕತೆ ಮತ್ತು ಭಾಷಿಕತೆ ಹೀಗೆ ವೈವಿಧ್ಯಮಯವಾಗಿರುವ ಐತಿಹ್ಯಗಳ ಬಗ್ಗೆ ಅಧ್ಯಯನಗಳ ಅವಶ್ಯಕತೆ ಅನಿವಾರ್ಯವಾಗಿದೆ.

ಇಲ್ಲಿಯವರೆಗೂ ರಚನೆಗೊಂಡಿರುವ 'ಲಿಖಿತ ಇತಿಹಾಸ'ವು ಬಹುಪಾಲು ಪ್ರಭುತ್ವವನ್ನೇ ಕೇಂದ್ರೀಕರಿಸಿದಂತಹ ದೃಷ್ಟಿಕೋನ ಆಗಿದೆ. ಆದರೆ ಈ ದೃಷ್ಟಿಕೋನವು ಮಿತಿಗಳಿಗೆ ಒಳಪಡುವಂಥದ್ದು. ಪ್ರಭುತ್ವಕ್ಕೆ ಮಾತ್ರ ಸೀಮಿತವಾದ ಈ ಬಗೆಯ ಇತಿಹಾಸ ಸಮಾಜದ ಇನ್ನುಳಿದ ಆಯಾಮಗಳನ್ನು ಗೌಣವಾಗಿಸುತ್ತದೆ. 'ಜನ' ಅಥವಾ 'ಜನಪದ'ರನ್ನೊಳಗೊಂಡ ಚರಿತ್ರೆಯ ಚಹರೆಗಳು ಇಲ್ಲಿ ಪ್ರಧಾನಧಾರೆಗೆ ಬರುವುದೇ ಇಲ್ಲ. ಈವರೆಗೂ ರಚನೆಗೊಂಡಿರುವ ಸಾಂಪ್ರದಾಯಿಕ ಚರಿತ್ರೆಗಳು ಪ್ರಭುತ್ವವನ್ನು ಹೊರತುಪಡಿಸಿದ ಆಳ್ವಿಕೆಗೆ ಒಳಪಟ್ಟವರ, ಜನಸಾಮಾನ್ಯರ ಚಹರೆಗಳನ್ನು ಕಟ್ಟಿಕೊಡುವಲ್ಲಿ ಸೋತಿವೆ. ಹೀಗೆ ಸೋಲುವುದರ ಜೊತೆಗೆ ಬಹುಮುಖಿ ನೆಲೆಯ ಸಾಂಸ್ಕೃತಿಕ ಒಳನೋಟಗಳ ಫಲಿತಗಳನ್ನು ಪಡೆಯುವಲ್ಲಿಯೂ ವಿಫಲವಾಗಿರುವುದುಂಟು. ಈ ಕೊರತೆಗಳನ್ನು ಲಿಖಿತ ಚರಿತ್ರೆಗಳ ಜೊತೆ ಜೊತೆಯಾಗಿ ಮೌಖಿಕ ಚರಿತ್ರೆಯ ಆಕರಗಳ ಮೂಲಕ ತೌಲನಿಕವಾಗಿ ಪರಿಶೀಲಿಸುವ ಜರೂರು ಈ ಅಧ್ಯಯನದ್ದಾಗಿದೆ. ಈ ಹಿನ್ನೆಲೆಯಲ್ಲಿ 'ಜನ', 'ಜನಪದ' ಅಥವಾ 'ಜನಸಾಮಾನ್ಯ'ರನ್ನು ಹೆಚ್ಚಾಗಿ ಪ್ರತಿನಿಧಿಸಿ, ಪ್ರತಿಬಿಂಬಿಸುವ ವಿಭಿನ್ನ ಪ್ರಕಾರಗಳ ಮೌಖಿಕ ಆಕರಗಳನ್ನೇ ಈ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಅದರಲ್ಲೂ ವ್ಯಕ್ತಿ, ಸ್ಥಳ ಮತ್ತು ಘಟನೆಗಳ ನಿರೂಪಣೆಯನ್ನು ಕಟ್ಟಿಕೊಡುವಂಥ 'ಐತಿಹ್ಯ'ಗಳನ್ನೇ ನೇರವಾಗಿ ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಂಡಿರುವುದು ಇಲ್ಲಿನ ವಿಶೇಷತೆ. ಈ ಬಗೆಯ ನೋಟದಿಂದ

'ಜನಪದ'ರ ಇತಿಹಾಸ ಅಥವಾ 'ಜನಸಾಮಾನ್ಯ'ರ ಚರಿತ್ರೆಯನ್ನು ಕಟ್ಟಿಕೊಡಲು ಸಾಧ್ಯ ಎಂಬುದು ಇಲ್ಲಿನ ಆಶಯ. ಇದರ ಜೊತೆಗೆ ಸಂಸ್ಕೃತಿಗಳಲ್ಲಿನ ಬಹುಮುಖಿ ಚಹರೆ ಹಾಗೂ ಸಂಗತಿಗಳನ್ನು ಅನಾವರಣ ಮಾಡುವ ತುಡಿತವೂ ಹೌದು.

## ೧.೧. ಅಧ್ಯಯನದ ಉದ್ದೇಶ

ಪ್ರಸ್ತುತ "ಚಿತ್ರದುರ್ಗದ ಐತಿಹ್ಯಗಳು: ಜಾನಪದೀಯ ವಿಶ್ಲೇಷಣೆ" ಎಂಬ ಅಧ್ಯಯನವು ಚಿತ್ರದುರ್ಗ ಪರಿಸರವನ್ನು ಕುರಿತಾಗಿದೆ.

* ಪ್ರಸ್ತುತ ಚಿತ್ರದುರ್ಗ ಜಿಲ್ಲೆಯು ಆಂಧ್ರಪ್ರದೇಶ ಗಡಿ ಆಗಿರುವುದರಿಂದ ತೆಲುಗು ಭಾಷೆಯ ಪ್ರಭಾವವಾಗಿದೆ. ಇಲ್ಲಿನ ಐತಿಹ್ಯಗಳನ್ನು ದ್ವಿಭಾಷಿಕ ನೆಲೆಯಲ್ಲಿ ಐತಿಹ್ಯಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

* ಸ್ಥಳನಾಮಗಳು ಭಾಷಿಕ ಘಟಕಗಳೇ ಆಗಿದ್ದರೂ, ಕೇವಲ ಭಾಷಿಕ ಘಟಕಗಳೆಂದು ನೋಡದೆ, ಅವುಗಳನ್ನು ಸಾಂಸ್ಕೃತಿಕ ಹಿನ್ನೆಲೆಯ ಮೂಲಕ ವಿಶ್ಲೇಷಿಸಲಾಗಿದೆ.

* ವ್ಯಕ್ತಿ ಪ್ರಧಾನ, ಸ್ಥಳ ಪ್ರಧಾನ ಮತ್ತು ಘಟನಾ ಪ್ರಧಾನ ಐತಿಹ್ಯಗಳನ್ನು ಒಳಗೊಂಡಂತೆ, ಸಾಂಸ್ಕೃತಿಕ ಅಂಶಗಳಾದ ನಂಬಿಕೆ, ಆಚರಣೆ-ಸಂಪ್ರದಾಯ ಮುಂತಾದವುಗಳ ಹಿನ್ನೆಲೆಯಲ್ಲಿ ಐತಿಹ್ಯಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

* ಪುರಾಣ ಕಥೆಗಳು, ಕಾವ್ಯ, ಕೋಲಾಟದ ಹಾಡುಗಳ ಮೂಲಕ ಐತಿಹ್ಯ ಕುರುಹುಗಳನ್ನು ಕಂಡುಕೊಂಡು ಅವುಗಳನ್ನು, ವಿಶ್ಲೇಷಿಸಲಾಗಿದೆ.

* ಪಶುಪಾಲಕ ಸಮುದಾಯಗಳಲ್ಲಿ ಕಂಡುಬರುವ ಆಚರಣೆಗಳು, ರೂಢಿ ಸಂಪ್ರದಾಯ ಗಳಲ್ಲಿರುವ ಐತಿಹ್ಯಗಳು ಮತ್ತು ಪಶುಪಾಲಕರ ಸಾಂಸ್ಕೃತಿಕ ನಾಯಕರ ಕುರಿತಾದ ಐತಿಹ್ಯಗಳನ್ನು ಚರ್ಚಿಸಲಾಗಿದೆ.

* ಚಿತ್ರದುರ್ಗ ಪರಿಸರದಲ್ಲಿ ಕಂಡುಬರುವ ಹಟ್ಟಿ, ಹರತಿ ಚಿತ್ರದುರ್ಗ ಪಾಳೆಯಗಾರರಿಗೆ ಸಂಬಂಧಿಸಿದ ಐತಿಹ್ಯಗಳಲ್ಲಿ ಕಂಡಬರುವ ಸಾಮಾಜಿಕ ಸ್ಥಿತಿಗತಿಯನ್ನು ವಿಶ್ಲೇಷಿಸಲಾಗಿದೆ.

* ಚಿತ್ರದುರ್ಗ ಪರಿಸರದಲ್ಲಿ ಕಂಡುಬರುವ ಈ ಎಲ್ಲಾ ಐತಿಹ್ಯಗಳ ಸಾಂಸ್ಕೃತಿಕ ಅಂಶಗಳನ್ನು ಜಾನಪದ ನೆಲೆಯಲ್ಲಿ ಅಧ್ಯಯನ ಮಾಡುವುದು ಪ್ರಸ್ತುತ ಅಧ್ಯಯನದ ಪ್ರಮುಖ ಉದ್ದೇಶವಾಗಿರುತ್ತದೆ.

## ೧.೨. ಅಧ್ಯಯನದ ವ್ಯಾಪ್ತಿ

ಯಾವುದೇ ಅಧ್ಯಯನಕ್ಕೆ ಒಂದು ನಿರ್ದಿಷ್ಟ ಚೌಕಟ್ಟುಯೆಂಬುದು ಅತ್ಯಗತ್ಯವಾದದ್ದು. ಪ್ರಸ್ತುತ ಅಧ್ಯಯನವಾದ ಚಿತ್ರದುರ್ಗ ಪರಿಸರದ ಐತಿಹ್ಯಗಳಿಗೆ ಪೂರಕವಾಗಿ ವ್ಯಾಪ್ತಿಯನ್ನು ಮಾಡಿಕೊಳ್ಳಲಾಗಿದೆ. ಚಿತ್ರದುರ್ಗ, ಹಿರಿಯೂರು, ಚಳ್ಳಕೆರೆ ಮತ್ತು ಮೊಳಕಾಲ್ಮೂರು ತಾಲ್ಲೂಕುಗಳನ್ನು

ಒಳಗೊಂಡಿದೆ. ಈ ಸಾಂಸ್ಕೃತಿಕ ಸೀಮೆಯ ವ್ಯಾಪ್ತಿಯಲ್ಲಿ ಕಂಡುಬರುವಂತಹ ಐತಿಹ್ಯಗಳನ್ನು ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾಗಿದೆ. ಆದ್ದರಿಂದ ಸಾಂಸ್ಕೃತಿಕ ಪರಿಸರದ ಚಹರೆಗಳು ಕಂಡುಬರುವಂತಹ ಐತಿಹ್ಯಗಳಾದ ಸ್ಥಳ, ವ್ಯಕ್ತಿ, ಘಟನೆ ಆಧಾರಿತ ಮಾಹಿತಿಗೆ ಹೆಚ್ಚು ಆದ್ಯತೆಯನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಈ ಮೂಲಕ ಮೌಖಿಕ ಮಾಹಿತಿಯನ್ನು ಪ್ರಧಾನವಾಗಿ ಪ್ರಾಥಮಿಕ ಆಕರವೆಂಬಂತೆ ಈ ಅಧ್ಯಯನದ ವ್ಯಾಪ್ತಿಯಲ್ಲಿ ಬಳಸಿಕೊಳ್ಳಲಾಗಿದೆ.

### ೧.೩. ಅಧ್ಯಯನದ ವಿಧಾನ

#### ಸಂದರ್ಶನ

ಜಾನಪದ ಸಂಶೋಧನೆಗೆ ಸಂದರ್ಶನ ವಿಧಾನ ಬಹುಮುಖ್ಯವಾದುದು. ಪ್ರಸ್ತುತ ಅಧ್ಯಯನಕ್ಕೆ ಅನುಸಾರವಾಗಿ ಸಂದರ್ಶನ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ. ಚಿತ್ರದುರ್ಗ ನಗರ, ಕೋಟೆ, ತಮಟಕಲ್ಲು, ಹಾಯ್ಕಲ್, ಬೆಳಗಟ್ಟ, ಬಚ್ಚಬೋರನಹಟ್ಟಿ, ದ್ಯಾಮವ್ವನಹಳ್ಳಿ, ಇಂಗಳದಾಳ್, ಕುಂಚಿಗನಾಳ್, ಮದಕರಿಪುರ, ಪೇಲೂರಹಟ್ಟಿ, ತುರುವನೂರು, ಬೊಗಳೇರಹಟ್ಟಿ, ದೊಡ್ಡ ಸಿದ್ದವ್ವನಹಳ್ಳಿ, ಮಿಂಚೇರಿ. ಚಳ್ಳಕೆರೆ ತಾಲೂಕಿನ ಚಳ್ಳಕೆರೆ, ದೊಡ್ಡೇರಿ, ಬೋರೆದೇವರಹಟ್ಟಿ(ಕುದಾಪುರ) ಬೊಸೇದೇವರಹಟ್ಟಿ, ನಲಗೇತನಹಟ್ಟಿ, ನಾಯಕನಹಟ್ಟಿ, ಓಬಯ್ಯನಹಟ್ಟಿ, ದೇವರಹಳ್ಳಿ, ರಾಮಸಾಗರ, ಹೊಸಗುಡ್ಡ, ಮುಷ್ಟಲಗುಮ್ಮಿ, ಚೌಳಕೆರೆ, ಹಿರೇಹಳ್ಳಿ ತಳಕು, ಕಾಕಿಬೋರನಹಟ್ಟಿ, ಪಾಲನಾಯಕನ ಕೋಟೆ, ಜಾನಮದ್ದಿ, ಬೂದಿಹಳ್ಳಿ, ಸೂರನಹಳ್ಳಿ, ಬುಕ್ಕಂಬೂದಿ, ಘಟಪರ್ತಿ, ಗೌರಸಮುದ್ರ, ಓಬೇನಹಳ್ಳಿ, ಮಲ್ಲೂರಹಳ್ಳಿ, ಹನುಮಂತನಹಳ್ಳಿ, ಬೇಡರೆಡ್ಡಿಹಳ್ಳಿ, ಗರಣಿ ಹಳ್ಳ, ರುದ್ರಮ್ಮನಹಳ್ಳಿ, ಗೋಸಿಕೆರೆ, ಪುರ್ಲಹಳ್ಳಿ, ಮಹಾದೇವಪುರ, ತುಮ್ಮಲು, ನನ್ನಿವಾಳ, ಉಳ್ಳಾರ್ತಿ, ಉಪ್ಪಾರಹಟ್ಟಿ, ಮರಿಕುಂಟೆ, ಬೆಳೆಗೆರೆ, ಸಾಣಿಕೆರೆ, ಹಿರಿಯೂರು, ಮಾರಿಕಣಿವೆ, ಕೂಡಲಹಳ್ಳಿ, ಧರ್ಮಪುರ, ಟಿ.ಎನ್. ಕೋಟೆ. ಹರಿಯಬ್ಬೆ, ವೇಣುಕಲ್ಲುಗುಡ್ಡ, ಹರ್ತಿಕೋಟೆ, ಕರಿಓಬಿನಹಳ್ಳಿ, ಗೋಪನಹಳ್ಳಿ, ಕೋಡಿಹಳ್ಳಿ, ಸಿಡ್ಲಯ್ಯನ ಕೋಟೆ, ಯರಬಳ್ಳಿ, ಐಮಂಗಳ, ಮದ್ದನಕುಂಟೆ, ಇಕ್ಕನೂರು, ಪಿಲಾಳಿ ಅಂಬಳಗೆರೆ, ಮಸ್ಕಲ್, ಅಬ್ಬಿನ ಹೊಳೆ, ಮ್ಯಾಕ್ಲೂರಹಳ್ಳಿ, ಮೊಳಕಾಲ್ಮೂರು, ಜಟ್ಟಂಗಿ ರಾಮೇಶ್ವರ, ನುಂಕೆಮಲೆ, ಬಿಳಿನೀರು ಚಿಲುಮೆ, ಸಣ್ಣ ಪಾಪಯ್ಯನಹಟ್ಟಿ, ನೆರ್ಲಹಳ್ಳಿ, ಕೋನಸಾಗರ, ಬಿಜಿಕೆರೆ, ಬಾಂಡ್ರವಿ, ಅರಿವಿನದೊಡ್ಡಿ, ಮುತ್ತಿಗಾರು ಸಂಸ್ಥಾನ (ಎತ್ತಿನಗೂಡು), ಮುತ್ತಿಗಾರಹಳ್ಳಿ, ಸೂರಮ್ಮನಹಳ್ಳಿ, ಕಂಪಳದೇವರಹಟ್ಟಿ, ತುಮಕೂರ್ಲಹಳ್ಳಿ, ಮಾರಮ್ಮನಹಳ್ಳಿ, ಚಿಕ್ಕೋಬನಹಳ್ಳಿ, ಪೂಜಾರಹಳ್ಳಿ, ಕಾತ್ರಿಕೇನಹಟ್ಟಿ, ಕುಮತಿ, ವಲಸೆ, ಕೊಂಬಿಹಳ್ಳಿ ಇನ್ನೂ ಮೊದಲಾದವು.

#### ಪ್ರಶ್ನಾವಳಿ ವಿಧಾನ

ಪ್ರಸ್ತುತ ಅಧ್ಯಯನವು ಅರಚನಾ ಪ್ರಶ್ನಾವಳಿಗಳ ವಿಧಾನವನ್ನು ಒಳಗೊಂಡಿದೆ. ಅರಚನಾತ್ಮಕ ಪ್ರಶ್ನಾವಳಿಗಳ ಮೂಲಕ ಸಂದರ್ಶನದ ವೇಳೆಯಲ್ಲಿ, ಪರಿಸ್ಥಿತಿಗೆ ತಕ್ಕಂತೆ ಪ್ರಶ್ನೆಗಳನ್ನು ಕೇಳಿ ಮಾಹಿತಿಯನ್ನು ಪಡೆಯಲಾಗಿದೆ.

ಚಿತ್ರದುರ್ಗ ಪರಿಸರದಲ್ಲಿ ಕಂಡು ಬರುವಂತಹ ಸ್ಥಳಗಳು, ದೇವಾಲಯಗಳು ಮತ್ತು ಕುತೂಹಲವೆನಿಸುವ ಪ್ರಾಕೃತಿಕ ಪ್ರದೇಶಗಳಿಗೆ ಪ್ರತ್ಯೇಕ್ಷವಾಗಿಯೇ ಭೇಟಿ ನೀಡಿ ಸೂಕ್ತವಾದ ಪ್ರಶ್ನಾನುಸಾರವಾಗಿ ಅಥವಾ ಅಧ್ಯಯನಕ್ಕೆ ಪೂರಕವಾಗಿ ಮಾಹಿತಿಯನ್ನು ಪಡೆಯಲಾಗಿದೆ. ಬಹುಮುಖ್ಯವಾಗಿ ಪ್ರಶ್ನೆಗಳು ವ್ಯಕ್ತಿಗತವಾದ, ಸಾಮಾಜಿಕವಾದ ಮತ್ತು ವೈಜ್ಞಾನಿಕ ಸತ್ಯಶೋಧನೆಯ ತತ್ವದಡಿಯಲ್ಲಿ ಪ್ರಸ್ತುತ ಅಧ್ಯಯನಕ್ಕಾಗಿ ಅಳವಡಿಸಿಕೊಳ್ಳಲಾಗಿದೆ.

**ಅವಲೋಕನ**

ಅಧ್ಯಯನಕ್ಕೆ ಸಂಬಂಧಿಸಿದ ಹಾಗೆ ಬಾಹ್ಯ ನೋಟಕ್ಕೆ ಕಾಣುವ ಕ್ಷೇತ್ರವನ್ನು ವೀಕ್ಷಿಸುವುದು. ಜೊತೆಗೆ ಆ ಕ್ಷೇತ್ರದ ನಿಗೂಢ ಸತ್ಯವನ್ನು ಗ್ರಹಿಸುವುದಕ್ಕೆ ಅವಲೋಕನ ವಿಧಾನ ಹೆಚ್ಚು ಮಹತ್ವ ಪೂರ್ಣವಾದುದು. ಇದು ವ್ಯಕ್ತಿಯ ಭಾವನೆಗಳನ್ನು ಸನ್ನಿವೇಶದ ವಸ್ತುಸ್ಥಿತಿಗಳನ್ನು ವಿವಿಧ ಆಯಾಮಗಳಲ್ಲಿ ಗ್ರಹಿಸುವುದಕ್ಕೆ ಹೆಚ್ಚು ಉಪಯುಕ್ತವಾದುದು.

ಚಿತ್ರದುರ್ಗ ಪರಿಸರದಲ್ಲಿ ಭೌತಿಕ ವಸ್ತುಗಳನ್ನು ಪ್ರತ್ಯಕ್ಷ ದರ್ಶನ ಮಾಡುವುದರಿಂದ ವೈವಿಧ್ಯಮಯವಾದ ಅಂಶಗಳನ್ನು ಅರಿಯುವುದಕ್ಕೆ ಸಹಕಾರಿಯಾದವು. ಆದರೆ ಅವಲೋಕನ ವಿಧಾನದಲ್ಲಿ ಸಹಭಾಗಿಯಾಗಿದ್ದುಕೊಂಡು ಸ್ಥಳ, ವ್ಯಕ್ತಿಯನ್ನು ಹಾಗೂ ಸಮುದಾಯವನ್ನು ಅವಲೋಕನ ಕೈಗೊಂಡು ಪೂರಕವಾದ ಮಾಹಿತಿಯನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಜಾನಪದ ಅಧ್ಯಯನಕ್ಕೆ ಸಹಭಾಗಿ ಅವಲೋಕನ ಬಹುಮುಖ್ಯವಾದುದು. ಜನಪದರಲ್ಲಿ ಕಂಡುಬರುವ ಕಲೆ, ಆಚರಣೆ, ಸಂಪ್ರದಾಯಗಳಲ್ಲಿ ಸಹಭಾಗಿಯಾಗಿದ್ದುಕೊಂಡು ವಿಡಿಯೋ ಚಿತ್ರೀಕರಣ, ಛಾಯಾಗ್ರಹಗಳನ್ನು ಮಾಡಲಾಗಿದೆ.

**ಮಹತ್ವ**

ಐತಿಹ್ಯಗಳಿಗೆ ಜನಪದ ಸಾಹಿತ್ಯ ಪ್ರಕಾರದಲ್ಲಿ ವಿಶಿಷ್ಟ ಸ್ಥಾನಮಾನವಿದೆ. ಎಂದೋ ನಡೆದ ಘಟನೆಗಳನ್ನು, ಸಂಗತಿಗಳನ್ನು ಕಥನಗಳ ಮೂಲಕ ಉಳಿಸಿಕೊಂಡು ಬಂದಿದ್ದು ಪ್ರಾಚೀನ ಕಾಲಘಟ್ಟದ ಸಾಮಾಜಿಕ ವ್ಯವಸ್ಥೆಯನ್ನು ತಿಳಿಯಲು ಸಹಕಾರಿಯಾಗಿವೆ. ಐತಿಹ್ಯಗಳು ಬಹುಮುಖಿ ಸಂಸ್ಕೃತಿಯುಳ್ಳವುಗಳಾಗಿದ್ದು, ಪ್ರಾದೇಶಿಕವಾಗಿ ಮತ್ತು ಸಮುದಾಯನಿಷ್ಠ ದೃಷ್ಟಿಯಿಂದ ವಿವಿಧತೆಯನ್ನು ಹೊಂದಿರುತ್ತವೆ. ಒಂದು ಸ್ಥಳ ಪ್ರಧಾನ ಐತಿಹ್ಯವು ಆಯಾ ಪ್ರದೇಶದ ಸಾಂಸ್ಕೃತಿಕ ಹಿನ್ನೆಲೆಯನ್ನು ಕುರಿತಾಗಿದ್ದು, ಅಲ್ಲಿನ ಸಾಮಾಜಿಕ ಸಂಗತಿಗಳನ್ನೂ ಒಳಗೊಂಡಿರುತ್ತದೆ.

ಪ್ರಾದೇಶಿಕ ಭಿನ್ನತೆಯಿರುವ ಚಿತ್ರದುರ್ಗ ಪರಿಸರವು ಸಾಂಸ್ಕೃತಿಕವಾಗಿ ಶ್ರೀಮಂತವಾಗಿದೆ. ಕಲೆ, ಸಾಹಿತ್ಯ ಅಥವಾ ಜನಪದ ಸಾಹಿತ್ಯ ಮತ್ತು ರಾಜಕೀಯಗಳಿಂದ ಈ ಪರಿಸರವು ಬಹುಮುಖಿ ಅಧ್ಯಯನಕ್ಕೆ ಅಗತ್ಯವಾದ ಪ್ರದೇಶ. ಆದರೆ ಜನಪದ ಸಾಹಿತ್ಯ ಸಮೃದ್ಧವಾಗಿರುವ ಈ ಜಿಲ್ಲೆಯಲ್ಲಿ ಬಹುತೇಕ ತಳಸಮುದಾಯಗಳು ಕಂಡುಬರುತ್ತವೆ. ಈ ಭಾಗದ ಜನರು

ಮೌಖಿಕ ಸಂಸ್ಕೃತಿಗೆ ಅವಲಂಬಿತರಾದವರು. ಅಲ್ಲದೆ ತಮ್ಮ ಬದುಕಿನ ನೈಜ ಸಂಗತಿಗಳನ್ನು, ಘಟನೆಗಳನ್ನು ಮೌಖಿಕವಾಗಿ ಕಟ್ಟಿಕೊಂಡಿರುವುದರಿಂದ, ಐತಿಹ್ಯಗಳ ಅಧ್ಯಯನವು ಹೆಚ್ಚು ಅತ್ಯಗತ್ಯವಾಗಿದೆ.

## ೧.೪. ಅಧ್ಯಯನದ ಸ್ವರೂಪ

* "ಚಿತ್ರದುರ್ಗದ ಐತಿಹ್ಯಗಳು : ಜಾನಪದೀಯ ವಿಶ್ಲೇಷಣೆ" ಎಂಬ ಶೀರ್ಷಿಕೆಯಡಿಯಲ್ಲಿ ಒಟ್ಟು ಆರು ಅಧ್ಯಾಯಗಳನ್ನು ಒಳಗೊಂಡಿದೆ. ಪ್ರಸ್ತುತ ಅಧ್ಯಯನದ ಸ್ವರೂಪವು ಈ ಮುಂದಿನಂತಿದೆ.

* ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಸ್ವರೂಪ ಮತ್ತು ಅಧ್ಯಯನದ ಸಮೀಕ್ಷೆಯನ್ನು ಒಳಗೊಂಡಿದ್ದು, ಐತಿಹ್ಯಗಳ ಬಗ್ಗೆ ಇದುವರೆಗೂ ನಡೆದಿರುವ ಅಧ್ಯಯನಗಳು ಹಾಗೂ ಲೇಖನಗಳ ಬಗ್ಗೆ ಕೂಲಂಕುಷವಾಗಿ ಪರಿಚಯಿಸಲಾಗಿದೆ.

* ಎರಡನೆಯ ಅಧ್ಯಾಯದಲ್ಲಿ ಚಿತ್ರದುರ್ಗ ಪರಿಸರಕ್ಕೆ ಸಂಬಂಧಿಸಿದಂತೆ ಭೌಗೋಳಿಕ, ಚಾರಿತ್ರಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯನ್ನು ಚರ್ಚಿಸಲಾಗಿದೆ.

* ಮೂರನೆಯ ಅಧ್ಯಾಯದಲ್ಲಿ ಐತಿಹ್ಯಗಳ ಅರ್ಥ, ಪದನಿಷ್ಪತ್ತಿ ಮತ್ತು ಐತಿಹ್ಯಗಳನ್ನು ವರ್ಗೀಕರಿಸುವಲ್ಲಿ ಅನೇಕ ವಿದ್ವಾಂಸರು ಪ್ರಯತ್ನಿಸಿದ್ದನ್ನು ಉಲ್ಲೇಖಿಸಲಾಗಿದೆ.

* ನಾಲ್ಕನೆಯ ಅಧ್ಯಾಯದಲ್ಲಿ ಚಿತ್ರದುರ್ಗ ಪರಿಸರದ ಐತಿಹ್ಯಗಳು. ಅವುಗಳಲ್ಲಿ ಮುಖ್ಯವಾಗಿ, ಸ್ಥಳ ಪ್ರಧಾನ, ವ್ಯಕ್ತಿಪ್ರಧಾನ ಮತ್ತು ಘಟನಾ ಪ್ರಧಾನ ಐತಿಹ್ಯಗಳೆಂದು ವಿಭಜಿಸಿಕೊಂಡು ವಿಶ್ಲೇಷಿಸಲಾಗಿದೆ.

* ಐದನೆಯ ಅಧ್ಯಾಯದಲ್ಲಿ ಪಶುಪಾಲಕರಿಗೆ ಸಂಬಂಧಿಸಿದ ಐತಿಹ್ಯಗಳು, ಅವುಗಳಲ್ಲಿ ಪಶುಪಾಲಕರ ಮೌಖಿಕ ಸಾಹಿತ್ಯ, ನಂಬಿಕೆ, ಆಚರಣೆ, ನಿಷೇಧಗಳು, ಆದರ್ಶ, ಮೌಲ್ಯಗಳು ಹಾಗೂ ಅವರ ಒಟ್ಟಾರೆ ಜೀವನದ ದರ್ಶನಕ್ಕೆ ಸಂಬಂಧಿಸಿದ ಐತಿಹ್ಯಗಳನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ.

* ಆರನೆಯ ಅಧ್ಯಾಯದಲ್ಲಿ ಪಾಳೆಯಗಾರರಿಗೆ ಸಂಬಂಧಿಸಿದ ಐತಿಹ್ಯಗಳು. ಈ ಅಧ್ಯಾಯದಲ್ಲಿ ಪಾಳೆಯಗಾರರಿಗೆ ಮತ್ತು ಅವರ ಸಮಕಾಲೀನ ಜನಸಾಮಾನ್ಯರ ಬಗೆಗಿನ ಐತಿಹ್ಯಗಳನ್ನು ಸಂಗ್ರಹಿಸಿ ಚರ್ಚಿಸಲಾಗಿದೆ.

* ಏಳನೆಯ ಅಧ್ಯಾಯವು ಸಮಾರೋಪವಾಗಿದ್ದು, ಅದು ಫಲಿತಗಳನ್ನು ಕುರಿತಾಗಿದ್ದು, ಅನುಬಂಧದಲ್ಲಿ ವಕ್ತೃಗಳ ವಿವರ, ಪರಾಮರ್ಶನ ಗ್ರಂಥಗಳು, ಛಾಯಾಚಿತ್ರಗಳನ್ನು ನೀಡಲಾಗಿದೆ.

## ೧.೫. ಅಧ್ಯಯನದ ಸಮೀಕ್ಷೆ

ಯಾವುದೇ ಅಧ್ಯಯನ ಸುಸೂತ್ರವಾಗಿ ನಡೆಯಬೇಕಾದರೆ ಅಧ್ಯಯನದ ಪೂರ್ವಪ್ರಯತ್ನಗಳು ಮುಖ್ಯವಾಗುತ್ತವೆ. ಪ್ರಸ್ತುತ ಅಧ್ಯಯನ ಆರಂಭಿಸುವ ಪೂರ್ವದಲ್ಲಿ ಇದುವರೆಗೂ ನಡೆದಿರುವ ಅಧ್ಯಯನಗಳನ್ನು ತಿಳಿದು ಮುಂದುವರೆಯುವುದು ಅಗತ್ಯ.

ಭಾರತದಲ್ಲಿ ಜಾನಪದ ಅಧ್ಯಯನ ಪ್ರಾರಂಭಿಸಿದವರು ಪಾಶ್ಚಾತ್ಯರು. ಅವರು ತಮ್ಮ ಆಡಳಿತದ ಅನುಕೂಲಕ್ಕಾಗಿ ಇಲ್ಲಿನ ಜನಪದರ ಸಂಸ್ಕೃತಿಗಳ ಅರಿಯಲು ಅಧ್ಯಯನಕ್ಕೆ ತೊಡಗಿದರು. ಇಲ್ಲಿನ ವಿದ್ವಾಂಸರು ಸಹ ಮೌಖಿಕ ಪರಂಪರೆಯ ಆಕರಗಳ ಕಡೆಗೆ ಆಕರ್ಷಿತರಾಗಿ ಅವುಗಳನ್ನು ಸಂಗ್ರಹಿಸುವ ಕಾರ್ಯದಲ್ಲಿ ತೊಡಗಿದರು.

ಭಾರತದಲ್ಲಿ ಜಾನಪದ ಅಧ್ಯಯನ ಆರಂಭದಲ್ಲಿ ಸಂಗ್ರಹಕ್ಕೆ ಮಾತ್ರ ಸೀಮಿತವಾಗಿತ್ತು. ಇಂದು ಜಾನಪದದ ಎಲ್ಲಾ ಪ್ರಕಾರಗಳಲ್ಲಿ ಅಧ್ಯಯನಗಳು ವಿಸ್ತರಿಸಿವೆ. ಅದರ ಐತಿಹ್ಯದಂಥ ಜಾನಪದ ಪ್ರಕಾರದ ಅಧ್ಯಯನ ನಡೆದಿರುವುದು ತೀರಾ ಕಡಿಮೆಯೆಂದೇ ಹೇಳಬಹುದು.

ಜಾಗತಿಕ ಮಟ್ಟದಲ್ಲಿ ಐತಿಹ್ಯಗಳ ಸಂಗ್ರಹ ಹಾಗೂ ಅಧ್ಯಯನಗಳು ವ್ಯಾಪಕವಾಗಿ ನಡೆದಿವೆ. ಅಂಥ ವಿದ್ವಾಂಸರ ಚಿಂತನೆ ಮತ್ತು ವಿಶ್ಲೇಷಣೆಗಳಲ್ಲಿ ರಿಚರ್ಡ್ ಡಾರ್ಸನ್, ಸ್ಮಿಥ್ ಥಾಂಸನ್, ಆರ್.ಎಸ್. ಬಾಗ್ಸ್, ಆರ್ನ್‌ಆಂಟಿ, ಆಲನ್‌ಡೆಂಡಸ್ ಮುಂತಾದ ಪಾಶ್ಚಿಮಾತ್ಯ ವಿದ್ವಾಂಸರು ಐತಿಹ್ಯಗಳನ್ನು ಅಧ್ಯಯನ ಮಾಡಿದ್ದಾರೆ. ಕನ್ನಡದಲ್ಲಿ ಐತಿಹ್ಯಗಳಿಗೆ ಸಂಬಂಧಿಸಿದಂತೆ ಕೆಲಸ ನಡೆದಿರುವುದು ತೀರ ಕಡಿಮೆ ಎಂದೇ ಹೇಳಬಹುದು.

* ಭಾರತೀಯ ಸಂದರ್ಭದಲ್ಲಿ ಎ.ಕೆ. ಘೋಷರವರು ಪ್ರಮುಖರಾಗಿದ್ದಾರೆ. ಇವರ 'ಲೆಜೆಂಡ್ ಫ್ರಮ್ ಇಂಡಿಯನ್ ಹಿಸ್ಟರಿ' (೧೯೮೫) ಕೃತಿಯಲ್ಲಿ ಐತಿಹ್ಯಗಳಲ್ಲಿ ಹುದುಗಿರುವ ಚಿಂತನೆಗಳನ್ನು ಗುರುತಿಸಿದ್ದಾರೆ. ಇದಲ್ಲದೆ ಐತಿಹ್ಯಗಳನ್ನು ಅಭ್ಯಾಸ ಮಾಡಬೇಕಾದ ಅಗತ್ಯ ಇದೆ ಎಂಬುದನ್ನು ಸೂಚಿಸಿದ್ದಾರೆ.

* ಜಿ.ವಿ. ದಾಸೇಗೌಡ ಅವರ 'ಕನ್ನಡ ಐತಿಹ್ಯಗಳು(೧೯೭೮)' ಎಂಬ ಕೃತಿಯಲ್ಲಿ ಬೆಂಗಳೂರು, ಮಂಡ್ಯ, ಮೈಸೂರು, ಹಾಸನ ಮತ್ತು ಕೊಡಗು ಜಿಲ್ಲೆಗಳಿಂದ ಐತಿಹ್ಯಗಳನ್ನು ಸಂಗ್ರಹಿಸಿ ಅವುಗಳನ್ನು ಸ್ಥಳೀಯ ಹಾಗೂ ಸಂಚಾರಿ ಐತಿಹ್ಯಗಳೆಂದು ಎರಡು ಭಾಗಗಳಲ್ಲಿ ವಿಂಗಡಿಸಿಕೊಂಡಿದ್ದಾರೆ. ಇದು ಜಾನಪದವನ್ನು ಅರಿತು ಐತಿಹ್ಯಗಳನ್ನು ಸಂಗ್ರಹ ಮಾಡಿದ ಹೊಸಪೀಳಿಗೆಯ ಮೊದಲ ಕೃತಿ.

* ತಾಳ್ತಜೆ ವಸಂತಕುಮಾರ ಅವರು ತಮ್ಮ 'ಸಾರಸ' ಕೃತಿಯಲ್ಲಿ 'ದಕ್ಷಿಣ ಕನ್ನಡ ಕೆಲವು ಜಾನಪದ ಐತಿಹ್ಯಗಳು' ಎಂಬ ವಿಷಯದ ಮೇಲೆ ವಿಶ್ಲೇಷಣಾತ್ಮಕ ಲೇಖನವೊಂದನ್ನು ಚರ್ಚಿಸಿದ್ದಾರೆ. ಐತಿಹ್ಯಗಳನ್ನು ಮೂರು ಪ್ರಕಾರಗಳಾಗಿ ವಿಂಗಡಿಸಿದ್ದಾರೆ. ಸ್ಥಳ ಪ್ರಧಾನ, ವ್ಯಕ್ತಿ ಪ್ರಧಾನ ಹಾಗೂ ಘಟನಾ ಪ್ರಧಾನ ಎಂದು ವಿವರಿಸಿದ್ದಾರೆ.

* ದೇ ಜವರೇಗೌಡ ಅವರು ತಮ್ಮ 'ಜಾನಪದ ಅಧ್ಯಯನ' ಕೃತಿಯಲ್ಲಿ 'ಐತಿಹ್ಯ ಪುರಾಣಗಳನ್ನು ಕುರಿತು ಚರ್ಚಿಸುತ್ತಾ ಪುರಾಣ-ಐತಿಹ್ಯಗಳ ಹೊಕ್ಕಳ ಬಳ್ಳಿ ಸಂಬಂಧ ಎಂದು ಹೇಳಿ, ವ್ಯತ್ಯಾಸ ಗುರುತಿಸಿದ್ದಾರೆ. ಐತಿಹ್ಯದ ಹುಟ್ಟು, ಬೆಳವಣಿಗೆ, ಸ್ವರೂಪ, ಆಶಯ, ಸಂಚಾರಿ ಗುಣದ ಬಗೆಗೂ ವಿವೇಚಿಸಿದ್ದಾರೆ.

* ಜಾನಪದ ವಿದ್ವಾಂಸರಾದ ಪುರುಷೋತ್ತಮ ಬಿಳಿಮಲೆಯವರು "ಜಾನಪದ ಸಾಹಿತ್ಯ ದರ್ಶನ(ಭಾಗ-೧೫)ದಲ್ಲಿ 'ಐತಿಹ್ಯ' ಸ್ವರೂಪ, ಲಕ್ಷಣ ಮತ್ತು ಪ್ರಕಾರಗಳು" ಎಂಬ ತಮ್ಮ ಲೇಖನದಲ್ಲಿ ಐತಿಹ್ಯದ ಪದ ನಿಷ್ಪತ್ತಿ, ಹುಟ್ಟು, ಬೆಳವಣಿಗೆ, ಪ್ರಕಾರಗಳ ಬಗೆಗೆ ಚರ್ಚಿಸಿದ್ದಾರೆ.

* ಪುರುಷೋತ್ತಮ ಬಿಳಿಮಲೆ ಮತ್ತು ಚಲುವರಾಜ ಅವರ 'ಹಂಪಿ ಜಾನಪದ' ಎಂಬ ಕೃತಿಯಲ್ಲಿ ಹಂಪಿ ಪರಿಸರದಲ್ಲಿನ ಐತಿಹ್ಯಗಳನ್ನು ಸಂಗ್ರಹಿಸಿ ವ್ಯಕ್ತಿ, ಸ್ಥಳ, ಘಟನಾ ಪ್ರಧಾನ ಐತಿಹ್ಯಗಳೆಂದು ವಿಂಗಡಿಸಿರುವ ಅಧ್ಯಯನವು ಗಮನಾರ್ಹವಾದುದು.

* ವೃಷಭೇಂದ್ರಸ್ವಾಮಿ ಮತ್ತು ಸೋಮಶೇಖರ ಇಮ್ರಾಪುರ ಅವರ ಸಂಪಾದಕತ್ವದ 'ಜನಪದ ಸಾಹಿತ್ಯ ದರ್ಶನ(ಭಾಗ-೧೫)" ಎಂಬ ಕೃತಿಯಲ್ಲಿ ಬಿ.ಎ. ವಿವೇಕ ರೈ ಅವರು ಪುರಾಣ-ಐತಿಹ್ಯ-ದಂತಕಥೆ, ಸಾಹಿತ್ಯ ಕುರಿತು ತಮ್ಮ ಲೇಖನದಲ್ಲಿ ಪುರಾಣ ಮತ್ತು ಐತಿಹ್ಯಗಳ ಸಂಬಂಧವನ್ನು ಕುರಿತು ಚರ್ಚಿಸುತ್ತಾ ಸಾಹಿತ್ಯ ಸೃಷ್ಟಿಗೆ ಕಾರಣವಾದ ಐತಿಹ್ಯಗಳನ್ನು ಉಲ್ಲೇಖಿಸಿ, ಅವುಗಳ ಪಾತ್ರವನ್ನು ಸ್ಪಷ್ಟಪಡಿಸಿದ್ದಾರೆ. ಐತಿಹ್ಯಗಳನ್ನು ಹೇಗೆ ಮನೋವೈಜ್ಞಾನಿಕ ವಿಶ್ಲೇಷಣೆಗೆ ಒಳಪಡಿಸಬಹುದು ಎಂಬುದನ್ನು ಚರ್ಚಿಸಿದ್ದಾರೆ.

* ಜಾನಪದ ವಿದ್ವಾಂಸರಾದ ವೀರಣ್ಣ ದಂಡೆಯವರು 'ಕನ್ನಡ ಜಾನಪದ ಪ್ರಜ್ಞೆ' ಎಂಬ ಕೃತಿಯಲ್ಲಿ 'ಕನ್ನಡ ಐತಿಹ್ಯಗಳು ಒಂದು ಟಿಪ್ಪಣಿ' ಲೇಖನದಲ್ಲಿ ಕರ್ನಾಟಕದ ಸಂದರ್ಭದ ಐತಿಹ್ಯಗಳ ಸಂಗ್ರಹದ ಪಟ್ಟಿಯನ್ನು ನೀಡುತ್ತಾ, ಕಥೆ, ಐತಿಹ್ಯ, ಪುರಾಣಗಳಲ್ಲಿರುವ ಅಂತರ್ ಭಿನ್ನತೆಗಳನ್ನು ಚರ್ಚಿಸಿದ್ದಾರೆ.

* ಲಕ್ಷ್ಮಣ್ ತೆಲಗಾವಿ ಅವರ ಸಂಪಾದಕತ್ವದಲ್ಲಿ ಹೊರಬಂದ 'ಹರತಿಸಿರಿ' ಎಂಬ ಕೃತಿಯಲ್ಲಿ ಕೆ.ಆರ್. ಸಂಧ್ಯಾರೆಡ್ಡಿ ಅವರು ಬರೆದಿರುವ 'ಐತಿಹ್ಯಗಳ ಐತಿಹಾಸಿಕ ವಿಶ್ಲೇಷಣೆ' ಎಂಬ ಕುರಿತ ಲೇಖನದಲ್ಲಿ ಐತಿಹ್ಯದ ಅರ್ಥ, ಹುಟ್ಟು, ಬೆಳವಣಿಗೆ ಮತ್ತು ಐತಿಹ್ಯಗಳ ಪ್ರಕಾರಗಳನ್ನು ಕುರಿತು ವಿವರಿಸಿದ್ದಾರೆ. ಐತಿಹ್ಯಗಳ ವಿವರಣೆಗಳೊಂದಿಗೆ ಉದಾಹರಣೆ ಸಹಿತವಾಗಿ ಚರ್ಚಿಸಿದ್ದಾರೆ.

* ಡಿ. ಲಿಂಗಯ್ಯ ಮತ್ತು ಕೆ.ಆರ್. ಸಂಧ್ಯಾರೆಡ್ಡಿಯವರ ಜಾನಪದ ಸಾಹಿತ್ಯ ಮತ್ತು ಸ್ವರೂಪ ಕೃತಿಯಲ್ಲಿ ಐತಿಹ್ಯ ಮತ್ತು ಪುರಾಣ ಕುರಿತ ಲೇಖನವಿದೆ.

* ಎ.ಎಸ್. ಭದ್ರಾಪುರ ಅವರು 'ಉತ್ತರ ಕರ್ನಾಟಕದ ಜಾನಪದ ಐತಿಹ್ಯಗಳು' ಎಂಬ ವಿಷಯ ಕುರಿತು ಪಿಎಚ್.ಡಿ. ಮಹಾಪ್ರಬಂಧ ಸಿದ್ಧಪಡಿಸಿ ೧೯೯೧ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಪಿಎಚ್.ಡಿ. ಪದವಿ ಪಡೆದಿದ್ದಾರೆ. ಈ ಕೃತಿಯಲ್ಲಿ ಉತ್ತರ ಕರ್ನಾಟಕದಲ್ಲಿರುವ ಪ್ರಧಾನ ಐತಿಹ್ಯಗಳನ್ನು ಸಂಗ್ರಹಿಸಿ ವಿಶ್ಲೇಷಿಸಿದ್ದಾರೆ.

* ಎ. ಸುಬ್ಬಣ್ಣ ರೈ ಅವರು 'ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು' ಎಂಬ ವಿಷಯ ಕುರಿತು ಪಿಎಚ್.ಡಿ. ಅಧ್ಯಯನ ಮಾಡಿ ಮುಂಬಯಿ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿ ೧೯೯೪ರಲ್ಲಿ ಪಿಎಚ್.ಡಿ. ಪದವಿ ಪಡೆದಿದ್ದಾರೆ. ಇವರು ಕ್ಷೇತ್ರಕಾರ್ಯ ಮಾಡಿ ಸಾಕಷ್ಟು ಐತಿಹ್ಯಗಳನ್ನು ಸಂಗ್ರಹಿಸಿ ವಿಶ್ಲೇಷಿಸಿದ್ದಾರೆ. ತಾವು ಸಂಗ್ರಹಿಸಿದ ಐತಿಹ್ಯಗಳನ್ನು, ಸ್ಥಳ ಐತಿಹ್ಯಗಳು, ವ್ಯಕ್ತಿ ಐತಿಹ್ಯಗಳು, ಐತಿಹಾಸಿಕ ಐತಿಹ್ಯಗಳು ಎಂದೂ ವಿಭಾಗಿಸಿಕೊಂಡು ಸಾಕಷ್ಟು ವಿವರವಾಗಿ ವಿಷಯವನ್ನು ವಿವರಿಸುವ ಪ್ರಯತ್ನ ಮಾಡಿದ್ದಾರೆ.

* ಎ. ಕರಿಬಸಪ್ಪ ಅವರು 'ಬಳ್ಳಾರಿ ಜಿಲ್ಲೆಯ ಐತಿಹ್ಯಗಳು' ಕುರಿತು ೨೦೦೩ರಲ್ಲಿ ಕನ್ನಡ ವಿಶ್ವವಿದ್ಯಾಲಯದಿಂದ ಪಿಎಚ್.ಡಿ. ಪದವಿ ಪಡೆದುಕೊಂಡಿದ್ದಾರೆ. ದೇಶಿ ಸಂಸ್ಕೃತಿಯಲ್ಲಿ ಅಡಕವಾಗಿರುವ ನಂಬಿಕೆಗಳು ಆಚರಣೆಗಳು, ಸಂಪ್ರದಾಯಗಳು ಮುಂತಾದ ಐತಿಹ್ಯಗಳ ಮೂಲಕ ಸ್ಥಳೀಯ ಚರಿತ್ರೆಯನ್ನು ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ.

* ಎಲ್. ಲಕ್ಷ್ಮೀದೇವಿ ಅವರ 'ಅವಿಭಜಿತ ಕೋಲಾರ ಜಿಲ್ಲೆಯ ಐತಿಹ್ಯಗಳು' ಎಂಬ ವಿಷಯ ಕುರಿತು ೨೦೦೬ರಲ್ಲಿ ಕನ್ನಡ ವಿಶ್ವವಿದ್ಯಾಲಯದಿಂದ ಪಿಎಚ್.ಡಿ. ಪದವಿ ಪಡೆದಿದ್ದಾರೆ. ಕನ್ನಡ-ತೆಲುಗು ಭಾಷೆಯ ಐತಿಹ್ಯಗಳನ್ನು ಸಾಂಸ್ಕೃತಿಕ ವಿಶಿಷ್ಟತೆ ದೃಷ್ಟಿಯಿಂದಲೂ ಪರಿಚಯಿಸಲಾಗಿದೆ ಹಾಗೂ ಐತಿಹ್ಯದ ರೂಪುರೇಷೆಗಳನ್ನು ಸ್ಪಷ್ಟಪಡಿಸಲಾಗಿದೆ.

* ಲಕ್ಷ್ಮಣ್ ತೆಲಗಾವಿ(ಸಂ), 'ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನ' ಎಂಬ ಕೃತಿಯಲ್ಲಿ(೧೯೭೬) ರಾಮಾಯಣ, ಮಹಾಭಾರತಕ್ಕೆ ಸಂಬಂಧಿಸಿದ ಐತಿಹ್ಯಗಳನ್ನು ಸಂಗ್ರಹಿಸಿ ವಿಶ್ಲೇಷಿಸಿದ್ದಾರೆ.

* ಎಂ.ಎಸ್. ಪುಟ್ಟಣ್ಣನವರ 'ಚಿತ್ರದುರ್ಗದ ಪಾಳೆಯಗಾರರು' ಎಂಬ ಕೃತಿಯಲ್ಲಿ(೧೯೯೭) ಪಾಳೆಯಗಾರರಿಗೆ ಸಂಬಂಧಿಸಿದ ಪೂರ್ವದ ಕಥೆಯನ್ನು ವಿವರಿಸಿದ್ದಾರೆ.

* ಟಿ. ಗಿರಿಜಾ ಅವರ 'ಚಿತ್ರದುರ್ಗ ಜಿಲ್ಲಾದರ್ಶಿನಿ'(೧೯೯೧) ಎಂಬ ಕೃತಿಯಲ್ಲಿ ಚಿತ್ರದುರ್ಗ ಜಿಲ್ಲೆಗೆ ಸಂಬಂಧಿಸಿದ ಮುಖ್ಯ ಮಾಹಿತಿಗಳನ್ನು ಸಂಗ್ರಹಿಸಿದ್ದಾರೆ. ಸ್ಥಳ ಪುರಾಣ, ಪೌರಣಿಕ ಹಿನ್ನೆಲೆ ಹಾಗೂ ಸ್ಥಳ ಐತಿಹ್ಯಗಳನ್ನು ಸಂಗ್ರಹಿಸಿದ್ದಾರೆ.

* ಕೃಷ್ಣಮೂರ್ತಿ ಹನೂರು ಅವರು ಸಂಪಾದಿಸಿರುವ 'ಜನಪದ ವೀರಗೀತೆಗಳು(೧೯೮೭)' ಎಂಬ ಕೃತಿಯಲ್ಲಿ ಚಿತ್ರದುರ್ಗ ಪರಿಸರದಲ್ಲಿ ಬರುವ ಸಾಂಸ್ಕೃತಿಕ ವೀರರ ಕಾವ್ಯಗಳ ಸಂಗ್ರಹ ಇದರಲ್ಲಿದೆ.

* ಮೀರಾಸಾಬಿಹಳ್ಳಿ ಶಿವಣ್ಣನವರು 'ದುರುಗ ಜಾನಪ(೧೯೯೯)' ಎಂಬ ಕೃತಿಯಲ್ಲಿ ಚಿತ್ರದುರ್ಗ ಪರಿಸರದ ಜಾನಪದಕ್ಕೆ ಸಂಬಂಧಿಸಿದಂತೆ ಲೇಖನಗಳಲ್ಲಿ ಇತಿಹಾಸ, ಚರಿತ್ರೆ-ಪುರಾಣದ ಬಗ್ಗೆ ಚರ್ಚಿಸಿದ್ದಾರೆ.

ಇವರ ಮತ್ತೊಂದು ಕೃತಿಯಾದ 'ಕಾಡುಗೊಲ್ಲ ಬುಡಕಟ್ಟು ವೀರರು(೨೦೦೫)' ಎಂಬ ಕೃತಿಯಲ್ಲಿ ಪಶುಪಾಲಕರ ಕತೆಗಳನ್ನು ವಿಶ್ಲೇಷಿಸಿದ್ದಾರೆ.

* ಗಂಗಾಧರ ದೈವಜ್ಞ ಅವರ 'ಬುಡಕಟ್ಟು: ಸಮಾಜ-ಹುಟ್ಟು ಸಾವಿನ ನಡುವೆ'(೨೦೦೦) ಎಂಬ ಕೃತಿಯಲ್ಲಿ ಕರ್ನಾಟಕದ ವಿವಿಧ ಬುಡಕಟ್ಟು ಸಮಾಜದಲ್ಲಿ ಪ್ರಚಲಿತವಿರುವ ಸೃಷ್ಟಿ ಪುರಾಣಗಳ ಬಗ್ಗೆ ವಿವರಗಳಿವೆ.

* ವಿರೂಪಾಕ್ಷಿ ಪೂಜಾರಹಳ್ಳಿ ಅವರ 'ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು' ಎಂಬ ಕೃತಿಯು(೨೦೦೨) ಬೇಡ ಬುಡಕಟ್ಟಿನ ಸಾಂಸ್ಕೃತಿಕ ಚರಿತ್ರೆ ಹಾಗೂ ಪಶುಪಾಲಕರ ಕತೆಗಳು, ಆರಾಧನಾ ಆಚರಣೆಗಳು ಹೀಗೆ ಹಲವಾರು ವಿಷಯಗಳನ್ನೊಳಗೊಂಡಿದೆ.

* ಸಿ. ಬಸವರಾಜ ಅವರು 'ಚಿತ್ರದುರ್ಗ ಕೋಟೆಯ ಐತಿಹ್ಯಗಳು'(೨೦೧೦) ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾದ ನಿಬಂಧವಾಗಿದೆ.

ಅಯ್ಯಾಳಿ ಯರಿಸ್ವಾಮಿ ಅವರ "ಹೊಸಪೇಟೆ : ಐತಿಹ್ಯಗಳ ಸಾಂಸ್ಕೃತಿಕ ಅಧ್ಯಯನ" ಎಂಬ ಪಿಎಚ್.ಡಿ. ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೧೭ರಂದು ಸಲ್ಲಿಸಿರುತ್ತಾರೆ. ಈ ಮಹಾಪ್ರಬಂಧವು ಒಟ್ಟು ಆರು ಅಧ್ಯಾಯಗಳನ್ನು ಒಳಗೊಂಡಿದೆ. ಇದೊಂದು ಚರಿತ್ರೆ ಅಧ್ಯಯನವಾಗಿದ್ದು, ಜನಪದ ಸಾಹಿತ್ಯ ಪ್ರಕಾರವಾದ ಐತಿಹ್ಯಗಳನ್ನು ಹೆಚ್ಚು ಬಳಸಿಕೊಂಡಿದ್ದಾರೆ. ಹೊಸಪೇಟೆ ತಾಲೂಕಿನಲ್ಲಿ ಬರುವ ಐತಿಹ್ಯಗಳನ್ನು ಸಂಗ್ರಹಿಸಿ ವಿವರಿಸಿದ್ದಾರೆ. ಅಷ್ಟೇ ಅಲ್ಲದೆ ಗ್ರಾಮದೇವತೆ, ಹಬ್ಬ ಆಚರಣೆಗಳಿಗೆ ಸಂಬಂಧಿಸಿದಂತೆ ಐತಿಹ್ಯಗಳಲ್ಲಿರುವ ಜನಪದರ ಆಶಯಗಳನ್ನು ವ್ಯಕ್ತಪಡಿಸಿದ್ದಾರೆ. ಒಟ್ಟಿನಲ್ಲಿ ಈ ಅಧ್ಯಯನವು ಸ್ಥಳೀಯ ಜನಪದರ ಚರಿತ್ರೆಯನ್ನು ತೆರೆದಿಡುತ್ತದೆ. ಹೀಗೆ ಪ್ರಸ್ತುತ ಅಧ್ಯಯನದ ವಿಷಯಕ್ಕೆ ಸಂಬಂಧಿಸಿದಂತಹ ಹಲವಾರು ಅಧ್ಯಯನಗಳು ನಡೆದಿರುವುದು ಕಂಡುಬರುತ್ತದೆ.



## ಅಧ್ಯಾಯ : ಎರಡು

# ಚಿತ್ರದುರ್ಗ ಪರಿಸರದ ಭೌಗೋಳಿಕ, ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಹಿನ್ನೆಲೆ

ಒಂದು ಪ್ರಾದೇಶಿಕ ವ್ಯಾಪ್ತಿಯಲ್ಲಿ ಯಾವುದೇ ಅಧ್ಯಯನಕ್ಕೆ ಆ ಪ್ರದೇಶದ ಭೌಗೋಳಿಕ, ಚಾರಿತ್ರಿಕ ಮತ್ತು ಸಾಂಸ್ಕೃತಿಕ ವಿವರಗಳು ಬಹಳ ಮುಖ್ಯವಾಗುತ್ತವೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನದ ವ್ಯಾಪ್ತಿಗೆ ಒಳಪಡುವ ಚಿತ್ರದುರ್ಗ ಪರಿಸರದ ಭೌಗೋಳಿಕ, ಚಾರಿತ್ರಿಕ ಹಾಗೂ ಸಾಂಸ್ಕೃತಿಕ ವಿವರಗಳನ್ನು ಮೊದಲು ವಿವರಿಸಿಕೊಳ್ಳಲಾಗಿದೆ.

### ೨.೧. ಭೌಗೋಳಿಕ ಹಿನ್ನೆಲೆ

ಕರ್ನಾಟಕ ರಾಜ್ಯದ ಮೂವತ್ತು ಜಿಲ್ಲೆಗಳಲ್ಲಿ ಚಿತ್ರದುರ್ಗ ಜಿಲ್ಲೆಯು ಪ್ರಮುಖವಾದದ್ದು. ಈ ಜಿಲ್ಲೆಯ ಮೇರೆಗಳು ಉತ್ತರಕ್ಕೆ ಬಳ್ಳಾರಿ, ಪಶ್ಚಿಮಕ್ಕೆ ದಾವಣಗೆರೆ, ನೈರುತ್ಯಕ್ಕೆ ಶಿವಮೊಗ್ಗ, ಆಗ್ನೇಯಕ್ಕೆ ತುಮಕೂರು ಮತ್ತು ಪೂರ್ವಕ್ಕೆ ಅನಂತಪುರ(ಆಂಧ್ರಪ್ರದೇಶ) ಜಿಲ್ಲೆಗಳಿಂದ ಸುತ್ತುವರಿಯಲ್ಪಟ್ಟಿದೆ. ಈ ಜಿಲ್ಲೆಯು ಪೂರ್ವಕ್ಕೆ ಆಂಧ್ರದ ಗಡಿಯನ್ನು ಹೊಂದಿದ್ದು, ತೆಲುಗು ನಾಡಿನಿಂದ ಹರಿದು ಬರುವ ಸಂಸ್ಕೃತಿಗೆ ಮೊಳಕಾಲ್ಮೂರು ಹೆಬ್ಬಾಗಿಲಿನಂತಿದೆ.

ರಾಜ್ಯದ ಮೂವತ್ತು ಜಿಲ್ಲೆಗಳಲ್ಲಿ ಈ ಜಿಲ್ಲೆಯು ಹಲವಾರು ಕಾರಣಗಳಿಂದ ಅದರಲ್ಲೂ ಐತಿಹಾಸಿಕ ಮತ್ತು ಸಾಂಸ್ಕೃತಿಕವಾಗಿ ಬಹಳ ಪ್ರಾಮುಖ್ಯತೆಯನ್ನು ಹೊಂದಿದೆ. ಈ ಜಿಲ್ಲೆಯಲ್ಲಿ ಆರು ತಾಲೂಕುಗಳಿವೆ. ಜಿಲ್ಲೆಯ ವ್ಯಾಪ್ತಿಯಲ್ಲಿ ಹೊಸದುರ್ಗ, ಹೊಳಲ್ಕೆರೆ, ಚಿತ್ರದುರ್ಗ, ಹಿರಿಯೂರು, ಚಳ್ಳಕೆರೆ ಮತ್ತು ಮೊಳಕಾಲ್ಮೂರು ತಾಲ್ಲೂಕುಗಳನ್ನೊಳಗೊಂಡಿದೆ.

"ಈ ಜಿಲ್ಲೆಯ ಭೌಗೋಳಿಕ ನೆಲೆಯು ಉತ್ತರ ಅಕ್ಷಾಂಶ ೧೩°.೧೫ ರಿಂದ ೧೫°.೨೦ ಮತ್ತು ಪೂರ್ವ ರೇಖಾಂಶ ೭೬°.೨೪ ರಿಂದ ೭೭°.೦ರಲ್ಲಿದೆ. ಹವಾಮಾನವು ಪರಿಮಿತಗಳಿಂದ ಕೂಡಿದ್ದು ಋತುಮಾನಗಳಿಗೆ ತಕ್ಕಂತೆ ಹವಾಮಾನವು ಬದಲಾವಣೆ ಆಗುತ್ತದೆ. ಈ ಜಿಲ್ಲೆಯ ಮಳೆಯ ಸರಾಸರಿ ಪ್ರಮಾಣ-೫೧.೮(೨೦೧೩). ಚಿತ್ರದುರ್ಗ ಪ್ರದೇಶದಲ್ಲಿ ಅತಿ ಹೆಚ್ಚು ಗಾಳಿ ಬೀಸುತ್ತದೆ. ಇದು ಏಷ್ಯಾದಲ್ಲಿ ಎರಡನೇ ಸ್ಥಾನ ಪಡೆದುಕೊಂಡಿದೆ".[೧]

ಒಂದು ಪ್ರದೇಶದ ಸರ್ವತೋಮುಖ ಬೆಳವಣಿಗೆ ಅಲ್ಲಿಯ ನೈಸರ್ಗಿಕ ಅಂಶಗಳನ್ನು ಅವಲಂಬಿಸಿರುತ್ತದೆ. ಭೌಗೋಳಿಕ ಸ್ಥಾನ, ಭೂಸ್ವರೂಪ, ವಾಯುಗುಣ, ಸಸ್ಯವರ್ಗ, ಹುಲ್ಲುಗಾವಲು, ಮಣ್ಣು, ಜಲಭಾಗಗಳು, ನದಿ ಬಯಲು ಇತ್ಯಾದಿಗಳನ್ನು ಒಳಗೊಂಡಿರುತ್ತದೆ. ಈ ನೈಸರ್ಗಿಕ ಅಂಶಗಳ ಸಹಾಯವಿರುತ್ತದೆಯೊ ಆ ಪ್ರದೇಶ ಬಹುಬೇಗ ಅಭಿವೃದ್ಧಿಯನ್ನು ಕಾಣುತ್ತದೆ. ಆ ಪ್ರದೇಶ ತನ್ನದೆಯಾದ ಇತಿಹಾಸ ಮತ್ತು ಸಂಸ್ಕೃತಿಯನ್ನು ಹೊಂದಲು ಭೌಗೋಳಿಕ ಪರಿಸರ ಸಹಾಯ ಮಾಡುತ್ತದೆ.

"ನಿಸರ್ಗದ ಕೊಡುಗೆಗಳಲ್ಲಿ ಬೆಟ್ಟ-ಗುಡ್ಡಗಳಿಗೆ ಮಹತ್ವದ ಸ್ಥಾನವಿದೆ. ಇವು ಮಾನವನ ಜೀವನದಲ್ಲಿ ಕೆಲವೊಮ್ಮೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಪ್ರಭಾವ ಬೀರುತ್ತವೆ. ಅದರಂತೆ ಮಾನವನು ತನ್ನ ಬುದ್ಧಿ ಚಾತುರ್ಯ ಮತ್ತು ಕುಶಲತೆಗಳ ಮೂಲಕ ನೈಸರ್ಗಿಕ ಪರಿಸರವನ್ನು ನಿಯಂತ್ರಿಸುತ್ತಾನೆಯಾದರೂ ಆತನು ಪರಿಸರದಿಂದ ನಿರ್ಬಂಧಿತವಾದ ಚೌಕಟ್ಟಿನೊಳಗೆ ಕಾರ್ಯ ನಿರ್ವಹಿಸುತ್ತಾನೆ".[೨] ಚಿತ್ರದುರ್ಗ ಪರಿಸರದಲ್ಲಿ ಕಂಡು ಬರುವ ಇಂತಹ ಬೆಟ್ಟ-ಗುಡ್ಡಗಳು ಸಹಜವಾಗಿಯೇ ಆದಿಮಾನವನ ವಾಸಕ್ಕೆ ಸಹಕಾರಿಯಾಗಿವೆ. ಪ್ರಾಚೀನ ಕಾಲದಿಂದಲೂ ಇಲ್ಲಿ ಜನವಸತಿ ಇದ್ದಿತೆಂದು ತಿಳಿದುಬರುತ್ತದೆ. ಈ ಪರಿಸರದಲ್ಲಿ ವಾಸ ಮಾಡಲು ಹಲವು ಕಾರಣಗಳಿವೆ. ನೈಸರ್ಗಿಕ ಅಂಶಗಳು ಅಧಿಕವಾಗಿ ದೊರೆಯುವುದಲ್ಲದೆ, ಶತ್ರುಗಳು ಪ್ರವೇಶ ಮಾಡದ ಹಾಗೆ ಪ್ರಕೃತಿ ನಿರ್ಮಿತ ಗುಹೆಗಳಿವೆ. ಈ ಎಲ್ಲಾ ಕಾರಣಗಳಿಂದ ಪ್ರಾಚೀನ ಕಾಲದಿಂದಲೂ ಈ ಪ್ರದೇಶದಲ್ಲಿ ಜನವಸತಿ ಇದ್ದಿತೆಂದು ಸ್ಪಷ್ಟವಾಗುತ್ತದೆ.

ಜಲ ಸಂಪತ್ತಿನ ದೃಷ್ಟಿಯಲ್ಲಿ ಈ ಜಿಲ್ಲೆ ಮಹತ್ತರವಾದ ಪ್ರಯೋಜನ ಪಡೆದಿರುವುದು. ವೇದಾವತಿ, ಜಿನಗಿಹಳ್ಳ, ಸುವರ್ಣಮುಖಿ ನದಿಗಳು ಹರಿದು ನೀರಾವರಿ ಸೌಲಭ್ಯವನ್ನು ಅಲ್ಪವಾಗಿ ಕಲ್ಪಿಸಿವೆ. ಹಿರಿಯೂರು ತಾಲ್ಲೂಕಿನ ಕೆಲವು ಹಳ್ಳಿಗಳನ್ನು ಬಿಟ್ಟರೆ ಹೆಚ್ಚಾಗಿ ನೀರಾವರಿ ಪ್ರದೇಶಕ್ಕೆ ಒಳಪಟ್ಟಿಲ್ಲ. ಈ ಪರಿಸರದಲ್ಲಿ ಕಂಡುಬರುವ ಪ್ರಾಚೀನ ಕೆರೆಗಳಿಂದ ನೀರಾವರಿಯಾಗುತ್ತಿತ್ತು. ಮಳೆ ಬಾರದೇ ಇರುವುದರಿಂದ ನೀರಿನ ಕೊರತೆ ಇದೆ. ನಾಯಕನಹಟ್ಟಿಯ ದೊಡ್ಡ ಕೆರೆ, ಚಿಕ್ಕ ಕೆರೆ, ಭರಮಸಾಗರ, ಭೀಮ ಸಮುದ್ರ, ಧರ್ಮಪುರ, ಗೌರಸಮುದ್ರ, ಮುತ್ತಿಗಾರಹಳ್ಳಿ ಕೆರೆ, ತುಮಕೂರ್ಲಹಳ್ಳಿ, ಕೋನಸಾಗರ, ನಾಗಸಮುದ್ರ ಇನ್ನೂ ಮುಂತಾದ ಗ್ರಾಮಗಳಲ್ಲಿನ ಕೆರೆಗಳು ಮತ್ತು ರಂಗಯ್ಯನದುರ್ಗ ಜಲಾಶಯ ಪ್ರಮುಖವಾದವು. ಇಂದು ಬಯಲು ಸೀಮೆ ಅಭಿವೃದ್ಧಿ ಮಂಡಳಿ, ಜಲಸಂವರ್ಧನ ಸಂಘ, ಜಲಾನಯನ ಅಭಿವೃದ್ಧಿ ಯೋಜನೆಗಳು ಹುಟ್ಟಿಕೊಂಡು ಈ ಜಿಲ್ಲೆಯ ಅನೇಕ ಕೆರೆ, ಗೋಕಟ್ಟೆ, ಒಡ್ಡು, ಕೃಷಿ ಹೊಂಡ, ಬದುಗಳ ನಿರ್ಮಾಣ ದುರಸ್ಥಿಗೊಳಿಸಿವೆ. ಆ ಮೂಲಕ ಅಂತರ್ಜಲ ಮಟ್ಟವನ್ನು ಹೆಚ್ಚಿಸುವ ಪ್ರಯತ್ನವನ್ನು ಮಾಡುತ್ತಿವೆ.

ವೇದಾವತಿ ಮತ್ತು ಚಿನ್ನಹಗರಿ(ಜಿನಗಿಹಳ್ಳ) ನದಿಗಳು ಈ ಭಾಗದ ಜನರಿಗೆ ಪವಿತ್ರವಾದವು. ಈ ನದಿಗಳು ಆಧ್ಯಾತ್ಮಿಕವಾಗಿಯೂ, ಸಾಂಸ್ಕೃತಿಕವಾಗಿಯೂ ಇಲ್ಲಿನ ಸಮುದಾಯಗಳಿಗೆ ವಾಸದ

ನೆಲೆಯಾಗಿವೆ. ಈ ನದಿ ಪರಿಸರದಲ್ಲಿ ಅನೇಕ ಧಾರ್ಮಿಕ ಕ್ಷೇತ್ರಗಳಿವೆ. ಶೈವ, ವೈಷ್ಣವ, ಶಾಕ್ತೆಯ ಇತರ ಧರ್ಮಗಳ ದೇವಾಲಯಗಳಿವೆ.

"ಭೂ ವಿಜ್ಞಾನಿಗಳು ಜಗತ್ತಿನಲ್ಲೇ ಅತ್ಯಂತ ಪುರಾತನವೆನಿಸಿದ ಭೂಮಿಯೆಂದರೆ ಕರ್ನಾಟಕ ಪೀಠಭೂಮಿ. ಈ ಪೀಠ ಭೂಮಿಯ ಅತ್ಯಂತ ಪುರಾತನ ಭೂಭಾಗ ಚಿತ್ರದುರ್ಗ ಜಿಲ್ಲೆ ಎಂದು ಹೇಳಿದ್ದಾರೆ. ಈ ಜಿಲ್ಲೆಯಲ್ಲಿ ಕಂಡು ಬರುವ ಪದರು ಶಿಲೆಗಳು ಮತ್ತು ಒರಟು ಶಿಲೆಗಳು, ಕಣಶಿಲೆ, ಸ್ಲೇಟುಶಿಲೆ, ಜೋಡು ಶಿಲೆ, ಕ್ಲೋರೈಟ್ ಮತ್ತು ಹಾರ್‍ನ್‌ಬೆಂಡ್ ಸೇರಿದಂತೆ ಒಟ್ಟಾರೆ ಚಿತ್ರದುರ್ಗ ಪದರು ಶಿಲಾಮಯ ಎಂದೇ ಪ್ರಪಂಚದ ಭೂ ಇತಿಹಾಸದಲ್ಲಿ ಪ್ರಸಿದ್ಧವಾಗಿದೆ".[೩] ಈ ಜಿಲ್ಲೆಯಲ್ಲಿ ಹಲವಾರು ಉಪಯುಕ್ತ ಖನಿಜಗಳು ಮತ್ತು ಅದಿರುಗಳು ದೊರೆಯುತ್ತವೆ. ಅವುಗಳಲ್ಲಿ ಮುಖ್ಯವಾದವು; ತಾಮ್ರ, ಕಬ್ಬಿಣ, ಕ್ರೋಮೈಟ್, ಮ್ಯಾಂಗನೀಸ್ ಸೀಸ, ಚಿನ್ನ, ಬಾಕ್ಸೈಟ್, ಸುಣ್ಣದಕಲ್ಲು, ಹಾಸಗಲ್ಲು, ಬೆಣಚುಕಲ್ಲು, ಹಿಟ್ಟುಕಲ್ಲು, ಚೆಕ್ಕೆಕಲ್ಲು ಮೊದಲಾದವುಗಳು ಕಂಡುಬರುತ್ತವೆ.

ಚಿತ್ರದುರ್ಗ ಜಿಲ್ಲೆಯು ಭಾರತದ ಖನಿಜ ಭೂಪಟದಲ್ಲಿ ತಾಮ್ರದ ನಿಕ್ಷೇಪಗಳಿಂದಾಗಿ ತನ್ನದೇ ಆದ ಸ್ಥಾನವನ್ನು ದೊರಕಿಸಿಕೊಂಡಿದೆ. ಕರ್ನಾಟಕದ ಅತಿ ಪ್ರಾಚೀನ ತಾಮ್ರದ ಗಣಿ ಚಿತ್ರದುರ್ಗ ಸಮೀಪದ ಇಂಗಳದಾಳ್‌ನಲ್ಲಿದೆ. ಈ ಪ್ರದೇಶದಲ್ಲಿ ತಾಮ್ರ ಹೇರಳವಾಗಿ ದೊರೆಯುತ್ತಿತ್ತು. ಆದರೆ ಇಂದು ಕಾರ್ಯ ಸ್ಥಗಿತಗೊಂಡಿದೆ. ಈ ಪ್ರದೇಶದಲ್ಲಿ ಬೆಣಚು, ಸಿರಬಳ್ಳಿ, ಚಾಲ್ಕೋಪಿರೈಟ್ ಎಂಬ ತಾಮ್ರ ಅದಿರು ರೂಪದಲ್ಲಿ ದೊರೆಯುತ್ತದೆ. ಭೀಮಸಮುದ್ರದ ಸುತ್ತಮುತ್ತ ಮ್ಯಾಂಗನೀಸ್ ಅದಿರು ಕಂಡುಬರುತ್ತದೆ. ಈ ಪರಿಸರದ ಸುತ್ತಮುತ್ತಲು ಕೆಲವು ಹಳ್ಳಿಗಳಲ್ಲಿ ಚಿನ್ನದ ಹಳೆಯ ಗಣಿಗಳನ್ನು ನೋಡಬಹುದು, ಗುಡ್ಡದ ರಂಗವ್ವನಹಳ್ಳಿ, ದಿಂಡಾವರ, ಕೋಟೆ ಮರಡಿ, ಹಳೇಕಲ್ ಇತ್ಯಾದಿ. ಈ ಜಿಲ್ಲೆಯಲ್ಲಿ ವಿವಿಧ ಖನಿಜ ವರ್ಗಗಳನ್ನು ಕಾಣಬಹುದು. ಇತ್ತೀಚೆಗೆ ಹಲವಾರು ಕಾರಣಗಳಿಂದ ಇಲ್ಲಿನ ಭೌಗೋಳಿಕ ಸಂಪತ್ತು ನಾಶವಾಗುತ್ತಿದೆ.

ಚಿತ್ರದುರ್ಗ ಪರಿಸರದಲ್ಲಿ ಆರು ತಾಲ್ಲೂಕುಗಳಲ್ಲಿ ಕಂಡುಬರುವ ಪ್ರಮುಖ ಬೆಟ್ಟ-ಗುಡ್ಡಗಳು ಈ ರೀತಿ ಇವೆ.

"೧. ಜಟ್ಟಂಗಿ ರಾಮೇಶ್ವರ ಗುಡ್ಡ(೧೩೪೬) ೨. ನುಂಕಪ್ಪನ ಗುಡ್ಡ(೩೦೨೨)

೩. ಜೋಗಿಮಟ್ಟಿ ಗುಡ್ಡ(೩೮೦೩) ೪. ಜೋಗಪ್ಪನ ಗುಡ್ಡ(೨೯೩೬)

೫. ಓಬಳದೇವರ ಗುಡ್ಡ(೩೭೦೦) ೬. ಧವಳಪ್ಪನ ಗುಡ್ಡ(೩೨೮೫)

೭. ಹಾಲುರಾಮೇಶ್ವರ ಗುಡ್ಡ(೩೮೭೫) ೮. ಮಾರಿಕಣಿವೆ ಗುಡ್ಡ(೩೬೭೫)

೯. ವೇಣುಕಲ್ಲು ಗುಡ್ಡ (೨೦೮೮)"[೪]

ಈ ಪರಿಸರದಲ್ಲಿ ಇನ್ನು ಸಣ್ಣ ಪುಟ್ಟ ಗುಡ್ಡಗಳಿವೆ. ಈ ಆವರಣದಲ್ಲಿ ಕೊಟ್ಟಿರುವ ಅಂಕಿಸಂಖ್ಯೆಗಳು ಸಮುದ್ರ ಮಟ್ಟದಿಂದ ಎತ್ತರದಲ್ಲಿರುವ ಅಡಿಗಳಾಗಿವೆ. ಈ ಮೇಲಿನ ಪ್ರತಿಯೊಂದು ಗುಡ್ಡಕ್ಕೂ ಒಂದೊಂದು ಐತಿಹ್ಯವಿದೆ.

**೧. ಜಟ್ಟಂಗಿ ರಾಮೇಶ್ವರ ಗುಡ್ಡ :** ಇದು ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಕಂಡುಬರುತ್ತದೆ. ಇದು ಜಿಲ್ಲೆಯ ಅತ್ಯಂತ ಪ್ರಮುಖ ಐತಿಹಾಸಿಕ ಸ್ಥಳ ಹಾಗೂ ಪುಣ್ಯಕ್ಷೇತ್ರವೆಂದು ಗುರುತಿಸಿಕೊಂಡಿದೆ. ಮೊಳಕಾಲ್ಮೂರು ತಾಲೂಕಿನ ಜಟ್ಟಂಗಿ ರಾಮೇಶ್ವರ ಬೆಟ್ಟದಲ್ಲಿ, ರಾಮಾಯಣದ ಕುರುಹನ್ನು ಕುರಿತು ಹೇಳುವ ಐತಿಹ್ಯವಿದೆ. ಒಮ್ಮೆ ರಾವಣನು ಸೀತೆಯನ್ನು ಅಪಹರಿಸಿ ಲಂಕೆಗೆ ಕದ್ದೊಯ್ಯುತ್ತಿರುವಾಗ ಜಟಾಯು ಪಕ್ಷಿ ಅವನನ್ನು ತಡೆದು ಪ್ರತಿರೋಧ ಒಡ್ಡುತ್ತದೆ. ರಾವಣನಿಗೆ ಕೋಪಬಂದು ಜಟಾಯು ಪಕ್ಷಿಯ ರೆಕ್ಕೆಯನ್ನು ಕತ್ತರಿಸುತ್ತಾನೆ. ಈ ಸ್ಥಳದಲ್ಲಿ ಶ್ರೀರಾಮನು ಜಟಾಯುವಿಗೆ ಅಗ್ನಿ ಸಂಸ್ಕಾರ ಮಾಡಿ, ಲಿಂಗ ಪ್ರತಿಷ್ಟೆ ಮಾಡಿದ್ದರಿಂದ ಜಟಾಯು, ರಾಮ ಮತ್ತು ಈಶ್ವರ ಈ ಮೂವರ ಹೆಸರಿನಲ್ಲಿಯೇ ಈ ದೇವರಿಗೆ ಜಟ್ಟಂಗಿ ರಾಮೇಶ್ವರನೆಂದು ಹೆಸರು ಪಡೆದಿದೆ. ಈ ಬೆಟ್ಟಕ್ಕೆ ಜಟ್ಟಂಗಿ ರಾಮೇಶ್ವರ ಗುಡ್ಡ ಎಂದೂ ಸಹ ಕರೆಯುತ್ತಾರೆ. 'ಜಟ್ಟಂಗಿ' ಎಂಬುದು ಇಂದು ಈ ಗುಡ್ಡಕ್ಕೆ ಕರೆಯುವ ಹೆಸರು. ರಾವಣನು ಸೀತೆಯನ್ನು ಅಪಹರಿಸಿ ಲಂಕೆಗೆ ಕದ್ದೊಯ್ಯುತ್ತಿರುವಾಗ ಜಟಾಯು ಪಕ್ಷಿಯು ಅವನನ್ನು ತಡೆಗಟ್ಟಿ ಪ್ರತಿರೋಧ ಒಡ್ಡುತ್ತದೆ. ಈ ಕಾದಾಟದಲ್ಲಿ ರಾವಣನು ಜಟಾಯು ಪಕ್ಷಿಯ ರೆಕ್ಕೆಯನ್ನು ಕತ್ತರಿಸಿ ಹಾಕುತ್ತಾನೆ. ಈ ಹೋರಾಟ ನಡೆದ ಸ್ಥಳದ ಗುರುತು ಇದಾಗಿದೆ.

**೨. ನುಂಕಪ್ಪನ ಗುಡ್ಡ :** ಇದು ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ಸಮೀಪದಲ್ಲಿದೆ. ಈ ಗುಡ್ಡಕ್ಕೆ ಹೆಸರು ಬರಲು ಐತಿಹ್ಯ ಹೀಗಿದೆ. ಒಮ್ಮೆ ಭೂಲೋಕದಲ್ಲಿ ರಾಕ್ಷಸರ ಹಾವಳಿ ಹೆಚ್ಚಾದಾಗ ನರಮಾನವರು ಭಯಗೊಂಡು ಶಿವನನ್ನು ಧ್ಯಾನ ಮಾಡಿದರು. ಈ ಸಂದರ್ಭದಲ್ಲಿ ದೇವತೆಗಳು ಕೂಡ ಪರಮಾತ್ಮನಲ್ಲಿ ಬೇಡಿಕೊಂಡರು. ಇದನ್ನರಿತ ಶಿವನು ತನ್ನ ಬೆವರಿನಿಂದ ಕಾಲ ಭೈರವನನ್ನು ಸೃಷ್ಟಿಸಿ ಕಳುಹಿಸಿದನೆಂದು ತಿಳಿದು ಬರುತ್ತದೆ. ಇವನ ಸಹಾಯಕ್ಕಾಗಿ ಅಕ್ಕಳಾದ ಕರ್ಪೂರದಮ್ಮನನ್ನು ಭೂಲೋಕಕ್ಕೆ ಕಳುಹಿಸಿದನು. ಭೈರವನು ಕೈಲಾಸದಿಂದ ಕೂಡ್ಲಿಗಿ ತಾಲೂಕಿನ ಕುಮತಿ ಪ್ರದೇಶಕ್ಕೆ ಬಂದು ನೆಲೆಸಿದನು. ಈ ಕುಮತಿ ಚಿನ್ನಹಗರಿ ದಡದಲ್ಲಿದೆ. ಇಲ್ಲಿ ರಾಕ್ಷಸರು ವಾಸಿಸುತ್ತಿದ್ದರಂತೆ. ಇವರೊಂದಿಗೆ ಭೈರವ ಘೋರ ಯುದ್ಧ ಮಾಡುತ್ತಾನೆ. ರಾಕ್ಷಸರ ತಾಣವಾದ ನುಂಕೆಮಲೆ ಬೆಟ್ಟಕ್ಕೆ ಕುದುರೆ ಏರಿ ಹೋಗುತ್ತಾನೆ. ಈ ಬೆಟ್ಟದ ಮೇಲುಗಿರಿಯಲ್ಲಿ ರಾಕ್ಷಸರು ವಾಸ ಮಾಡುವುದನ್ನು ಗಮನಿಸಿ ತನ್ನ ಕುದುರೆಯನ್ನು ಬೆಟ್ಟ ಹತ್ತಿಸುವನು. ಹೀಗೆ ಬೆಟ್ಟವನ್ನು ಹತ್ತಿಸುವಾಗ ಮಾರ್ಗ ಮಧ್ಯದಲ್ಲಿ ಕುದುರೆಯ ಲಗಾಮು ಹರಿಯುತ್ತದೆ. ಅದೇ ಸಂದರ್ಭದಲ್ಲಿ ಹರಳಯ್ಯ ಎಂಬ ವ್ಯಕ್ತಿ ಬೆಟ್ಟದ ತಪ್ಪಲಿನ ಪ್ರದೇಶದಲ್ಲಿ ನೆಲೆಸಿರುತ್ತಾನೆ. ಸಂಕಷ್ಟಕ್ಕೆ ಸಿಲುಕಿದ ಭೈರವನನ್ನು ಕಂಡು ಹರಳಯ್ಯ ತನ್ನ ಜೀವನವನ್ನು ಲೆಕ್ಕಿಸದೆ, ತನ್ನ ಅಂಗಾಲಿನಿಂದ ನರಗಳನ್ನು ಕಿತ್ತು ಕುದುರೆಗೆ ಲಗಾಮನ್ನಾಗಿ ಮಾಡಿಕೊಡುತ್ತಾನೆ.

ಆಗ ಕುದುರೆಯನ್ನು ಬೆಟ್ಟ ಹತ್ತಿಸಿ ರಾಕ್ಷಸರನ್ನು ಸಂಹಾರ ಮಾಡುತ್ತಾನೆ. ರಾಕ್ಷಸರ ಸೇವಕಿಯರಾದ ನುಂಕವ್ವ-ಮಲಿಯವ್ವ ಇವರಿಬ್ಬರು ತಪ್ಪಿಸಿಕೊಂಡು ಬೆಟ್ಟದಿಂದ ಇಳಿಯುತ್ತಾರೆ. ಭೈರವನು ಇವರನ್ನು ಕಂಡು ಅವರ ಜುಟ್ಟುಗಳನ್ನು ಹಿಡಿದು ಮೇಲಕ್ಕೆತ್ತಿ ನಿಮ್ಮಿಂದ ನನಗೆ ಉಪಕಾರವಾಯಿತು. ತಮ್ಮಿಂದೇನಾದರೂ ಉಪಕಾರ ಬೇಕೆ ಎಂದಾಗ, ನಮ್ಮಿಬ್ಬರ ಹೆಸರಾದ ನುಂಕವ್ವ-ಮಲಿಯವ್ವ ತಮ್ಮ ಕ್ಷೇತ್ರಕ್ಕೆ ನಿಮ್ಮ ಹೆಸರೊಡನೆ ಸೇರಿಸಿ ಇಡಬೇಕೆಂದು ಕೇಳಿಕೊಂಡಾಗ ಈ ಕ್ಷೇತ್ರಕ್ಕೆ ನುಂಕೆ-ಮಲೆ-ಭೈರವ ಎಂದು ಹೆಸರಿಡಲಾಯಿತು. ಇಂದಿಗೂ ಈ ಪ್ರದೇಶದಲ್ಲಿ ನುಂಕವ್ವ-ಮಲಿಯವ್ವನವರ ವಿಗ್ರಹಗಳು ಇವೆ. ಹೀಗೆ ಈ ಪ್ರದೇಶವನ್ನು ನುಂಕಪ್ಪನ ಗುಡ್ಡ, ನುಂಕೆಮಲೆ ಎಂದೂ ಕರೆಯುತ್ತಾರೆ.

೩. **ಜೋಗಿಮಟ್ಟಿ :** 'ಜೋಗಿಮಟ್ಟಿ' ಚಿತ್ರದುರ್ಗದಿಂದ ಸುಮಾರು ಹದಿಮೂರು ಕಿ.ಮೀ. ದೂರದಲ್ಲಿದೆ. ಇಲ್ಲಿ ಗಿರಿಧಾಮವಿದ್ದು ಇಲ್ಲಿನ ನಿಸರ್ಗ ಸೌಂದರ್ಯ, ತಂಪಾದ ಹವಾಮಾನ ಬಯಲುಸೀಮೆಯಲ್ಲಿ ಮಲೆನಾಡಿನ ಸೊಬಗನ್ನು ನೆನಪಿಸುತ್ತದೆ. ಇದನ್ನು 'ಬಯಲುಸೀಮೆಯ ಊಟಿ' ಎಂತಲೂ ಕರೆಯುತ್ತಾರೆ. ಹಿಂದೆ ಜೋಗಿ ಸಮುದಾಯದವರು ಈ ಮರಡಿಗೆ ಗಿಡಮೂಲಿಕೆಗಾಗಿ ಹೋಗುತ್ತಿದ್ದರು. ಹಲವು ದಿನಗಳ ಕಾಲ ಗಿಡಮೂಲಿಕೆಗಳನ್ನು ಸಂಗ್ರಹ ಮಾಡಿಕೊಂಡು ಅಲ್ಲಿಯೇ ವಾಸಿಸುತ್ತಿದ್ದರಂತೆ. ಅವರಲ್ಲಿ ಒಬ್ಬ ಜೋಗಿ(ವ್ಯಕ್ತಿ) ಅಕಾಲಿಕ ಮರಣಕ್ಕೆ ತುತ್ತಾಗಿದ್ದರಿಂದ ಅಲ್ಲಿಯೇ ಸಮಾಧಿ ಮಾಡಲಾಯಿತು. ಜೋಗಿಯೊಬ್ಬನ ಸಮಾಧಿಯಿಂದಾಗಿ ಈ ಮರಡಿಗೆ ಜೋಗಿಮಟ್ಟಿ ಎನ್ನಲಾಗುತ್ತದೆ. ಹಿಂದೆ ಇಲ್ಲಿ ಪುಟ್ಟ ಗುಡಿಯಿತ್ತು. ಇದೀಗ ಹೊಸ ಸಮಾಧಿ ಮಂದಿರ ತಲೆಎತ್ತಿದೆ. ಬಹುಶಃ ಕಾಡುಪ್ರಾಣಿಗಳಿಂದ ಅಥವಾ ಕ್ರಿಮಿಕೀಟಗಳಿಂದ ಜೋಗಿಯ ಸಾವು ಸಂಭವಿಸಿರಬಹುದು. ಜೋಗಿ ಮರಡಿಯಲ್ಲಿ ಇನ್ನೂರಐವತ್ತಕ್ಕೂ ಹೆಚ್ಚು ಔಷಧೀಯ ಸಸ್ಯಗಳನ್ನು ಗುರುತಿಸಲಾಗಿದೆ. ಇತ್ತೀಚೆಗೆ ರಾಜ್ಯ ಸರಕಾರವು ಈ ಮರಡಿಯ ಅರಣ್ಯ ಪ್ರದೇಶವನ್ನು ವನ್ಯಜೀವಿಧಾಮವೆಂದು ಘೋಷಿಸಿದೆ.

೪. **ಜೋಗಪ್ಪನ ಗುಡ್ಡ :** ಜೋಗಪ್ಪನ ಗುಡ್ಡ ಮೊಳಕಾಲ್ಮೂರು ತಾಲೂಕಿನ ನುಂಕೆಮಲೆ ಪ್ರದೇಶದಲ್ಲಿದೆ. ಈ ಗುಡ್ಡಕ್ಕೆ ಹೆಸರು ಬರಲು ಐತಿಹ್ಯ ಹೀಗಿದೆ. ನುಂಕೆಮಲೆ ಗುಡ್ಡದ ಕಾಳಿದಾಸನ ಶ್ಲೋಕವಿರುವ ಶಾಸನದ ಬಂಡೆಯ ಸಮೀಪ ಬೃಹತ್ತಾದ ಬಂಡೆಯಿದೆ. ಇದನ್ನು ಕೂಗು ಬಂಡೆ ಅಥವಾ ಜೋಗಪ್ಪನ ಗುಡ್ಡವೆಂದು ಕರೆಯುತ್ತಾರೆ. ಕಾಲಭೈರವನು ಒಮ್ಮೆ ರಾಕ್ಷಸರನ್ನು ಸಂಹಾರ ಮಾಡಲು ಈ ಬೆಟ್ಟಕ್ಕೆ ಬಂದಾಗ ರಾಕ್ಷಸರ ವಿರುದ್ಧ ಯುದ್ಧ ಮಾಡಿ ಮೂರ್ಛೆ ಹೋಗಿ ಸೋತು ಹೋದನಂತೆ. ನಂತರ ಈ ಬಂಡೆ ಬಳಿ ಬಂದು ಜೋಗಿಯ ವೇಷವನ್ನು ಧರಿಸಿ ಭಿಕ್ಷೆಗೆ ರಾಕ್ಷಸರ ಬಳಿ ಹೋದನಂತೆ. ಅಲ್ಲಿ ನುಂಕವ್ವ-ಮಲಿಯವ್ವ ಎಂಬ ಸೇವಕಿಯರು ಇರುತ್ತಾರೆ. ಅವರಲ್ಲಿ ಭಿಕ್ಷೆ ಬೇಡುತ್ತಾನೆ. ನಮಗೆ ರಸವೊಂದೆ ಇರುವುದು ಇಲ್ಲಿ ಆಹಾರ ಸಿಗುವುದಿಲ್ಲ. ವಿಷವೊಂದೆ ಎಂದಾಗ ಆ ವಿಷವೇ ಅಮೃತವೆಂದು ಕುಡಿಯುತ್ತೇನೆಂದು ಬೇಡುತ್ತಾನೆ. ಇದು ವಿಷವಲ್ಲ ಗಿಡಮೂಲಿಕೆಗಳ ರಸ. ಆ ರಸವನ್ನು ಖಾಲಿ ಮಾಡಿ ಮುಂದೆ

ಘೋರ ರೂಪ ತಾಳಿ ರಾಕ್ಷಸರನ್ನು ಸಂಹಾರ ಮಾಡುತ್ತಾನೆ. ಈ ಬಂಡೆಯ ಬಳಿ ಜೋಗಿಯ ವೇಷವನ್ನು ಧರಿಸಿದ್ದಕ್ಕಾಗಿ ಜೋಗಪ್ಪನ ಗುಡ್ಡ-ಬಂಡೆ ಎಂದು ಕರೆಯುವರು. ಇಲ್ಲಿ ಸಿದ್ದರು ವಾಸಿಸುತ್ತಿದ್ದರೆಂದು ತಿಳಿದುಬರುತ್ತದೆ. ಕರ್ನಾಟಕದ ನಾಥ ಪಂಥಗಳ ನಾಲ್ಕು ಮಠಗಳಲ್ಲಿ ಇದು ಒಂದು. ಕಿನ್ನರಿ ಜೋಗಿಗಳು ದೀಕ್ಷೆ ಪಡೆದು ಅಂದಿನಿಂದ ಜೋಗಪ್ಪನ ವೇಷಧರಿಸಿ ಧಾರ್ಮಿಕ ಭಿಕ್ಷಾಟನೆಗೆ ತೆರಳುತ್ತಾರೆ. ವರ್ಷಕ್ಕೊಮ್ಮೆ ವೇಷ ಧರಿಸಿ ಧಾರ್ಮಿಕ ಭಿಕ್ಷಾಟನೆಗೆ ತೆರಳುತ್ತಾರೆ. ವರ್ಷಕ್ಕೊಮ್ಮೆ ಜಾತ್ರೆಯ ಸಂದರ್ಭದಲ್ಲಿ ತಮ್ಮ ಕಾಣಿಕೆಯನ್ನು ಅರ್ಪಿಸುತ್ತಾರೆ. ಈ ಬಂಡೆಯ ಎದುರಿಗೆ ಜೋಗಪ್ಪ ಎಂದು ಕೂಗಿದರೆ ಪ್ರತಿಧ್ವನಿಯಾಗಿ ಜೋಗಪ್ಪ ಎಂದು ಕೇಳಿಸುತ್ತದೆ. ಈ ಪದ ಪ್ರತಿಧ್ವನಿಯಾಗಿ ಜೋಗಪ್ಪ ಎಂದು ಕೇಳಿಸುತ್ತದೆ. ಈ ಪದ ಬಿಟ್ಟು ಬೇರೆ ಪದ ಕೂಗಿದರೆ ಅದು ಅಸ್ಪಷ್ಟವಾಗುತ್ತದೆ ಎಂದು ಸ್ಥಳೀಯರ ನಂಬಿಕೆ.

**೫. ಓಬಳದೇವರ ಗುಡ್ಡ :** ಈ ಗುಡ್ಡವು ಜಿನಗಿ ಹಳ್ಳ ಉಗಮವಾಗುವ ಸ್ಥಳದಲ್ಲಿದೆ. ಇಲ್ಲಿಯೇ ಸಮೀಪ ಓಬಳದೇವರಗುಡಿ ಇರುವುದರಿಂದ ಈ ಗುಡ್ಡಕ್ಕೆ ಓಬಳದೇವರ ಗುಡ್ಡ ಎಂದು ಕರೆಯುವರು.

**೬. ಧವಳಪ್ಪನ ಗುಡ್ಡ :** ಚಿತ್ರದುರ್ಗ ನಗರದಲ್ಲಿ ಕಂಡುಬರುವ ಅಂಕಲಿ ಮಠದ ಸಮೀಪ ಛತ್ರಿಯಾಕಾರದ ಎತ್ತರವಾದ ಗುಡ್ಡವಿದೆ. ಆ ಗುಡ್ಡಕ್ಕೆ ಧವಳಪ್ಪನ ಗುಡ್ಡ ಎಂದು ಹೆಸರು. ಫಕ್ಕೀರ ಮತ್ತು ಧವಳಪ್ಪ ಇಬ್ಬರು ಸ್ನೇಹಿತರು ದಿನಾಲು ಕೋಟೆಯನ್ನು ಸುತ್ತಾಡಿ ರಾತ್ರಿ ಗವಿಯಲ್ಲಿ ಮಲಗುತ್ತಿದ್ದರು. ಒಮ್ಮೆ ಧವಳಪ್ಪ ಫಕ್ಕೀರನಲ್ಲಿ ಒಂದು ದುಗ್ಗಾಣಿಯನ್ನು ಸಾಲ ಪಡೆದು ಖರ್ಚು ಮಾಡಿರುತ್ತಾನೆ. ಆ ದುಗ್ಗಾಣಿಯನ್ನು ಫಕ್ಕೀರನಿಗೆ ಕೆಲವು ದಿನಗಳ ನಂತರ ಕೋಡುತ್ತೇನೆಂದು ಹೇಳಿ ವರ್ಷಾನುಗಟ್ಟಲೆಯಾದರೂ ದುಗ್ಗಾಣಿ ವಾಪಸ್ಸು ಕೊಡುವುದಿಲ್ಲ. ದಿನೇ ದಿನೇ ಕಳೆದಂತೆ ಧವಳಪ್ಪನಿಗೆ ತನ್ನಲ್ಲೇ ಖಿನ್ನತೆ ಕಾಡಿ ಫಕ್ಕೀರನಿಗೆ ಮುಖ ತೋರಿಸಬಾರದೆಂದು ಮರೆಮಾಚಿ ಎತ್ತರವಾದ ಬೆಟ್ಟದಲ್ಲಿ ಅಡಗಿ ಕುಳಿತನು. ಹೀಗೆ ಕುಳಿತ ಸ್ಥಳವೇ ಧವಳಪ್ಪನ ಗುಡ್ಡವೆಂದು ಹೆಸರು ಪಡೆಯಿತು. ಈಗಲೂ ಈ ಗುಡ್ಡವಿದೆ.

**೭. ಹಾಲುರಾಮೇಶ್ವರ :** ಹಾಲುರಾಮೇಶ್ವರ ಹೊಸದುರ್ಗ ತಾಲೂಕಿನಲ್ಲಿ ಕಂಡುಬರುವ ಪುಣ್ಯಕ್ಷೇತ್ರ. ಈ ಸ್ಥಳಕ್ಕೆ ಸಂಬಂಧಿಸಿದ ಐತಿಹ್ಯ ಹೀಗಿದೆ. ಶ್ರೀರಾಮ ಅರಣ್ಯವಾಸಕ್ಕೆ ಬಂದ ಸಂದರ್ಭದಲ್ಲಿ ಈ ಕ್ಷೇತ್ರದಲ್ಲಿ ಪೂಜೆ ಸಲ್ಲಿಸುವ ವೇಳೆ ಶಿವಲಿಂಗ ಉದ್ಭವವಾಯಿತಂತೆ. ನಂತರ ಒಂದು ಹಸು ನಿತ್ಯ ಅಲ್ಲಿಗೆ ಬಂದು ಆ ಲಿಂಗಕ್ಕೆ ಹಾಲನ್ನು ಕರೆಯುತ್ತಿತ್ತಂತೆ. ಅಂದಿನಿಂದ ಈ ಕ್ಷೇತ್ರಕ್ಕೆ ಹಾಲು ರಾಮೇಶ್ವರ ಎಂಬ ಹೆಸರು ಬಂದಿರುವುದಾಗಿ ಪ್ರತೀತಿ.

**೮. ಮಾರಿಕಣಿವೆ ಗುಡ್ಡ :** ಮಾರಿಕಣಿವೆ ತಾಲೂಕು ಕೇಂದ್ರವಾದ ಹಿರಿಯೂರಿನಿಂದ ಸುಮಾರು ೨೦ ಕಿ.ಮೀ. ದೂರದಲ್ಲಿದೆ. ಮಾರಮ್ಮ ಈ ಕಣಿವೆಯಲ್ಲಿ ನೆಲೆಸಿದ್ದರಿಂದ ಈ ದೇವಿಗೆ ಕಣಿವೆ ಮಾರಮ್ಮ ಎಂದು ಹಾಗೂ ಈ ಗುಡ್ಡಕ್ಕೆ ಮಾರಿಕಣಿವೆ ಗುಡ್ಡ ಎಂದು ಕರೆಯುತ್ತಾರೆ. ಇಲ್ಲಿ ಪ್ರತಿ ವರ್ಷ ಮೂರು ದಿನ ಮಾರಮ್ಮನ ಜಾತ್ರೆ ನಡೆಯುತ್ತದೆ.

೯. **ವೇಣುಕಲ್ಲು ಗುಡ್ಡ** : ಮೇಣುಕಲ್ಲು ಗುಡ್ಡ ಹಿರಿಯೂರು ತಾಲೂಕಿನ ಧರ್ಮಪುರ ಹೋಬಳಿ ಕೇಂದ್ರದಿಂದ ೧೨ ಕಿ.ಮೀ. ದೂರದಲ್ಲಿದೆ. ಇಲ್ಲಿನ ಗ್ರಾಮಕ್ಕೆ ಕೂಡ ವೇಣುಕಲ್ಲು ಗುಡ್ಡ ಎಂದು ಕರೆಯುತ್ತಾರೆ. ವೇಣು ಶಿಲಾದ್ರಿಪುರವೆಂಬ, ಪ್ರಾಚೀನ ಹೆಸರನ್ನು ಹೊಂದಿದ್ದ ಈ ಗ್ರಾಮ ಒಂದು ಕಾಲದಲ್ಲಿ ಸಂಸ್ಥಾನವಾಗಿದ್ದಿತು. ಶಾಸನಸ್ಥ ಗ್ರಾಮವಾಗಿದ್ದು ಪಾಳೆಯಗಾರರ ಆಳ್ವಿಕೆಗೆ ಒಳಪಟ್ಟಿತ್ತು. ಹರತಿ ಐಮಂಗಳ ಪಾಳೆಯಗಾರ ತಿಪ್ಪನಾಯಕನು ಆಳುತ್ತಿದ್ದನು.

ಈ ಗುಡ್ಡದ ಮೇಲೆ ವೇಣುಗೋಪಾಲಸ್ವಾಮಿ ದೇವಸ್ಥಾನವಿದ್ದು, ಹಿಂದೆ ಈ ಊರಿನ ಹಳ್ಳಿಕಾರಗೌಡ ರಂಗೇಗೌಡನಿಗೆ ಎರಡು ಮದುವೆಯಾಗಿದ್ದರೂ, ಬಹುಕಾಲ ಮಕ್ಕಳಾಗಲಿಲ್ಲವಂತೆ. ಗೌಡರು ಹೊಲದಲ್ಲಿ ಸಪ್ಪೆಮೋರೆ ಹಾಕಿಕೊಂಡು ಹಾದು ಹೋಗುತ್ತಿದ್ದ ಬಾಲಕನನ್ನು ಕರೆದು ವಿಚಾರಿಸಲಾಗಿ ಮುನಿಸಿಕೊಂಡು ಮನೆತೊರೆದು ಬಂದಿರುವುದಾಗಿ ತಿಳಿಸಿದ. ಗೌಡ ಅವನನ್ನು ತಮ್ಮ ಮನೆಯಲ್ಲಿಯೇ ಉಳಿಸಿಕೊಂಡ. ಆತ ಬಂದ ಮೇಲೆ ಅವನಿಗೆ ಮಕ್ಕಳಾಗಿ ಸಂಪತ್ತು ಹೆಚ್ಚಾಯಿತು. ಅವನು ಸಾಮಾನ್ಯ ಬಾಲಕನಾಗಿರದೆ ಕಾರಣೀಕ ಮಗುವಾಗಿ ಬಂದ. ಅಂದಿನಿಂದ ಹಳ್ಳಿಕಾರರು ವೇಣುಗೋಪಾಲಸ್ವಾಮಿಯ ಆರಾಧಕರಾದರು. ಈ ವೇಣುಗೋಪಾಲ ಸ್ವಾಮಿ ಬೆಟ್ಟದ ಮೇಲಿರುವುದರಿಂದ, ಈ ಊರಿಗೆ ವೇಣುಕಲ್ಲು ಗುಡ್ಡ ಎಂಬ ಹೆಸರು ಬಂದಿದೆ.

## ಮಣ್ಣಿನ ವೈಶಿಷ್ಟ್ಯತೆ

ಚಿತ್ರದುರ್ಗ ಜಿಲ್ಲೆಯು ವಿಶಾಲ ಬಯಲು ಸೀಮೆಯಿಂದ ಕೂಡಿದೆ. ಅಲ್ಲಲ್ಲಿ ಬೆಟ್ಟಗುಡ್ಡಗಳಿಂದ ಆವರಿಸಿಕೊಂಡಿದೆ. ಈ ಪರಿಸರದ ಸ್ವಲ್ಪ ಭಾಗ ಸಮತಟ್ಟಾಗಿದ್ದು, ಅಲ್ಲಲ್ಲಿ ಉಬ್ಬು ತಗ್ಗುಗಳಿಂದ ಕೂಡಿದೆ. ಈ ಪ್ರದೇಶದಲ್ಲಿ ಕಪ್ಪು ಮತ್ತು ಕೆಂಪು ಮಣ್ಣು ಕಂಡುಬರುತ್ತದೆ. ಕೆಂಪು ಮಣ್ಣು ಅತಿ ಹೆಚ್ಚು ಕಂಡು ಬರುತ್ತದೆ. ವಿಶೇಷವಾಗಿ ಕಲ್ಲು ಜರುಗಿನಿಂದ ಕೂಡಿರುವ ಕಲ್ಲು ಮಿಶ್ರಿತ ಕೆಂಪು ಭೂಮಿ. ಕೆಲವಡೆ ಕಪ್ಪು ಭೂಮಿಯಿದೆ. ಇದನ್ನು 'ರೆಗರ್', ಎರೆಮಣ್ಣು ಎಂದೂ ಕರೆಯುವರು. ಈ ಮಣ್ಣು ಜ್ವಾಲಾಮುಖಿಯಿಂದ ಹೊರಹೊಮ್ಮಿದ ಲಾವಾದಿಂದ ಅಗ್ನಿಶಿಲೆಗಳಿಂದ ರೂಪುಗೊಳ್ಳುತ್ತದೆ. ಇದಕ್ಕೆ ನೀರನ್ನು ಹಿಡಿದಿಟ್ಟುಕೊಳ್ಳುವ ಸಾಮರ್ಥ್ಯ ಹೆಚ್ಚು. ಹಾಗಾಗಿ ಇದು ಫಲವತ್ತಾದ ಮಣ್ಣು ಎಂದೇ ಹೇಳಬಹುದು. ಈ ಮಣ್ಣಿನಲ್ಲಿ ಮೆಣಸಿನಕಾಯಿ, ಹತ್ತಿ, ಈರುಳ್ಳಿ ಇತ್ಯಾದಿಗಳನ್ನು ಬೆಳೆಯುತ್ತಾರೆ. ಕೆಂಪು ಮಣ್ಣು ಈ ಜಿಲ್ಲೆಯಲ್ಲಿ ಅತಿ ಹೆಚ್ಚು ಕಂಡುಬರುವಂತದ್ದು, ಈ ಮಣ್ಣಿನಲ್ಲಿ ಹೆಚ್ಚಾಗಿ ಶೇಂಗಾ(ನೆಲಗಡಲೆ), ಎಣ್ಣೆಕಾಳುಗಳು, ನವಣೆ, ಸಜ್ಜೆ, ರಾಗಿ, ತೊಗರಿ ಇತ್ಯಾದಿಗಳನ್ನು ಹೆಚ್ಚಾಗಿ ಈ ಜಿಲ್ಲೆಯಲ್ಲಿ ಬೆಳೆಯುತ್ತಾರೆ. ಈ ಭಾಗದ ಜನ ಮಳೆಯನ್ನೇ ಅವಲಂಬಿಸಿರುವುದು ಮತ್ತು ಕೆಲವರು ಕೊಳವೆ ಬಾವಿಗಳನ್ನು ಕೊರೆಸಿ ವ್ಯವಸಾಯವನ್ನು ನಿರ್ವಹಿಸುತ್ತಿದ್ದಾರೆ. ಇತ್ತೀಚೆಗೆ ರೈತರು ವಾಣಿಜ್ಯ ಬೆಳೆಗಳಿಗೆ ಜೋತುಬಿದ್ದು ಧಾನ್ಯ ಬೆಳೆಗಳು ಅಪರೂಪ ಅನ್ನುವಷ್ಟು ಕಡಿಮೆಯಾಗಿವೆ. ಕೆಲವರು ನೀರಾವರಿಯಿಂದ ದಾಳಿಂಬೆ, ಪಪ್ಪಾಯಿ, ಮೂಸುಂಬೆ, ಅಡಿಕೆ, ರೇಷ್ಮೆ ಕೃಷಿಯನ್ನು ಬೆಳೆಯುತ್ತಾರೆ. ಇಲ್ಲಿನ ಪರಿಸರವು ಕೃಷಿಯೊಂದಿಗೆ,

ಕೃಷಿಯೇತರ ಚಟುವಟಿಕೆಗಳಿಗೂ ಸಹ ಅಷ್ಟೇ ಮಹತ್ವದ ಸ್ಥಾನವನ್ನು ಒದಗಿಸಿಕೊಟ್ಟಿದೆ. ಕೆರೆಗಳು ಹೆಚ್ಚಿರುವುದರಿಂದ ಇಲ್ಲಿಯ ಮಣ್ಣು ಇಟ್ಟಿಗೆ ತಯಾರಿಕೆಗೆ ಸೂಕ್ತವಾಗಿರುವುದರಿಂದ ಸುಗ್ಗಿ ಮುಗಿದ ನಂತರ ಡಿಸೆಂಬರ್‌ನಿಂದ ಏಪ್ರಿಲ್ ತಿಂಗಳವರೆಗೆ ಇಟ್ಟಿಗೆ ತಯಾರಿಸುವ ಕೆಲಸ ವೇಗವಾಗಿ ನಡೆಯುತ್ತಿದೆ. ಇತ್ತೀಚೆಗೆ ಇಟ್ಟಿಗಿ ಉದ್ಯಮವು ಈ ಭಾಗದಲ್ಲಿ ಲಾಭದಾಯಕವಾಗಿ ಬೆಳೆಯುತ್ತಿದೆ.

### ಅರಣ್ಯ ಜೀವ ಸಂಕುಲ

ಚಿತ್ರದುರ್ಗ ಜಿಲ್ಲೆಯಲ್ಲಿ ಅರಣ್ಯ ಸಂಪತ್ತು ಹಿಂದೆ ತೃಪ್ತಿದಾಯಕವಾಗಿತ್ತು. ಪ್ರಸ್ತುತ ಜನಸಂಖ್ಯೆ ಹೆಚ್ಚಾದಂತೆಲ್ಲ ಅರಣ್ಯವು ಸಹ ಕಡಿಮೆಯಾಯಿತು ಎಂದೇ ಹೇಳಬಹುದು. ಮರಗಳ್ಳರ ಹಾವಳಿ, ಭೂ ಅಕ್ರಮಣ, ಅಭಿವೃದ್ಧಿ ಹೆಸರಲ್ಲಿ ಕಾಡನ್ನು ನಾಶ ಮಾಡಿರುವುದು ಈ ಜಿಲ್ಲೆಯಲ್ಲಿ ಕಂಡುಬರುತ್ತದೆ. ಪ್ರಸ್ತುತ ಅರಣ್ಯ ತೃಪ್ತಿದಾಯಕವಾಗಿಲ್ಲ ಎನ್ನುವುದಕ್ಕಿಂತ ಇರುವ ಅರಣ್ಯವನ್ನು ಉಳಿಸುವುದು ಪ್ರತಿಯೊಬ್ಬರ ಜವಾಬ್ದಾರಿಯಾಗಿದೆ. ಈ ಜಿಲ್ಲೆಯಲ್ಲಿ ಕಂಡುಬರುವ ಅರಣ್ಯವನ್ನು ರಾಜ್ಯದ ವಿವಿಧ ಜಿಲ್ಲೆಗಳಿಗೆ ಹೋಲಿಸಿದರೆ ಕಡಿಮೆಯೇನು ಇಲ್ಲ. ಈ ಜಿಲ್ಲೆಗಿಂತ ವಿಜಾಪುರ, ರಾಯಚೂರು, ಮಂಡ್ಯ, ಬೀದರ್ ಜಿಲ್ಲೆಗಳು ಅತಿ ಕಡಿಮೆ ಅರಣ್ಯವನ್ನು ಹೊಂದಿವೆ. ಈ ಜಿಲ್ಲೆಯಲ್ಲಿ ಕಳೆದ ಹತ್ತಾರು ವರ್ಷಗಳಿಂದ ಕಡಿಮೆ ಮಳೆ ಬೀಳುವುದರಿಂದ ಅರಣ್ಯವು ಸಹ ಕಡಿಮೆಯಾಗಿದೆ. ಇಲ್ಲಿರುವ ಅರಣ್ಯ ಉಷ್ಣವಲಯಕ್ಕೆ ಸೇರಿದ್ದು ಕುರುಚಲು ಅರಣ್ಯಕ್ಕೆ ಸೇರಿದೆ. ವಾರ್ಷಿಕ ಮಳೆ ೫೩೧.೦ ಮೀ.ಮೀ. ಆದುದರಿಂದ ಅರಣ್ಯ ಪ್ರದೇಶಗಳು ಅಭಿವೃದ್ಧಿ ಹೊಂದಿಲ್ಲ. ವಾರ್ಷಿಕ ಮಳೆ ಕಡಿಮೆ ಇರುವುದರಿಂದ ಇಲ್ಲಿ ಬೆಳೆಯುವ ಸಸ್ಯವರ್ಗ ಅರಣ್ಯದಂತೆ ಕಾಣುವುದಿಲ್ಲ. ಅನಾವೃಷ್ಟಿಯನ್ನು ಸಹಿಸಿಕೊಳ್ಳಬಲ್ಲ ವೈವಿಧ್ಯಪೂರ್ಣವಾದ ಮತ್ತು ಮುಳ್ಳುಗಳಿರುವ ಗಿಡಗಂಟೆಗಳು ಇಲ್ಲಿ ಹೆಚ್ಚಾಗಿರುತ್ತವೆ. ಇಲ್ಲಿನ ಮರಗಳಲ್ಲಿ ತುಗ್ಗಲಿ, ಆಸಿನಮರ, ಬಂದ್ರಿಕೆ, ನೀಲಗಿರಿ, ಜಾಲಿ, ಹೊಂಗೆ, ಮುಳ್ಳಿನ ಗಿಡಗಳು ಹೆಚ್ಚಾಗಿವೆ. ಮಾನವ ಸಂರಕ್ಷಿತ ಅರಣ್ಯಗಳು ಕಂಡುಬರುತ್ತವೆ. ಅಡವಿಸೂರಮ್ಮನಹಳ್ಳಿ ಅಡವಿಯಲ್ಲಿ ಐದು ನೂರಕ್ಕೂ ಹೆಚ್ಚು ಗಿಡಮೂಲಿಕೆಗಳು ದೊರೆಯುತ್ತವೆ ಎಂದು ಇಲ್ಲಿನ ನಾಟಿವೈದ್ಯರು ಹೇಳುತ್ತಾರೆ. ಹಿರಿಯೂರು ತಾಲ್ಲೂಕಿನ ಮಸ್ಕಲ್ ಗ್ರಾಮದವರಾದ ನಾಟಿವೈದ್ಯ ಶಿವಣ್ಣ ಈ ಭಾಗದಲ್ಲಿ ಎರಡು ಸಾವಿರಕ್ಕಿಂತ ಹೆಚ್ಚು ಔಷಧಿಯ ಸಸ್ಯಗಳು ದೊರೆಯುತ್ತವೆ ಎಂದು ತಿಳಿಸಿದರು. ಹಾಗೆಯೇ ಜೋಗಿಮಟ್ಟಿಯಲ್ಲಿ ಸಹ ಕಂಡುಬರುತ್ತವೆ.

'ಬಯಲು ಸೀಮೆ' ಪ್ರದೇಶವಾಗಿರುವುದರಿಂದ ಇಲ್ಲಿನ ಕಾಡು ಕೂಡ ಮಳೆಯನ್ನೇ ಅವಲಂಬಿಸಿರುತ್ತದೆ. ಇಲ್ಲಿಯ ಮರಗಳು ನೀರಿನಾಂಶವನ್ನು ತಡೆಹಿಡಿಯಲು ಎಲೆಗಳನ್ನು ಉದುರಿಸಿಕೊಳ್ಳುತ್ತವೆ. ಈ ಜಿಲ್ಲೆಯಲ್ಲಿ ಎಲೆ ಉದುರಿಸುವ ಕಾಡು ಕಂಡುಬರುತ್ತದೆ. ಹಿಂದೆ ನಲವತ್ತು ಕಾವಲು(ಅರಣ್ಯ)ಗಳಿದ್ದವು. ಚಳ್ಳಕೆರೆ ತಾಲ್ಲೂಕ್ಕೊಂದರಲ್ಲೇ ಇಪ್ಪತ್ತೊಂದು ಕಾವಲುಗಳಿದ್ದವು. ಹೊಸದುರ್ಗದಲ್ಲಿ ಆರು, ಹೊಳಲ್ಕೆರೆ ಹದಿಮೂರು ಕಾವಲುಗಳಿವೆ. ಈ ಪ್ರದೇಶಗಳಲ್ಲಿ ಹೆಚ್ಚಾಗಿ

ಹುಲ್ಲುಗಾವಲುಗಳು ಇರುವುದರಿಂದ ಪಶುಪಾಲಕ ಬುಡಕಟ್ಟುಗಳು ನೆಲೆಯೂರಲು ಹಾಗೂ ಪಶುಪಾಲಕ ಪಾಳೆಯಪಟ್ಟುಗಳನ್ನು ಸ್ಥಾಪಿಸಲು ಇಲ್ಲಿನ ಪರಿಸರವು ಅನುಕೂಲಕರವಾಗಿದೆ. ಜಾನುವಾರು ಜನಗಣತಿ ಪ್ರಕಾರ ಕರ್ನಾಟಕದಲ್ಲಿ ಅತಿಹೆಚ್ಚು ದನಗಳು ಇರುವುದು ಚಿತ್ರದುರ್ಗ ಜಿಲ್ಲೆ. ಅದರಲ್ಲೂ ಚಳ್ಳಕೆರೆ, ಮೊಳಕಾಲ್ಮೂರು ತಾಲ್ಲೂಕುಗಳಲ್ಲಿ ಅತಿ ಹೆಚ್ಚು ದನಗಳು ಕಂಡುಬರುವುದು. ಈ ಎರಡು ತಾಲ್ಲೂಕುಗಳಲ್ಲಿ ಪ್ರಧಾನವಾಗಿ ಕಂಡುಬರುವ ಬೇಡ ಸಮುದಾಯವೇ ಪಶುಪಾಲನೆಯಲ್ಲಿ ತೊಡಗಿರುವುದು ಕಂಡುಬರುತ್ತದೆ. ಈ ಬಯಲುಸೀಮೆಯ ಹುಲ್ಲುಗಾವಲುಗಳು ಪಶುಪಾಲನೆಗೆ ಸೂಕ್ತ ಪ್ರದೇಶವಾಗಿವೆ. ಇಲ್ಲಿನ ಮಣ್ಣಿನ ಗುಣಗಳು, ವಿವಿಧ ಜಾತಿಯ ಹುಲ್ಲಿನ ವಿಧಗಳು ಪಶುಸಂಕುಲಕ್ಕೆ ಸಹಕಾರಿಯಾಗಿವೆ. ಈ ಪರಿಸರದ ಅರಣ್ಯಗಳಲ್ಲಿ ಕಾಡುಪ್ರಾಣಿಗಳಾದ ನರಿ, ತೋಳ, ಜಿಂಕೆ, ಮೊಲ, ಕಾಡುಹಂದಿ, ಅಪರೂಪಕ್ಕೊಮ್ಮೆ ಚಿರತೆ ಮುಂತಾದ ಪ್ರಾಣಿಗಳು ಕಂಡುಬರುತ್ತವೆ. ಕೆಲವು ಗುಡ್ಡಗಾಡು ಪ್ರದೇಶಗಳಲ್ಲಿ ಕರಡಿಗಳು ಸಹ ಕಂಡುಬರುತ್ತವೆ. ಮೊಳಕಾಲ್ಮೂರು ತಾಲ್ಲೂಕಿನ ಕೋನಸಾಗರ ಗುಡ್ಡಗಳಲ್ಲಿ ಕರಡಿಗಳಿವೆ. ಪಕ್ಷಿಗಳಾದ ನವಿಲು, ಗುಬ್ಬಿ, ಪಾರಿವಾಳ, ಕೌಜಗ, ಬೆಳವಾ, ಕೋಗಿಲೆ ಇತ್ಯಾದಿ. ಇತ್ತೀಚೆಗೆ ಮರಗಿಡಗಳು ನಾಶವಾಗಿರುವುದರಿಂದ ಪ್ರಾಣಿ, ಪಕ್ಷಿ ಸಂಕುಲಗಳು ಕಡಿಮೆಯಾಗಿವೆ. ಈ ಜಿಲ್ಲೆಯಲ್ಲಿ ಬೇಡ ಸಮುದಾಯವೇ ಪ್ರಧಾನವಾಗಿದ್ದು ಅವರ ಮೂಲ ವೃತ್ತಿ ಬೇಟೆಯಾಗಿರುವುದರಿಂದ ಅಪರೂಪಕ್ಕೊಮ್ಮೆ ಬೇಟೆ ಆಡುವುದು ಕಂಡುಬರುತ್ತದೆ. ಯುಗಾದಿ ಸಂದರ್ಭದಲ್ಲಿ ಹಟ್ಟಿ, ಹಳ್ಳಿ ಪ್ರದೇಶಗಳಲ್ಲಿ ಕಡ್ಡಾಯವೆಂಬಂತೆ ಬೇಟೆಗಾರಿಕೆಯು ಜೀವಂತಿಕೆ ಇದೆ. ಈ ಸಂದರ್ಭದಲ್ಲಿ ಕಾಡು ಹಂದಿಗಳನ್ನೆ ಬೇಟೆಯಾಡುವುದು ಕಂಡುಬರುತ್ತದೆ.

ಜೋಗಿಮಟ್ಟಿ ಗಿರಿಧಾಮವು ಚಿತ್ರದುರ್ಗದಿಂದ ಹನ್ನೊಂದು ಕಿ.ಮೀ. ದೂರದಲ್ಲಿದೆ. ಇದನ್ನು ಬಯಲು ಸೀಮೆಯ ಊಟಿಯೆಂದು ಕರೆಯುತ್ತಾರೆ. ರಾಜ್ಯ ಸರಕಾರ ಇತ್ತೀಚೆಗೆ ಈ ಅರಣ್ಯ ಪ್ರದೇಶವನ್ನು ವನ್ಯಜೀವಿಧಾಮವೆಂದು ಘೋಷಿಸಿದೆ. ಈ ಜೋಗಿಮಟ್ಟಿಯಲ್ಲಿ ಗಿರಿಧಾಮವಿದ್ದು ಇಲ್ಲಿನ ನಿಸರ್ಗ ಸೌಂದರ್ಯ, ತಂಪಾದ ಹವಾಮಾನ, ಬಯಲು ಸೀಮೆಯಲ್ಲಿ ಮಲೆನಾಡಿನ ಸೊಬಗನ್ನು ನೆನಪಿಸುತ್ತದೆ. ಜೋಗಿಮಟ್ಟಿಯಲ್ಲಿ ಬಾಲವನ, ಮೃಗಾಲಯ, ಬಸವನ ಬಾಯಿಂದ ನೀರು ಜಿನುಗುವ ಹಿಮವತ್ ಕೇದಾರ್ ಮೊದಲಾದ ಪ್ರೇಕ್ಷಣಿಯ ಸ್ಥಳಗಳು ಇವೆ. ಹೊನ್ನೆ, ಶ್ರೀಗಂಧ ಜಾಲಿ, ಹೊಂಗೆ, ತುಗ್ಗಲಿ, ಕಕ್ಕೆ, ಮತ್ತಿ ಹೀಗೆ ಬಯಲು ಸೀಮೆಗೆ ಒಗ್ಗಿ ಬೆಳೆಯುತ್ತಿವೆ. ಗಿಡಮೂಲಿಕೆ ಔಷಧೀಯ ಸಸ್ಯಗಳು ಇಲ್ಲಿವೆ. ಈ ಅರಣ್ಯಧಾಮದಲ್ಲಿ ಚಿರತೆ, ಕರಡಿ, ಕಾಡುಹಂದಿ, ಜಿಂಕೆ, ಮೊಲ, ನರಿ, ಮುಳ್ಳುಹಂದಿ, ಕೊಂಡುಕುರಿಯಂತಹ ವಿಶಿಷ್ಟ ಪ್ರಾಣಿಗಳಿದ್ದು, ೧೧೨ ಜಾತಿಯ ವೈವಿಧ್ಯಮಯ ಪಕ್ಷಿಗಳು, ಚಿಟ್ಟೆಗಳನ್ನು ತಜ್ಞರು ಗುರುತಿಸಿದ್ದಾರೆ. ಇಂತಹ ಜೀವಂತಿಕೆಯ ಗಿರಿಧಾಮದ ಸೌಂದರ್ಯಕ್ಕೆ ಕೊಡಲಿಪೆಟ್ಟು ಬೀಳುವ ಸಾಧ್ಯತೆಗಳು ಕಂಡು ಬರುತ್ತವೆ. ಈಗಾಗಲೇ ಇಲ್ಲಿ ಸಾಕಷ್ಟು ಭೂಮಿ ಒತ್ತುವರಿಯಾಗಿದೆ. ಜೊತೆಗೆ ಗಾಳಿಯಂತ್ರಗಳನ್ನು ಅಳವಡಿಸಿದ್ದಾರೆ. ಈ

ಯಂತ್ರಗಳ ಶಬ್ದ ಕಂಪನದಿಂದಾಗಿ ಪ್ರಾಣಿ ಪಕ್ಷಿಗಳು ವನ್ಯಜೀವಿಗಳಿಗೆ ಮತ್ತು ಪರಿಸರಕ್ಕೆ ತೊಂದರೆಯಾಗುತ್ತಿದೆ. ವನ್ಯಜೀವಿಗಳಿಗೆ ವೈಯಕ್ತಿಕ ಧಕ್ಕೆಯಾಗುತ್ತಿದೆ. ಈ ಪ್ರದೇಶದಲ್ಲಿ ಒಳ್ಳೆಯ ಸಸ್ಯಸಂಕುಲ ಹಾಗೂ ಪ್ರಾಣಿ ಸಂಪತ್ತು ಇದೆ. ಈಗ ವಿದ್ಯುತ್ ಯಂತ್ರಗಳನ್ನು ಅಳವಡಿಸಿದರೆ ಅಲ್ಲಿನ ಕಾಡು ನಾಶವಾಗುವುದರ ಜೊತೆಗೆ ಪ್ರಾಣಿ-ಪಕ್ಷಿಗಳ ಸಂಕುಲ ನಾಶವಾಗುತ್ತದೆ.

### ೨.೨. ಚಾರಿತ್ರಿಕ ಹಿನ್ನೆಲೆ

ಚಿತ್ರದುರ್ಗ ಜಿಲ್ಲೆ ಭೌಗೋಳಿಕವಾಗಿ ಮಾತ್ರವಲ್ಲ ಚಾರಿತ್ರಿಕವಾಗಿಯೂ ಸಹ ಅಷ್ಟೇ ಮಹತ್ವ ಪಡೆದಿದೆ. ಶಿಲಾಯುಗ ಕಾಲದಿಂದಲೂ ಇಲ್ಲಿ ಜನವಸತಿ ಪ್ರದೇಶ ಇದ್ದಿತೆಂದು ಈ ಜಿಲ್ಲೆಯ ಉತ್ಖನನಗಳಿಂದ ತಿಳಿದು ಬರುತ್ತದೆ. ಇದಕ್ಕೆ ಚಂದ್ರವಳ್ಳಿ, ಬ್ರಹ್ಮಗಿರಿ, ಜಟ್ಟಂಗಿ ರಾಮೇಶ್ವರಗಳಲ್ಲಿ ದೊರೆತ ಅವಶೇಷಗಳು ಸಾಕ್ಷಿಯಾಗಿವೆ. ಚಂದ್ರವಳ್ಳಿ, ಬ್ರಹ್ಮಗಿರಿ ಮತ್ತು ಜಟ್ಟಂಗಿ ರಾಮೇಶ್ವರಗಳ ಭೂಸಂಶೋಧನೆಗಿಂತ ಮೊದಲು ಚಿತ್ರದುರ್ಗದ ಇತಿಹಾಸವನ್ನು ಪುರಾಣ, ಐತಿಹ್ಯಗಳ ಮೂಲಕ ತ್ರೇತಾಯುಗ, ದ್ವಾಪರಯುಗದ ಕಾಲಕ್ಕೆ ಗುರುತಿಸುತ್ತಾರೆ. "ತ್ರೇತಾಯುಗದಲ್ಲಿ ಒಮ್ಮೆ ರಾವಣನು ಕೈಲಾಸ ಪರ್ವತವನ್ನು ಹೊತ್ತು ತರುವಾಗ ನಂದಿಯ ಕೋಪಕ್ಕೆ ತುತ್ತಾಗಿ ನಂದಿ ರಾವಣನನ್ನು ಇರಿಯಲು ಪ್ರಯತ್ನಿಸಿದಾಗ ಅದರಿಂದ ತಪ್ಪಿಸಿಕೊಂಡು ರಾವಣ ಇಲ್ಲಿಯ ಬೆಟ್ಟದ ಮೇಲೆ ಬಿದ್ದು ಅವನ ಮನಪರಿವರ್ತನೆಯಾಗಿ ತಾನು ನಂದಿಯನ್ನು ಕಡೆಗಣಿಸಿದ ತಪ್ಪಿನ ಅರಿವಾಯಿತೆಂದು, ಆದ್ದರಿಂದಲೇ ಇಲ್ಲಿಯ ಬೆಟ್ಟಗಳಿಗೆ ಚಿನ್ಮೂಲಾದ್ರಿ ಎಂದು ಹೆಸರಾಯಿತಂತೆ".[೫] ಒಂದು ಕಾಲಕ್ಕೆ ಈ ಪ್ರದೇಶ ಚಿನ್ಮೂಲಾದ್ರಿಯೆಂದು ಹೆಸರು ಪಡೆದಿತ್ತು. ಹಿಂದೆ ಚಿತ್ರದುರ್ಗ ಬೆಟ್ಟದಲ್ಲಿ ಹಿಡಿಂಬಾಸುರ ವಾಸಿಸುತ್ತಿದ್ದನೆಂದು ಐತಿಹ್ಯವಿದೆ. ಪಾಂಡವರು ವನವಾಸ ಬಂದಾಗ ಭೀಮನು ಹಿಡಿಂಬಾಸುರನನ್ನು ಸಂಹಾರ ಮಾಡಿ ಪುನಃ ಹಿಡಿಂಬೆಯನ್ನು ಮದುವೆಯಾದನು. ಹಿಡಿಂಬಾಸುರನ ಹೆಸರನ್ನೇ ಅವನು ಪೂಜಿಸುತ್ತಿದ್ದ ಶಿವಲಿಂಗಕ್ಕೆ ಹೆಸರಿಟ್ಟನು. ಪಾಂಡವರು ವನವಾಸದ ಸಂದರ್ಭದಲ್ಲಿ ಇಲ್ಲಿ ಪಂಚಲಿಂಗಗಳನ್ನು ಸ್ಥಾಪನೆ ಮಾಡಿಹೋದರೆಂದು ಪ್ರತೀತಿಯಿದೆ. ಹಾಗಾಗಿ ಅವುಗಳಿಗೆ ಧರ್ಮೇಶ್ವರ, ಅರ್ಜುನೇಶ್ವರ ಭೀಮೇಶ್ವರ, ನಕುಲೇಶ್ವರ ಮತ್ತು ಸಹದೇಶ್ವರ ಎಂದು ಕರೆಯುತ್ತಾರೆ. ಆ ಐದು ಲಿಂಗಗಳನ್ನು ಇಂದಿಗೂ ಕಾಣಬಹುದು. ಈ ಜಿಲ್ಲೆಯ ಹಿರಿಯೂರು ತಾಲ್ಲೂಕಿನ ಧರ್ಮಪುರದಲ್ಲಿ ಕೂಡ ಪಾಂಡವರು ವನವಾಸದ ಸಂದರ್ಭದಲ್ಲಿ ಇಲ್ಲಿಯೇ ಕೆಲವು ದಿನಗಳ ಕಾಲ ಇದ್ದು ಪಂಚಲಿಂಗಗಳನ್ನು ಸ್ಥಾಪನೆ ಮಾಡಿ ಹೋದರೆಂದು ಐತಿಹ್ಯ ಹೇಳುತ್ತದೆ. ಧರ್ಮರಾಯನಿಂದ ಸ್ಥಾಪನೆಯಾದ ಸ್ಥಳಕ್ಕೆ ಧರ್ಮಪುರವೆಂದು ಹೆಸರು ಕರೆದಿರುವುದು ಕಂಡುಬರುತ್ತದೆ.

ರಾಮಾಯಣ ಕಾಲಕ್ಕೂ ಮುಂಚಿನಿಂದ ಚಿತ್ರದುರ್ಗ ಪ್ರಾಂತ್ಯವು ದಂಡಕಾರಣ್ಯದ ಒಂದು ಪ್ರದೇಶವಾಗಿದ್ದು, ಕಾಡು ಪ್ರಾಣಿಗಳ ವಾಸಸ್ಥಾನವಾಗಿತ್ತು. ಉತ್ತಮವಾದ ಹವಾಮಾನ, ವಾಸಯೋಗ್ಯವಾದ ಗಿರಿ, ಗುಹೆಗಳು, ಸದಾ ಹರಿಯುವ ಝರಿಗಳು, ಇವು ಮಾನವನನ್ನು

ಮೊದಲು ಆಕರ್ಷಿಸಿದವು. ಅರಣ್ಯದಲ್ಲಿ ಸಿಗುವ ಹಣ್ಣು ಹಂಪಲಗಳನ್ನು ಹಾಗೂ ಬೇಟೆಯಿಂದ ಕೊಂದ ಕಾಡು ಪ್ರಾಣಿಗಳನ್ನು ತಿಂದು ಜೀವಿಸುವ ಜನರು ಪ್ರಕೃತಿದತ್ತವಾದ ಗುಹೆಗಳಲ್ಲಿ ನೆಲೆಸಿದರು".[೬] ಹಾಗೆಯೇ ಕಲ್ಲಿನ ಆಯುಧಗಳು ತಯಾರಾಗುವ ನೆಲೆಯಾಯಿತು. ನಂತರ ನಾಗರಿಕತೆಯ ಉಗಮಸ್ಥಾನವಾಯಿತು.

ಈ ಜಿಲ್ಲೆಯ ಶಿಲಾಯುಗದಲ್ಲಿ ಆದಿಶಿಲಾಯುಗ, ಮಧ್ಯಶಿಲಾಯುಗ ಮತ್ತು ನವಶಿಲಾಯುಗ, ಬೃಹತ್ ಶಿಲಾ ಸಂಸ್ಕೃತಿ ಮುಂತಾದ ನೆಲೆಗಳನ್ನು ಶೋಧನೆ ಮಾಡಿದ್ದಾರೆ. ಇಲ್ಲಿನ ನಾಗರಿಕತೆಯನ್ನು ಸಿಂಧೂ, ಕ್ರೇಟ್ ಮತ್ತು ಸುಮೇರ್‌ಗೆ ಹೋಲಿಸಿದ್ದಾರೆ. ಸ್ಥಳೀಯರು 'ರೊಪ್ಪ ಸಂಸ್ಕೃತಿ'ಯನ್ನು ಹೊಂದಿದ್ದರು. ಇವರ ಕಾಲಮಾನ ಕ್ರಿ.ಪೂ. ೮೦೦೦ ರಿಂದ ೬೦೦೦ರ ಅವಧಿ ಎನ್ನಲಾಗಿದೆ.

**ಮೌರ್ಯರು**

ಪ್ರಾಚೀನ ಭಾರತದಲ್ಲಿ ಸ್ಥಾಪಿಸಲ್ಪಟ್ಟ ಐತಿಹಾಸಿಕ ಸಾಮ್ರಾಜ್ಯಗಳಲ್ಲಿ ಮಗಧ ಸಾಮ್ರಾಜ್ಯವು ಮೊಟ್ಟಮೊದಲನೆಯದು. ಈ ಸಾಮ್ರಾಜ್ಯದಲ್ಲಿ ಒಟ್ಟು ಎಂಟು ಮನೆತನಗಳು ಒಂದನ್ನೊಂದು ಹಿಂಬಾಲಿಸಿ ಆಡಳಿತವನ್ನು ಮಾಡಿದವು. ಅವುಗಳಲ್ಲಿ ಪ್ರಸಿದ್ಧ ಮನೆತನಗಳೆಂದರೆ, ಅಸುರರು, ಶಿಶುನಾಗ, ನಂದ, ಮೌರ್ಯ, ಗುಪ್ತ ಮನೆತನಗಳು.

ಕರ್ನಾಟಕದಲ್ಲಿ ಬಹುಭಾಗ ಮೌರ್ಯ ಸಾಮ್ರಾಜ್ಯದ ಭಾಗವಾಗಿದ್ದಿತು. ಕ್ರಿ.ಪೂ. ನಾಲ್ಕನೆಯ ಶತಮಾನದಲ್ಲಿ ಮೌರ್ಯ ಸಾಮ್ರಾಜ್ಯ ಸ್ಥಾಪನೆಯಾಗುವ ಮೊದಲೇ ಶಿಶುನಾಗರು, ನಂದರು, ಉತ್ತರ ಭಾರತ ಮತ್ತು ದಕ್ಷಿಣ ಭಾರತದ ಅನೇಕ ಪ್ರದೇಶಗಳನ್ನು ಗೆದ್ದುಕೊಂಡು ತಮ್ಮ ಆಳ್ವಿಕೆಯನ್ನು ವಿಸ್ತರಿಸಿದ್ದರು. ಮೌರ್ಯರಿಗಿಂತ ಮೊದಲು ಶಿಶುನಾಗರು, ನಂದರು ಕರ್ನಾಟಕದ ಕೆಲವು ಭಾಗಗಳನ್ನು ಆಳಿದುದ್ದಕ್ಕೆ ಆಧಾರಗಳಿವೆ. ಚಿತ್ರದುರ್ಗ ಸುತ್ತಮುತ್ತಲಿನ ಪ್ರದೇಶವು ಸಹ ಕ್ರಿಸ್ತಪೂರ್ವ ಆರನೆಯ ಶತಮಾನದಲ್ಲಿ ಔತ್ತರೇಯರ ಆಳ್ವಿಕೆಗೆ ಒಳಪಟ್ಟಿತ್ತೆಂದು ಹೇಳಲಾಗಿದೆ. ನಂದರ ಉತ್ತರಾಧಿಕಾರಿಗಳಾದ ಮೌರ್ಯರು ಸಹ ಈ ಭಾಗದಲ್ಲಿ 'ನಂದರ' ನಂತರ ಒಡೆಯರಾದರು ಎಂದು ಹೇಳಬಹುದು.

ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ದೊರೆತಿರುವಂತಹ, ಅಶೋಕನ ಶಾಸನಗಳು ಮೌರ್ಯರ ಆಳ್ವಿಕೆಯನ್ನು ಅಧಿಕೃತವಾಗಿ ಸ್ಪಷ್ಟಪಡಿಸುವ ಆಧಾರಗಳಾಗಿವೆ. ಅವುಗಳು ಬ್ರಹ್ಮಗಿರಿಯ ಸಿದ್ಧಾಪುರ ಜಟ್ಟಂಗಿ ರಾಮೇಶ್ವರದಲ್ಲಿ ಮೌರ್ಯ ಸಾಮ್ರಾಜ್ಯದ ದಕ್ಷಿಣ ಗಡಿಗಳನ್ನು ಸೂಚಿಸುವ ಗುರುತುಗಳಾಗಿವೆಯೆಂದು ಚರಿತ್ರೆಕಾರರ ಅಭಿಪ್ರಾಯವಾಗಿದೆ. ಇತ್ತೀಚಿಗೆ ನಡೆದ ಸಂಶೋಧನೆಗಳಿಂದ ಮೌರ್ಯ ಸಾಮ್ರಾಜ್ಯವು ಮೊಳಕಾಲ್ಮೂರು ತಾಲ್ಲೂಕಿನ ಕೆಲವು ಭಾಗಗಳಲ್ಲಿ ಹಾಗೂ ಜಿಲ್ಲೆಯ ಪೂರ್ಣ ಭಾಗವನ್ನು ಒಳಗೊಂಡಿದ್ದಾಗಿ ತಿಳಿದುಕೊಳ್ಳಬಹುದಾಗಿದೆ. ಇದರಿಂದ ಸ್ಪಷ್ಟವಾಗುವ ಸಂಗತಿಯೆಂದರೆ ಕ್ರಿ.ಪೂ. ಮೂರನೆಯ ಶತಮಾನದ ಹೊತ್ತಿಗೆ ಈ ಜಿಲ್ಲೆಯ ಉತ್ತರ ಭಾಗ ಮೌರ್ಯ ಸಾಮ್ರಾಜ್ಯಕ್ಕೆ ಸೇರಿತ್ತು. ಈ ಭಾಗ ಅಶೋಕನ ಸಾಮ್ರಾಜ್ಯದ ದಕ್ಷಿಣ ತುತ್ತತುದಿಯಾಗಿತ್ತು ಎಂದು ತಿಳಿಯಬಹುದು. ಜಿಲ್ಲೆಯ ಅನೇಕ ಭಾಗಗಳಲ್ಲಿ ಸಿಕ್ಕಿರುವ

ಆಧಾರಗಳಿಂದ ಮೌರ್ಯ ಸಾಮ್ರಾಜ್ಯವು ೧ ಅಕ್ಷಾಂಶಕ್ಕೆ ಸೀಮಿತವಾಗಿರದೆ ೧೪ ಅಕ್ಷಾಂಶದವರೆಗೂ ವಿಸ್ತರಿಸುತ್ತದೆ ಎಂಬುದು ತಿಳಿಯುತ್ತದೆ. ಬ್ರಹ್ಮಗಿರಿಯ ಸಮೀಪದಲ್ಲಿ ಇಟ್ಟಿಗೆಯ ಕಟ್ಟಡ, ಚೈತ್ಯಾಲಯ ಮತ್ತು ಮೌರ್ಯರ ಕಾಲದ ಅನೇಕ ಅವಶೇಷಗಳು ದೊರೆತಿವೆ. 'ಇಸಿಲ' ನಗರವು ಇಲ್ಲೇ ಇದ್ದ ನಗರವೆಂಬುದಕ್ಕೆ ಪ್ರಮುಖ ಆಧಾರಗಳು ಸಿಕ್ಕಿವೆ. ಈ ಪ್ರದೇಶದಲ್ಲಿ ದೊರೆತ ಅವಶೇಷಗಳು ಅಶೋಕನ ಕಾಲಕ್ಕೆ ಸೇರಿದ್ದವು ಎನ್ನುವುದು ಡಾ. ಎಂ.ಹೆಚ್. ಕೃಷ್ಣ, ಮಾರ್ಟಿಮರ್‌ವೀಲರ್ ಮೊದಲಾದ ಪ್ರಾಕ್ತನ ಶಾಸ್ತ್ರಜ್ಞರ ಅಭಿಪ್ರಾಯ. ಹಾಗೆಯೇ ಚಿತ್ರದುರ್ಗ ಜಿಲ್ಲೆಯ ಸುತ್ತಮುತ್ತಲಿನ ಪ್ರದೇಶವು ಸಹ ಮೌರ್ಯ ಸಾಮ್ರಾಜ್ಯದ ಭಾಗವಾಗಿದ್ದು, ಅವರ ದಕ್ಷ ಆಡಳಿತ ಪದ್ಧತಿ ಮೌರ್ಯರ ಸಾಂಸ್ಕೃತಿಕ ಪರಂಪರೆಯ ವ್ಯಾಪ್ತಿಗೆ ಒಳಪಟ್ಟಿತ್ತು. ಚಿತ್ರದುರ್ಗದ ಸುತ್ತಲು ಬೌದ್ಧ ಧರ್ಮದ ಹಲವಾರು ಸ್ಮಾರಕಗಳು ದೊರೆತಿವೆ. ಹೀಗೆ ಮೌರ್ಯ ಸಾಮ್ರಾಜ್ಯದ ಧಾರ್ಮಿಕ ಮತ್ತು ಸಾಂಸ್ಕೃತಿಕ ಪರಂಪರೆ ಈ ಭಾಗದಲ್ಲಿ ಮುಂದುವರೆದಿತ್ತೆಂದು ಹೇಳಬಹುದು.

**ಶಾತವಾಹನರು**

ಮೌರ್ಯರ ನಂತರ ಭಾರತದಲ್ಲಿ ಬಹುದೊಡ್ಡ ಸಾಮ್ರಾಜ್ಯವನ್ನು ಆಳಿದವರೆಂದರೆ ಶಾತವಾಹನರು. ಇವರನ್ನು ಸಾತವಾಹನರು, ಶಾತಕರ್ಣಿಗಳು, ಸಾತಕರ್ಣಿಗಳು, ಆಂಧ್ರರು, ಆಂಧ್ರ ಭೃತ್ಯರು ಎಂತಲೂ ಕರೆಯಲಾಗಿದೆ. "ಕರ್ನಾಟಕದ ಬಹು ಭಾಗವನ್ನಾಳಿದ ಮೊಟ್ಟಮೊದಲನೆಯ ಪ್ರಮುಖ ರಾಜವಂಶದವರಾದ ಶಾತವಾಹನರು ತಮ್ಮನ್ನು ಕುಂತಳಸ್ವಾಮಿಗಳೆಂದು ಕರೆದುಕೊಂಡಿರುವುದುಂಟು".[೭] ಈ ವಂಶದ ಮೂವತ್ತು ಮಂದಿ ದೊರೆಗಳ ಬಗೆಗೆ ದೊರೆತಿರುವ ಶಾಸನಗಳು ಮೂವತ್ತಕ್ಕಿಂತಲೂ ಹೆಚ್ಚಿರಬಹುದು. ಚಿತ್ರದುರ್ಗದೊಂದಿಗೆ ಈ ವಂಶದ ಅರಸರ ಸಂಬಂಧವಿತ್ತೆಂದು ತಿಳಿಯಲು ಸಾಧ್ಯವಾದದ್ದು ಚಂದ್ರವಳ್ಳಿಯಲ್ಲಿ ನಡೆದ ಉತ್ಖನನದಿಂದ. ಇಲ್ಲಿ ಇವರಿಗೆ ಸಂಬಂಧಿಸಿದ ಮುಖ್ಯವಾಗಿ ಸೀಸದ ನಾಣ್ಯಗಳು ಈ ಸ್ಥಳದೊಂದಿಗೆ ಶಾತವಾಹನರ ಮತ್ತು ಅವರ ಅಧೀನ ಪ್ರಭುಗಳಾಗಿದ್ದ ಮರಾಠಿ, ಚುಟುಗಳಂತಹ ಸಾಮಂತರ ಸಂಬಂಧವಿದ್ದುದ್ದನ್ನು ಬೆಳಕಿಗೆ ತಂದವು. ಈ ಜಿಲ್ಲೆಯಲ್ಲಿ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಕೈಗೊಂಡ ಉತ್ಖನನದಿಂದ ಪುಲುಮಾಯಿ ಮತ್ತು ಯಜ್ಞ ಶ್ರೀ ಶಾತಕರ್ಣಿ ಎಂಬ ಶಾತವಾಹನರ ಅರಸರ ಹೆಸರುಗಳು ಹಾಗೂ ಅವರ ಕಾಲಮಾನವು ಸ್ಪಷ್ಟವಾಗಿ ತಿಳಿದುಬಂದಿದೆ. ಒಟ್ಟಿನಲ್ಲಿ ಹೇಳುವುದಾದರೆ ಚಿತ್ರದುರ್ಗ ಜಿಲ್ಲೆಯ ಹಾಗೂ ಸುತ್ತಮುತ್ತಲಿನಲ್ಲಿ ಶಾತವಾಹನರ ಆಳ್ವಿಕೆ ಇದ್ದಿತೆಂದು ತಿಳಿದುಬರುತ್ತದೆ. ಶಾತವಾಹನರ ಸಾಂಸ್ಕೃತಿಕ ಅವಶೇಷಗಳು ದೊರೆತಿರುವುದರಿಂದ ಬಹುಶಃ ಚಂದ್ರವಳ್ಳಿ ಅವರ ರಾಜಧಾನಿಗಳಲ್ಲಿ ಒಂದಾಗಿತ್ತೆಂದು ತಿಳಿದುಬರುತ್ತದೆ.

**ಕದಂಬರು**

ಕರ್ನಾಟಕದ ಚರಿತ್ರೆಯಲ್ಲಿ ಶಾತವಾಹನರ ಅಧಿಪತ್ಯ ಆಳಿದ ಮೇಲೆ ಪಲ್ಲವರ ಆಳ್ವಿಕೆ ಆರಂಭಗೊಳ್ಳುತ್ತದೆ. ಆದರೆ ಮುಂದೆ ಪಲ್ಲವರನ್ನು ಸೋಲಿಸಿ ಈ ಭಾಗದಲ್ಲಿ ಅಧಿಕಾರವನ್ನು ಸ್ಥಾಪಿಸಿದ ಕೀರ್ತಿ ಕದಂಬರಿಗೆ ಸೇರುತ್ತದೆ. ಕದಂಬರಿಗೆ ಸೇರಿದ ಶಾಸನಗಳು ಜಿಲ್ಲೆಯ

ಚಂದ್ರವಳ್ಳಿ ಮತ್ತು ಮೊಳಕಾಲ್ಮೂರು ಬಳಿ ನುಂಕೇಮಲೆಯಲ್ಲಿ ಸಿಕ್ಕಿದ್ದರಿಂದ ಇವೆರಡರ ನಡುವಿನ ಪ್ರಸ್ತುತ ಪ್ರದೇಶವು ಅವರ ಆಳ್ವಿಕೆಗೆ ಒಳಪಟ್ಟಿರಬಹುದೆಂದು ಊಹಿಸಬಹುದು. ನುಂಕೇಮಲೆ ಬೆಟ್ಟದ ಮಲ್ಲಿಕಾರ್ಜುನ ಗುಡಿ ಹಿಂದೆ ಶಾಸನ ಇದೆ. ಇದು ಅಂಜುವರ್ಮನು ಚಾಲುಕ್ಯರ ಜಯಸಿಂಹನ ಅಧೀನನಾಗಿ ಆಳ್ವಿಕೆ ಮಾಡುತ್ತಿದ್ದನು ಎಂದು ತಿಳಿದುಬರುತ್ತದೆ. ಕದಂಬರು ಚಿತ್ರದುರ್ಗವನ್ನು ಆಳಿದರ ಬಗ್ಗೆ ಚಂದ್ರವಳ್ಳಿ ಶಾಸನ ತಿಳಿಸುತ್ತದೆ.

**ಬಾದಾಮಿ ಚಾಲುಕ್ಯರು**

ಕದಂಬರ ತರುವಾಯ ಚಿತ್ರದುರ್ಗ ಜಿಲ್ಲೆಯಲ್ಲಿ ಆಳ್ವಿಕೆ ನಡೆಸಿದವರೆಂದರೆ ಚಾಲುಕ್ಯರು. ಇವರು ಕ್ರಿ.ಶ. ಆರನೆಯ ಶತಮಾನದಿಂದ ಎಂಟನೆಯ ಶತಮಾನದವರೆಗೆ ವಿಶಾಲ ಸಾಮ್ರಾಜ್ಯವನ್ನು ಆಳಿದವರು. ಇದು ಪಲ್ಲವ ಚಾಲುಕ್ಯರ ಪರಸ್ಪರ ಹೋರಾಟದ ಬೀಡಾಗಿತ್ತು. ಇಮ್ಮಡಿ ಪುಲಿಕೇಶಿಯ ಕಾಲಕ್ಕೆ ಈ ಭಾಗವು ಆತನ ನೇರ ಆಳ್ವಿಕೆಗೆ ಒಳಪಟ್ಟಿತ್ತು ಎನ್ನುವುದರ ಬಗ್ಗೆ ದಾವಣಗೆರೆ ತಾಲ್ಲೂಕಿನ ನಲ್ಕುಂದ ಗ್ರಾಮದಲ್ಲಿ ದೊರೆತಿರುವ ತಾಮ್ರದ ಶಾಸನವೊಂದು ಬೆಳಕನ್ನು ಚೆಲ್ಲುತ್ತದೆ. ಇವರ ಕಾಲದಲ್ಲಿ ಸುಳ್ಗಲ್(ಚಂದ್ರವಳ್ಳಿ) ಎಂಬ ಹೆಸರಿನ ಚಿಕ್ಕ ಪ್ರಾಂತ್ಯದ ಕೇಂದ್ರವಾಗಿ ಚಾಲುಕ್ಯ ದೊರೆಗಳು ಅಧೀನರಾದ ಸಾಮಂತರ ಆಳ್ವಿಕೆಯಲ್ಲಿ ಸಾಗಿ ಬಂದಂತೆ ಕಾಣುತ್ತದೆ.

**ರಾಷ್ಟ್ರಕೂಟರು**

ಕರ್ನಾಟಕವನ್ನಾಳಿದ ಇನ್ನೊಂದು ಬಹಳ ದೊಡ್ಡ ರಾಜ ವಂಶ ರಾಷ್ಟ್ರಕೂಟರು. ಬಾದಾಮಿ ಚಾಲುಕ್ಯರನ್ನು ಹಿಂದಿಕ್ಕಿ ಕ್ರಿ.ಶ. ೮ನೆಯ ಶತಮಾನದ ಮಧ್ಯದಿಂದ ೧೦ನೇ ಶತಮಾನದ ಉತ್ತರಾರ್ಧದವರೆಗೆ, ಎರಡು ಶತಮಾನಗಳಿಗೂ ಹೆಚ್ಚು ಕಾಲ, ಕರ್ನಾಟಕದ ಸಾರ್ವಭೌಮಾಧಿಕಾರವನ್ನು ನಡೆಸಿದವರು ರಾಷ್ಟ್ರಕೂಟರು. ಚಿತ್ರದುರ್ಗ ಭಾಗ ಮತ್ತು ಜಿಲ್ಲೆಯ ಇತರ ಭಾಗಗಳು ಸಾಮ್ರಾಜ್ಯದ ಭಾಗವಾಗಿದ್ದವು. "ಮೊಳಕಾಲ್ಮೂರು ತಾಲ್ಲೂಕಿನ ಜಟ್ಟಂಗಿರಾಮೇಶ್ವರ ದೇವಾಲಯಗಳು ಇವರ ಮೇಲೆ ಬೆಳಕು ಚೆಲ್ಲುತ್ತವೆ".[೮] ಗೊಡಬನಾಳ್ ಶಾಸನವು ಭಾರತವನ್ನು ಭರತಖಂಡವೆಂದು ಉಲ್ಲೇಖಿಸಿದೆ. ಈ ಜಿಲ್ಲೆಯಲ್ಲಿ ಉಪಲಬ್ಧವಿರುವ ಕೆಲವು ಶಾಸನಗಳಿಂದ ಈ ಭೂ ಭಾಗ ಅವರ ಆಳ್ವಿಕೆಗೆ ಒಳಪಟ್ಟಿತ್ತೆಂದು ಹೇಳಬಹುದು. ಆದರೆ ಈ ಪ್ರದೇಶದಲ್ಲಿ ರಾಷ್ಟ್ರಕೂಟರಿಗೆ ಸಂಬಂಧಿಸಿದ ಅನೇಕ ವೀರಗಲ್ಲುಗಳು ಮಾತ್ರ ದೊರೆಯುತ್ತವೆ. ಧರ್ಮಪುರದ ಪಂಚಲಿಂಗೇಶ್ವರ ಪ್ರೌಢ ಶಾಲೆಯ ಮುಂಭಾಗದಲ್ಲಿ ಮತ್ತು ಹಳೆಯ ಪ್ರಾಥಮಿಕ ಶಾಲೆಯ ಮುಂಭಾಗದಲ್ಲಿ ವೀರಗಲ್ಲುಗಳು ರಾಷ್ಟ್ರಕೂಟರ ಕಾಲದ್ದಾಗಿವೆ.

**ಕಲ್ಯಾಣದ ಚಾಲುಕ್ಯರು**

ಕಲ್ಯಾಣದ ಚಾಲುಕ್ಯರು ಸು.ಕ್ರಿ.ಶ. ೧೦ನೆಯ ಶತಮಾನದಿಂದ ೧೨ನೇ ಶತಮಾನದವರೆಗೆ ಕರ್ನಾಟಕವನ್ನು ಆಳಿದವರು. "ಚಳ್ಳಕೆರೆ ತಾಲ್ಲೂಕಿನ ಮಹಾದೇವಪುರ ಶಾಸನದ ಪಾಠ ಸರಿಯಾಗಿಲ್ಲದಿದ್ದರೂ ಅದು ತ್ರಿಭುವನಮಲ್ಲನ ಹೆಸರನ್ನು ಉಲ್ಲೇಖಿಸಿದೆ"[೯] ಮತ್ತು ಉಲ್ಲೇಖಿತ ಕಾಲವಾದ ೧೧೦೮ ಅವನ ಆಳ್ವಿಕೆ ಕಾಲಕ್ಕೆ ಸರಿ ಹೊಂದುತ್ತದೆ. ಈ ಶಾಸನದಲ್ಲಿ ಬರೆಯಲಾದ

ಪುರಾವರಾಧೀಶ್ವರ ಕರಿಕಾಳ ಚೋಳನನ್ನು ಹೆಸರಿಸಿ, ತ್ರಿಭುವನಮಲ್ಲ ಜೋಳ ಮಹಾರಾಜನು ಭಂಡಾರಿ ಕೇತುಣನಿಗೆ ಮೂಲಿಗೆ ವೃತ್ತಿಯಾಗಿ ಕೊಟ್ಟ ವಿವರಗಳನ್ನು ದಾಖಲಿಸಿದೆ. ಅಂದರೆ ನೊಳಂಬ ಪಲ್ಲವರಲ್ಲದೆ, ಉಚ್ಚಂಗಿ ಪಾಂಡ್ಯರಲ್ಲದೆ ಮತ್ತೊಂದು ವಂಶದ(ಚೋಳರ) ಆಳ್ವಿಕೆಯೂ ಈ ಭಾಗದಲ್ಲಿತ್ತು ಎಂಬುದು ಗಮನಿಸಬೇಕಾದ ಪ್ರಮುಖ ಅಂಶವಾಗಿದೆ. ನುಂಕೆಮಲೆಯಲ್ಲಿನ ಮಲ್ಲಿಕಾರ್ಜುನ ದೇವಾಲಯ, ಹಿರೇಕೆರೆಹಳ್ಳಿ, ಕನ್ನೇರಮ್ಮನ ದೇವಾಲಯಗಳ ವಾಸ್ತುಶೈಲಿಯಿಂದ ಕಲ್ಯಾಣಿ ಚಾಲುಕ್ಯರ ಆಳ್ವಿಕೆಯನ್ನು ಗುರುತಿಸಬಹುದು. ಹಿರಿಯೂರು ತಾಲ್ಲೂಕಿನ ಗ್ರಾಮದ ಬ್ರಹ್ಮದೇವರ ದೇವಾಲಯದಲ್ಲಿ ಬಿದ್ದಿರುವ ಕಲ್ಲು ಹಾಗೂ ಅಬ್ಬಿನ ಹೊಳೆ ಗ್ರಾಮದ ಏಳು ಮಂದಕ್ಕನ ದೇವಾಲಯದ ಬಳಿ ಇರುವ ಶಾಸನವು ಕಲ್ಯಾಣದ ಚಾಲುಕ್ಯರ ಸಮಕಾಲೀನದಾಗಿದೆ. ಒಟ್ಟಾರೆ ಈ ಮೇಲಿನ ಆಧಾರಗಳಿಂದ ಈ ಪ್ರದೇಶವು ಸಹ ಕಲ್ಯಾಣಿ ಚಾಲುಕ್ಯರ ಆಳ್ವಿಕೆಗೊಳಪಟ್ಟಿದ್ದಿತ್ತೆಂದು ಗುರುತಿಸಲಾಗಿದೆ.

### ನೊಳಂಬರು

ಕರ್ನಾಟಕದಲ್ಲಿ ಕ್ರಿ.ಶ. ೮ನೇ ಶತಮಾನದಿಂದ ೧೧ನೇ ಶತಮಾನಗಳವರೆಗೆ ಆಡಳಿತ ನಡೆಸಿದ ನೊಳಂಬರು ದಕ್ಷಿಣ ಭಾರತದ ಇತಿಹಾಸದಲ್ಲಿ ಬಹುಮುಖ್ಯ ಪಾತ್ರವಹಿಸಿದ್ದರು. ಗಂಗರು, ಚಾಲುಕ್ಯರು, ಚೋಳರು ಮತ್ತು ಹೊಯ್ಸಳರ ಮಹಾಸಾಮಂತರಾಗಿ ಆಳಿದವರು. ಈ ಜಿಲ್ಲೆಯಲ್ಲಿ ಪ್ರದೇಶಗಳನ್ನೊಳಗೊಂಡ ಸೀಮೆಗೆ 'ನೊಳಂಬವಾಡಿ' ಅಥವಾ 'ನೊಳಂಬವಾಡಿ-೩೨೦೦೦' ನಾಡು ಎಂದು ಹೆಸರಿದ್ದಿತು. ಇವರ ರಾಜಧಾನಿ ಆಂಧ್ರಪ್ರದೇಶದ ಮಡಕಶಿರ ತಾಲ್ಲೂಕಿನ ಹೆಂಜೆರು ಅಥವಾ ಹೇಮಾವತಿಯಾಗಿತ್ತು. ಈ ಪ್ರಾಂತ್ಯವು ಈಗಿನ ಚಿತ್ರದುರ್ಗ ಜಿಲ್ಲೆ ಮತ್ತು ಅದರ ಸುತ್ತಮುತ್ತಲಿನ ಹಿರಿಯೂರು ಮತ್ತು ಚಳ್ಳಕೆರೆ ತಾಲೂಕಿನ ಕೆಲವು ಪ್ರದೇಶಗಳನ್ನು ಒಳಗೊಂಡಿತ್ತು. ಕಾಲಕ್ರಮೇಣ ಇವರ ಪ್ರಾಬಲ್ಯ ವೃದ್ಧಿಸಿ ಇವರ ರಾಜ್ಯವು ಸಹ ವಿಸ್ತಾರಗೊಂಡಿತ್ತು. ಈ ಪ್ರಾಂತ್ಯವು ಕರ್ನಾಟಕದ ಕೋಲಾರ, ತುಮಕೂರು, ಚಿತ್ರದುರ್ಗ ಮತ್ತು ಅದಕ್ಕೆ ಸೇರಿರುವ ಸುತ್ತಮುತ್ತಲಿನ ಪ್ರದೇಶಗಳಿಗೂ ವ್ಯಾಪಿಸಿತ್ತು. ನೊಳಂಬರು ರಾಜಕೀಯ ಇತಿಹಾಸದಲ್ಲಿ ಪ್ರಮುಖ ಪಾತ್ರವಹಿಸಿದಂತೆ ಹಾಗೆಯೇ ಈ ಜಿಲ್ಲೆಯಲ್ಲಿ ಭವ್ಯ ಸಾಂಸ್ಕೃತಿಕ ಪರಂಪರೆಯನ್ನು ಬೆಳಗಿಸಿದವರು. ಇವರ ಕಾಲದಲ್ಲಿ ವಾಸ್ತುಶಿಲ್ಪಕಲೆಯಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಗಳಿಸಿಕೊಂಡಿದ್ದರು. ಈ ಜಿಲ್ಲೆಯ ಹಿರಿಯೂರು, ಜಗಳೂರು, ಚಳ್ಳಕೆರೆ, ಮೊಳಕಾಲ್ಮೂರು ತಾಲ್ಲೂಕುಗಳನ್ನು ಒಳಗೊಂಡ ನೊಳಂಬ ಪ್ರಾಂತ್ಯವಾಗಿದ್ದಿತ್ತು. ಚಳ್ಳಕೆರೆ ತಾಲ್ಲೂಕಿಗೆ ಸೇರಿದ ಚಿಕ್ಕಮಧುರೆ ಮತ್ತು ಹಿರೇಮಧುರೆ ಇವರ ಕಾಲದ ಪ್ರಮುಖ ಗ್ರಾಮಗಳಾಗಿದ್ದವು. ದೊಡ್ಡ ಉಳ್ಳಾರ್ಥಿ ಬಯಲಿನಲ್ಲಿ ಮೂರು ವೀರಗಲ್ಲುಗಳು ಸಿಂಹ ಪೋತಕಲಿ ನೊಳಂಬವಾಡಿ ರಾಜನು ನೊಳಂಬವಾಡಿಯನ್ನು ಆಳುತ್ತಿದ್ದನೆಂದು ತಿಳಿಸುವವು. ಒಟ್ಟಾರೆ ಈ ಜಿಲ್ಲೆಯ ಹಿರಿಯೂರು, ಚಳ್ಳಕೆರೆ, ಮೊಳಕಾಲ್ಮೂರು ತಾಲ್ಲೂಕುಗಳಲ್ಲಿ ದೊರೆತ ಶಾಸನಗಳಿಂದ ಈ ಜಿಲ್ಲೆಯಲ್ಲಿ ನೊಳಂಬರು ಅಧಿಪತ್ಯ ಸ್ಥಾಪಿಸಿದ್ದರೆಂದು ತಿಳಿದುಬರುತ್ತದೆ.

## ಹೊಯ್ಸಳರು

ಕರ್ನಾಟಕದ ರಾಜ ಮನೆತನಗಳಲ್ಲಿ ಹೊಯ್ಸಳರ ಸ್ಥಾನ ಮಹತ್ವವಾದುದು. ಸುಮಾರು ಕ್ರಿ.ಶ. ೧೧ನೇ ಶತಮಾನದಿಂದ ೧೪ನೇ ಶತಮಾನದವರೆಗೆ ಆಳ್ವಿಕೆ ಮಾಡಿದ್ದಾರೆ. ಇವರು ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕ, ಕಲೆ ಮತ್ತು ವಾಸ್ತುಶಿಲ್ಪಕ್ಕೆ ಅತ್ಯಂತ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡುವುದರ ಮೂಲಕ ವಿಶಿಷ್ಟ ರೀತಿಯ ಕಾಣಿಕೆಗಳನ್ನು ಸಲ್ಲಿಸಿದ್ದಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ ಹೊಯ್ಸಳರ ಆಳ್ವಿಕೆಯನ್ನು ತಿಳಿಯಲು ಸುಮಾರು ಐವತ್ತಕ್ಕೂ ಹೆಚ್ಚು ಶಾಸನಗಳು ದೊರೆತಿವೆ. ಅವುಗಳ ಆಧಾರದಿಂದ ಹೊಯ್ಸಳರು ತಮ್ಮ ಆಳ್ವಿಕೆಯ ಅವಧಿಯಲ್ಲಿ ಇಡೀ ಜಿಲ್ಲೆಯ ಸುತ್ತಮುತ್ತಲಿನ ಪ್ರದೇಶಗಳಲ್ಲಿಯೂ ಆಳ್ವಿಕೆ ನಡೆಸಿರುವುದು ತಿಳಿದುಬರುತ್ತದೆ.

"ಹಿರಿಯೂರು ತಾಲ್ಲೂಕು ಯರಬಳ್ಳಿ ಗ್ರಾಮದಲ್ಲಿರುವ ಕ್ರಿ.ಶ. ೧೨೦೫ರ ಶಾಸನವು ಇಮ್ಮಡಿ ಬಲ್ಲಾಳನ ಮಗ ಬೇಚಿಯ ದಣ್ಣಾಯಕನು ಕಾಡಕರೆ ಪರಮಗೌಡನ ಮಗ ನಾಗೇಯ ನಾಯಕನಿಗೆ ನೆತ್ತರು ಕೊಡುಗೆ ನೀಡಿದುದನ್ನು ತಿಳಿಸುತ್ತದೆ".[೧೦] ಈ ಪರಿಸರದಲ್ಲಿ ಧರ್ಮಪುರ, ಅಬ್ಬಿನಹೊಳೆ, ಕೂಡಲಹಳ್ಳಿ ಇತ್ಯಾದಿ ಸ್ಥಳಗಳಲ್ಲಿ ಹೊಯ್ಸಳರ ಕಾಲದ ವೀರಗಲ್ಲುಗಳು ದೊರೆತಿವೆ. ಹೀಗಾಗಿ ಪ್ರಸ್ತುತ ಪ್ರದೇಶವು ಹೊಯ್ಸಳರ ಆಳ್ವಿಕೆಗೆ ಒಳಪಟ್ಟಿತ್ತೆಂದು ತಿಳಿಯಲಾಗಿದೆ.

## ವಿಜಯನಗರ ಸಾಮ್ರಾಜ್ಯ

ಹೊಯ್ಸಳರ ಸಾಮ್ರಾಜ್ಯ ಪತನ ಹೊಂದಿದ ತರುವಾಯ ವಿಜಯನಗರ ಸಾಮ್ರಾಜ್ಯವು ಅಸ್ತಿತ್ವಕ್ಕೆ ಬಂದಿತು. ಕ್ರಿ.ಶ. ೧೩೩೬ರಿಂದ ಕ್ರಿ.ಶ. ೧೫೬೮ರವರೆಗೆ ಸುಮಾರು ೨೯೯ ವರ್ಷಗಳ ಕಾಲ ಕರ್ನಾಟಕದಲ್ಲಿ ಆಳ್ವಿಕೆಯನ್ನು ನಡೆಸಿತು. ವಿಜಯನಗರದ ಅರಸರು ಚಿತ್ರದುರ್ಗ ಪ್ರದೇಶವನ್ನು ತಮ್ಮ ರಾಜ್ಯದ ಒಂದು ಭಾಗವನ್ನಾಗಿಸಿಕೊಂಡು ಆಡಳಿತ ನಡೆಸಿದರು. ಈ ಪರಿಸರವು ವಿಜಯನಗರದ ಆಸೆ ಆಕಾಂಕ್ಷೆ ಹಾಗೂ ಧ್ಯೇಯೋದ್ದೇಶಗಳನ್ನು ಪೂರೈಸುವ ಬಹುಮುಖ್ಯ ಘಟಕವಾಗಿತ್ತು. ಕಾರಣ ವಿಜಯನಗರದ ಅರಸರು ತಮ್ಮ ಸಾಮ್ರಾಜ್ಯವನ್ನು ಹೆಚ್ಚಾಗಿ ದಕ್ಷಿಣ ಭಾರತದಲ್ಲಿ ವಿಸ್ತರಿಸಿದರು. ಹೆಚ್ಚಾಗಿ ಇವರಿಗೆ ಬೇಕಾದ ಸೈನಿಕರು, ಈ ಪ್ರದೇಶದಲ್ಲಿ ನೆಲೆಸಿದ ಬೇಡರು. ಬೇಡರ ದಟ್ಟ ನೆಲೆಯಾಗಿತ್ತು. ಈ ಅವಧಿಯಲ್ಲಿ ಈ ಜಿಲ್ಲೆಯ ಮೇಲೆ ವಿಜಯನಗರದ ಅರಸರು ನೇರವಾಗಿಯೂ ಮತ್ತು ಪರೋಕ್ಷವಾಗಿಯೂ ತಮ್ಮ ಅಧಿಕಾರವನ್ನು ಸ್ಥಾಪಿಸಿದರು. ಇಲ್ಲಿ ಅವರ ಆಡಳಿತ ಕೇಂದ್ರ ಬೆಮ್ಮತ್ತನಕಲ್ಲು(ಚಿತ್ರದುರ್ಗ) ಆಗಿದ್ದಿತು.

"ಕ್ರಿ.ಶ. ೧೩೫೫ ಮತ್ತು ೧೩೫೬ರ ಶಾಸನಗಳು ವಿಜಯನಗರ ಸಾಮ್ರಾಜ್ಯದ ಪ್ರತಿನಿಧಿ ಮಲ್ಲಿನಾಥ ಒಡೆಯನೆಂಬುವವನು ಬೆಮ್ಮತ್ತನಕಲ್ಲನ್ನು ಕೇಂದ್ರವನ್ನಾಗಿ ಮಾಡಿಕೊಂಡು ಆಡಳಿತ ನಡೆಸುತ್ತಿದ್ದನೆಂಬುದನ್ನು ಸೂಚಿಸುತ್ತವೆ".[೧೧] ವಿಜಯನಗರದ ಅರಸರು ಈ ಪ್ರದೇಶವನ್ನು ತಮ್ಮ ನೇರ ಆಳ್ವಿಕೆಗೆ ಒಳಪಡಿಸಿಕೊಂಡು ಸಾಮ್ರಾಜ್ಯವನ್ನು ರಾಜ್ಯ, ವಳಿತ, ವೇಂಟೆ, ನಾಡು ಸೀಮೆ, ಚಾವಡಿ, ಮಾಗಣಿ, ಹೋಬಳಿ, ಕಸುಬೆ ಮುಂತಾದ ಪ್ರಾದೇಶಿಕ ವಿಭಾಗಗಳನ್ನು ಸ್ಥಾಪಿಸಿಕೊಂಡು

ಆಳ್ವಿಕೆ ನಡೆಸಿದರೆಂಬುದು ಈ ಪ್ರದೇಶದಲ್ಲಿ ದೊರೆತ ಅವರ ಶಾಸನಗಳಿಂದ ತಿಳಿದುಬರುತ್ತದೆ. ವಿಜಯನಗರ ಅರಸರ ದೇವಾಲಯಗಳು, ವೀರಗಲ್ಲುಗಳು, ಶಾಸನಗಳು ಈ ಜಿಲ್ಲೆಯಲ್ಲಿ ದೊರಕಿವೆ.

**ಹಟ್ಟಿ ನಾಯಕರು**

ನಾಯಕನಹಟ್ಟಿ ಪಶುಪಾಲಕ ಸಂಸ್ಥಾನ ಎಂದೇ ಪ್ರಸಿದ್ಧಿಯಾಗಿರುವ ಈ ಸಂಸ್ಥಾನವು ಇಂದಿನ ಚಳ್ಳಕೆರೆ ಮತ್ತು ಮೊಳಕಾಲ್ಮೂರಿನ ಭಾಗವನ್ನು ಒಳಗೊಂಡಿತ್ತು. ಇವರು ಬೇಡ ಸಮುದಾಯಕ್ಕೆ ಸೇರಿದವರು. ಇವರು ಪಾಳೆಯಗಾರರೆಂದು ಕರೆದುಕೊಂಡವರಲ್ಲ. ಏಕೆಂದರೆ ಇವರು ಪಶುಪಾಲಕರು. ತಮ್ಮ ಪಶುಸಂಪತ್ತಿನ ರಕ್ಷಣೆಗಾಗಿ ಸಂಸ್ಥಾನ ಕಟ್ಟಿಕೊಂಡವರು. ಈ ಸಂಸ್ಥಾನದ ಮೇಲೆ ದಾಳಿ ಮಾಡಿದವರ ಮೇಲೆ ಪ್ರತಿ ದಾಳಿ ಮಾಡಿ ಎದುರಿಸುತ್ತಿದ್ದವರು. ಈ ಸಂಸ್ಥಾನ ಬೇರೆಲ್ಲ ಪಾಳೆಯಪಟ್ಟುಗಳಿಗಿಂತ ವಿಶೇಷತೆಯಿಂದ ಕೂಡಿದೆ. ಕಾರಣ ಪಶುಪಾಲನೆಯ ವೃತ್ತಿ ಮೂಲದಿಂದ ಹುಟ್ಟಿ ಬಂದ ಸಂಸ್ಥಾನ ಇದಾಗಿತ್ತು. ಇಂತಹ ಸಂಸ್ಥಾನದ ಮೇಲೆ ವಿಜಯನಗರದ ಅರಸರು ಎರಡು ಮೂರು ಬಾರಿ ದಾಳಿ ಮಾಡಿ ಸೋತು ಪಲಾಯನ ಮಾಡಿದರು. ಇದನ್ನರಿತ ರಾಜರು ಸಂಧಾನದ ಮೂಲಕ ಇವರನ್ನು ರಾಜಧಾನಿಗೆ ಕರೆಯಿಸಿ, ರಾಜಬೀದಿಯಲ್ಲಿ ಮೆರವಣಿಗೆ ಮಾಡಿಸಿ ಈ ಪಶುಸಂಕುಲದಿಂದ ಅಶೀರ್ವಾದ ಪಡೆದು ಇವರಿಗೆ ನೆಲೆಸಲು ಮೂನ್ನೂರು ಎಕರೆ ಉಂಬಳಿಯಾಗಿ ಕೊಟ್ಟರೆಂದು ತಿಳಿದುಬರುತ್ತದೆ. ಆರಂಭದ ಹಂತದಲ್ಲಿ ವಿಜಯನಗರ ಅರಸರ ವಿಶ್ವಾಸಕ್ಕೆ ಪಾತ್ರರಾಗಿ ಕೆಲವು ಗ್ರಾಮಗಳನ್ನು ಅವರಿಂದ ಬಳುವಳಿಯಾಗಿ ಪಡೆದುಕೊಂಡರು. ಇವರ ಧೈರ್ಯ, ಶೂರತನವನ್ನು ಮನಗಂಡು ವಿಜಯನಗರದ ಅರಸರು ಆಡಳಿತ ನಡೆಸುವ ತಂತ್ರವಾಗಿ ಇವರನ್ನು ಪಾಳೆಯಗಾರರಾಗಿ ಸೃಷ್ಟಿಸಿದರು. ಈ ಪಾಳೆಯಗಾರರಿಗೆ ಅಮರನಾಯಕರೆಂಬ ಹೆಸರಿದ್ದಿತ್ತು. ಊಳಿಗಮಾನ್ಯ ಪದ್ಧತಿಯ ಆಧಾರದ ಮೇಲೆ ಈ ಅನೇಕ ಪ್ರದೇಶಗಳನ್ನು ಇವರಿಗೆ ಕೊಡಲಾಗಿದ್ದಿತು. ಮೌಖಿಕವಾಗಿ ಬಲವಂತವಾಗಿ ಈ ಪಶುಪಾಲಕ ಬೇಡರನ್ನು ವಿಜಯನಗರದ ಅರಸರು ಸೈನ್ಯಕ್ಕೆ ಸೇರಿಸಿ ಕೊಳ್ಳುತ್ತಿದ್ದರೆಂದು ಮೌಖಿಕ ಪರಂಪರೆಯಿಂದ ತಿಳಿದುಬರುತ್ತದೆ.

ಹಟ್ಟಿ ಪಾಳೆಯಗಾರರ ಸಂಸ್ಥಾನ ಚಳ್ಳಕೆರೆ ಮತ್ತು ಮೊಳಕಾಲ್ಮೂರು ತಾಲ್ಲೂಕಿನ ಬಹುಭಾಗವನ್ನು ಒಳಗೊಂಡಿತ್ತು. ಆಗಲೂ ಅಷ್ಟೊಂದು ಪ್ರಸಿದ್ಧವೇನು ಆಗಿರಲಿಲ್ಲ. ಕರ್ನಾಟಕದ ಇತರ ಮನೆತನಗಳಿಗೆ ಹೋಲಿಸಿದರೆ ಹೀಗೆ ಭಾವಿಸುವುದು ಸಹಜ. ಈ ಹಟ್ಟಿಯ ಪಶುಪಾಲಕರು ತಮಗಿದ್ದ ಅಲ್ಪ ಸ್ವಲ್ಪ ಕಂಪಳದಿಂದ (ಗುಂಪು) ವೈರಿಗಳ ದಾಳಿಯಿಂದ ತಮ್ಮ ಸಣ್ಣ ಸಂಸ್ಥಾನವನ್ನು ರಕ್ಷಿಸುತ್ತಿದ್ದರು. ಹಟ್ಟಿ ಸಂಸ್ಥಾನದ ಸಂರಕ್ಷಣೆಯು ಸುಲಭದ ಕೆಲಸವೇನು ಆಗಿರಲಿಲ್ಲ. ೧೭ ಮತ್ತು ೧೮ನೇ ಶತಮಾನದಲ್ಲಿ ದಕ್ಷಿಣ ಭಾರತದ ಪರಿಸ್ಥಿತಿಯನ್ನು ಗಮನಿಸಿದರೆ ಇದು ತಿಳಿಯುತ್ತದೆ. ಆದರೂ ಹಟ್ಟಿಯ ದೊರೆಗಳು ಕ್ರಿ.ಶ. ೧೫೮೮ರಿಂದ ೧೭೯೧ರವರೆಗೆ ತಮ್ಮ ಪುಟ್ಟ ಸಂಸ್ಥಾನವನ್ನು ಕಾಪಾಡಿಕೊಂಡು ಸುಮಾರು ೨೦೦ ವರ್ಷಗಳ ಕಾಲ ಆಳಿದರು.

ಕರ್ನಾಟಕದಲ್ಲಿ ಅನೇಕಾನೇಕ ಏಳುಬೀಳುಗಳಿದ್ದರು, ಪಶುಪಾಲಕರ ಸಂಸ್ಥಾನವೊಂದು ದೀರ್ಘಕಾಲದವರೆಗೆ ಸಂರಕ್ಷಿಸಿದ್ದು ಕಂಡುಬರುತ್ತದೆ.

ಪಶುಸಂಪತ್ತಿನ ರಕ್ಷಣೆಗಾಗಿ ಹಾಗೂ ಸಮುದಾಯದ ಹಿತರಕ್ಷಣೆಗಾಗಿ ಹುಟ್ಟಿಕೊಂಡ ಹಟ್ಟಿಯ ಸಂಸ್ಥಾನವು ವಿಜಯನಗರದ ಕಾಲದಲ್ಲಿ ಸ್ವತಂತ್ರವಾದ ಸಾಮಂತ ಸಂಸ್ಥಾನವಾಗಿ ಮಾರ್ಪಟ್ಟಿತು. ಆಳ್ವಿಕೆಯನ್ನು ಬೇಡರು ನಡೆಸುತ್ತಿದ್ದರು. ವಿಜಯನಗರ ಸಾಮ್ರಾಜ್ಯದ ಪತನಾನಂತರ ಸ್ವತಂತ್ರರಾಗಿದ್ದರು. ಇವರು ಚಿತ್ರದುರ್ಗ ಪಾಳೆಯಗಾರರ ಅಧೀನರಾಗಿ ಆಳ್ವಿಕೆ ನಡೆಸುತ್ತಿದ್ದರು. ಚಿತ್ರದುರ್ಗ ಮತ್ತು ಹಟ್ಟಿ ಪಾಳೆಯಗಾರರ ಸಂಬಂಧವು ಕೊನೆಯತನಕ ಉತ್ತಮವಾಗಿದ್ದುದು ಕಂಡುಬರುತ್ತದೆ. ಈ ಹಟ್ಟಿ ದೊರೆಗಳು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿ ನಾಡಿನ ಸಾಂಸ್ಕೃತಿಕ ಬೆಳವಣಿಗೆಗೆ ತಮ್ಮದೇ ಆದ ಸೇವೆಯನ್ನು ನೀಡಿದ್ದಾರೆ. ಈ ಪ್ರದೇಶದಲ್ಲಿ ಕೆರೆಗಳನ್ನು ಕಟ್ಟಿಸಿ ನೀರಾವರಿಯನ್ನು ಕಲ್ಪಿಸಿದ್ದಾರೆ. ಕಲೆ ಮತ್ತು ವಾಸ್ತುಶಿಲ್ಪಕ್ಕೆ ಕೊಡುಗೆ ನೀಡಿದ್ದಾರೆ. ಇದಕ್ಕೆ ಹೊಸ ಗುಡ್ಡದ ಗುಹಾಂತರ ದೇವಾಲಯ ಸಾಕ್ಷಿಯಾಗಿದೆ. ಇವರ ಚರಿತ್ರೆ ಕುರಿತು ನಮಗೆ ಇವರ ವಂಶಾವಳಿ, ತಾಮ್ರಶಾಸನ, ಗೌಡಗೆರೆ ಶಿಲಾಶಾಸನ ಮತ್ತು ಮೌಖಿಕ ಕಥೆ, ಐತಿಹ್ಯ, ಹಾಡು ಇತ್ಯಾದಿ ಈ ಎಲ್ಲಾ ಆಧಾರಗಳಿಂದ ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದರೆಂದು ತಿಳಿದುಬರುತ್ತದೆ. ಈ ಪ್ರದೇಶದಲ್ಲಿ ಚಿತ್ರದುರ್ಗ ಪಾಳೆಯಗಾರರಗಿಂತ ಮೊದಲೇ ತಮ್ಮ ಸಂಸ್ಥಾನ ಅಸ್ತಿತ್ವದಲ್ಲಿತ್ತು ಎಂದು ಲಿಖಿತ ಮತ್ತು ಮೌಖಿಕ ಆಧಾರಗಳಿಂದ ತಿಳಿದುಬರುತ್ತದೆ.

### ರಾಯದುರ್ಗದ ಪಾಳೆಯಗಾರರು

ಮೊಳಕಾಲ್ಮೂರು, ಚಳ್ಳಕೆರೆ ಮತ್ತು ಹಿರಿಯೂರು ತಾಲ್ಲೂಕುಗಳಲ್ಲಿ ದೊರೆತ ಶಾಸನಗಳ ಪ್ರಕಾರ ರಾಯದುರ್ಗದ ಪಾಳೆಯಗಾರರು ಈ ಜಿಲ್ಲೆಯ ಪೂರ್ವದ ಕೆಲವು ಭಾಗಗಳನ್ನು ಆಳಿದ್ದಾರೆ. "ರಾಯದುರ್ಗದ ಬೊಮ್ಮನಾಯಕನು ಮೊಳಕಾಲ್ಮೂರು ಪ್ರದೇಶವನ್ನು ಆಳುತ್ತಿದ್ದನಂತೆ. ಹಟ್ಟಿ ಮಲ್ಲಪ್ಪ ನಾಯಕನು ಈ ಬೊಮ್ಮನಾಯಕ ಎರಡು ಸಾವಿರ ಕೆಂಪು ಹಸು, ಸಾವಿರ ಬಿಳಿ ಹಸುಗಳನ್ನು ಕೊಟ್ಟು, ಮೊಳಕಾಲ್ಮೂರು ಬೆಟ್ಟವನ್ನು ಪಡೆದನೆಂದು, ಈತನೆ ಬೆಟ್ಟದ ಮೇಲೆ ಕೋಟೆ ಕಟ್ಟಿಸಿದನೆಂದು ತಿಳಿದುಬರುತ್ತದೆ".[೨] ಜಟ್ಟಂಗಿ ರಾಮೇಶ್ವರ ಬೆಟ್ಟದ ಮೇಲಿನ ಕ್ರಿ.ಶ. ೧೩೮೭೭ರ ತಾಮ್ರಶಾಸನವು ವೀರಭೂಪತಿ, ಜಟ್ಟಂಗಿ ರಾಮೇಶ್ವರ ದೇವರಿಗೆ ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ. ಇವರ ಶಾಸನಗಳಲ್ಲಿ ವೀರಭೂಪತಿ, ಪಾಪಯ್ಯದೇವ, ತಿರುಮಲಯ್ಯದೇವ ಮತ್ತು ಹೊಟ್ಟೆಣ್ಣ ನಾಯಕರ ಹೆಸರುಗಳು ಉಲ್ಲೇಖಗೊಂಡಿವೆ.

### ಹರತಿ ಪಾಳೆಯಗಾರರು

ಹರತಿ ಪಾಳೆಯಗಾರರು ಹರ್ತಿಕೋಟೆಯನ್ನು ತಮ್ಮ ಆಡಳಿತದ ಮುಖ್ಯ ಸ್ಥಳವಾಗಿಸಿಕೊಂಡಂತೆ ಐಮಂಗಲ, ದೊಡ್ಡೇರಿ, ನಿಡಗಲ್ಲು, ರತ್ನಗಿರಿ, ಸಿರಾ ಮುಂತಾದ ಸ್ಥಳಗಳನ್ನು ತಮ್ಮ ಕೇಂದ್ರಗಳನ್ನಾಗಿಸಿಕೊಂಡು ಆಳ್ವಿಕೆ ನಡೆಸಿದರು. ಹರ್ತಿಕೋಟೆ ಇವರ ರಾಜಧಾನಿ(ಹಿರಿಯೂರು ತಾಲ್ಲೂಕು). ಮೂಲ ಪುರುಷ ತಿಪ್ಪಣ್ಣನಾಯಕ. ಹರ್ತಿ ನಾಯಕರಿಗೆ ಸಂಬಂಧಿಸಿದ ಶಾಸನಗಳು ಹಿರಿಯೂರು, ಚಳ್ಳಕೆರೆ ತಾಲ್ಲೂಕುಗಳಲ್ಲಿ ದೊರೆತಿವೆ. ಈ ಶಾಸನಗಳಿಂದ ಹರ್ತಿಕೋಟೆಯ

ಹದಿನಾಲ್ಕು ರಾಜರು ಮುಖ್ಯರಾಗಿದ್ದಾರೆ. ೧೫೩೩-೧೭೭೯ರವರೆಗಿನ ಶಾಸನಗಳು ಹರತಿ ಪಾಳೆಯಗಾರರ ಬೆಳವಣಿಗೆಯನ್ನು ತಿಳಿಯಲು ಸಹಾಯಕವಾಗಿವೆ. ಚಿತ್ರದುರ್ಗ ಪಾಳೆಯಗಾರರಿಗಿಂತ ಮೊದಲು ಇವರು ಅಸ್ತಿತ್ವದಲ್ಲಿದ್ದರೆಂದು ಶಾಸನಗಳಿಂದ ತಿಳಿದು ಬರುತ್ತದೆ.

ಹರತಿಯ ವಂಶದ ಮೂಲ ಪುರುಷ ತಿಪ್ಪಣ್ಣ ನಾಯಕ. ಈತನ ಶೌರ್ಯಕ್ಕೆ ಮೆಚ್ಚಿದ ಕೃಷ್ಣದೇವರಾಯನು ಚಿತ್ರದುರ್ಗ ಜಿಲ್ಲೆಯ ಪೂರ್ವ ಭಾಗದ ವನರಾಜ್ಯವನ್ನು ಉಂಬಳಿಯಾಗಿ ನೀಡಿದನು. ಆನಂತರ ತಿಪ್ಪಣ್ಣ ನಾಯಕ ತನ್ನ ಹಿರಿಯರ ನೆನಪಿಗಾಗಿ 'ದೊಡ್ಡೇರಿ' (ಚಳ್ಳಕೆರೆ), 'ಹರತಿ' ಎಂಬ ಪಟ್ಟಣಗಳನ್ನು ಕಟ್ಟಿಸಿದನು. ನಂತರ ಈ ಪ್ರಾಂತ್ಯದ ಆಳ್ವಿಕೆಯನ್ನು ಈತನ ಮಕ್ಕಳಿಗೆ ಹಂಚಿದನೆಂದು ತಿಳಿದುಬರುತ್ತದೆ. ಹರತಿ ನಾಯಕರಲ್ಲಿ ವೀರ ಹೊಟ್ಟೆಣ್ಣ ನಾಯಕನೆಂಬುವನು ಪ್ರಸಿದ್ಧನಾದವನು. ಟಿಪ್ಪುವು ಬಲತ್ಕಾರದಿಂದ ಹರತಿಯ ಸಂಸ್ಥಾನವನ್ನು ಚಿತ್ರದುರ್ಗದ ಪಾಳೆಯಗಾರರಿಗೆ ಒಪ್ಪಿಸುವಂತೆ ಪತ್ರ ಬರೆಯಿಸಿಕೊಂಡು ಹರತಿಯನ್ನು ವಶಪಡಿಸಿಕೊಂಡನು. ಹರತಿಕೋಟೆಯಲ್ಲಿ ಇವರ ಕಾಲದ ದೇವಾಲಯಗಳು ವೀರ ಮಾಸ್ತಿಕಲ್ಲುಗಳು ಉಳಿದಿವೆ. ಕೆಲವು ನಾಯಕರ ಸಮಾಧಿಗಳನ್ನು ಕಾಣಲಾಗಿದ್ದು, ಸಮಾಧಿಗಳ ಮೇಲೆ ಪಾಳೆಯಗಾರರ ಹೆಸರುಗಳನ್ನು ಬರೆಯಲಾಗಿದೆ.

### ಚಿತ್ರದುರ್ಗದ ಪಾಳೆಯಗಾರರು

ಮಧ್ಯಕಾಲೀನ ಭಾರತದ ಇತಿಹಾಸದಲ್ಲಿ ಅತ್ಯಂತ ಉನ್ನತವಾದ ಕಾಲಘಟ್ಟವೆಂದರೆ ವಿಜಯನಗರ ಸಾಮ್ರಾಜ್ಯದ ಕಾಲಾವಧಿ. ವಿಜಯನಗರೋತ್ತರ ಕರ್ನಾಟಕದಲ್ಲಿ ಸಮರ್ಥವಾಗಿ, ಸ್ವತಂತ್ರವಾಗಿ ಆಡಳಿತ ನಡೆಸಿದ ಸಂಸ್ಥಾಪಕರಲ್ಲಿ ಚಿತ್ರದುರ್ಗದ ಪಾಳೆಯಗಾರರು ಪ್ರಮುಖರು. ಕ್ರಿ.ಶ. ೧೫೬೮ ರಿಂದ ೧೭೭೯ರವರೆಗೆ ಎರಡು ನೂರ ಹನ್ನೊಂದು ವರ್ಷಗಳ ಕಾಲ ಆಡಳಿತ ನಡೆಸಿದರು. ಈ ಅವಧಿಯಲ್ಲಿ ಹದಿನಾಲ್ಕು ಮಂದಿ ಪಾಳೆಯಗಾರರು ಆಳಿದರು. ಇವರು ಬೇಡ ಸಮುದಾಯದವರಾದ ಕಾಮಗೇತಿ ಕುಲದವರು. ಶ್ರೀ ಮನ್ಮಹಾನಾಯಕಾಚಾರ್ಯ ಕಾಮಗೇತಿ ಕಸ್ತೂರಿ ಎಂಬ ಅಭಿದಾನವನ್ನು ಧರಿಸಿದರು. ಇವರು ಮೂಲತಃ ಆಂಧ್ರಪ್ರದೇಶದ ತಿರುಪತಿಯ ಬಳಿಯ ಜಡೆಕಲ್ ದುರ್ಗದಿಂದ ವಲಸೆ ಬಂದರೆನ್ನುವುದು ಪ್ರತೀತಿ. ಚಿತ್ರದುರ್ಗದ ಪಾಳೇಪಟ್ಟಿನ ಮೂಲ ಪುರುಷ ಚಿತ್ರನಾಯಕ ಅಥವಾ ತಿಮ್ಮಣ್ಣನಾಯಕನೆಂದು ಶಾಸನಗಳಿಂದ ದೃಢಪಡಿಸುತ್ತದೆ. ವಿಜಯನಗರದ ಪ್ರತಿನಿಧಿಯಾಗಿ, ಅಮರನಾಯಕನಾಗಿ ತನ್ನ ಶೌರ್ಯ ಸಾಹಸಗಳಿಂದ ಪ್ರೀತಿ ಸಂಪಾದಿಸಿದ ಈತನು ಕೃಷ್ಣದೇವರಾಯನಿಂದ ಉಂಬಳಿಯಾಗಿ ಹೊಳಲ್ಕೆರೆಯನ್ನು ಕ್ರಿ.ಶ. ೧೫೬೦ರಲ್ಲಿ ಪಡೆದನು. ನಂತರ ಅರಸರ ಅನುಮತಿಯಿಂದ ಹಿರಿಯೂರು ಮತ್ತು ಚಿತ್ರದುರ್ಗ ಪ್ರದೇಶಗಳನ್ನು ಸೇರಿಸಿಕೊಳ್ಳಲಾಯಿತು. ಕಲಬುರಗಿ ಕೋಟೆಯನ್ನು ಗೆದ್ದು ಕೊಟ್ಟಿದ್ದರಿಂದ ವಿಜಯನಗರದ ಅರಸರು ಇವನಿಗೆ 'ಹಗಲು ಕಗ್ಗೊಲೆಯ ಮಾನ್ಯ' ಎಂಬ ಬಿರುದನ್ನು ದಯಪಾಲಿಸಿದರು. ತಿಮ್ಮಣ್ಣ ನಾಯಕ ಸಾಹಸಿಯಾಗಿದ್ದಂತೆ ಸ್ವಾಭಿಮಾನಿಯೂ

ಸಹ ಆಗಿದ್ದನು. ಈತನನ್ನು ವಿಜಯನಗರದ ಅರಸರು ಬರಮಾಡಿಕೊಂಡು ಸೆರೆಮನೆಯಲ್ಲಿಟ್ಟರು. ತಿಮ್ಮಣ್ಣ ಅಲ್ಲಿಯೇ ಮರಣ ಹೊಂದಿದ್ದನು.

“ಪಾಳೆಯಗಾರರ ಪೂರ್ವಿಕರು ಮೊದಲು ಕುಮ್ಮಟದುರ್ಗದಲ್ಲಿ ಕುಮಾರರಾಮನ ಬಳಿ ಆನೆಯ ಮಾವುತರಾಗಿ ಶೌರ್ಯದಿಂದ ಕಾದಾಡಿದವರು. ಮಹಮದ್-ಬಿನ್-ತೊಘಲಕ್‌ನು ಕುಮ್ಮಟದುರ್ಗವನ್ನು ಸೂರೆ ಮಾಡಿ ಅನೇಕರನ್ನು ಡೆಲ್ಲಿಗೆ ಸೆರೆ ಹಿಡಿದು ಒಯ್ದನು. ಅವರಲ್ಲಿ ಕಾಮಗೇತಿ ವಂಶದ ತಿಮ್ಮಣ್ಣ ನಾಯಕನು ಒಬ್ಬನಾಗಿದ್ದನು. ಕಾಲಾನಂತರದಲ್ಲಿ ಇವನ ವಂಶಿಕರು ಡೆಲ್ಲಿಯ ನಾಡ ತಳವಾರರಾದರು. ಆಗ್ಗೆ ಪಟ್ಟದಾನೆಯು ಮದವೇರಿ ಮುಖ್ಯ ಬೀದಿಗಳಲ್ಲಿ ತಿರುಗಾಡುತ್ತಾ ಜನಕಂಟಕವಾಗಿರಲು ನಾಡ ತಳವಾರನು ಆನೆಯ ಮದವನ್ನು ಮರ್ದಿಸಿ ಅದರ ಸೊಂಡಿಲನ್ನು ಹಿಡಿದು ನಾಯಿಯ ಕುನ್ನಿಯನ್ನು ಹಿಡಿದು ತರುವಂತೆ ಹಿಡಿದು ಬಾದಷಹನಿಗೆ ತೋರಿಸಲು, ಆಗ ಸಂತೋಷ ಹೊಂದಿದ ಬಾದಷಹನು ನಾಯಕನ ಶೌರ್ಯಕ್ಕೆ ಮೆಚ್ಚಿ ‘ಮದಕರಿ ನಾಯಕ’ ಎಂಬ ಬಿರುದನ್ನು ದಯಪಾಲಿಸಿದನು. ಮದಿಸಿದ ಆನೆಯ ಗರ್ವವನ್ನು ಭಂಗ ಮಾಡಿದ ಧೀರನೆಂಬ ಅರ್ಥವುಳ್ಳ ಬಿರುದು ಖಿಲ್ಲತ್ತುಗಳನ್ನು ದಯಪಾಲಿಸಿದನು. ವಿಜಯನಗರದ ದಸರಾ ಕಾಲದಲ್ಲಿ “ನಾಡ ತಳವಾರ ವಂಶದವರು ಡೆಲ್ಲಿಯನ್ನು ಬಿಟ್ಟು ಕುರಿ, ಕರು, ಕೋಲಾರಿ ಮುಂತಾದ ಕಂಪಳ ಸಮೇತ ವಲಸೆ ಹೊರಟು ಚಿತ್ರದುರ್ಗ ಜಿಲ್ಲೆಯಲ್ಲಿ ಬಂದು ನೆಲೆಸಿದರು. ತಿಮ್ಮಣ್ಣ ನಾಯಕನು ೧೫೬೮ರಲ್ಲಿ ಚಿತ್ರದುರ್ಗದ ಪಾಳೆಯವನ್ನು ಸ್ಥಾಪಿಸಿದನು”.[೧೩] ಇವನ ತರುವಾಯ ಮಗನಾದ ಓಬಣ್ಣ ನಾಯಕನು ರಸಾಸಿದ್ದರಿಂದ ಅಶೀರ್ವಾದ ಪಡೆದು ಮದಕರಿ ನಾಯಕನೆಂದು ಹೊಗಳಿಸಿಕೊಂಡು ಚಿತ್ರದುರ್ಗದಲ್ಲಿ ಕೋಟೆಯನ್ನು ಕಟ್ಟಿ ಆಳ್ವಿಕೆಯನ್ನು ಆರಂಭಿಸಿದನು. ಈತನ ತರುವಾಯ ಇನ್ನು ಹಲವಾರು ನಾಯಕರು ಚಿತ್ರದುರ್ಗದಲ್ಲಿ ಆಡಳಿತ ನಡೆಸಿದರು. ಅವರುಗಳೆಂದರೆ ಭರಮಣ್ಣನಾಯಕ, ಓಬಣ್ಣನಾಯಕ, ಕಸ್ತೂರಿ ರಂಗಪ್ಪನಾಯಕ, ಲಿಂಗಣ್ಣನಾಯಕ, ಹಿರೇಮದಕರಿನಾಯಕ, ಓಬವ್ವನಾಗತಿ ಮತ್ತು ಕೊನೆಯ ಮದಕರಿನಾಯಕ ಇಲ್ಲಿ ಆಳ್ವಿಕೆ ಮಾಡಿದ ಪ್ರಮುಖರು.

ಕೊನೆಯ ಮದಕರಿನಾಯಕ (ಕ್ರಿ.ಶ. ೧೭೫೪-೧೭೭೯) ಈತನು ಪಟ್ಟಕ್ಕೆ ಬಂದಾಗ ಇವನಿಗೆ ೧೨ ವರ್ಷ ಆಗಿತ್ತು. ಇವನ ಕಾಲದಲ್ಲಿ ಚಿತ್ರದುರ್ಗವು ದಕ್ಷಿಣ ಭಾರತದಲ್ಲಿಯೇ ಪ್ರಸಿದ್ಧಿ ಪಡೆಯಿತು. ಮದಕರಿನಾಯಕನು ಇನ್ನೂ ಚಿಕ್ಕ ಬಾಲಕನು ಎಂಬ ಕಾರಣಕ್ಕೆ ಅಕ್ಕಪಕ್ಕದ ಸಂಸ್ಥಾನದವರು ದುರ್ಗದ ಗಡಿ ಭಾಗದಲ್ಲಿ ದಾಳಿ ಮಾಡಿದರು. ಆದರೆ ದುರ್ಗದ ಸೈನ್ಯ ಅವರನ್ನು ಎದುರಿಸಿ ಕೆಲವು ಗಡಿ ಠಾಣ್ಯಗಳನ್ನು ವಶಪಡಿಸಿಕೊಂಡಿತ್ತು. ಈ ವೇಳೆಗಾಗಲೇ ದಕ್ಷಿಣ ಭಾರತದಲ್ಲಿ ಚಿತ್ರದುರ್ಗವು ಒಂದು ಬಲಿಷ್ಟ ಸಂಸ್ಥಾನವಾಗಿತ್ತು. ಕ್ರಿ.ಶ. ೧೭೭೯ರಲ್ಲಿ ದುರ್ಗ ಹೈದರನ ವಶವಾಯಿತು.

ಕರ್ನಾಟಕದ ಇತಿಹಾಸದಲ್ಲಿ ಚಿತ್ರದುರ್ಗ ನಾಯಕರಿಗೆ ಒಂದು ಗಣ್ಯ ಸ್ಥಾನವಿದೆ. ಇವರ ಬಗ್ಗೆ ಹಲವಾರು ಶಾಸನಗಳು, ಬಖೈರುಗಳು, ಕೈಫಿಯತ್ತುಗಳು, ಜನಪದ ಕಥನಗಳು, ಐತಿಹ್ಯಗಳು,

ಕೋಲಾಟದ ಹಾಡುಗಳು, ಲಭ್ಯವಿವೆ. ನಿರ್ಭಯರಾದ ಈ ಬೇಡ ನಾಯಕರ ಸಾಧನೆಯ ಸ್ಮಾರಕವಾಗಿ ಚಿತ್ರದುರ್ಗದ ಕೋಟೆಯ ಸ್ಮಾರಕಗಳು ಈಗಲೂ ಇವೆ.

ಹೈದರನ ವಶವಾದ ನಂತರ ಟಿಪ್ಪು ಕೆಲವು ದಿನಗಳ ಕಾಲ ಇಲ್ಲಿ ಆಳ್ವಿಕೆ ಮಾಡುತ್ತಾನೆ. ಬ್ರಿಟಿಷರು ಟಿಪ್ಪುವನ್ನು ಶ್ರೀರಂಗಪಟ್ಟಣದ ಯುದ್ಧದಲ್ಲಿ ಸೋಲಿಸಿದ ನಂತರ ಚಿತ್ರದುರ್ಗವು ಬ್ರಿಟಿಷರ ವಶವಾಗುತ್ತದೆ. ನಂತರ ಮೈಸೂರು ಅರಸರು ಈ ಜಿಲ್ಲೆಯ ಫೌಜುದಾರರಾಗುತ್ತಾರೆ. ಮೈಸೂರು ಸಂಸ್ಥಾನದ ಕಮೀಷನರುಗಳ ಆಳ್ವಿಕೆ ಆರಂಭವಾಗುತ್ತದೆ. ಮೈಸೂರು ರಾಜ್ಯದಲ್ಲಿ ನಾಲ್ಕು ವಿಭಾಗಗಳಾಗಿ ಅಸ್ತಿತ್ವಕ್ಕೆ ಬರುತ್ತವೆ. ಅದರಲ್ಲಿ ಚಿತ್ರದುರ್ಗವು ಕೂಡ ಪ್ರತ್ಯೇಕ ವಿಭಾಗವಾಗಿಯೇ ಉಳಿಯುತ್ತದೆ. ಬೆಂಗಳೂರು, ಚಿತ್ರದುರ್ಗ, ಅಷ್ಟಗ್ರಾಮ, ಬಿದನೂರು ಈ ಎಲ್ಲಾ ವಿಭಾಗಗಳು ಕಮೀಷನರ್‌ಗಳ ಆಡಳಿತಕ್ಕೆ ಒಳಪಟ್ಟಿದ್ದವು. ಪ್ರತಿ ವಿಭಾಗವು ಒಬ್ಬೊಬ್ಬ ಸೂಪರಿಂಟೆಂಡೆಂಟಿನ ಅಧೀನದಲ್ಲಿದ್ದವು. ಈ ವಿಭಾಗಗಳು ೧೮೭೯ರಲ್ಲಿ ರದ್ದಾಗಿ, ಚಿತ್ರದುರ್ಗವು ಸ್ವತಂತ್ರ ಜಿಲ್ಲೆಯಾಗಿ ೧೮೮೬ರಲ್ಲಿ ಅಸ್ತಿತ್ವ ಪಡೆಯಿತು.

**೨.೩. ಸಾಂಸ್ಕೃತಿಕ ಹಿನ್ನೆಲೆ**

ಚಿತ್ರದುರ್ಗ ಜಿಲ್ಲೆ ಭೌಗೋಳಿಕ ಹಾಗೂ ಚಾರಿತ್ರಿಕವಾಗಿ ಮಾತ್ರವಲ್ಲ ಸಾಂಸ್ಕೃತಿಕವಾಗಿಯೂ ಸಹ ಅಷ್ಟೇ ಮಹತ್ವವನ್ನು ಪಡೆದಿದೆ. ಈ ಜಿಲ್ಲೆಯಲ್ಲಿ ವಿವಿಧ ಧರ್ಮ, ಸಮುದಾಯ, ಪಂಗಡ, ಕಸುಬುಗಳಿಗೆ ಸೇರಿದ ಸಮುದಾಯಗಳು ಕಂಡುಬರುತ್ತವೆ. ಕುಂಬಾರ, ಕಂಬಾರ, ನೇಕಾರ, ಕ್ಷೌರಿಕ, ಮಡಿವಾಳ, ಬೋವಿ(ಒಡ್ಡರು) ಮೊದಲಾದ ಸಮುದಾಯಗಳು ವೃತ್ತಿ ಕಸುಬುಗಳನ್ನು ಮಾಡಿ ಜೀವನ ಸಾಗಿಸುತ್ತಾರೆ. ಜೊತೆಗೆ ಇವರ ಆಚಾರ-ವಿಚಾರ, ನಂಬಿಕೆ-ಸಂಪ್ರದಾಯಗಳು ತುಂಬಾ ಶ್ರೀಮಂತವಾಗಿದ್ದು ಇಂದಿಗೂ ಉಳಿದುಬಂದಿವೆ. ಅದರಲ್ಲೂ ನನ್ನ ಅಧ್ಯಯನದ ವ್ಯಾಪ್ತಿಯಲ್ಲಿ ಈ ಪರಿಸರದ ಚಿತ್ರದುರ್ಗ, ಮೊಳಕಾಲ್ಮೂರು, ಚಳ್ಳಕೆರೆ, ಹಿರಿಯೂರು ತಾಲ್ಲೂಕುಗಳು ಬುಡಕಟ್ಟು ನೆಲೆಗಳಾಗಿವೆ. ಈ ಬುಡಕಟ್ಟುಗಳು ತಮ್ಮದೇ ಆದ ಅನನ್ಯತೆಯನ್ನು ಉಳಿಸಿಕೊಂಡು ಬಂದಿರುವುದು ಗಮನಾರ್ಹ. ಈ ಪರಿಸರದಲ್ಲಿ ಕಂಡುಬರುವ ಪ್ರಮುಖ ಬುಡಕಟ್ಟುಗಳಾದ ಬೇಡನಾಯಕರು ಮತ್ತು ಕಾಡುಗೊಲ್ಲರು ತಮ್ಮ ಸಂಸ್ಕೃತಿಯನ್ನು ಇಂದಿಗೂ ಕಾಪಾಡಿಕೊಂಡು ಬಂದಿದ್ದಾರೆ. ಆದಿಕರ್ನಾಟಕ, ಕುರುಬ, ಕುಂಚಿಟಿಗ, ಲಂಬಾಣಿ, ಕಿನ್ನರಿಜೋಗಿ, ಉಪ್ಪಾರ ಈ ಸಮುದಾಯಗಳ ನಂಬಿಕೆ, ಆಚರಣೆ, ಸಂಪ್ರದಾಯಗಳು ಇಲ್ಲಿಯ ಸಾಂಸ್ಕೃತಿಕ ಸಂಪತ್ತಿಗೆ ಮೆರಗನ್ನು ನೀಡಿವೆ. ಈ ಎಲ್ಲಾ ಸಮುದಾಯಗಳಲ್ಲಿನ ಸಾಂಸ್ಕೃತಿಕ ಶ್ರೀಮಂತಿಕೆ ಅದ್ವಿತೀಯವಾದುದು.

ಪ್ರಮುಖವಾಗಿ ಈ ಜಿಲ್ಲೆಯಲ್ಲಿ ಬೇಡನಾಯಕರು, ಕಾಡುಗೊಲ್ಲರು ದಟ್ಟವಾಗಿ ಕಂಡುಬರುತ್ತಾರೆ. ಬೇಡ ನಾಯಕರ ಸಾಂಸ್ಕೃತಿಕ ವೀರರಾದ ಗಾದ್ರಿಪಾಲನಾಯಕ, ದಡ್ಡಿಸೂರನಾಯಕ, ಯರಗಟ್ಟ ನಾಯಕ, ಬೊಮ್ಮನಾಯಕ(ಬೊಮ್ಮಂತರಾಜ), ಜಗಳೂರು ಪಾಪನಾಯಕ, ಯರಮಂಚಿನಾಯಕ ಮುಂತಾದ ವೀರರು ನೆಲೆಸಿರುವ ಹಲವು ಸ್ಥಳಗಳು ಈ ಜಿಲ್ಲೆಯಲ್ಲಿವೆ. ಗಾದ್ರಿಪಾಲನಾಯಕನನ್ನು

ಪ್ರತಿನಿಧಿಸುವ ಮಿಂಚೇರಿಗುಡ್ಡ, ಗೊಸಿಕೆರೆ(ವೇದಾವತಿ ನದಿ ತೀರ)ಯಲ್ಲಿದೆ. ಜಗಳೂರು ಪಾಪನಾಯಕನು ನೆಲೆಗೊಂಡಿರುವ ಅಜ್ಜನಗುಡಿ, ಜಗಳೂರು ಕಂಪಳದೇವರಹಟ್ಟಿ ತುಂಬಾ ಪ್ರಮುಖವಾದವುಗಳು. ಗಾದ್ರಿಪಾಲನಾಯಕ ಹುಲಿಯೊಂದಿಗೆ ಹೋರಾಡಿ ಮಡಿದ ರೋಚಕ ಐತಿಹ್ಯ ಈ ಜಿಲ್ಲೆಯಾದ್ಯಾಂತ ಪ್ರಚಲಿತದಲ್ಲಿದೆ. ಜಗಳೂರು ಪಾಪನಾಯಕನ ದೇವಸ್ಥಾನ ಕಂಪಳದೇವರಹಟ್ಟಿಯಲ್ಲಿದೆ. ಇಲ್ಲಿ ವರ್ಷಕ್ಕೊಮ್ಮೆ ಜಾತ್ರೆ ನಡೆಯುತ್ತದೆ. ಇದು ಒಂಬತ್ತು ದಿನಗಳ ಕಾಲ ವಿಜೃಂಭಣೆಯಿಂದ ಜರುಗುತ್ತದೆ. ಈ ಜಾತ್ರೆಯಲ್ಲಿ ಪಾಪನಾಯಕನಿಗೆ ಸಂಬಂಧಿಸಿದಂತೆ ಆಚರಣೆ, ಸಂಪ್ರದಾಯಗಳು ನಡೆಯುತ್ತವೆ. ಈತನಿಗೆ ಸಂಬಂಧಿಸಿದ ಅಲಗು(ಕಠಾರಿ)ಗಳಿವೆ. ಇವುಗಳನ್ನೇ ಪೂಜೆ ಮಾಡುತ್ತಾರೆ. ದಡ್ಡಿಸೂರನಾಯಕ ಈತ ಕೂಡ ದೈವಕ್ಕೇರಿದ್ದಾನೆ. ಹಿರೇಹಳ್ಳಿಯಲ್ಲಿ ಈತನ ಐಕ್ಯ ಸ್ಥಳ ಇದೆ. ಬೊಮ್ಮನಾಯಕ ಈತನ ಸ್ಥಳ 'ಊಟಿ ಕುಂಟೆ'(ಊಟ ಕುಂಟೆ). ಸಮಾಧಿಯಾದುದು ಬುಕಾಂಬೂದಿಯಲ್ಲಿ. ಇಲ್ಲಿ ಪ್ರತಿ ಗುರುವಾರ ಪೂಜೆ ನಡೆಯುತ್ತದೆ. ಈತನು ಮಡಿದ ನಂತರ ದೈವವಾಗಿದ್ದಾನೆ. ಈತನ ದೇವಸ್ಥಾನ ಗೌರಸಮುದ್ರ ಮಾರಮ್ಮ ದೇವಸ್ಥಾನ ಪಕ್ಕದಲ್ಲಿದೆ.

ಚಳ್ಳಕೆರೆ ತಾಲ್ಲೂಕಿನ ನನ್ನಿವಾಳದಲ್ಲಿ ಕಂಡುಬರುವ ಪ್ರಮುಖ ಆಚರಣೆ ಡಿಕ್ಕಿ ಹಬ್ಬ. ನನ್ನಿವಾಳ ಬೇಡರ ಸಾಂಸ್ಕೃತಿಕ ನೆಲೆ. ತಮ್ಮ ಸಂಸ್ಕೃತಿಯನ್ನು ಇಂದಿಗೂ ಉಳಿಸಿಕೊಂಡು ಬಂದಿರುವ ಊರು. ಇಲ್ಲಿಯ ಬಂಗಾರ ದೇವರಿಗೆ ತೆಂಗಿನಕಾಯಿ ಒಡೆಯುವ ಸಂಪ್ರದಾಯವಿಲ್ಲ. ಅತ್ತೆಸೊಸೆಯರು ಒಬ್ಬರಿಗೊಬ್ಬರು ತಲೆ ಘಟಿಸಿಕೊಳ್ಳುವ ಮೂಲಕ ತೆಂಗಿನಕಾಯಿ ಒಡೆಯುವ ಸಾಂಕೇತಿಕ ಕ್ರಿಯೆ ನಡೆಯುತ್ತದೆ. ತಲೆಯನ್ನು ಘಟಿಸಿಕೊಳ್ಳುವ ಸಂದರ್ಭದಲ್ಲಿ ತಲೆನೋವು ಬಂದರೆ ಅದು ಭಕ್ತಿಯಲ್ಲ ಎಂಬುದು ಇವರ ನಂಬಿಕೆ. ಒಂದು ವೇಳೆ ಬರದಿದ್ದರೆ ಅದು ನಿಜವಾದ ಭಕ್ತಿ. ದೇವರ ಹರಕೆಯಾಗಿ ಪರಿಣಮಿಸುತ್ತದೆ.

ಕುದಾಪುರದಲ್ಲಿ ಬೋರೆ(ಭೈರವ) ದೇವರ ಗುಡಿಯಿದೆ. ಇಲ್ಲಿ ವರ್ಷಕ್ಕೊಮ್ಮೆ ಫೆಬ್ರವರಿ-ಮಾರ್ಚ್ ತಿಂಗಳಲ್ಲಿ ಜಾತ್ರೆಯಾಗುತ್ತದೆ. ಭಿನ್ನ ರೀತಿಯಲ್ಲಿ ಹೋತುಮರಿಯನ್ನು ಬಲಿ ಕೊಡುವರು. ಇದನ್ನೇ 'ವಾಸೆ' ಕೊಯ್ಯುವುದು ಎನ್ನುತ್ತಾರೆ. ಇದು ಹಿಂದಿನಿಂದಲೂ ವಾಸೆ ಕೊಯ್ಯುವ ಆಚರಣೆಯಾಗಿ ಉಳಿದುಕೊಂಡು ಬಂದಿದೆ. ಈ ಜಿಲ್ಲೆಯಾದ್ಯಂತ ನೆಲೆಸಿರುವ ಬೇಡ ನಾಯಕ ಸಮುದಾಯದವರು ಆಚರಿಸುವ 'ಗುಗ್ಗರಿಹಬ್ಬ'(ಹುರುಳಿಯಿಂದ ಕೂಡಿದ ಧಾನ್ಯ) ಪ್ರಮುಖ ಹಬ್ಬವಾಗಿದೆ. ಜೊತೆಗೆ ಪ್ರತಿವರ್ಷ ಸುಗ್ಗಿಯ ನಂತರ ಜನವರಿ-ಫೆಬ್ರವರಿ ಮಾಹೆಯಲ್ಲಿ ಆಚರಿಸಲ್ಪಡುವ ಶೂನ್ಯದ ಮಾರಮ್ಮನ ಹಬ್ಬವನ್ನು ಆದಿ ಕರ್ನಾಟಕ ಮತ್ತು ನಾಯಕ ಸಮುದಾಯಗಳು ಒಟ್ಟುಗೂಡಿ ವಿಜೃಂಭಣೆಯಿಂದ ಆಚರಿಸುತ್ತಾರೆ. ಯುಗಾದಿ ಹಬ್ಬದ ಸಂದರ್ಭದಲ್ಲಿ ಬೇಟೆಗೆ ಹೋಗಿ ಬರುವ ಪದ್ಧತಿಯಿದೆ. ಹೀಗೆ ಅನೇಕ ಜನಪದ ಸಂಪ್ರದಾಯಗಳು ಇಂದಿಗೂ ಈ ಜಿಲ್ಲೆಯಲ್ಲಿ ಜೀವಂತವಾಗಿವೆ.

ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಕಂಡುಬರುವ ನುಂಕೆಮಲೆ ಭೈರವನ ಜಾತ್ರೆ, ಕೋಟೆ ಗುಡ್ಡದ ಮಾರಮ್ಮನ ಜಾತ್ರೆ ವಿಶಿಷ್ಟ ಸಂಪ್ರದಾಯಗಳಿಂದ ಕೂಡಿವೆ. ಸಿಡಿ, ಉತ್ಸವ, ಬಲಿ, ಗಾವು, ಮತ್ತಿತರ ಆಚರಣೆಗಳು ನಡೆಯುತ್ತವೆ. ಹಾಗೆಯೇ ಸೂರಮ್ಮನಹಳ್ಳಿಯಲ್ಲಿ ಗಾದ್ರಿಪಾಲ ನಾಯಕನ ಜಾತ್ರೆ ನಡೆಯುತ್ತದೆ. ಇಲ್ಲಿಯ ಅಡವಿಯಲ್ಲಿ ಶ್ರೀಶೈಲಮಲ್ಲಯ್ಯನ ದೇವರೆತ್ತುಗಳ ಗೂಡು(ಹಟ್ಟಿ) ಇದೆ. ಇಲ್ಲಿ ನಡೆಯುವ 'ಸೂರ್ಯನ ಮೊಕ್ಕು', ಒಡಪು(ಬೆಂಕಿ) ಕಾಸು, ಮೀಸಲು, ಕಿಲಾರಿಗಳ ಸಂಪ್ರದಾಯ ವಿಶಿಷ್ಟವಾಗಿದೆ. ಇವರು ಹಲವಾರು ಶತಮಾನಗಳ ಕಾಲ ಅಡವಿಯಲ್ಲಿಯೇ ಪಶುಪಾಲನೆ ಮಾಡುತ್ತ ನೆಲೆನಿಂತಿದ್ದಾರೆ. ಆದಿಮ ಸಂಸ್ಕೃತಿಯನ್ನು ಇವರಲ್ಲಿ ಇಂದಿಗೂ ಕಾಣಬಹುದು. ಇದುವರೆಗೂ ಹಾಲು, ಮೊಸರು, ತುಪ್ಪ, ಗೋಮೂತ್ರ, ಸಗಣೆ ಇವುಗಳನ್ನು ಇವರು ಮಾರುವುದಿಲ್ಲ. ಇವುಗಳನ್ನು ದೈವದ ರೂಪದಲ್ಲಿ ನೋಡುತ್ತಾರೆ. ಹಾಲು, ಮೊಸರು, ಗೋಮೂತ್ರ, ಸಗಣಿ ಇವುಗಳನ್ನು ಪವಿತ್ರವೆಂದು ಭಾವಿಸುತ್ತಾರೆ. ಪಶುದೈವವೇ ಪವಿತ್ರವೆಂಬ ಗೌರವ ಭಾವನೆ ಇವರಲ್ಲಿದೆ. ಈ ಸಮುದಾಯದ ಮೂಲ ಅಸ್ತಿತ್ವವೇ ಈ ದೇವರೆತ್ತುಗಳಲ್ಲಿದೆ. ಇವರ ಗುರುತು, ಚಹರೆಯು, ಬದುಕು ಇವೆ ಆಗಿರುವುದರಿಂದ ಇವುಗಳನ್ನು ಪೂಜಿಸುವುದು ಒಂದು ಸಾಂಸ್ಕೃತಿಕ ಸಂಕೇತದ ಪ್ರಕ್ರಿಯೆ. ಯಾವುದರಿಂದ ತಾವು ಬದುಕು ಕಟ್ಟಿಕೊಂಡಿದ್ದಾರೋ ಅದನ್ನು ಇವರು ಗೌರವಿಸುವರು. ಪಾಲಿಸುವವರು ಮತ್ತು ಇವರ ಅಸ್ತಿತ್ವದ ಮೂಲವೇ ಇದರಲ್ಲಿದೆ. ಹಾಗಾಗಿ ಅಸ್ತಿತ್ವದ ಮೂಲವನ್ನು ಬಿಟ್ಟುಕೊಡುವುದಕ್ಕೆ ಇವರಿಗೆ ಸಾಧ್ಯವಾಗುತ್ತಿಲ್ಲ. ಇವುಗಳನ್ನು ಸಂರಕ್ಷಿಸುವುದು, ಗೌರವಿಸುವುದು, ಪೂಜಿಸುವುದು, ಆರಾಧಿಸುವುದು ಒಂದು ಸಾಂಸ್ಕೃತಿಕ ಸಂಕೇತ ಮಾಡಿಕೊಳ್ಳುವುದು ಸಹಜವಾದ ಒಂದು ಪ್ರಕ್ರಿಯೆಯಾಗಿದೆ.

ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಕಂಡುಬರುವ ಕಂಪಳರಂಗ ಜಾತ್ರೆಯು ವಿಶಿಷ್ಟ ರೀತಿಯಿಂದ ಕೂಡಿದ್ದು, ಬುಡಕಟ್ಟು ಸಂಸ್ಕೃತಿಯನ್ನು ಅನಾವರಣಗೊಳಿಸುವ ಆಚರಣೆಗಳು, ಸಂಪ್ರದಾಯಗಳು ಇಲ್ಲಿ ಕಂಡುಬರುತ್ತವೆ. ಬೇಡನಾಯಕರ ಮೂಲ ನೆಲೆಯಾದ ಕಂಪಳ ಕ್ಷೇತ್ರ ಕರ್ನಾಟಕದ ತಿರುಪತಿಯಿದ್ದಂತೆ. ವೈಷ್ಣವ ಸಂಪ್ರದಾಯದ ಮಹಾಕ್ಷೇತ್ರಗಳಲ್ಲಿ ಇದು ಒಂದು. ಶ್ರೀಶೈಲದಿಂದ ವಲಸೆ ಬಂದ ಬೇಡಕಂಪಳ ಇಲ್ಲೇ ಬೀಡುಬಿಟ್ಟಿತೆಂದು, ನಂತರ ಇಲ್ಲಿಂದ ಚದುರಿತು. ಈ ಚದುರಿದ ಸಮುದಾಯದ ಸಂಸ್ಕೃತಿಯ ಪ್ರತೀಕವಾಗಿ ವರ್ಷಕ್ಕೆ ಎರಡು ಬಾರಿ ಜಾತ್ರೆ ಮಾಡುತ್ತಾರೆ.

ಪಶುಪಾಲಕ ಸಮುದಾಯಗಳಲ್ಲಿ ಕಾಡುಗೊಲ್ಲರು ಪ್ರಮುಖವಾಗಿ ಚಿತ್ರದುರ್ಗ ಪರಿಸರದಲ್ಲಿ ಕಂಡುಬರುತ್ತಾರೆ. ಇವರು ಊರುಗೊಲ್ಲರಿಗಿಂತ ಆಚರಣೆ, ನಂಬಿಕೆ, ಸಂಪ್ರದಾಯಗಳ ವಿಚಾರದಲ್ಲಿ ಭಿನ್ನತೆಯನ್ನು ಹೊಂದಿದ್ದಾರೆ ಹಾಗೂ ಶ್ರೇಷ್ಠತೆಯ ಪರಿಕಲ್ಪನೆಯಿದೆ. ತಳಮೂಲ ಸಂಸ್ಕೃತಿಯನ್ನು ಇವತ್ತಿಗೂ ಕಾಪಾಡಿಕೊಂಡು ಬಂದಿರುವುದರಿಂದ, ಬುಡಕಟ್ಟು ಎಂದು ಕರೆಯುವಂತಹ ಈ ಎಲ್ಲ ವಿಚಾರಗಳನ್ನು ಕಾಣಬಹುದು. ಇವರಲ್ಲಿ ಕಂಡುಬರುವ ಕುಲದೈವಗಳು ಸಮುದಾಯದ

ಸಂಸ್ಕೃತಿ ಮತ್ತು ಆಚರಣೆಗಳನ್ನು ಸಾಂಕೇತಿಸುತ್ತವೆ. ಸಮುದಾಯದ ಮೂಲ ಪುರುಷರನ್ನೇ ತಮ್ಮ ಕುಲದೈವವಾಗಿ ಮಾಡಿಕೊಂಡಿರುವುದು ತಿಳಿಯುತ್ತದೆ. ಚಿತ್ತಯ್ಯ, ಕ್ಯಾತಯ್ಯ, ಪಾತಯ್ಯ ಇತ್ಯಾದಿ ಸಾಂಸ್ಕೃತಿಕ ವೀರರಾಗಿರುವ ಎತ್ತಯ್ಯ, ಜುಂಜಪ್ಪರೂ ಕೂಡಾ ಅಲಗು ದೈವಗಳಾಗಿ ಪೂಜಿಸಿಕೊಳ್ಳುತ್ತಾರೆ. ಈ ದೈವಗಳಿಗೆ ಸೇರುವ ಕುಲಗಳು, ಬೆಡಗುಗಳ ವಿಚಾರದಲ್ಲಿ ಸಾಂಸ್ಕೃತಿಕ ವೈವಿಧ್ಯತೆಯನ್ನು ಕಾಣಬಹುದು. ಕಾಡುಗೊಲ್ಲರಲ್ಲಿ ತಳಮೂಲವಾಗಿ ಚಿತ್ತಮುತ್ತಿ ಮತ್ತು ಚಂದಮುತ್ತಿ ಬೆಡಗುಗಳು ಪ್ರಧಾನವಾಗಿ ಕಂಡುಬರುತ್ತವೆ. ಈ ಮೂಲ ಬೆಡಗುಗಳಿಂದ ಅನೇಕ ಬೆಡಗುಗಳು ಒಡಮೂಡಿದವು. ಇವರಲ್ಲಿ ಸಗೋತ್ರ ವಿವಾಹಕ್ಕೆ ಅವಕಾಶವಿಲ್ಲ. ಮದುವೆ ಸಂದರ್ಭದಲ್ಲಿ ತಾಳಿ(ಮಾಂಗಲ್ಯಧಾರಣೆ)ಯನ್ನು ಕಟ್ಟುವ ಸಂಪ್ರದಾಯವಿಲ್ಲ. ಆದರೆ ವಿಶೇಷವಾಗಿ ವಿಧವಾ ಪದ್ಧತಿಯು ಈ ಸಮುದಾಯದಲ್ಲಿ ಕಾಣುವುದಿಲ್ಲ. ಇಂತಹ ವೈಶಿಷ್ಟ್ಯಪೂರ್ಣವಾದ ಆಚರಣೆಗಳು ಕಾಡುಗೊಲ್ಲರಲ್ಲಿ ಕಂಡುಬರುತ್ತವೆ.

ಈ ಜಿಲ್ಲೆಯ ಪಾಳೆಯಗಾರರನ್ನು ಕುರಿತಂತೆ ಅನೇಕ ಹಾಡು, ಕಥೆ, ಐತಿಹ್ಯಗಳು ಮುಂತಾದವುಗಳು ಪ್ರಚಾರದಲ್ಲಿವೆ. ಅವು ಇಂದಿಗೂ ಇಲ್ಲಿಯ ಜನಮನದಲ್ಲಿ ತುಂಬಿಕೊಂಡಿವೆ. ಈ ಮೇಲೆ ಗುರುತಿಸಿಕೊಂಡ ವಿಶಿಷ್ಟ ಬುಡಕಟ್ಟುಗಳ ಮದುವೆ, ಹುಟ್ಟು - ಸಾವಿಗೆ ಸಂಬಂಧಿಸಿದ ಆಚರಣೆ, ಸಂಪ್ರದಾಯಗಳನ್ನು ಇಂದಿಗೂ ಸಹ ಆಚರಿಸಿಕೊಂಡು ಹೋಗುವ ಪರಿಪಾಠವಿದೆ. ಇವು ತನ್ನದೇ ಆದ ವೈಶಿಷ್ಟ್ಯವನ್ನು ಉಳಿಸಿಕೊಂಡಿವೆ. ಈ ಬುಡಕಟ್ಟು ಸಮುದಾಯಗಳ ಮದುವೆಯಲ್ಲಿ ಬುಡಕಟ್ಟಿನ ಪೂಜಾರಿಯೇ ಮುಖ್ಯನಾಗುತ್ತಾನೆ. ಪುರೋಹಿತ್ಯ ಹಸ್ತಕ್ಷೇಪ ಇಲ್ಲ. ಶಿಷ್ಟ ಸಂಸ್ಕೃತಿಯಲ್ಲಿ ಸತ್ತಾಗ ಅವನ ನೆನಪಿಗೆ ಶಾಸನವೊಂದನ್ನು ನಿಲ್ಲಿಸುತ್ತಾರೆ. ಆದರೆ ಜನಪದ ಸಂಸ್ಕೃತಿಯಲ್ಲಿ ವ್ಯಕ್ತಿಯ ನೆನಪಾಗಿ 'ಅಲಗು' (ಕತ್ತಿ) ಹಾಕಿಸುವುದರಿಂದ ಅದನ್ನು 'ಅಲಗು' ಸಂಸ್ಕೃತಿ ಎನ್ನಬೇಕಾಗುತ್ತದೆ.

ಚಳ್ಳಕೆರೆ ತಾಲ್ಲೂಕಿನಲ್ಲಿ ಕಂಡುಬರುವ ಗೌರಸಮುದ್ರ ಮಾರಮ್ಮ ಕ್ಷೇತ್ರವು ಸಾಂಸ್ಕೃತಿಕವಾಗಿ ತನ್ನದೇ ಆದ ವಿಶಿಷ್ಟತೆಯನ್ನು ಹೊಂದಿದೆ. ಈ ಕ್ಷೇತ್ರದಲ್ಲಿನ ಅತೀತ ಶಕ್ತಿಯ ಕೇಂದ್ರವಾಗಿದೆ. ಸ್ಥಳಪುರಾಣ, ಐತಿಹ್ಯಗಳು ಭಕ್ತಾಧಿಗಳನ್ನು ಆಕರ್ಷಿಸಿದೆ. ಈ ಗ್ರಾಮದ ಅಧಿದೇವತೆ ಮಾರಮ್ಮನಾಗಿದ್ದು ಕಡ್ಡಾಯವೆನ್ನುವಂತೆ ವರ್ಷಕ್ಕೊಮ್ಮೆ ಜಾತ್ರೆ ನಡೆಯುತ್ತದೆ. ಒಂದೇ ತಿಂಗಳಲ್ಲಿ ಎರಡು ಬಾರಿ ಜಾತ್ರೆಯಾಗುವುದು ವಿಶೇಷ. ಚಿತ್ರದುರ್ಗ ಜಿಲ್ಲೆಯಲ್ಲಿ ಅತಿದೊಡ್ಡ ಜಾತ್ರೆ, ಈ ಜಾತ್ರೆ ಸಂದರ್ಭದಲ್ಲಿ ಪೂಜೆ, ಹರಕೆ, ಬಲಿ, ನೈವೇದ್ಯ, ಸಿಡಿ ಈ ದೇವತೆಗೆ ಸಲ್ಲುತ್ತದೆ. ಗೌರಸಮುದ್ರ ಜಾತ್ರೆಗೆ ಹರಕೆ, ಬಲಿ ಸಾಮೂಹಿಕವಾಗಿ ನಡೆಯುವಂಥದ್ದು. ಅದು ಊರೊಟ್ಟಿನ ಕಾರ್ಯ. ಆಯಗಾರರು ಪಾಲ್ಗೊಳ್ಳುವರು. ಆಯಗಾರರ ಸಹಕಾರವಿಲ್ಲದೆ ಈ ಜಾತ್ರೆಯ ಯಾವ ಆಚರಣೆಯು ನೆರವೇರುವುದಿಲ್ಲ. ಈ ಜಾತ್ರೆಗೆ ಸಮುದಾಯ, ಮತ, ಭೇದವಿಲ್ಲದೆ ಭಕ್ತಾಧಿಗಳು ಭಾಗವಹಿಸುತ್ತಾರೆ. ದಾವಣಗೆರೆ, ಶಿವಮೊಗ್ಗ, ತುಮಕೂರು, ಬೆಂಗಳೂರು, ಬಳ್ಳಾರಿ, ಕೋಲಾರ, ಆಂಧ್ರಪ್ರದೇಶದಿಂದ

ಸಹಸ್ರಾರು ಜನರು ಈ ಜಾತ್ರೆಗೆ ಸೇರುವರು. ಚಿತ್ರದುರ್ಗ ಜಿಲ್ಲೆಯಾದ್ಯಂತ ಪ್ರತಿಯೊಂದು ಗ್ರಾಮ, ಹಟ್ಟಿಗಳಲ್ಲಿ ಗೌರಸಮುದ್ರ ಮಾರಮ್ಮನ ಹೆಸರಿನಲ್ಲಿ ಗುಡಿಗಳಿವೆ. ಈ ಮಾರಮ್ಮನ ಹೆಸರಿನ ಸಾವಿರಾರು ಜನರು ಮಾರಮ್ಮ, ಮಾರಣ್ಣ, ಮಾರೇಶ, ಮಾರಕ್ಕ, ಮಾರಪ್ಪ ಇತ್ಯಾದಿ ಹೆಸರುಗಳನ್ನು ಇಟ್ಟುಕೊಂಡಿದ್ದಾರೆ.

ಬೇರೆಲ್ಲ ಗ್ರಾಮದೇವತೆಗಳಿಗಿಂತ ಭಿನ್ನ ಕತೆಯನ್ನು ಹೊಂದಿರುವ ಈಕೆಯ ಚರಿತ್ರೆ ಕುತೂಹಲಕರ. 'ತುಮ್ಮಲ್ಲಿ'ನಲ್ಲಿ ಹುತ್ತದ ರೂಪದಲ್ಲಿ ಪೂಜೆಗೊಳ್ಳುವ ಈಕೆ ಮಧ್ಯಾಹ್ನದ ಮಾರಮ್ಮ ಎಂದು ಪ್ರಸಿದ್ಧಳಾಗಿದ್ದಾಳೆ.

ಚಳ್ಳಕೆರೆ ತಾಲ್ಲೂಕಿನಲ್ಲಿ ಬರುವ ತಿಪ್ಪೇಸ್ವಾಮಿ ನೆಲೆಸಿರುವ ನಾಯಕನಹಟ್ಟಿ ಧಾರ್ಮಿಕ ನೆಲೆಯಾಗಿದೆ. ಪ್ರತಿವರ್ಷ ಮಾರ್ಚ್ ತಿಂಗಳಲ್ಲಿ ಜಾತ್ರೆ ನಡೆಯುತ್ತದೆ. ಈ ಜಾತ್ರೆಗೆ ಎಲ್ಲಾ ಸಮುದಾಯದವರು ಇಲ್ಲಿ ಭಾಗವಹಿಸುತ್ತಾರೆ. ರಥಕ್ಕೆ ಬಾಳೆಹಣ್ಣು ತೂರುವುದು, ಕೊಬ್ಬರಿ ಸುಡುವ ಆಚರಣೆಗಳು ಭಕ್ತರ ಇಷ್ಟಾರ್ಥವನ್ನು ಸಿದ್ಧಿಸುವ ನಂಬಿಕೆಗಳಾಗಿವೆ. ತಿಪ್ಪೇಸ್ವಾಮಿಯ ಬಗೆಗೆ ಅನೇಕ ಪವಾಡ, ಕಥೆ, ಗೀತೆಗಳು ಪ್ರಚಾರದಲ್ಲಿವೆ.

ಈ ಜಿಲ್ಲೆಯಾದ್ಯಂತ ಯುಗಾದಿಯನ್ನು ಮೂರು ದಿನಗಳ ಕಾಲ ಆಚರಿಸುತ್ತಾರೆ. ಈ ಸಂದರ್ಭದಲ್ಲಿ ಹಬ್ಬದ ಎರಡನೇ ದಿನದಿಂದ ಆರಂಭವಾದ ಅನೇಕ ರೀತಿಯ ಕಲೆಗಳು ಹಂಪಿ ಹುಣ್ಣಿಮೆಯವರೆಗೂ ಜರುಗುತ್ತವೆ. ಅದರಲ್ಲೂ ಕೋಲಾಟ ತನ್ನದೇ ಆದ ವೈಶಿಷ್ಟ್ಯದಿಂದ ಕೂಡಿದೆ. ನಾಯಕ, ಗೊಲ್ಲರು, ಮಾದಿಗ ಸಮುದಾಯದವರು ಸೇರಿದಂತೆ ಇನ್ನೂ ಹಲವರು ನಡೆಸಿಕೊಡುತ್ತಾರೆ. ಇಲ್ಲಿ ವೈವಿಧ್ಯಮಯ ಕೋಲನ್ನು ಹಾಕುವ ಚತುರರು ಇಂದಿಗೂ ಉಂಟು. ಈ ಕೋಲಾಟ ಪದಗಳಲ್ಲಿ ಕನ್ನಡ, ತೆಲುಗು ಮಿಶ್ರಣವಿದೆ. ಇಲ್ಲಿ ಕೋಲಾಟದಲ್ಲಿ ನಾಯಕ, ಮಾದಿಗ ಸಮುದಾಯದ ಮಹಿಳೆಯರು ಭಾಗವಹಿಸುವುದನ್ನು ಕಾಣಬಹುದು. ಈ ಜಿಲ್ಲೆಯ ಉಳಿದಂತೆ ಹೊಸದುರ್ಗ, ಹೊಳಲ್ಕೆರೆ ಮೊದಲಾದ ಪ್ರದೇಶಗಳಲ್ಲಿ ವೀರಗಾಸೆ, ನಂದಿಕೋಲು, ವೃತ್ತಿಗಾಯಕ ಪರಂಪರೆಯ ಅಸಾದಿಗಳು ಕಂಡುಬರುತ್ತಾರೆ. ಈ ಭಾಗದಲ್ಲಿ ಪೀರಲಹಬ್ಬ(ಮೊಹರಂ) ತುಂಬಾ ಮುಖ್ಯವಾಗಿದೆ. ಚಳ್ಳಕೆರೆ ತಾಲ್ಲೂಕಿನ ಮುಷ್ಟಲಗುಮ್ಮಿ ಗ್ರಾಮದಲ್ಲಿ ಮುಸ್ಲಿಂ ಒಂದೇ ಮನೆಯಿದ್ದರೂ, ಈ ಗ್ರಾಮದ ಎಲ್ಲಾ ಸಮುದಾಯದವರು ಸೇರಿ ಮೊಹರಂ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ.

ಜನಪದ ಇತಿಹಾಸಕಾರರೆಂದು ಕರೆಯಿಸಿಕೊಂಡ ಕಿನ್ನರಿ ಜೋಗಿಗಳು, ಬುಡುಬುಡಿಕೆಯವರು, ಮೊಂಡರು, ಕೊಂಡ ಮಾಮಗಳು, ಎಣ್ಣೆ ಜೋಗಿಗಳು, ಕಿಳ್ಳೇಕ್ಯಾತರು ಅಲ್ಲಲ್ಲಿ ಕಾಣಿಸಿಗುತ್ತಾರೆ. ಅಪರೂಪಕ್ಕೊಮ್ಮೆ ಕೋಲೆಬಸವನವರು ಕಂಡುಬರುತ್ತಾರೆ. ಕಿನ್ನರಿ ಜೋಗಿಗಳು ಪಾಂಡವರ ಚರಿತ್ರೆಯನ್ನು ಹಾಡುತ್ತಾ, ಊರೂರು ಅಲೆಯುತ್ತ ತಮ್ಮ ಪರಂಪರೆಯನ್ನು ಉಳಿಸಿಕೊಂಡು ಬರುತ್ತಿದ್ದಾರೆ. ಬುಡುಬುಡಕೆಯವರು ವರ್ಷಕ್ಕೊಮ್ಮೆ ಈ ಪರಿಸರದಲ್ಲಿ ಊರಾಡುವುದು

ಕಂಡುಬರುತ್ತದೆ. ಈ ಜಿಲ್ಲೆಯ ಮತ್ತೊಂದು ಸಂಪ್ರದಾಯ ಜೋಕುಮಾರ. ಜೋಕುಮಾರನನ್ನು ಪುಟ್ಟಿಯಲ್ಲಿ ಹೊತ್ತುಕೊಂಡು ಊರಲ್ಲಿ ತಿರುಗುವ ಸಂಪ್ರದಾಯ ಇಂದಿಗೂ ನಡೆಯುತ್ತದೆ. ಹುಲಿವೇಷ, ಅಲಾವಿಕುಣಿತ, ಮರಗಾಲು ಕುಣಿತಗಳು ಇಂದು ಪ್ರಮಾಣದಲ್ಲಿ ಕಡಿಮೆಯಾದರೂ ಅಲ್ಲಲ್ಲಿ ಮುಂದುವರೆದಿವೆ. ಜಿಲ್ಲೆಯಲ್ಲಿನ 'ಖಾಸಬೇಡ'ರ ಪಡೆಯಂತೂ ಅತ್ಯಂತ ಪ್ರಸಿದ್ಧಿ ಪಡೆದಿದೆ. ಈ ಕಲೆ ನಾಡಿನ ಅನೇಕ ಭಾಗಗಳಲ್ಲಿ ಪ್ರದರ್ಶನಗಳನ್ನು ನೀಡಿ ಆಧುನಿಕತೆಗೆ ಜಗ್ಗದೆ ಬದಲಾವಣೆಗೂ ಒಳಗಾಗದೇ ಅನನ್ಯತೆಯನ್ನು ಉಳಿಸಿಕೊಂಡು ಮುಂದುವರೆದಿದೆ.

ಸ್ತ್ರೀ ಪ್ರಧಾನವಾದ 'ಗೌರಿ ಜಾತ್ರೆ ದೊಡ್ಡ ಉಳ್ಳಾರ್ತಿ' ಗ್ರಾಮದಲ್ಲಿ ನಡೆಯುತ್ತದೆ. ಗೌರಿದೇವಿಗೆ ಉರುಳು ಮತ್ತು ಆರತಿ ಸೇವೆ ಅತಿ ಪ್ರೀತಿಯದಾಗಿರುವುದರಿಂದಲೇ ಆ ಗ್ರಾಮಕ್ಕೆ 'ಉರುಳು ಆರತಿ-ಉರುಳಾರತಿ-ಉಳ್ಳಾರ್ತಿ' ಎಂಬ ಹೆಸರು ಬರಲು ಐತಿಹ್ಯವೊಂದಿದೆ. ಚಳ್ಳಕೆರೆಯ ಚಳ್ಳಕೇರಮ್ಮನ ಜಾತ್ರೆಯಲ್ಲಿ 'ತಾಳಿಭಾಗ್ಯ' ಕೊಡುವ ಸಂಪ್ರದಾಯ ವಿಶಿಷ್ಟವಾಗಿದೆ. ಚಿತ್ರದುರ್ಗದ ಪಾಳೆಯಗಾರರ ವಂಶಸ್ಥರು ಇಂದಿಗೂ ಪಾಲಿಸಿಕೊಂಡು ಬರುತ್ತಿದ್ದಾರೆ.

**ಕೊನೆ ಟಿಪ್ಪಣಿಗಳು**

೧. **ಚಿತ್ರದುರ್ಗ ಜಿಲ್ಲಾ ಅಂಕಿ-ಅಂಶಗಳ ನೋಟ,** ೨೦೧೩-೧೪.

೨. ನಂಜಣ್ಣನವರ, **ಎನ್.ಎಸ್. ಭೂಗೋಳ ಸಂಗಾತಿ,** ೨೦೦೩, ಪು. ೨.

೩. ಕೃಷ್ಣಮೂರ್ತಿ ಹನೂರು, **ಮ್ಯಾಸಬೇಡರು,** ೨೦೦೯, ಪು. ೫.

೪. ಗಿರಿಜಾ ಟಿ., **ಚಿತ್ರದುರ್ಗ ಜಿಲ್ಲಾ ದರ್ಶಿನಿ,** ೧೯೯೧, ಪು. ೩.

೫. ಅದೇ, ಪು. ೮.

೬. **ಕರ್ನಾಟಕದ ಪರಂಪರೆ, ಭಾಗ-೧(ಚಾರಿತ್ರಿಕಯುಗ),** ೨೦೦೬, ಪು. ೧೧೭.

೭. ಶ್ರೀನಿವಾಸ ಎಂ.ವಿ., ಲಕ್ಷ್ಮಣ್ ತೆಲಗಾವಿ(ಸಂ), **ಚಂದ್ರವಳ್ಳಿ(ಜಿಲ್ಲಾ ಇತಿಹಾಸ ಸಂಶೋಧನಾ ಮಂಡಳಿ, ಚಿತ್ರದುರ್ಗ),** ಪು. ೨.

೮. ಎ.ಕ.ಸಂ. ೧೧, **ಮೊಳಕಾಲ್ಮೂರು ಶಾಸನ ಸಂಪುಟ,** ಪು. ೧೦.

೯. **Epigraphia Carnatica-XI, 1903, Challakere,** ಪು. ೩೪.

೧೦. ಎ.ಕ.ಸಂ. XI, ಸಂಖ್ಯೆ-೩೯, ಹಿರಿಯೂರು, ಪು. ೭೦.

೧೧. **Epigraphia Carnatica-XI, 1903, Challakere,** ಪು. ೨-೩.

೧೨. ಗಿರಿಜಾ ಟಿ., ೧೯೯೧, **ಚಿತ್ರದುರ್ಗ ಜಿಲ್ಲಾ ದರ್ಶಿನಿ,** ಪು. ೨೪೭.

೧೩. **ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು,** ೧೯೭೭, ಪು. ೧೧, ೧೨.



ಅಧ್ಯಾಯ : ಮೂರು

# ಐತಿಹ್ಯ ಅರ್ಥ, ಸ್ವರೂಪ, ಪದನಿಷ್ಪತ್ತಿ, ವ್ಯಾಖ್ಯಾನ ಮತ್ತು ವರ್ಗೀಕರಣ

೩.೧. ಐತಿಹ್ಯ ಪದನಿಷ್ಪತ್ತಿ
೩.೨. ಐತಿಹ್ಯ ವ್ಯಾಖ್ಯಾನ
೩.೩. ಐತಿಹ್ಯಗಳ ವರ್ಗೀಕರಣ

## ಅಧ್ಯಾಯ : ಮೂರು

# ಐತಿಹ್ಯದ ಅರ್ಥ, ಸ್ವರೂಪ, ಪದ ನಿಷ್ಪತ್ತಿ ಮತ್ತು ವರ್ಗೀಕರಣ

ಒಂದು ನಾಡಿನ ಜನ ಜೀವನದ ಅನುಭವದ ಮೊತ್ತವನ್ನು ಸಾಮಾನ್ಯವಾಗಿ ಜಾನಪದ ಎಂದು ಕರೆಯಲಾಗುತ್ತದೆ. ಜನಪದ ಸಾಹಿತ್ಯವು ಜಾನಪದದ ಒಂದು ಅಂಗವಾಗಿದೆ. ಜನಪದ ಸಾಹಿತ್ಯದ ಬಹುಮುಖ್ಯವಾದ ಪ್ರಕಾರಗಳಲ್ಲಿ ಐತಿಹ್ಯವು ಒಂದು. ಜನಪದರ ಅನುಭವದ ಸಂಪತ್ತಿನ ಹಿನ್ನೆಲೆಯಲ್ಲಿ ರೂಪುಗೊಂಡಿರುವ ಈ ಜ್ಞಾನನಿಧಿಯಲ್ಲಿ ಒಂದು ನಾಡಿನ ಮೌಲ್ಯ, ವಿವೇಕ ಮತ್ತು ಆದರ್ಶಗಳು ಐತಿಹ್ಯದಲ್ಲಿ ಅಡಗಿರುತ್ತವೆ. ಹೀಗೆ ಐತಿಹ್ಯಗಳನ್ನು ಅಧ್ಯಯನ ಮಾಡುವುದರಿಂದ ಆ ಕಾಲದ ಸಂಸ್ಕೃತಿಯನ್ನರಿಯಲು ಸಾಧ್ಯ. ಈ ಐತಿಹ್ಯಗಳ ಸೃಷ್ಟಿಕರ್ತರು ಯಾರು? ಹೇಗೆ ಹುಟ್ಟಿದವು? ಎಂಬ ಪ್ರಶ್ನೆಗೆ ಖಚಿತವಾದ ಉತ್ತರ ಹೇಳುವುದು ಕಷ್ಟ. ಬರಹವಿಲ್ಲದ ಸಮಾಜದಲ್ಲಿ ಕಥೆಯ ನಿರೂಪಣೆ ಮೂಲಕ ಹಲವು ತಲೆಮಾರುಗಳಿಂದ ಬಾಯಿಪಾಠದ ಮೂಲಕ ಹರಿದು ಬರುವಾಗ ಐತಿಹ್ಯ ರೂಪುಗೊಂಡಿರಬೇಕು. ಇವುಗಳಿಗೆ ಲಿಖಿತ ಆಧಾರಗಳು ಇರುವುದಿಲ್ಲ. ಇವು ಕಂಠಸ್ಥ ಪರಂಪರೆಯಲ್ಲಿ ಬೆಳೆಯುತ್ತ ಬಂದಿವೆ. ಆದರೆ ಐತಿಹ್ಯದಲ್ಲಿ ಕಥೆಗೆ ಕಾರಣವಾದ ವಸ್ತು ಮೊದಲೇ ವಾಸ್ತವ ಪ್ರಪಂಚದಲ್ಲಿ ಇರುತ್ತದೆ. ಯಾವುದೇ ಒಂದು ನಿರ್ದಿಷ್ಟತೆಗೆ ಇಡೀ ಕತೆಯೇ ಬದ್ಧವಾಗಿರುತ್ತದೆ.

ಐತಿಹ್ಯ ಕಾಲ್ಪನಿಕತೆಯ ಅಲ್ಪಮಟ್ಟಿನ ಸತ್ಯವನ್ನು ತನ್ನಲ್ಲಿ ಹುದುಗಿಸಿಟ್ಟುಕೊಂಡಿರುತ್ತದೆ. ಒಂದು ಸಂಗತಿಯನ್ನು ವಿವರಿಸುತ್ತಾ ಅದಕ್ಕೆ ಸಮರ್ಥನೆಯಾಗಿ ಸಾಕ್ಷಿ ತೋರಿಸುವುದೇ ಐತಿಹ್ಯವನ್ನು ಗುರುತಿಸಬಹುದಾದ ಅಂಶ. ಈ ವಿಷಯವನ್ನು ಕೂಡಲೇ ನಿಜ ಅಥವಾ ಸುಳ್ಳು ಎಂದೂ ತಿರಸ್ಕರಿಸಲಾಗದು. ಇಂತಹ ಸಂಗತಿಗಳು ಚರಿತ್ರೆ, ಪುರಾಣ, ವ್ಯಕ್ತಿ ಚರಿತ್ರೆ ಅಥವಾ ಸ್ಥಳ ಚರಿತ್ರೆಗೆ ಸಂಬಂಧಿಸಿದ ಸಾಮಾನ್ಯ ವಿಷಯಗಳು. ಜನಪದರು ನಂಬಿದ ಇತಿಹಾಸವೇ ಐತಿಹ್ಯ. ಹಿಂದೆ ನಡೆಯಿತೆಂದು ಹೇಳಲಾಗುವ ಘಟನೆಗಳ ಸುತ್ತ ಹುಟ್ಟಿಕೊಳ್ಳುವ ಕತೆಗಳೇ ಐತಿಹ್ಯಗಳು. "ಐತಿಹ್ಯ ಸರಳ ರೂಪದಲ್ಲಿದ್ದು ಒಂದು ನಿರ್ದಿಷ್ಟ ವ್ಯಕ್ತಿ, ಸ್ಥಳ ಅಥವಾ ಘಟನೆಗಳ ಹಿನ್ನೆಲೆಯಲ್ಲಿ ಹುಟ್ಟಿಕೊಳ್ಳುವ ಕತೆಗಳನ್ನು ಐತಿಹ್ಯ ಎನ್ನುತ್ತೇವೆ".[೧] ಆದರೆ ಈ ಮೇಲಿನ ಸಂಗತಿಯನ್ನು ಗಮನಿಸಿದರೆ ವ್ಯಕ್ತಿ, ಸ್ಥಳ, ಘಟನೆಗೆ ಸಂಬಂಧಿಸಿದ ವಸ್ತು

ಐತಿಹ್ಯವಾಗಲಾರದು. ಅವು ಸಾಮಾನ್ಯ ಜೀವನಕ್ಕಿಂತ ಭಿನ್ನವಾಗಿದ್ದು, ವಿಶಿಷ್ಟತೆಯಿಂದ ಕೂಡಿರಬೇಕು. ಅವುಗಳಲ್ಲಿ ಅಸಮಾನ್ಯ ಅಂಶವಿರಬೇಕು. ಸಾಮಾನ್ಯವಾದುದು ಐತಿಹ್ಯಕ್ಕೆ ವಸ್ತುವಾಗಲಾರದು. ಸಾಮಾನ್ಯ ವಿಷಯಗಳಿಗಿಂತ ಅಸಮಾನ್ಯವಾಗಿರಬೇಕು. ಪುರಾಣ ವ್ಯಕ್ತಿಗಳೆಲ್ಲರೂ ಸಾಮಾನ್ಯರಿಗಿಂತ ವಿಶಿಷ್ಟರು. ಹಾಗಾಗಿ ಅಸಾಮಾನ್ಯವಾಗಿರುವುದರಿಂದಲೆ ಅವರಿಗೆ ಐತಿಹ್ಯದಲ್ಲಿ ವಿಶೇಷ ಸ್ಥಾನವಿದೆ.

ಐತಿಹ್ಯದ ವೈಶಿಷ್ಟ್ಯವೆಂದರೆ ಅದು ಹಿಂದೆ ಒಮ್ಮೆ ವಾಸ್ತವವಾಗಿ ನಡೆದ ಘಟನೆಯ ನಿರೂಪಣೆ ಹೌದೆಂಬುದಕ್ಕೆ ಕುರುಹುಗಳಾಗಿ ಜನಪದರು ಭೌತಿಕ ಆಧಾರಗಳನ್ನು ತೋರಿಸುವರು. ಅವು ಹೀಗಿವೆ. ಪಳೆಯುಳಿಕೆಗಳು, ಸ್ಥಳಗಳು, ಬೆಟ್ಟಗುಡ್ಡ-ಹೆಬ್ಬಂಡೆ, ಕೆರೆ-ನದಿ, ಮರಡಿ, ಸಸ್ಯ ಇತ್ಯಾದಿ. ಹಿಂದಿನ ಕಾಲದಲ್ಲಿ ನೆಲೆಸಿದ ಮೊದಲ ಸ್ಥಳ ಅವರು ಉಪಯೋಗಿಸುತ್ತಿದ್ದ ಉಡುಗೆ-ತೊಡುಗೆ, ವೃತ್ತಿ ಬದುಕು, ವೀರ ಪುರುಷರು ಬಳಸಿದ ವಸ್ತು ಸಾಮಗ್ರಿಗಳು ಮತ್ತು ಸ್ಥಳ ಪುರಾಣ, ಗಾದೆ, ಒಗಟು, ಹಾಡು, ನುಡಿಗಟ್ಟು, ನಂಬಿಕೆ, ಆಚರಣೆ ಇನ್ನೂ ಮುಂತಾದವು ಐತಿಹ್ಯಗಳ ಕುರುಹುಗಳಾಗಿ ಕಂಡುಬರುತ್ತವೆ. ಈ ವಸ್ತು ವಿಶೇಷಗಳು ಮೊದಲೆ ಇದ್ದು, ನಂತರ ಅವುಗಳ ಮೇಲೆ ಐತಿಹ್ಯಗಳು ಸೃಷ್ಟಿಯಾದವೋ? ಅಥವಾ ನಿರ್ದಿಷ್ಟ ಐತಿಹ್ಯಗಳೇ ಮೊದಲಿದ್ದು ಅವುಗಳ ಸುತ್ತ ಕಥೆಯನ್ನು ಹೆಣೆಯಲ್ಪಟ್ಟಿದ್ದಾರೋ ಎಂಬುದನ್ನು ತಿಳಿಯುವುದು. ಹೀಗೆ ಇವೆರೆಡು ಒಂದೇ ಕಾಲಮಾನದಲ್ಲಿ ಅಸ್ತಿತ್ವವನ್ನು ಪಡೆದುಕೊಂಡವು ಎಂಬುದರ ಕುರಿತು ಚರ್ಚಿಸುವುದು. ಜನಪದರು ಬೆರಳು ಮಾಡಿ ತೋರಿಸುವ ಆಧಾರಕ್ಕೂ ನಾವು ಕೇಳಿದ ಐತಿಹ್ಯಕ್ಕೂ ಸಂಬಂಧ ಇರಬೇಕು. ಆಗ ಮಾತ್ರ ಒಂದು ಬಗೆಯ ಸಮಕಾಲೀನತೆಯಿರುತ್ತದೆ. ಕುರುಹುಗಳು ಮೊದಲಿದ್ದು ಅವುಗಳಿಗೆ ಸರಿ ಹೊಂದುವಂತೆ ಕತೆಗಳನ್ನು ಕಟ್ಟಿರುವುದು ಸ್ವಾಭಾವಿಕ. ಯಾವುದೇ ಅಸಾಮಾನ್ಯವಾದ ವಸ್ತು ಪ್ರಕೃತಿಯ ಮೇಲೆ ಮನುಷ್ಯನಿಗೆ ಕಾಣುವುದು. ಅದು ಅವನ ಗಮನ ಸೆಳೆಯುತ್ತದೆ. ಅದು ಏನು, ಹೇಗೆ ಎಂದು ಅವಲೋಕಿಸಿ ನೋಡುವ ಕುತೂಹಲ ಪ್ರಜ್ಞೆ ಮೂಡುವುದು ಸಹಜ ಗುಣ. ಅದಕ್ಕೆ ಆಕರ್ಷಣೆಯಾಗಿ, ಪ್ರತಿಭಾವಂತ ವ್ಯಕ್ತಿಯೊಬ್ಬನು ಕಥೆಯನ್ನು ಹೇಳುತ್ತಾ ಹೋಗುತ್ತಿರಬಹುದು. ಇಂತಹ ವಿಶಿಷ್ಟ ವಸ್ತುವಿಗೆ ಸಂಬಂಧಿಸಿದ ಘಟನೆ ವಾಸ್ತವದಲ್ಲಿ ಬೇರೆ ಇರಬಹುದು. ಇಲ್ಲಿ ಐತಿಹ್ಯವು ಅದಕ್ಕಿಂತ ಭಿನ್ನರೂಪದಲ್ಲಿ ಬೆಳೆದು ಬಂದಿರಬಹುದು.

ಜನಪದರ ಮೌಖಿಕ ಪರಂಪರೆಯಲ್ಲಿ ಐತಿಹ್ಯಗಳು ನಂಬಿಕೆ ಮತ್ತು ಸಂಪ್ರದಾಯದಂತೆ ಉಳಿದುಕೊಂಡು ಬಂದಿವೆ. ಈ ಐತಿಹ್ಯಗಳಲ್ಲಿ ಹಲವಾರು ತಲೆಮಾರುಗಳ ಕ್ರೋಢೀಕರಣವಿದೆ ಹಾಗೂ ತಲೆಮಾರುಗಳನ್ನು ವರ್ತಮಾನವನ್ನು ಬೆಸೆದುಕೊಂಡು ವಾಸ್ತವ್ಯಕ್ಕೆ ಹತ್ತಿರವೆಂಬಂತೆ ಜನಪದರಲ್ಲಿ ಅವ್ಯಾಹತವಾಗಿವೆ.

ಸ್ವಾಭಾವಿಕವಾಗಿರುವ ಭೌತಿಕ ವಸ್ತುಗಳು ಮನುಷ್ಯನ ಪರಂಪರೆಯನ್ನು ಹೇಳುವಂತಹ ಕುರುಹುಗಳು ಜನಪದರಲ್ಲಿ ಪೂಜ್ಯನೀಯ ಸ್ಥಾನವನ್ನು ಪಡೆದುಕೊಂಡಿವೆ. ಕಲ್ಲು, ಬಂಡೆ,

ಮರ, ನೀರು, (ಕೆರೆ-ಬಾವಿ) ಇತ್ಯಾದಿ ಎಂಬಂತೆ ಮನುಷ್ಯನ ಬದುಕಿನ ಒಂದು ಘಟನಾವಳಿಯನ್ನು ವಿವರಿಸುತ್ತವೆ. ಅಲ್ಲದೆ ಸಾಂಸ್ಕೃತಿಕ ಸ್ಥಾನವನ್ನು ಪಡೆದುಕೊಂಡಿರುವ ಈ ಭೌತಿಕ ವಸ್ತುವಿನೊಂದಿಗೆ ಜನಪದರು ಅವಿನಾಭಾವ ಸಂಬಂಧವಿರಿಸಿಕೊಂಡು ಬದುಕುತ್ತಿದ್ದಾರೆ. ಹಾಗಾಗಿ ಭೌತಿಕವಸ್ತು-ಮಾನವನ(ಪ್ರೇಮ ತುಂಬಿದ) ಬದುಕು, ಪರಸ್ಪರ ಸಂಬಂಧ ಪ್ರಕೃತಿಯ ಬಗ್ಗೆಯ ಕಾಳಜಿ ತಾತ್ವಿಕತೆ, ವೈಚಾರಕತೆಯ ಹಿನ್ನೆಲೆ ಇದ್ದೇ ಇದೆ.

ಒಟ್ಟಾರೆ ಹೇಳುವುದಾದರೆ ನಮ್ಮ ಜನಪದರು ಕೇಳಿದ, ನೋಡಿದ ಸುದ್ದಿಯೊಂದು ಕಂಠಸ್ಥ ಪರಂಪರೆಯಿಂದ ಬರುವಾಗ ಜನರ ಬಾಯಿಂದ ಬಾಯಿಗೆ, ಕಿವಿಯಿಂದ ಕಿವಿಗೆ ಹರಿದು ಬರುವಾಗ ಹಲವಾರು ಅಂಶಗಳನ್ನು ಕಳೆದುಕೊಳ್ಳುತ್ತ ಹಾಗೂ ಹಲವಾರು ಅಂಶಗಳು ಸೇರ್ಪಡಿಸಿಕೊಳ್ಳುತ್ತವೆ. ಗದ್ಯ ನಿರೂಪಣೆಯಾಗಿ ಐತಿಹ್ಯಗಳು ಜನಪದರಲ್ಲಿ ಅಚ್ಚಳಿಯದೆ ಉಳಿದಿವೆ.

ಕಥೆ, ಐತಿಹ್ಯ ಮತ್ತು ಪುರಾಣಗಳು ಜನಪದ ಗದ್ಯ ಕಥನದಲ್ಲಿ ಸಮಾವೇಶಗೊಳ್ಳುತ್ತವೆ. ಶಬ್ದ ಸಾಮ್ಯ ಮತ್ತು ಅರ್ಥ ಕಲ್ಪನೆಗಳೆರಡರ ದೃಷ್ಟಿಯಿಂದಲೂ ಐತಿಹ್ಯಕ್ಕೆ ಇತಿಹಾಸದೊಂದಿಗೆ ಸಂಬಂಧ ಕಲ್ಪಿಸಲಾಗುತ್ತದೆ. ಅದರಂತೆ ವ್ಯಕ್ತಿ, ವಸ್ತು ಅಥವಾ ಸ್ಥಳಕ್ಕೆ ಸಂಬಂಧಿಸಿದಂತೆ, ಯಾವುದೋ ಒಂದು ಕಾಲದಲ್ಲಿ ನಡೆದಿರಬಹುದಾದ ಘಟನೆಯೊಂದರ ನಿರೂಪಣೆಯೇ ಐತಿಹ್ಯವೆನಿಸುತ್ತದೆ. ಅಂದರೆ ಇದು ಒಂದು ಮೌಖಿಕ ಇತಿಹಾಸವಾಗುತ್ತದೆ. ನಡೆದಿರಬಹುದಾದ ಘಟನೆಯ ಸುತ್ತ ಹುಟ್ಟಿಕೊಂಡ ಲಿಖಿತ ವ್ಯಾಖ್ಯಾನವು ಇತಿಹಾಸವೆನಿಸಿದರೆ, ಅದೇ ರೀತಿ ನಡೆದ ಘಟನೆಯ ಸುತ್ತ ಹುಟ್ಟಿಕೊಂಡ ಮೌಖಿಕ ಪರಂಪರೆ ಐತಿಹ್ಯವೆನಿಸುತ್ತದೆ. ಐತಿಹ್ಯಗಳು, ಪುರಾಣಗಳು ನೈಜ ಘಟನೆಗಳ ಸಹಜ ನಿರೂಪಣೆ, ವೈಭವೀಕೃತ ನಿರೂಪಣೆಗಳಾಗಿರಲಿ ಅಥವಾ ನಡೆದಿರಬಹುದಾದ ಸಂಗತಿಗಳ ಸುತ್ತ ಹುಟ್ಟಿಕೊಂಡಿರುವ, ಅವು ವಾಸ್ತವ ಘಟನೆಯ ಇತಿಹಾಸದ ಸಣ್ಣದೊಂದು ಅಂಶವನ್ನಾದರೂ ತನ್ನಲ್ಲಿ ಹುದುಗಿಸಿಕೊಂಡಿರುತ್ತವೆ. ಹಾಗಾಗಿಯೇ ಐತಿಹ್ಯಗಳ ಅಧ್ಯಯನದಿಂದ ಒಂದು ನಾಡಿನ ಇಲ್ಲವೆ ಜನಸಾಮಾನ್ಯರ ಇತಿಹಾಸದ ಮೇಲೆ ಬೆಳಕನ್ನು ಚೆಲ್ಲಬಹುದಾಗಿದೆ.

"ಇತಿಹಾಸವು ಈ ದೇಶದ ಪ್ರಾಚೀನ ಪದಗಳಲ್ಲಿ ಒಂದು. ಐತಿಹ್ಯ ಮತ್ತು ಇತಿಹಾಸ ಇವೆರಡು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಇವು ಮೂಲದಲ್ಲಿ ಸಂಸ್ಕೃತ ಪದಗಳು. ಹೀಗೆ 'ಇತ್ತು' ಎಂಬುದು ಅದರ ಸಾಮಾನ್ಯ ಅರ್ಥ. ಇವು ಪೂರ್ಣವಾಗಿ ಭೂತ ಕಾಲಕ್ಕೆ ಸೇರಿದವು. ಒಂದು ಕಾಲದಲ್ಲಿ ಇದ್ದದ್ದು, ಮತ್ತೊಂದು ಕಾಲಕ್ಕೆ ಬರುವಾಗ ಸಾಕಷ್ಟು ಕಲ್ಪಿತ ಅಂಶಗಳು ಸೇರಿಕೊಳ್ಳುತ್ತವೆ." ಈ ಬಗ್ಗೆ 'Legend From Indian History' ಎಂಬ ಚಿಕ್ಕ ಕೃತಿಯೊಂದರಲ್ಲಿ ಎ.ಕೆ. ಘೋಷ್ ಅವರ ಹೇಳಿಕೆಯನ್ನು ಡಾ. ಪುರುಷೋತ್ತಮ ಬಿಳಿಮಲೆಯವರು 'ಕನ್ನಡ ಜನಪದ ಸಾಹಿತ್ಯ ರೂಪಕಗಳು' ಎಂಬ ಕೃತಿಯಲ್ಲಿ ತಮ್ಮ ಲೇಖನವೊಂದರಲ್ಲಿ ಹೀಗೆ ಉಲ್ಲೇಖಿಸಿದ್ದಾರೆ. "History becomes much more exciting and interesting when we read

stories of what people said and did. No one knows it those stories are true, but they are generally belived to be true, they are legends(GHOSH-1985-Introduction)".[೨]

"'ಐತಿಹ್ಯ'ವು 'ಇತಿಹಾಸ'ವು ಒಂದೇ ಮೂಲದ ಸಂಸ್ಕೃತ ಪದಗಳು. ಅವುಗಳಿಗೆ ಅರ್ಥ ಹಿಂದೆ, 'ಹೀಗೆ', 'ಇತ್ತು', 'ನಡೆಯಿತು' ಎಂಬುದನ್ನು ತಿಳಿಸುತ್ತದೆ".[೩] ಇತಿಹಾಸಕ್ಕೆ ಸಂವಾದಿಯಾಗಿ 'ಚರಿತ್ರೆ' ಎಂಬ ಪದವನ್ನು ಬಳಸಲಾಗುತ್ತದೆ. History ವಾಸ್ತವಾಂಶಗಳನ್ನು ನಿರೂಪಿಸುವ ಚರಿತ್ರೆ. ಅಲ್ಲಿ ಕಲ್ಪಿತಗಳಿಗೆ ಸ್ಥಾನವಿಲ್ಲ. History ಎಂಬ ಕಲ್ಪನೆ ನಮಗೆ ಮುಖ್ಯವಾಗಿ ಬಂದದ್ದು ಪಾಶ್ಚಾತ್ಯದ ಸಂಪರ್ಕದಿಂದ. ಆದರೆ ಇಂಗ್ಲೀಷ್ ವಿದ್ಯಾಭ್ಯಾಸಕ್ಕಿಂತ ಹಿಂದೆ ನಮ್ಮ ದೇಶಗಳಲ್ಲಿ ಚರಿತ್ರೆ ಪದಕ್ಕೆ ತೀರ ಸಮೀಪವಿದ್ದದ್ದು ಇತಿಹಾಸ. ಇತಿಹಾಸವೆಂದರೆ ಪ್ರಾಚೀನ ಪ್ರಕಾರ ವಾಸ್ತವ ಘಟನೆಗಳನ್ನು ಚಿತ್ರಿಸುತ್ತದೆ ಎಂಬುದೇ ಅವರ ನಂಬಿಕೆಯಾಗಿತ್ತು. ಉದಾಹರಣೆಗೆ ಮಹಾಭಾರತದ ಘಟನೆಯನ್ನು ಸೂಚಿಸುತ್ತದೆ. ಐತಿಹ್ಯವೆನ್ನುವುದು ಸ್ಥೂಲವಾಗಿ ಅದೇ ಅರ್ಥದ್ದು. ಯಾವುದೋ ಊರು ಅಥವಾ ಯಾವುದೋ ಜಾಗ-ಅವುಗಳ ಬಗ್ಗೆ ಪ್ರಚಲಿತವಿರುವ ಘಟನೆಯನ್ನು ಐತಿಹ್ಯವೆನ್ನುತ್ತೇವೆ. ಮೈಸೂರು ವಿಶ್ವವಿದ್ಯಾನಿಲಯ 'ಇಂಗ್ಲೀಷ್-ಕನ್ನಡ ನಿಘಂಟು' ಪ್ರಕಾರ ಐತಿಹ್ಯವು ಇತಿಹಾಸಕ್ಕೆ ಸಮವರ್ತಿಯಾದದ್ದು. ಚರಿತ್ರೆಯ ರಚನೆಯಂತೆ ಇಲ್ಲಿ ಕೂಡ ಭೌತಿಕ ಆಧಾರವನ್ನು ಅದರ ಮೂಲ ಸ್ವರೂಪದಲ್ಲಿಯೇ ಹುದುಗಿಸಿಕೊಂಡಿರುತ್ತದೆ. "ಐತಿಹ್ಯವು ಇತಿಹಾಸದಿಂದ ಬಹುದೂರ ಸಾಗಿರುತ್ತದೆ. ಹಾಗೆಂದು ಅದು ಪೂರ್ತಿ ದಂತಕಥೆಯು ಅಲ್ಲ. ಅದು ಎಲ್ಲೋ, ಯಾವಾಗಲೋ ನಡೆದ ಒಂದು ಸಂಗತಿ ಅಥವಾ ಘಟನೆ ಅಥವಾ ಸ್ಥಳದ ಮಹಿಮೆ ಅಥವಾ ವ್ಯಕ್ತಿಯೊಬ್ಬನ ಸಾಧನೆ. ಆ ಭೌಗೋಳಿಕ ಪರಿಸರದ ಮೇಲೆ ಪ್ರಭಾವ ಬೀರುತ್ತದೆ".[೪] ಚರಿತ್ರೆಗೂ ಐತಿಹ್ಯಗೂ ಇರುವ ಸಂಬಂಧವನ್ನು ಖಚಿತವಾಗಿ ಗುರುತಿಸಲಾಗದು. ಭೌತಿಕ ಆಧಾರವೊಂದನ್ನು ಆಧರಿಸಿ ಹುಟ್ಟಿದ ಗದ್ಯಕಥೆಗಳು ಐತಿಹ್ಯಗಳಾದರೆ, ಅದೇ ಆಧಾರವನ್ನು ಆಧರಿಸಿದ ವಸ್ತುನಿಷ್ಟ, ವೈಜ್ಞಾನಿಕ ನಿರೂಪಣೆ ಚರಿತ್ರೆಯಾಗಬಹುದು. ಜನಪದರಮಟ್ಟಿಗೆ ಐತಿಹ್ಯಗಳೇ ಚರಿತ್ರೆಗಳಾಗಿವೆ. ಇವು ಜನಪದ ಕಥೆಗಿಂತ ಭಿನ್ನವಾಗಿರುತ್ತವೆ. ಇವುಗಳಲ್ಲಿ ನಿರೂಪಣೆ ಇರುತ್ತದೆ. ಐತಿಹ್ಯಗಳು ನೇರವಾಗಿ ಇತಿಹಾಸವನ್ನು ದಾಖಲಿಸುವ ವಿಮರ್ಶಿಸುವ ಕೆಲಸಕ್ಕೆ ಹೋಗುವುದಿಲ್ಲ. ಆದರೆ ಇತಿಹಾಸವಾಗಿರುವ ಸಂಗತಿಗಳನ್ನು ಅವಲಂಬಿಸಿರುತ್ತವೆ. ಗಟ್ಟಿಯಾದ ಇತಿಹಾಸವಾಗದೇ ಇತಿಹಾಸಕ್ಕೆ ಮೂಲವಾಗುತ್ತವೆ. ಆದರೆ ಕಲ್ಪನೆಗಳಿಗೂ ಕೂಡ ವಸ್ತುಸ್ಥಿತಿ ಇರುತ್ತದೆ. ಹಾಗಾಗಿಯೇ "ಐತಿಹ್ಯಗಳಿಗೂ ಪುರಾಣಗಳಿಗೂ ಅವಿನಾಭಾವ ಸಂಬಂಧ ಹೊಂದಿವೆ. ಇತಿಹಾಸ- ಐತಿಹ್ಯಕ್ಕೆ ಆಧಾರವಾದರೆ, ಐತಿಹ್ಯ-ಪುರಾಣಕ್ಕೆ ಮೂಲ. 'Myth' ಎನ್ನುವ ಪದದ ಅರ್ಥ, ಕಥೆ ಎಂದೂ, ಐತಿಹ್ಯ ಮತ್ತು ಪುರಾಣಗಳಾದ ಪ್ರಥಮದ ಕಥೆಗಳು".[೫] ಕಲ್ಪನೆ ಆದಿಮಾನವನ ವಿಶಿಷ್ಟ ಲಕ್ಷಣವಾದ್ದರಿಂದ ಅದೇ ಅವನ ಜೀವನದ ಆಲೋಚನೆ, ವ್ಯವಹಾರ ಸಾಧನಗಳಲ್ಲಿ ಅಭಿವ್ಯಕ್ತಿಗಾಗಿ ಕಥನ ಮಾಧ್ಯಮವನ್ನು ಅವಲಂಬಿಸಿದ್ದವು. ಆದರೆ ಕಾಲ್ಪನಿಕ ಕಥೆಗಳಲ್ಲಿ ರಂಜಕಾಂಶವಿರುತ್ತದೆ. ಐತಿಹ್ಯ-ಪುರಾಣಗಳಲ್ಲಿ ಚಿಂತನೆಯ ಪ್ರಧಾನವಿರುತ್ತದೆ. ಪೌರಾಣಿಕ ಹಾಗೂ ಐತಿಹಾಸಿಕ ವಿಷಯಕ್ಕೆ ಸಂಬಂಧಿಸಿದಂತೆಯೂ ಹೇರಳವಾಗಿ ಐತಿಹ್ಯಗಳು ಹುಟ್ಟಿಕೊಂಡಿರುವುದುಂಟು. ಪರಾಕ್ರಮವನ್ನು

ಬಣ್ಣಿಸುವ, ತ್ಯಾಗ, ಸಾಹಸ, ಪ್ರಾಮಾಣಿಕತೆಯನ್ನು ಎತ್ತಿ ಹಿಡಿಯುವ ವ್ಯಕ್ತಿಯ ಘಟನೆಗಳನ್ನೊಳಗೊಂಡ ಐತಿಹ್ಯಗಳು ಕಂಡು ಬರುವುದುಂಟು.

ಐತಿಹ್ಯವೊಂದರ ವಸ್ತುವು ಯಾವುದೇ ಘಟನೆ, ವ್ಯಕ್ತಿ, ಸ್ಥಳ ಮುಂತಾದವು ಆಗಬಹುದು. ಆದರೆ ಅಂತಹ ವಸ್ತು, ವ್ಯಕ್ತಿ, ಘಟನೆಗಳು ವಿಶಿಷ್ಟತೆಯಿಂದ ಕೂಡಿರಬೇಕು. ಅಸಾಮಾನ್ಯ ಅಂಶವಿರಬೇಕು. ಸಾಮಾನ್ಯವಾದುದು ಐತಿಹ್ಯಕ್ಕೆ ವಸ್ತುವಾಗಲಾರದು. ಐತಿಹ್ಯಗಳು ಪ್ರಕೃತಿಯ ವಸ್ತು ವೈವಿಧ್ಯಗಳನ್ನು ಬಳಸಿಕೊಳ್ಳುತ್ತವೆ. ಉದಾ:- ಕೋಟೆ-ಕೊತ್ತಲು, ಬೆಟ್ಟ-ಗುಡ್ಡ, ನೆಲ-ಜಲ, ನದಿ, ಕೆರೆ, ಮರಡಿ ಇತ್ಯಾದಿ. "ಐತಿಹ್ಯಗಳಿಗೆ ಕಾಲಸಂಬಂಧಿಯಾದ ಆಯಾಮ ಇರುತ್ತದೆ. ಪುರಾಣ ಮತ್ತು ಐತಿಹ್ಯಗಳು ನಿಜವಾದ ಕಾಲದಲ್ಲಿ ಇರುತ್ತವೆ. ಪುರಾಣಕ್ಕಿಂತ ಮೊದಲು ಕಾಲ ಇರುವುದಿಲ್ಲ. ಪುರಾಣ ಕಾಲ ಎನ್ನುವುದು ಅತ್ಯಂತ ಪ್ರಾಚೀನ ಕಾಲ್ಪನಿಕ ಕಾಲ. ಐತಿಹ್ಯವು ಮನುಷ್ಯನ ಹುಟ್ಟಿನ ನಂತರದ ಕಾಲಕ್ಕೆ ಸೇರಿದ್ದು."[೬] ಐತಿಹ್ಯಗಳು ಜನಪದರ ದೃಷ್ಟಿಯಿಂದ ಅಂದರೆ ಅವರ ಅಪೇಕ್ಷೆಗಳ ಪೂರ್ಣ ಆಲೋಚನೆಯ ಅಭಿವ್ಯಕ್ತಿಗಳಾಗಿ ಸೇರಿರುತ್ತವೆ. ಇಲ್ಲಿ ಐತಿಹ್ಯದ ಸ್ಥಳವು ಮುಖ್ಯ. ಐತಿಹ್ಯ ವಾಸ್ತವ ಸ್ಥಿತಿಯೇ ಹೊರತು ಕಾಲ್ಪನಿಕವಲ್ಲ. ಇವುಗಳ ವಸ್ತು ಇರುವುದು, ಒಂದು ಕಾಲದ ಮಾನವನ ಸಂಸ್ಕೃತಿಯದೇ ಆಗಿದೆ. ಕಾಲದ ದೃಷ್ಟಿಯಿಂದ ಐತಿಹ್ಯಗಳ ಸಾಮೀಪ್ಯಕ್ಕೆ ಸಮಾನವಾಗಿ ಅವುಗಳಲ್ಲಿನ ಸ್ಥಳದ ಸಾಮೀಪ್ಯವಿರುತ್ತದೆ. "ಪುರಾಣ ಮತ್ತು ಐತಿಹ್ಯಗಳು ಪ್ರಪಂಚದಲ್ಲಿ ನೆಲೆಯೂರಿದ್ದರೆ ಜನಪದ ಕತೆಯು ಕಾಲ್ಪನಿಕ ಪ್ರಪಂಚವೊಂದರಲ್ಲಿ ತನ್ನ ಸ್ಥಾನವನ್ನು ಪಡೆದಿರುತ್ತದೆ. ಹೀಗೆ "ಪುರಾಣ ಮತ್ತು ಐತಿಹ್ಯಗಳಲ್ಲಿ Fantasyಯು (ಭ್ರಮೆ) ವಾಸ್ತವಿಕ. ಜಗತ್ತಿನ ಕಾಲ ಮತ್ತು ಸ್ಥಳಕ್ಕೆ ಪ್ರವೇಶ ಮಾಡಿರುತ್ತದೆ".[೭] ಇಲ್ಲಿ ಐತಿಹ್ಯ ಪುರಾಣಗಳಿಂದ ಪ್ರವೇಶಿಸುವುದು. ಜನಪದದ ದೃಷ್ಟಿಯಿಂದ ಅಂದರೆ ಅವರ ಅಪೇಕ್ಷೆ ಅನಿಸಿಕೆ, ಆಲೋಚನೆಯ ಅಭಿವ್ಯಕ್ತಿಯಾಗಿರುತ್ತದೆ. ಜನಸಮುದಾಯದ ಮನೋಧರ್ಮದ ಮುದ್ರೆಯನ್ನೊತ್ತಿಕೊಂಡು ಹುಟ್ಟಿದ ಐತಿಹ್ಯಗಳು ಸಾಂಸ್ಕೃತಿಕ ಬದುಕಿನ ಮೇಲೆ ಮಹತ್ತರವಾದ ಪರಿಣಾಮವನ್ನು ಬೀರುತ್ತವೆ. ಒಂದು ಪ್ರದೇಶದ ಜನರು ಅಲ್ಲಿಯ ಯಾವುದೇ ವಸ್ತು, ಪಳೆಯುಳಿಕೆ ಇಲ್ಲವೆ ಸ್ಮಾರಕಗಳು, ಬೆಟ್ಟ-ಗುಡ್ಡ-ನಿಸರ್ಗವಾಗಿ ಕಾಣಿಸುವ ಬಗೆಗೆ ಭಾವನಾತ್ಮಕ ಸಂಬಂಧವನ್ನು ಹೊಂದಿರುತ್ತಾರೆ. ಭಕ್ತಿ, ಆಚರಣೆ, ನಂಬಿಕೆ, ಆರಾಧನೆಯ ರೂಪದಲ್ಲಿ ಪ್ರಕಟವಾಗಿರುತ್ತವೆ. ಇದು ಕಥೆಯ ರೂಪದಲ್ಲಿ, ವದಂತಿ ರೂಪದಲ್ಲಿ, ಬಾಯಿಂದ ಬಾಯಿಗೆ ಹರಡುತ್ತಾ ಮುಂದೆ ಅದು ಅಳಿಸಿ ಹೋಗಲಾರದಂತಹ ಸಂಗತಿಯಾಗಿ, ಘಟನೆಯಾಗಿ ನಿರೂಪಿಸಲಾಗುವುದು.

ಒಟ್ಟಾರೆಯಾಗಿ ಐತಿಹ್ಯಗಳನ್ನು ಚರಿತ್ರೆಯಿಂದ ಭಿನ್ನವಾಗಿ ನೋಡುವ ಪರಿಪಾಠವೂ ಇದೆ. ಐತಿಹ್ಯಗಳು, ಚರಿತ್ರೆಯ ಘಟನೆಯ ಸುತ್ತ ವೈವಿಧ್ಯಮಯವಾದ ಕಲ್ಪನಾ ಕಥೆಗಳನ್ನು ಒಳಗೊಂಡು ಹೆಣೆಯಲ್ಪಟ್ಟಿರುವುದು. ವಂದತಿಗಳನ್ನು ಐತಿಹ್ಯವೆನ್ನಬಹುದು.

### ೩.೧. ಐತಿಹ್ಯ ಪದ ನಿಷ್ಪತ್ತಿ

"ಐತಿಹ್ಯ ಪದ ನಿಷ್ಪತ್ತಿ - ಐತಿಹ್ಯ ಮತ್ತು ಇತಿಹಾಸ ಇವೆರೆಡು ಒಂದೇ ಮೂಲದ ಸಂಸ್ಕೃತ ಪದಗಳು. 'ಇತ' 'ಇತಿಹ' ಎನ್ನುವ ಸಂಸ್ಕೃತ ರೂಪದಿಂದ ಐತಿಹ್ಯವು ನಿಷ್ಪನ್ನವಾಗಿದ್ದು".[೪] ಈ ಶಬ್ದ ರೂಪಗಳಿಗೆ ಹೀಗೆ, ಹೀಗಿತ್ತು, ಹೀಗೆ ನಡೆದದ್ದು ಎಂಬ ಅರ್ಥಗಳಿವೆ. ಅದರಂತೆ ಇಂದು ನಾವು ಯಾವುದನ್ನು ಐತಿಹ್ಯ ಎಂದು ಗುರುತಿಸುತ್ತೇವೆಯೋ, ಅದು ಒಂದು ಕಾಲದಲ್ಲಿ ನಿಜವಾಗಿ ನಡೆದ ಘಟನೆಯೊಂದರ ನಿರೂಪಣೆಯೆಂಬ ವಿಶ್ವಾಸ ಅದರ ಪ್ರಸಾರದಲ್ಲಿರುತ್ತದೆ. ಈ ಸಂಗತಿಯನ್ನು ನಮ್ಮ ಜಾನಪದ ವಿದ್ವಾಂಸರು ಜನಪದ ಸಾಹಿತ್ಯದ ಈ ವಿಶಿಷ್ಟ ಪ್ರಕಾರವನ್ನು ಐತಿಹ್ಯವೆಂದು ಕರೆದರು. ಹೀಗೆ ನೋಡಿದರೆ ಚರಿತ್ರೆಯ ಸಂವಾದಿ ಪದವಾದ ಇತಿಹಾಸವೂ 'ಇತಿ' ಇತಿಹ - ರೂಪಗಳಿಂದಲೇ ನಿಷ್ಪನ್ನವಾಗಿದೆ. ಆದುದರಿಂದ ಇತಿಹಾಸ ಮತ್ತು ಐತಿಹ್ಯಕ್ಕೆ ಸಹ ಸಂಬಂಧ ವ್ಯತ್ಯಾಸಗಳೇನಾದರೂ ಇರಬಹುದು. ಈಗಾಗಲೇ ಶಬ್ದರೂಪದಲ್ಲಿಯೂ ಸಾಮ್ಯವಿದೆಯೆಂಬುದು ಸ್ಪಷ್ಟವಾಗಿದೆ. ಇವೆರೆಡು ಪದಗಳು ಧ್ವನಿಸುವ ಅರ್ಥವನ್ನು ಗಮನಿಸಿದರೆ, ವಸ್ತುವಿಷಯಗಳ ಬಗೆಗೆ ನೋಡಿದರೆ ಇತಿಹಾಸ ಎನ್ನುವುದು ನಡೆದ ಘಟನೆಗಳ-ಲಿಖಿತ ದಾಖಲಾತಿ ಎಂದೂ ತಿಳಿಯಬಹುದು. ಉದಾ:- ಸಾಹಿತ್ಯ, ಶಾಸನ, ನಾಣ್ಯ, ಬಖೈರು, ಅವಶೇಷಗಳು, ವಿದೇಶಿಯರ ಬರಹಗಳು ಇತಿಹಾಸ ರಚನೆಗೆ ಆಕರ ಸಾಮಗ್ರಿಗಳಾಗುತ್ತವೆ. ಐತಿಹ್ಯವೆಂದರೆ ಮೌಖಿಕ ಸಂಪ್ರದಾಯದಲ್ಲಿ ಹಿಂದಿನಿಂದ ಉಳಿದುಕೊಂಡು ಬಂದಿರುವ ಹಾಗೂ ವಾಸ್ತವವಾಗಿ ನಡೆದಿದೆ ಎಂದು ನಂಬಿರುವ ಘಟನೆಗಳ ಗದ್ಯ ನಿರೂಪಣೆಯನ್ನು ಐತಿಹ್ಯವೆನ್ನಬಹುದು. ಇಲ್ಲಿ ಒಮ್ಮೆ ಲಿಖಿತ ದಾಖಲೆಗಳಿಗೂ ಐತಿಹ್ಯದಲ್ಲಿ ಹೇಳಲಾಗುವ ವಿಚಾರಗಳಿಗೂ ಕೆಲವೊಮ್ಮೆ ಸಾಮ್ಯ ಸಂಬಂಧ ಕಂಡು ಬರುವುದು. ಇನ್ನೂ ಕೆಲವು ಬಾರಿ ಇವೆರಡು ತೀರಾ ವ್ಯತ್ಯಾಸವೇ ಆಗಿ ಕಾಣಬಹುದು. ಉದಾಹರಣೆಗೆ ಚಿತ್ರದುರ್ಗದ ಸ್ಥಳನಾಮ ಕುರಿತು, ಇನ್ನೂ ಹಲವು ಬಾರಿ ಇವೆರಡು ತೀರಾ ವ್ಯತ್ಯಾಸ ಆಗಿರುವುದನ್ನು ನೋಡಬಹುದು. ಕೆಲವು ಐತಿಹ್ಯಗಳಲ್ಲಿ ನೈಜ ಘಟನೆಯ ಸಣ್ಣ ಎಳೆಯೊಂದು ಮಾತ್ರವಿದ್ದು, ಅದರ ಸುತ್ತ ಕಲ್ಪಿತಾಂಶಗಳು ಕೂಡ ಸೇರಿರಬಹುದು. ನಿರೂಪಣೆಯು ಇಲ್ಲಿನ ಮುಖ್ಯ ಕ್ರಿಯೆ. ಹೀಗೆ ಕಾಲಕ್ರಮೇಣ ಐತಿಹ್ಯವು ಪದ್ಯ ಮಾಧ್ಯಮದಲ್ಲಿಯೇ ಕಾಣಿಸಿಕೊಳ್ಳುವುದುಂಟು. ವೃತ್ತಾಂತವೊಂದು ಕವಿಯೊಬ್ಬನ ಕೈಗೆ ಸಿಕ್ಕು ಪದ್ಯ ಕಾವ್ಯಗಳಾಗುವುದು ಸ್ವಾಭಾವಿಕ. ಉದಾ:- ಚಿತ್ರದುರ್ಗದ ಪಾಳೆಯಗಾರರ ವೀರಗೀತೆಗಳು ಇವೇ ಮಾದರಿಯಲ್ಲಿವೆ.

### ೩.೨. ಐತಿಹ್ಯ ವ್ಯಾಖ್ಯಾನ

ಮೌಖಿಕ ಆಕರಗಳನ್ನು ಕುರಿತಾದ ಅಧ್ಯಯನಗಳು ನಡೆದಂತೆ 'ಲೆಜೆಂಡ್' ಪದವು ತನ್ನ ವಿಸ್ತಾರ ಪಡೆದುಕೊಂಡಿತು. ಸಾಧುಸಂತರ ಜೀವನ ಕತೆ ಎಂಬುದು ಹಿಂದೆ ಸರಿದು ಮುಂದೆ ಪರಂಪರೆಯಿಂದ ಬಂದದ್ದು ಎಂಬ ಅರ್ಥ ಪಡೆದುಕೊಂಡಿತು. ಭಾರತಕ್ಕೆ ಆಗಮಿಸಿದ ಪಾಶ್ಚಾತ್ಯರು ನಮ್ಮ ದೇಶದ ಚರಿತ್ರೆ ಮತ್ತು ಸಂಸ್ಕೃತಿಯನ್ನು ಅರಿತುಕೊಳ್ಳಲು ಆಸಕ್ತರಾದರು. ಪ್ರಾರಂಭದಲ್ಲಿ

ಲಿಖಿತ ದಾಖಲೆಗಳನ್ನು ಆಶ್ರಯಿಸಿ ನಂತರ ಮೌಖಿಕ ರೂಪದ ಚರಿತ್ರೆಯ ಕಡೆಗೆ ತಮ್ಮ ಒಲವನ್ನು ಮೂಡಿಸಿದರು. ಅವರ ಇಂಥ ಪ್ರಯತ್ನಗಳಿಂದಾಗಿ ದೇಶಿಯ ವಿದ್ವಾಂಸರು ಸಹ ಮೌಖಿಕ ಆಕರಗಳ ಕಡೆಗೆ ಆಕರ್ಷಿತರಾಗಿರುವಂತೆ ಮಾಡಿತು. ಇದರಿಂದಾಗಿ ಜಾನಪದ ಸಾಹಿತ್ಯ ಪ್ರಕಾರವಾದ ಐತಿಹ್ಯಗಳ ಸಂಗ್ರಹ, ವ್ಯಾಖ್ಯಾನ ಮತ್ತು ವಿಶ್ಲೇಷಣೆಗಳು ನಡೆದವು. ಐತಿಹ್ಯಗಳ ಬಗೆಗೆ ಅಧ್ಯಯನ ನಡೆಸಿದ ವಿದ್ವಾಂಸರು, ನಿಘಂಟುಕಾರರು ತಮ್ಮದೇ ಆದ ಅರ್ಥ ಸ್ವರೂಪಗಳನ್ನು ಗ್ರಹಿಸಿ ವ್ಯಾಖ್ಯಾನಿಸಿರುವುದನ್ನು ನೋಡಬಹುದು.

"'ಐತಿಹ್ಯ' ಎಂಬ ಪದಕ್ಕೆ ಸಂವಾದಿಯಾಗಿ 'LEGEND' ಎಂಬ ಪದವನ್ನು ಬಳಸಲಾಗುತ್ತದೆ. LEGEND ಎಂಬ ಪದ ಮೂಲತಃ ಲ್ಯಾಟಿನ್ ಪದವಾಗಿದೆ. ಅಲ್ಲಿ ಇದಕ್ಕೆ 'Things to be read' ಎಂಬ ಅರ್ಥವಿದೆ(ODHAMS DICTIONARY : ಪು. ೬೨೯). ಫ್ರೆಂಚ್ ಭಾಷೆಯಲ್ಲಿಯೂ ಇದೇ ಅರ್ಥ ಉಳಿದು ಬೆಳೆದುಕೊಂಡು ಬಂದಿದೆ".[೯] ಐತಿಹ್ಯಕ್ಕೆ ಜರ್ಮನ್ ಭಾಷೆಯಲ್ಲಿ 'ಸಾಗೆ' (Sagen) ಎಂದು ಕರೆಯುವರು. ನಮ್ಮಲ್ಲಿ ಐತಿಹ್ಯವೆಂಬುದು 'ಇತಿ' ಇತಿಹ ಎನ್ನುವ ಸಂಸ್ಕೃತ ರೂಪದಿಂದ ನಿಷ್ಪನ್ನವಾಗಿದೆ.

ಲ್ಯಾಟಿನ್ ಮತ್ತು ಫ್ರೆಂಚ್ ಭಾಷೆಗಳಲ್ಲಿ ಐತಿಹ್ಯಕ್ಕೆ ಇರುವ ಅರ್ಥವ್ಯಾಪ್ತಿಯನ್ನು ಗಮನಿಸಿದರೆ, ಇವು ಪ್ರಾರ್ಥನಾ ಮಂದಿರಗಳಲ್ಲಿ ಪಠನ ಮಾಡಬಹುದಾದ ವಿಷಯಗಳಾಗಿದ್ದವು. ಹೀಗೆ ಪಠಣ ಮಾಡಬಹುದಾದ ವಿಚಾರಗಳಿಗೆ ಬೈಬಲನ್ನು ಅಥವಾ ಸಾಧುಸಂತರ ಜೀವನ ಚರಿತ್ರೆಯನ್ನು ಮುಖ್ಯವಾಗಿಟ್ಟುಕೊಳ್ಳಲಾಗಿತ್ತು. ಇವೆಲ್ಲ ಅಂಶಗಳನ್ನು ಇಟ್ಟುಕೊಂಡು ಮಧ್ಯಯುಗೀನ ಇಂಗ್ಲೀಷ್ ಬರಹಗಾರರು ಕೂಡ 'ಲೆಜೆಂಡ್' ಎಂಬ ಪದವನ್ನು ಈ ಮೇಲಿನ ಅರ್ಥದಲ್ಲಿಯೇ ಬಳಸಿಕೊಂಡಿದ್ದಾರೆ. ಇಂಗ್ಲೀಷ್ ಭಾಷೆಯ ತಜ್ಞರೂ, ನಿಘಂಟುಕಾರರು, ನಿಘಂಟುಗಳಲ್ಲಿ ಅದೇ ರೀತಿಯಲ್ಲಿ ವಿವರಿಸಿದ್ದಾರೆ.

"ಆಂಗ್ಲ ಭಾಷೆಯಲ್ಲಿಯೂ ಧಾರ್ಮಿಕ ರೀತಿಯ ಕಥನವೊಂದಕ್ಕೆ ಲೆಜೆಂಡ್‌ನ್ನು ಅರ್ಥೈಸಿದ್ದು ಸ್ಪಷ್ಟವಾಗಿ ತಿಳಿದುಬರುತ್ತದೆ. ಕ್ರಿ.ಶ. ೧೩ನೇ ಶತಮಾನದಲ್ಲಿ ಸಂಪಾದಿಸಿರುವ GOLDEN LEGEND ಎಂಬ ಸಂಕಲನದಲ್ಲಿ ಸಾಧುಗಳ ಕಥೆ ಮಾತ್ರ ಅಡಕವಾಗಿರುವುದು ಕಂಡುಬರುತ್ತದೆ".[೧೦] ಅಂದರೆ ಐತಿಹ್ಯಗಳು ಮಹಾಪುರುಷರ ಜೀವನ ಚರಿತ್ರೆ ಹಾಗೂ ಪ್ರಧಾನವಾಗಿ ನೀತಿ ಬೋಧಕ ಕಥೆಗಳಾಗಿದ್ದವು. ಆದ್ದರಿಂದ ಹಿಂದಿನ ಕಾಲದಲ್ಲಿ ಪುರಾಣ, ಕಲ್ಪಿತ ಕಥೆ, ಇತಿಹಾಸ ಕಥೆ ಮತ್ತು ನೀತಿ ಕಥೆಗಳನ್ನು ಒಟ್ಟಾಗಿ ಸೇರಿಸಿ ಲೆಜೆಂಡ್ ಎಂದು ಕರೆಯುತ್ತಿದ್ದರು.

ಇಂಗ್ಲೀಷ್-ಕನ್ನಡ ನಿಘಂಟುಗಳು ಆಂಗ್ಲ ಮಾದರಿಯನ್ನೇ ಅನುಸರಿಸಿವೆ. ಸಾಧುಸಂತರ ಜೀವನ ಕಥೆ ಎಂದು ಹೇಳಲಾಗಿದೆ. ಮೈಸೂರು ವಿಶ್ವವಿದ್ಯಾಲಯದ ಇಂಗ್ಲೀಷ್-ಕನ್ನಡ ನಿಘಂಟು ಪ್ರಕಾರ; ೧೩ನೇ ಶತಮಾನದಲ್ಲಿ ಇಂಗ್ಲೀಷ್‌ನಲ್ಲಿ ಸಂಗ್ರಹಿಸಿದ ಸಾಧುಸಂತರ ಜೀವನ ಕಥಾ ಸಂಗ್ರಹವೆಂದು ಎಂಬ ಅರ್ಥವಿದೆ. ಚಾರಿತ್ರಿಕವಾಗಿ ಐತಿಹ್ಯದ ಅರ್ಥವು ಒಂದೇ ರೀತಿಯಾಗಿ

ಉಳಿದಿಲ್ಲ. ಪಾಶ್ಚಾತ್ಯ ದೇಶಗಳಲ್ಲಿ ಜಾನಪದ ಅಧ್ಯಯನ ಬೆಳೆದಂತೆ ಅದರ ಅರ್ಥದಲ್ಲಿಯೂ ಸಹ ವ್ಯತ್ಯಾಸವಾಗತೊಡಗಿತು. ಮೊದಲಿಗೆ ಸಾಧುಸಂತರ ಜೀವನಕಥೆಯೆಂಬ ಅರ್ಥದೊಂದಿಗೆ ಇನ್ನಷ್ಟು ವಿಸ್ತರಿಸುತ್ತಾ ಹೋಯಿತು. ೧೯-೨೦ನೇ ಶತಮಾನದ ಹೊತ್ತಿಗೆ 'ಐತಿಹ್ಯ' ಎಂಬ ಪದವು ಪರಂಪರೆಯಿಂದ ಬಂದದ್ದು ಎಂಬ ಅರ್ಥದಲ್ಲಿ ಬಳಕೆಯಾಗತೊಡಗಿತು. ಕನ್ನಡ ನಿಘಂಟುಗಳಲ್ಲಿ ಈ ಅರ್ಥವನ್ನು ನಾವು ಕಾಣಬಹುದು.

ಬಹುತೇಕ ಭಾರತೀಯ ಜಾನಪದ ತಜ್ಞರು ಇದೇ ದಾರಿಯಲ್ಲಿ ಸಾಗಿದ್ದಾರೆ. ಕರ್ನಾಟಕದಲ್ಲಿ ಕೂಡ ಇದೇ ಮಾತನ್ನು ಹೇಳಬೇಕಾಗುತ್ತದೆ. ದೇಜಗೌ, ತಾಳ್ತಜೆ ವಸಂತಕುಮಾರ, ವಿವೇಕ ರೈ, ಪುರುಷೋತ್ತಮ ಬಿಳಿಮಲೆ ಇನ್ನೂ ಮೊದಲಾದವರು. ಕೆಲವೇ ಮಂದಿ ಜಾನಪದ ವಿದ್ವಾಂಸರು ಮಾತ್ರ ತಮ್ಮ ನಾಡಿನ ಆಯಾಯ ಪರಿಸರಕ್ಕೆ ಹೊಂದಿಕೆಯಾಗುವ ಮಾರ್ಗದಲ್ಲಿ ಸಾಗಿದ್ದಾರೆ. ಕನ್ನಡ ನಾಡಿನ ನಿಘಂಟುಕಾರರು ಸಹ ಲೆಜೆಂಡ್ ಅಥವಾ ಐತಿಹ್ಯ ಎಂಬ ಪದಗಳಿಗೆ ಅರ್ಥವನ್ನು ಕೊಟ್ಟು ವಿವರಣೆಯನ್ನು ಕೊಡುವಾಗ ಪಾಶ್ಚಾಮಾತ್ಯ ವಿದ್ವಾಂಸರ ಅರ್ಥ ವಿವರಣೆಗಳಿಗೆ ಬದ್ಧರಾಗಿದ್ದಾರೆ. ಇಲ್ಲಿ ಸಾಧು-ಸಂತರ ಜೀವನ ಕತೆಯೊಂದಿಗೆ ಮೌಖಿಕ ಪರಂಪರೆಯಲ್ಲಿ ಬಂದ ಇತರ ಅಂಶಗಳನ್ನು ಒಳಗೊಂಡಿವೆ.

**ಕಿಟ್ಟೆಲ್ ನಿಘಂಟುವಿನಲ್ಲಿ** "Oral Tradition" ಎಂಬುದನ್ನು ಸಮಾನಾರ್ಥಕವಾಗಿ ಬಳಸಿದಲ್ಲದೆ ಅದಕ್ಕೆ ಕನ್ನಡದಲ್ಲಿ 'ಐತಿಹ್ಯ'ವೆಂಬ ಪದವಿರುವುದನ್ನು ಗುರುತಿಸಲಾಗಿದೆ".[೧೧]

"ಕನ್ನಡ ಸಾಹಿತ್ಯ ಪರಿಷತ್ತು ನಿಘಂಟುವಿನಲ್ಲಿ 'ಐತಿಹ್ಯ' ಎಂಬುದಕ್ಕೆ ಪರಂಪರೆಯಿಂದ ಬಂದಿರುವುದನ್ನು ಸಂವಾದಿಯಾಗಿ ಬಳಸಲಾಗಿದೆ".[೧೨]

"ಸಿರಿಗನ್ನಡ ಅರ್ಥಕೋಶ'ದಲ್ಲಿ 'ಇತಿಹಾಸಕ್ಕೆ ಸಂಬಂಧಿಸಿದ ಚರಿತ್ರೆ' ಎಂಬ ಅರ್ಥವಿದೆ.[೧೩]

"ಕನ್ನಡ ಜಾನಪದ ವಿಶ್ವಕೋಶ"ದಲ್ಲಿ 'ಒಬ್ಬ ವ್ಯಕ್ತಿ, ಸ್ಥಳ ಅಥವಾ ಘಟನೆಗಳನ್ನು ಕುರಿತು ಹೇಳಿದ ವಾಸ್ತವಾಂಶವನ್ನು ಕುರಿತದ್ದು ಎಂದು ಹೇಳಲಾಗುವ ಹಾಗೂ ಸಾಂಪ್ರದಾಯಿಕ ಎಂದು ಹೇಳಲಾಗುವ ಹಾಗೂ ಸಾಂಪ್ರದಾಯಿಕ ಅಂಶಗಳನ್ನು ಮೇಳೈಸಿಕೊಂಡ ಕಥೆ'.[೧೪]

"ಇಂಗ್ಲೀಷ್-ಕನ್ನಡ ನಿಘಂಟು"ವಿನಲ್ಲಿ 'ಸಾಧುಸಂತರ ಜೀವನ ಕಥಾ ಸಂಗ್ರಹ' ಎಂಬುದಾಗಿ ಅರ್ಥೈಸಲಾಗಿದೆ.[೧೫]

**ದೇ. ಜವರೇಗೌಡ** ಅವರು ಐತಿಹ್ಯ ಕುರಿತು ಹೀಗೆ ಹೇಳುತ್ತಾರೆ. "ನಡೆಯಿತೆಂದು ಹೇಳಲಾದ ಘಟನೆಗಳ ಸುತ್ತ ಹುಟ್ಟಿಕೊಳ್ಳುವ ಕಟ್ಟುಕಥೆಗಳೇ ಐತಿಹ್ಯಗಳಾಗುತ್ತವೆ"[೧೬] ಅವರೇ ಇನ್ನೊಂದಡೆ ಮುಂದುವರಿದು, ಪುರಾಣ, ಐತಿಹ್ಯಗಳು ಸಾಹಿತ್ಯಿಕ ವರ್ಗಕ್ಕೆ ಸೇರುತ್ತವೆಯೇ? ಎಂಬ ಪ್ರಶ್ನೆಯೂ ಇದೆ. ಅವು ಮುಖ್ಯವಾಗಿ ಸಂಸ್ಕೃತಿಗೆ ಸಂಬಂಧಿಸಿದವು. ಮನರಂಜನೆ ಅವುಗಳ ಗುರಿಯಲ್ಲ. ಜನಪ್ರಿಯ ಕಥೆಗಳಲ್ಲಿ ಮಾತ್ರ ರಂಜನೀಯಾಂಶವುಂಟು ಎನ್ನುತ್ತಾರೆ.

ಅಂದರೆ ಐತಿಹ್ಯಗಳು ಭಿನ್ನವಾಗಿ ವಿಶಿಷ್ಟ ಲಕ್ಷಣಗಳಿಂದ ಕೂಡಿರುತ್ತವೆ. ಇದು ಸಾಮಾನ್ಯ ಜನಪದ ಕಥೆಗಿಂತ ವಿಶೇಷವಾಗಿ ತೋರುವುದಕ್ಕೆ ಇಂತಹ ಐತಿಹ್ಯಗಳು ಗೊಂದಲಕ್ಕೆ ಕಾರಣವಾಗಬಹುದು.

"ಶಿವರಾಮ ಕಾರಂತರು" ಐತಿಹ್ಯ ಕುರಿತು ಹೀಗೆ ಹೇಳಿದ್ದಾರೆ. ಇತಿಹಾಸಕ್ಕೆ ಸಂಬಂಧಿಸಿದ ಚರಿತ್ರೆ ಎಂದಿದ್ದಾರೆ.[೧೭] ಐತಿಹ್ಯ ಎಂಬ ಪದವು ಬೇರೆ ಬೇರೆ ಕಾಲಘಟ್ಟದಲ್ಲಿ ವಿವಿಧ ಅರ್ಥಗಳನ್ನು ಪಡೆಯುತ್ತಾ ಬಂದಿದೆ. ಒಂದು ಕಾಲದಲ್ಲಿ ಐತಿಹ್ಯಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಇತಿಹಾಸ, ಚರಿತ್ರೆ, ಪ್ರಚಲಿತ ಕಥೆ ಇತ್ಯಾದಿ ಅಂಶಗಳನ್ನು ವಿವಿಧ ಅರ್ಥಗಳಲ್ಲಿ ನಾವು ಗುರುತಿಸಬಹುದು. ಚರಿತ್ರೆಯ ನಿರ್ಮಿತಿಯಂತೆ ಇಲ್ಲಿ ಕೂಡ ಭೌತಿಕ ಆಧಾರವೊಂದನ್ನು ಅದರ ಮೂಲ ಸ್ವರೂಪದಲ್ಲಿಯೇ ಹಿಡಿದಿಟ್ಟುಕೊಳ್ಳಲಾಗುವುದು.

ತಾಳ್ತಜೆ ವಸಂತಕುಮಾರ ಅವರು "ಒಂದು ಘಟನೆಗೆ ಅಥವಾ ಸ್ಥಳಕ್ಕೆ ಅಥವಾ ವ್ಯಕ್ತಿಗೆ ಸಂಬಂಧಿಸಿದ ಐತಿಹ್ಯ ರೂಪು ತಾಳುತ್ತದೆ".[೧೮]

ಪುರುಷೋತ್ತಮ ಬಿಳಿಮಲೆ ಅವರು "ಕಿವಿಯಿಂದ ಕಿವಿಗೆ ಹರಿದು ಬಂದಿರುವ ಮಾತೊಂದು ಜನಪ್ರಿಯವೂ ನಂಬುವಂತೆಯೂ ಇದ್ದಾಗ ಅದನ್ನು ಜನರು ಐತಿಹ್ಯವೆಂದು ಕರೆಯುತ್ತಿದ್ದರೆಂದು"[೧೯] ಹೇಳುತ್ತಾರೆ.

ಎ. ಸುಬ್ಬಣ್ಣ ರೈ ಅವರ ಪ್ರಕಾರ "ಮಾಖಿಕ ಸಂಪ್ರದಾಯದಲ್ಲಿ ಉಳಿದುಕೊಂಡು ಬಂದಿರುವ ಹಿಂದೆ ವಾಸ್ತವವಾಗಿ ನಡೆದದ್ದೇ ಎಂಬುದಾಗಿ ಅದರ ಪ್ರಸಾರಕರಿಗೆ ವಿಶ್ವಾಸವಿರುವ ಘಟನೆಗಳ ಗದ್ಯ ರೂಪದ ನಿರೂಪಣೆ"[೨೦] ಎಂದಿದ್ದಾರೆ.

ಈ ಮೇಲಿನ ಲೆಜೆಂಡ್(ಐತಿಹ್ಯ)ಗಳಿಗೆ ಅರ್ಥ, ವ್ಯಾಖ್ಯಾನ ನೀಡಿರುವ ಪಾಶ್ಚಾತ್ಯ ವಿದ್ವಾಂಸರು, ಜಾನಪದ ತಜ್ಞರೂ, ನಿಘಂಟುಕಾರರು, ಲೆಜೆಂಡ್‌ಗೆ ಹೇಳಿರುವ ಅರ್ಥ ವಿವರಣೆಗಳನ್ನು ಐತಿಹ್ಯಕ್ಕೂ ನೀಡುವಲ್ಲಿ ತೃಪ್ತರಾಗಿದ್ದಾರೆ. ಐತಿಹ್ಯಗಳ ಕ್ಷೇತ್ರದಲ್ಲಿ ಕೆಲಸ ಮಾಡಿದ ಸಂಶೋಧಕರು ಇದಕ್ಕೆ ನೀಡಿರುವ ಅರ್ಥ ಇದರ ಒಟ್ಟಿನ ಸ್ವರೂಪವನ್ನು ತಿಳಿಯುವಲ್ಲಿ ಸ್ವಲ್ಪ ಸಹಕಾರಿಯಾಗುತ್ತದೆ. ಜಾನಪದ ಪ್ರಕಾರವಾದ ಐತಿಹ್ಯ ಪರಂಪರೆಯಿಂದ ಬಂದ ಕಥೆಯ ಸ್ಥಾನವನ್ನು ಪಡೆದುಕೊಳ್ಳುತ್ತದೆ. ಹಾಗೆಂದು ಇದು ದಂತಕಥೆಯಲ್ಲಿ ಪೂರ್ವಕಲ್ಪಿತ ಕತೆ ಅಲ್ಲ. ಇದು ಇತಿಹಾಸದಿಂದ ಬಹುದೂರ ಸಾಗಿರುತ್ತದೆ. ಹಿಂದೆ ಯಾವುದೋ ಕಾಲದಲ್ಲಿ ಘಟಿಸಿದ ಘಟನೆ ಅಥವಾ ಸ್ಥಳದ ವೈಶಿಷ್ಟ್ಯ ಅಥವಾ ವ್ಯಕ್ತಿಯೊಬ್ಬನ ಸಾಧನೆಯು ಆ ಪರಿಸರದ ವ್ಯಕ್ತಿಗಳ ಮೇಲೆ ಪ್ರಭಾವ ಬೀರಬಹುದು. ಈ ಪ್ರಭಾವದ ಪರಿಣಾಮವಾಗಿ ಅವರಲ್ಲೊಬ್ಬ ಚಿಂತನಶೀಲ ವ್ಯಕ್ತಿ ಆ ನಿರ್ದಿಷ್ಟ ಘಟನೆಗೆ ಅಥವಾ ಸ್ಥಳಕ್ಕೆ ಅಥವಾ ವ್ಯಕ್ತಿಗೆ ಅವನ ಅನುಭವ ಕಲ್ಪನೆಯ ವೈಭವೀಕರಣದ ಅಂಶವನ್ನು ಜೋಡಣೆ ಮಾಡುತ್ತಾನೆ. ನಂತರ ಅದು ಪರಿಷ್ಕೃತವಾಗಿ ಅದ್ಭುತ, ಆಕರ್ಷಣೀಯವಾಗಿ ಮೂಡಿಬರುತ್ತದೆ. ಹೀಗೆ ಒಂದು ಘಟನೆಗೆ ಅಥವಾ ಸ್ಥಳಕ್ಕೆ ಅಥವಾ ವ್ಯಕ್ತಿಗೆ ಸಂಬಂಧಿಸಿದ ಐತಿಹ್ಯ ರೂಪು ತಾಳುತ್ತದೆ.

ಇಂದು ಲಭ್ಯವಿರುವ ಐತಿಹ್ಯದೊಳಗೆ ಇತಿಹಾಸ, ಸಾಹಿತ್ಯ, ಕಥೆ, ಚರಿತ್ರೆ ಇವೆರಡು ಅಂಶಗಳು ಹಾಸುಹೊಕ್ಕಾಗಿವೆ. ಇನ್ನೊಂದು ದೃಷ್ಟಿಯಿಂದ ಇಂದಿನ ಐತಿಹಾಸಿಕ ಕಥೆ ಕಾದಂಬರಿಗಳ ರಚನೆಯ ಸುತ್ತ, ಐತಿಹ್ಯಗಳ ರಚನೆಯ ಹಿಂದಿರುವ ಪ್ರಕ್ರಿಯೆಯೇ ಇಲ್ಲಿ ಕೂಡ ಸಮಾನವಾಗಿ ಕಾಣಬಹುದು.

### ೩.೩. ಐತಿಹ್ಯಗಳ ವರ್ಗೀಕರಣ

ಜನಪದ ಸಾಹಿತ್ಯ ಹಲವು ಪ್ರಕಾರಗಳನ್ನು ಒಳಗೊಂಡಿದೆ. ಇವುಗಳಲ್ಲಿ ಐತಿಹ್ಯವು ಬಹುಮುಖ್ಯವಾದ ಪ್ರಕಾರ. ಜನಪದ ಸಾಹಿತ್ಯದಲ್ಲಿ ಹಲವು ಪ್ರಕಾರಗಳಿರುವಂತೆ ಐತಿಹ್ಯಗಳಲ್ಲಿಯೂ ಹಲವು ಬಗೆಗಳಿವೆ. ಲೆಜೆಂಡ್(ಐತಿಹ್ಯ)ವನ್ನು ವರ್ಗೀಕರಿಸಿದ ಪಾಶ್ಚಿಮಾತ್ಯ ಜಾನಪದ ತಜ್ಞರಾದ ಆರ್.ಎಸ್. ಬಾಗ್ಸ್ ಎಂಬುವರು ಪ್ರಮುಖರು. ಅವರು ಲೆಜೆಂಡನ್ನು ಮುಖ್ಯವಾಗಿ ಏಳು ವರ್ಗಗಳಲ್ಲಿ ವಿಂಗಡಿಸಿಕೊಂಡು, ಪ್ರತಿಯೊಂದರೊಳಗೂ ಮತ್ತೆ ಉಪವರ್ಗಗಳನ್ನು ಗುರುತಿಸಿಕೊಂಡಿದ್ದಾರೆ. ಅವು ಈ ಕೆಳಗಿನಂತಿವೆ.

| | | |
|---|---|---|
| ೧. ಅತಿಮಾನುಷ ವರ್ಗ | : | ದೇವದೂತರು, ದಿವ್ಯ ಪುರುಷರು<br>ಯಕ್ಷ - ಯಕ್ಷಿಣಿ, ಪಿಶಾಚಿ, ಸೈತಾನ, ರಾಕ್ಷಸ ಇತ್ಯಾದಿ. |
| ೨. ಮಾನವ ವರ್ಗ | : | (ಅ) ಸಾಧು ಸಂತರು, ಬೈಬಲ್‌ನ ಪಾತ್ರಗಳು, ಸಂನ್ಯಾಸಿ. ಮೊದಲಾದ ಧಾರ್ಮಿಕ ಪುರುಷರು.<br>ಆ. ಮೋಹಿನ ಮಾಟಗಾತಿ (ಮಾಟಗಾರರು) ಮುಂತಾದವರು ಇತ್ಯಾದಿ. |
| ೩. ಪ್ರಾಣಿ ವರ್ಗ | : | ಸಸ್ತನಿ, ಪಕ್ಷಿ, ಕ್ರಿಮಿ-ಕೀಟ, ಮೀನು. |
| ೪. ಆಕಾಶಕಾಯಗಳು | : | ಸೂರ್ಯ, ಚಂದ್ರ, ಗ್ರಹ, ತಾರೆ, ಧೂಮಕೇತು ಇತ್ಯಾದಿ. |
| ೫. ಪ್ರಕೃತಿದತ್ತ ವಸ್ತು-ಅಂಶಗಳು | : | ಗಾಳಿ, ಹವಾ, ಬೆಂಕಿ - ಇತ್ಯಾದಿ. |
| ೬. ಭೂಮಿ | : | ಜೌಗು ನೆಲ, ಕಾಡು, ಪರ್ವತ, ಕಣಿವೆ, ಗುಹೆ, ದ್ವೀಪ ಮೊದಲಾದವು ರಚನೆಯ ವೈಚಿತ್ರ್ಯ<br>ಖನಿಜ, ಸಸ್ಯ, ಮನುಷ್ಯ ಅಥವಾ ಪ್ರಾಣಿಯ ಹುಟ್ಟು, ಪಾಳುಬಿದ್ದ ವ್ಯಕ್ತಿ, ಕಣ್ಮರೆಯಾದ ನಗರ, ಸುಡುಗಾಡು, ಗುಪ್ತನಿಧಿ |

೭. ನೀರು : ತಟಸ್ಥನೀರು, ಸಾಗರ, ಸಮುದ್ರ, ಹೊಂಡ, ಬಾವಿ, ನೀರಿನ ನೆಲೆಗಳು, ಹಳ್ಳ, ತೊರೆ, ಕಾಲುವೆ, ಪ್ರವಾಹ, ಕಾರಂಜಿ, ಮನುಷ್ಯ ನಿರ್ಮಿತ ಪ್ರವಾಹ"[೨೧] ಇತ್ಯಾದಿ.

ಈ ಮೇಲಿನ ಏಳು ಬಗೆಗಳನ್ನು ಆಧರಿಸಿದ ಬಾಗ್ಸ್ ಅವರ ಐತಿಹ್ಯಗಳ ವಿಭಜನೆ ಗಮನಿಸಿದ, "ಗ್ರೀಮ್ ಸಹೋದರರು ಲಭ್ಯ ಐತಿಹ್ಯಗಳನ್ನು ವಿಶಾಲವಾಗಿ ಮೂರು ರೀತಿಯಲ್ಲಿ ಗುರುತಿಸುತ್ತಾರೆ. ಅವುಗಳೆಂದರೆ;

೧. ಸ್ಥಳೀಯ ಐತಿಹ್ಯಗಳು

೨. ವಿವರಣಾತ್ಮಕ ಐತಿಹ್ಯಗಳು

೩. ಚಾರಿತ್ರಿಕ ಐತಿಹ್ಯಗಳು"[೨೨]

ಈ ವರ್ಗೀಕರಣ ತುಂಬ ಸ್ಥೂಲವಾಗಿರುವುದು. ಇದರಲ್ಲಿ ಮೊದಲಿನ ವರ್ಗೀಕರಣ ಸಮರ್ಪಕವಾಗಿದೆ. ಆದರೆ ಎರಡನೆಯದಾದ ವಿವರಣಾತ್ಮಕ ಐತಿಹ್ಯಗಳು ಅದರ ರಚನಾ ವಿಧಾನವನ್ನಲಂಬಿಸಿದೆ. ಜನಪದ ನಿರುಕ್ತಿಗಳು ಸಾಮಾನ್ಯವಾಗಿ ಒಂದು ನಿರ್ದಿಷ್ಟ ಸ್ಥಳಕ್ಕೆ ಸೇರಿವೆ. ಆ ಸ್ಥಳದ ವೈಶಿಷ್ಟ್ಯವನ್ನು ಎತ್ತಿತೋರಿಸುತ್ತವೆ. ಇನ್ನೂ ಚಾರಿತ್ರಿಕ ಐತಿಹ್ಯಗಳಿಗೆ ಸಂಬಂಧಿಸಿದಂತೆ ಮೊದಲಿನ ಎರಡು ವಿಭಜನೆಗಳಲ್ಲಿರುವ ಚಾರಿತ್ರಿಕಾಂಶಗಳನ್ನು ಕಡೆಗಣಿಸುವಂತಿಲ್ಲ. ಚರಿತ್ರೆಗೆ ನೇರವಾಗಿ ಸಂಬಂಧಿಸಿದ ಐತಿಹ್ಯ ಎನ್ನುವಾಗಲೂ ಅದು ಒಂದು ಪ್ರದೇಶಕ್ಕೆ ಬದ್ಧವಾಗಿರುತ್ತದೆ. ಹೀಗೆ ಗ್ರೀವ್ ಸಹೋದರರ ಈ ವರ್ಗೀಕರಣವು ಸಾಕಷ್ಟು ಗೊಂದಲಕಾರಿಯಾಗಿದೆ.

"ಜಾನಪದ ಅಂತರಾಷ್ಟ್ರೀಯ ವಿಚಾರ ಸಂಕಿರಣವೊಂದರಲ್ಲಿ ಐತಿಹ್ಯಗಳನ್ನು ಈ ಕೆಳಗಿನಂತೆ ನಾಲ್ಕು ಭಾಗಗಳಾಗಿ ವರ್ಗೀಕರಿಸಿದ್ದಾರೆ.

೧. ವಿವರಣಾತ್ಮಕ ಮತ್ತು ಅಂತಿಮಗತಿ ಶಾಸ್ತ್ರದ ಐತಿಹ್ಯ

೨. ಚಾರಿತ್ರಿಕ ಐತಿಹ್ಯಗಳು ಮತ್ತು ನಾಗರಿಕತೆಯ ಚರಿತ್ರೆಗೆ ಸಂಬಂಧಿಸಿದ ಐತಿಹ್ಯಗಳು.

೩. ಅತಿಮಾನುಷ ಶಕ್ತಿಗಳು ಅಥವಾ ಪೌರಾಣಿಕ ಐತಿಹ್ಯಗಳು.

೪. ಧಾರ್ಮಿಕ ಐತಿಹ್ಯಗಳು ಅಥವಾ ದೇವರುಗಳ ಮತ್ತು ನಾಯಕರಗಳ ಪುರಾಣ"[೨೩]

ಈ ವಿಭಜನೆಯಲ್ಲಿ ಕ್ರೈಸ್ತ ತಾತ್ವಿಕತೆಯನ್ನು ಆಧರಿಸಿದ್ದು ಇಲ್ಲಿ ಬರುವ ಅಂತಿಮಘಟ್ಟವನ್ನು ಸಾರುವ ಸಾವು, ತೀರ್ಪು ಮತ್ತು ಸ್ವರ್ಗ ನರಕಗಳಿಗೆ ಸಂಬಂಧಿಸಿದೆ. ಎರಡನೆಯ ಭಾಗವು ಗೊಂದಲವನ್ನು ಹುಟ್ಟು ಹಾಕುತ್ತದೆ. ಇಲ್ಲಿ ಚರಿತ್ರೆಯ ಅಧ್ಯಯನ ತನ್ನ ಪರಿಸರದ ಎಲ್ಲವನ್ನು ಒಳಗೊಂಡು ಪ್ರಬುದ್ಧವಾಗಿದೆ. ಚರಿತ್ರೆಯಲ್ಲಿ ನಾಗರಿಕತೆಯು ಒಳಗೊಂಡಿದೆ. ಅದು ಅಂತಿಮ

ಗತಿಶಾಸ್ತ್ರದ ತಾತ್ವಿಕತೆಯನ್ನು ರೂಪಿಸಿದೆ. ಇನ್ನುಳಿದ ಮೂರು ಮತ್ತು ನಾಲ್ಕನೆಯ ಭಾಗಗಳ ಸಂಗತಿಗಳಲ್ಲಿ ವ್ಯತ್ಯಾಸವೇ ಇಲ್ಲ. ಪುರಾಣ ಪುರುಷರಿಗೆ ಅತಿಮಾನುಷ ಶಕ್ತಿಗಳು ಪ್ರಾಪ್ತವಾಗುತ್ತವೆ. ಅವರೇ ದೇಶದ ಧಾರ್ಮಿಕ ಚಿಂತನೆಯ ಕೇಂದ್ರಗಳಾಗುತ್ತಾರೆ. ಸಾಮಾಜಿಕ ನಾಯಕರುಗಳು ಪುರಾಣ ಪುರುಷರ ಆಕೃತಿ ಪಡೆಯುತ್ತಾರೆ. ಈ ವರ್ಗೀಕರಣ ಏನಿದ್ದರೂ ಯೂರೋಪಿನ ಚಿಂತನೆಯನ್ನು ಆಧರಿಸಿದ್ದು, ಭಾರತದಂತಹ ದೇಶಕ್ಕೆ ಅನ್ವಯವಾಗುವುದಿಲ್ಲ.

ಜಾನಪದ ತಜ್ಞರಾದ ರಿಚರ್ಡ್ ಎಂ. ಡಾರ್ಸನ್‌ರವರು ಐತಿಹ್ಯಗಳನ್ನು ಮೂರು ರೀತಿಯಾಗಿ ವರ್ಗೀಕರಿಸಿಕೊಂಡಿದ್ದಾರೆ.

೧. "ವ್ಯಕ್ತಿ ಐತಿಹ್ಯಗಳು (Legends deal with person)

೨. ಸ್ಥಳ ಐತಿಹ್ಯಗಳು (Legends deal with places)

೩. ಘಟನಾ ಐತಿಹ್ಯಗಳು (Legends deal with events)"[೨೪]

ಈ ಮೇಲಿನ ವಿಭಜನೆ ಪಾಶ್ಚಿಮಾತ್ಯ ದೇಶಗಳ ಜಾನಪದ ತಜ್ಞರ ಕಲ್ಪನೆ ಹಾಗೂ ವಿಶ್ವಜಾನಪದವನ್ನು ದೃಷ್ಟಿಯಲ್ಲಿರಿಸಿಕೊಂಡು ಕೊಟ್ಟ ಅರ್ಥಗಳನ್ನು ಮತ್ತು ನಿರ್ಮಿಸಿಕೊಂಡ ಬಗೆಗಳು. ಈ ವಿದ್ವಾಂಸರು ಮುಖ್ಯವಾಗಿ ಗಮನದಲ್ಲಿರಿಸಿಕೊಂಡುದು ಆಯಾ ನಾಡಿನ ಐತಿಹ್ಯಗಳನ್ನೇ ಅವಲಂಬಿಸಿರುವುದು. ಈ ದೃಷ್ಟಿಯಿಂದ ಈ ಅರ್ಥ ಬಗೆಗಳೆಲ್ಲಾ ದೇಶದಿಂದ ದೇಶಕ್ಕೆ, ಒಂದು ಸಾಂಸ್ಕೃತಿಕ ಪರಿಸರದಿಂದ ಇನ್ನೊಂದು ಸಾಂಸ್ಕೃತಿಕ ಪರಿಸರಕ್ಕೆ ಬದಲಾಗುತ್ತ ಸಾಗುವುದು.

ಹಾಗೆಯೇ ನಮ್ಮ ಕನ್ನಡ ನಾಡಿನ ಜಾನಪದ ವಿದ್ವಾಂಸರು ಐತಿಹ್ಯಗಳನ್ನು ವರ್ಗೀಕರಿಸಿಕೊಂಡ ವಿಧಾನವನ್ನು ಗಮನಿಸಬಹುದು.

೧. "ಸೃಷ್ಟಿ ಅಥವಾ ಜಗತ್ತಿನ ಮೂಲವನ್ನು ಕುರಿತಾದ ವಿವರಣಾತ್ಮಕ ಐತಿಹ್ಯಗಳು.

೨. ಅತಿಮಾನುಷ ಕುರಿತ ಐತಿಹ್ಯಗಳು.

೩. ಐತಿಹಾಸಿಕ ಅಥವಾ ಮಿತ್ತ್ಯೈತಿಹಾಸಿಕ ಐತಿಹ್ಯಗಳು"[೨೫]

ಮೊದಲನೇ ಗುಂಪಿನಲ್ಲಿ ಪುರಾಣ ಸಂಪರ್ಕ ಹೊಂದಿದ ಮತ್ತು ಧಾರ್ಮಿಕ ಐತಿಹ್ಯಗಳನ್ನು ಸೇರಿಸಲಾಗಿದೆ. ವಿವರಣಾತ್ಮಕ ಐತಿಹ್ಯಗಳು ವಿಶಿಷ್ಟ ನಂಬಿಕೆ, ಪದ್ಧತಿ ಅಥವಾ ವಸ್ತು ವೈಶಿಷ್ಟ್ಯ ಅಥವಾ ವಿಶೇಷ ಗುಣವೊಂದರ ಸೃಷ್ಟಿಗೆ ಕಾರಣವನ್ನು ವಿವರಿಸುತ್ತವೆ. ಜನಪದರ ಕುತೂಹಲ ಕೆರಳಿಸಿದ ವಿಷಯಗಳಲ್ಲಿ ಪ್ರಕೃತಿ ವಿಷಯಗಳಾದ ಸೂರ್ಯ, ಚಂದ್ರ, ನಕ್ಷತ್ರ ಮುಂತಾದ ಆಕಾಶಕಾಯಗಳು, ಭೂಕಂಪ, ಪ್ರವಾಹ, ಸೂರ್ಯ, ಬೆಟ್ಟಗುಡ್ಡ ಮುಂತಾದ ಭೌಗೋಳಿಕ ವಿಷಯಗಳು ಹಾಗೂ ಪ್ರಾಣಿಗಳ ಆಕಾರ, ಅಭ್ಯಾಸ ವೈಚಿತ್ರ್ಯಗಳು ಈ ಗುಂಪಿಗೆ ಸೇರುತ್ತವೆ.

ಜನಪದರು ತಮ್ಮ ತಾರ್ಕಿಕತೆಗೆ ಮೀರಿದ ವಿಷಯಗಳನ್ನು ಕಾಲ್ಪನಿಕವಾಗಿ ವಿವರಿಸುವುದರ ಮೂಲಕ ಸಮಾಧಾನ ಪಡೆದುಕೊಳ್ಳುತ್ತಾರೆ. ಇಂತಹ ಐತಿಹ್ಯಗಳ ಹಿನ್ನೆಲೆಯಲ್ಲಿ ಇರುವ ಸತ್ಯಾಂಶವೆಷ್ಟು ಎಂಬುದನ್ನು ವಿಶ್ಲೇಷಿಸಲು ಹೊರಟಾಗ, ಬಹುತೇಕ ಐತಿಹ್ಯಗಳು ಶುದ್ಧ ಕಾಲ್ಪನಿಕವೇ ಆಗಿರುವುದು ಕಂಡುಬರುತ್ತದೆ. ಉದಾ; ಶ್ರೀರಾಮನು ಸಮುದ್ರಕ್ಕೆ ಸೇತುವೆ ಕಟ್ಟಲು ಯೋಚಿಸಿದಾಗ ಚಿತ್ರದುರ್ಗದ ಬೆಟ್ಟದಲ್ಲಿರುವ ಕಲ್ಲುಗಳನ್ನು ತೆಗೆದುಕೊಂಡು ಹೋಗಲು ವಾನರಸೇನೆಯು ಬಂದಿತೆಂದು ಜನಪದರು ಹೇಳುತ್ತಾರೆ. ಹೀಗೆ ಆಲೋಚಿಸಿದರೆ ಯಾರಿಗಾದರೂ ಇದೊಂದು ಕಟ್ಟುಕತೆ ಎಂಬುದು ಗೊತ್ತಾಗುತ್ತದೆ. ಹಿರಿಯೂರು ತಾಲೂಕಿನಲ್ಲಿರುವ ಭೀಮನಬಂಡೆ. ಇವುಗಳ ಹಿನ್ನೆಲೆಯಲ್ಲಿರುವ ಇಂತಹ ಪ್ರಾಕೃತಿಕ ವೈಚಿತ್ರವೇ ಜನಪದರ ಮನಸ್ಸನ್ನು ಕೆರಳಿಸಿ ಐತಿಹ್ಯ ಕಟ್ಟುವಂತೆ ಮಾಡಿರಬಹುದು. ಪುರಾಣದ ಅಂಶವನ್ನು ಹಚ್ಚುವುದರಿಂದ ಈ ವಸ್ತುಗಳು ಹೆಚ್ಚು ಅದ್ಭುತವೂ ಆಕರ್ಷಣೀಯವೂ ಆಗಿ ಕಾಣುತ್ತವೆ. ಜನಪದರಿಗೆ ತಮ್ಮ ಪುರಾಣ ಹಾಗೂ ಪುರಾಣ ವ್ಯಕ್ತಿಗಳ ಮೇಲಿರುವ ಗೌರವ ಅವರನ್ನು ಇಂತಹ ಸನ್ನಿವೇಶಕ್ಕೆ ಪ್ರೇರೇಪಿಸುತ್ತದೆ. ರಾಮಾಯಣ, ಮಹಾಭಾರತದಂತಹ ಮಹಾಕಾವ್ಯಗಳು ನಾಡಿನುದ್ದಕ್ಕೂ ಜನಪದರಲ್ಲಿ ಹಾಸುಹೊಕ್ಕಾಗಿರುವುದರಿಂದ ಪಾತ್ರಗಳನ್ನು ಐತಿಹ್ಯಗಳಲ್ಲಿ ಬಳಸಿಕೊಳ್ಳುವಂತೆ ಮಾಡಿವೆ.

ಎರಡನೆಯ ಗುಂಪಿನಲ್ಲಿ ದೆವ್ವ, ಪಿಶಾಚಿಗಳು, ಕಿನ್ನರ ಕತೆಗಳನ್ನು ಸೇರಿಸಲಾಗಿದೆ. ಅಂದರೆ ಅತಿಮಾನುಷ ಜೀವಿಗಳನ್ನು ಕುರಿತದ್ದು. ಅತಿಮಾನುಷ ಜೀವಿಗಳು ಇದ್ದಾರೆಂದು ಜನಪದರು ನಂಬುತ್ತಾರೆ. ಇಂತಹ ಐತಿಹ್ಯಗಳು ನಾಡಿನ ಎಲ್ಲಾ ಸಂಸ್ಕೃತಿಗಳಲ್ಲೂ ಪ್ರಚಲಿತವಾಗಿವೆ. ನಮ್ಮಲ್ಲಿ ದೆವ್ವ - ರಾಕ್ಷಸಿ ಮುಂತಾದ ಅತಿಮಾನುಷ ಜೀವಿಗಳನ್ನು ಕುರಿತಾದ ಐತಿಹ್ಯಗಳು ಹೇರಳವಾಗಿವೆ. ಜನಪದರಲ್ಲಿ ಇನ್ನೊಂದು ಹೇಳಿಕೆ ಹೀಗಿದೆ. ಸರಿಯಾದ ರೀತಿಯಲ್ಲಿ ಶವಸಂಸ್ಕಾರವಾಗದಿದ್ದರೆ ಅತೃಪ್ತರಾಗಿ ಅಥವಾ ಆಕಸ್ಮಿಕವಾಗಿ ಸಾವು ಉಂಟಾದರೆ, ಚಿಕ್ಕವಯಸ್ಸಿನ ಮದುವೆ ಇಲ್ಲದೆ ಸತ್ತರೆ, ಅಂತಹ ವ್ಯಕ್ತಿಗಳು ದೆವ್ವ ಭೂತಗಳಾಗುತ್ತಾರೆ ಎಂಬುದು ಜನಪದರಲ್ಲಿರುವ ನಂಬಿಕೆ. ಈ ರೀತಿಯ ಐತಿಹ್ಯಗಳನ್ನು ವಿಶ್ಲೇಷಿಸಿದಾಗ, ತಮ್ಮ ಪೂರ್ವಿಕರಿಂದ ಕೇಳಿದ ಸಂಗತಿಗಳು. ಇಂತಹ ಅತಿಮಾನುಷ ಜೀವಿಗಳ ಬಗ್ಗೆ ಭಯ ಹುಟ್ಟಿಸುವವು. ಕೆಲವೊಮ್ಮೆ ಭ್ರಮೆಗಳೇ ಎಂಬುದು ಮನವರಿಕೆಯಾಗಬಹುದೇನು.

ಮೂರನೆಯ ಗುಂಪಿನಲ್ಲಿ ಐತಿಹಾಸಿಕ ವ್ಯಕ್ತಿಗಳನ್ನು ಸೇರಿಸಲಾಗಿದೆ. "ಚಾರಿತ್ರಿಕ ವ್ಯಕ್ತಿಗಳನ್ನು, ಘಟನೆಗಳನ್ನು ಕುರಿತಿರುವಂತಹ ಐತಿಹ್ಯಗಳು ಚಾರಿತ್ರಿಕ ಐತಿಹ್ಯಗಳೆನಿಸಿಕೊಳ್ಳುತ್ತವೆ". ವ್ಯಕ್ತಿ ಜೀವನದಲ್ಲಾದ ಘಟನೆಗಳೆಲ್ಲವೂ ಜನಪದರಲ್ಲಿ ಐತಿಹ್ಯಗಳಾಗಿ ಹುಟ್ಟಿಕೊಳ್ಳುತ್ತವೆ. ಒಬ್ಬರಿಂದ ಮತ್ತೊಬ್ಬರಿಗೆ ವಿಷಯ ಹರಡುವಷ್ಟರಲ್ಲಿ ಹಾಗೂ ಕಾಲ ವ್ಯತ್ಯಾಸದೊಡನೆ ನಡೆದ ಸಂಗತಿಗಳು ಅನೇಕ ಪ್ರಕ್ಷೇಪಗಳನ್ನು, ಕಲ್ಪನೆಗಳನ್ನು ಒಳಗೊಂಡು ಮತ್ತಷ್ಟು ಸ್ವಾರಸ್ಯಕರವಾಗುತ್ತವೆ. ಪ್ರಸಿದ್ಧ ವ್ಯಕ್ತಿಗಳ ಸಾಧನೆ, ಹಿರಿಮೆಗಳ ಬಗೆಗೆ ಹುಟ್ಟಿಕೊಳ್ಳುವ ಐತಿಹ್ಯಗಳು ಬಹುತೇಕ ಉತ್ಪ್ರೇಕ್ಷೆ, ಪ್ರಕ್ಷೇಪಗಳಿಂದ ಕೂಡಿರುತ್ತವೆ. ಜನತೆಯ ಮನಸ್ಸಿನಲ್ಲಿ ಕೆಲವು ವ್ಯಕ್ತಿಗಳ ಬಗೆಗೆ, ಘಟನೆಗಳ

ಬಗೆಗೆ ಗೌರವಾದರಗಳನ್ನು ಮೂಡಿಸುವುದೇ ಕೆಲವು ಐತಿಹ್ಯಗಳ ಗುರಿ. ನಾಯಕನಹಟ್ಟಿ, ತಿಪ್ಪೇರುದ್ರಸ್ವಾಮಿ, ಜುಂಜಪ್ಪ ಮುಂತಾದ ಪವಾಡ ಪುರುಷರ ಹಿನ್ನೆಲೆಯಲ್ಲಿ ಹುಟ್ಟಿಕೊಳ್ಳುವ ಐತಿಹ್ಯಗಳೆಲ್ಲವೂ ಅವರನ್ನು ಮೇಲಿರಿಸುವುದಕ್ಕಾಗಿ ಮತ್ತು ಭಕ್ತಿ, ಸ್ವಾರ್ಥ ಸಾಧನೆಗಾಗಿ ಭಕ್ತರೆ ಹುಟ್ಟಿಸಿದಂತಹ ಕತೆಗಳು. ಜನರು ಇವರಿಗೆ ಪವಾಡಗಳನ್ನು ಆರೋಪಿಸಿ ಪವಾಡ ಪುರುಷರನ್ನಾಗಿಸಿ ಬಿಡುತ್ತಾರೆ. ಇಂತಹ ವಿಷಯಗಳಲ್ಲಿ ಎಲ್ಲೋ ಎಳೆಯಷ್ಟು ಒಂದು ಸಾಲು ಸತ್ಯವಿರಬಹುದು.

ಕನ್ನಡ ವಿಶ್ವಕೋಶದಲ್ಲಿ ಐತಿಹ್ಯಗಳನ್ನು ಈ ರೀತಿಯಲ್ಲಿ ವರ್ಗೀಕರಿಸಲಾಗಿದೆ. ೧. "ಸ್ಥಳೀಯ ಐತಿಹ್ಯಗಳು, ೨. ವಲಸೆಯ ಐತಿಹ್ಯಗಳು ಎಂದು ಎರಡು ರೀತಿಯಲ್ಲಿ ವಿಭಜಿಸಲಾಗಿದೆ. ಮತ್ತೇ ಸ್ಥಳೀಯ ಐತಿಹ್ಯಗಳನ್ನು ಆರು ಒಳಪ್ರಕಾರಗಳಲ್ಲಿ ವಿಭಜಿಸಲಾಗಿದೆ.

೧. ಪ್ರವಾಹ ಐತಿಹ್ಯ ೨. ಬಲಿಗಳ ಐತಿಹ್ಯ ೩. ಕೌಟುಂಬಿಕ ಐತಿಹ್ಯ

೪. ಚಾರಿತ್ರಿಕ ಐತಿಹ್ಯ ೫. ಜನಪದ ನಿರುಕ್ತಿಯ ಐತಿಹ್ಯ

೬. ವಿವರಣಾತ್ಮಕ ಐತಿಹ್ಯ"[೨೬]

ಈ ಮೇಲಿನದು ಐತಿಹ್ಯಗಳ ಪ್ರಸರಣದ ದೃಷ್ಟಿಯಿಂದ ಮಹತ್ವವಾದುದು. ಆದರೆ ಇವು ಅಗತ್ಯಗನುಣವಾಗಿ ವಿವರಿಸುವುದಿಲ್ಲ. ಎಷ್ಟೋ ಬಾರಿ ವಲಸೆ ಐತಿಹ್ಯಗಳು ಮತ್ತು ಸ್ಥಳೀಯ ಐತಿಹ್ಯಗಳು ಸಂಮಿಶ್ರಗೊಂಡು ಹೊಸ ರೂಪ ಪಡೆಯುತ್ತವೆ.

"ತಾಳ್ತಜೆ ವಸಂತಕುಮಾರ ಅವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಐತಿಹ್ಯಗಳು ಎಂಬ ಕೃತಿಯಲ್ಲಿ ವಸ್ತು, ವ್ಯಕ್ತಿ ಮತ್ತು ಘಟನೆಯನ್ನಾಧರಿಸಿ ಪರಿಚಯಾತ್ಮಕ ಲೇಖನವೊಂದರಲ್ಲಿ ಹೀಗೆ ವಿಭಜಿಸಿಕೊಂಡಿದ್ದಾರೆ.

೧. ವ್ಯಕ್ತಿ ಪ್ರಧಾನ ಐತಿಹ್ಯಗಳು

೨. ಸ್ಥಳ ಪ್ರಧಾನ ಐತಿಹ್ಯಗಳು

೩. ಘಟನಾ ಪ್ರಧಾನ ಐತಿಹ್ಯಗಳು"[೨೭]

ಈ ವರ್ಗೀಕರಣ ಕರ್ನಾಟಕದ ಸಂದರ್ಭದಲ್ಲಿ ಐತಿಹ್ಯಗಳ ಅಧ್ಯಯನಕ್ಕೆ ಹೆಚ್ಚು ಸೂಕ್ತವಾದುದು. ಆದರೆ ಈ ವರ್ಗೀಕರಣ ರಿಚರ್ಡ್ ಎಂ. ಡಾರ್ಸನರ ಮಾದರಿಯನ್ನೇ ಅನುಮೋದಿಸುತ್ತದೆ.

ಡಾ. ಸುಬ್ಬಣ್ಣ ರೈ ಅವರು ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು ಎಂಬ ಸಂಶೋಧನಾ ಕೃತಿಯಲ್ಲಿ ಆಶಯದ ಆಧಾರದಿಂದಲೂ ಐತಿಹ್ಯಗಳನ್ನು ವರ್ಗೀಕರಿಸಿಕೊಳ್ಳಬಹುದು. ಐತಿಹ್ಯಗಳಲ್ಲಿ ಪ್ರಧಾನವಾಗಿ ಮೂಡಿಬರುವ ವ್ಯಕ್ತಿಯ ಗುಣ-ಸ್ವಭಾವಗಳನ್ನು ಅಲ್ಲಿಯ ಪ್ರಮುಖ ಘಟನೆ - ಕ್ರಿಯೆಗಳನ್ನು ಆಶಯಗಳನ್ನು ಪರಿಗಣಿಸಿ ಅದರಂತೆ ಐತಿಹ್ಯಗಳನ್ನು ವರ್ಗೀಕರಿಸಿದ್ದಾರೆ. ೧. ವೀರತನದ ಐತಿಹ್ಯ, ೨. ಸಹ ಗುಣದ ಐತಿಹ್ಯ, ೩. ತ್ಯಾಗ ಗುಣದ ಐತಿಹ್ಯ, ೪. ಪ್ರಾಮಾಣಿಕತೆಯ ಐತಿಹ್ಯ, ೫. ಜಾಣತನದ ಐತಿಹ್ಯ, ೬. ಮುಗ್ಧತೆಯ ಐತಿಹ್ಯ,

೭. ಹೆಡ್ಡತನದ ಐತಿಹ್ಯ, ೮. ಛಲ ಗುಣದ ಐತಿಹ್ಯ, ೯. ಅಲಂಕಾರದ ಐತಿಹ್ಯ, ೧೦. ಜಿಪುಣತನದ ಐತಿಹ್ಯ, ೧೧. ಮಾತ್ಸರ್ಯದ ಐತಿಹ್ಯ, ೧೨. ಒರಟುತನದ ಐತಿಹ್ಯ, ೧೩. ಪ್ರತೀಕಾರ ಗುಣದ ಐತಿಹ್ಯ, ೧೪. ಸೋಮಾರಿತನದ ಐತಿಹ್ಯ, ೧೫. ಮರೆಗುಳಿತನದ ಐತಿಹ್ಯ, ೧೬. ದಿಟ್ಟತನದ ಐತಿಹ್ಯ, ೧೭. ಶೋಷಣೆಯ ಐತಿಹ್ಯ, ೧೮. ಪರೋಪಕಾರಗುಣದ ಐತಿಹ್ಯ ಎಂಬುದಾಗಿ ತಿಳಿಸಿಕೊಟ್ಟಿದ್ದಾರೆ. ಹೀಗೆ ವಸ್ತು, ಆಶಯ, ಮನುಷ್ಯನ ಭಾವನೆಗಳಿಗೆ ಮತ್ತು ವ್ಯಕ್ತಿತ್ವಕ್ಕೆ ಸಂಬಂಧಿಸಿದಂತೆ ವಿವಿಧ ರೀತಿಯಲ್ಲಿ ವಿಭಜಿಸಿದ್ದಾರೆ".[೨೮]

ಇದುವರೆಗೂ ಪಾಶ್ಚಿಮಾತ್ಯ ಮತ್ತು ನಾಡಿನ ಜಾನಪದ ತಜ್ಞರು ವರ್ಗೀಕರಿಸಿದ ಪ್ರಕಾರಗಳನ್ನು ಇಲ್ಲಿ ಗಮನಿಸಲಾಗಿದೆ. ವಿದ್ವಾಂಸರ ಪ್ರಕಾರಗಳನ್ನು ಅವಲೋಕಿಸಿದಾಗ ಆ ನಾಡಿನ ಪ್ರಾದೇಶಿಕತೆ, ಸ್ಥಳೀಯ ಮತ್ತು ವಸ್ತು, ಘಟನೆ ಅವುಗಳ ಆಶಯದ ಹಿನ್ನೆಲೆ ಆಧರಿಸಿ ವಿಂಗಡಿಸಲಾಗಿದೆ. ಆದರೆ ಒಂದು ಪ್ರದೇಶದ ಐತಿಹ್ಯಗಳು ಬೇರೆ ಪ್ರದೇಶದಲ್ಲಿ, ಪ್ರಚಾರದಲ್ಲಿ ಇರಬಹುದು.

ಇದುವರೆಗೆ ಗಮನಿಸಿದ ವಿವಿಧ ರೀತಿಯ ವರ್ಗೀಕರಣಗಳಲ್ಲಿ ವಸ್ತು ದೃಷ್ಟಿಯಿಂದ ನಿರ್ಮಿಸಿಕೊಂಡ ೧. ಸ್ಥಳ ಪ್ರಧಾನ ಐತಿಹ್ಯಗಳು, ೨. ವ್ಯಕ್ತಿ ಪ್ರಧಾನ ಐತಿಹ್ಯಗಳು, ೩. ಘಟನಾ ಪ್ರಧಾನ ಐತಿಹ್ಯಗಳು, ಈ ಮೂರು ವಿಧಾನಗಳ ಜೊತೆಗೆ, ೪. ಪಶುಪಾಲಕರಿಗೆ ಸಂಬಂಧಿಸಿದ ಐತಿಹ್ಯಗಳು, ೫. ಪಾಳೆಗಾರರಿಗೆ ಸಂಬಂಧಿಸಿದ ಐತಿಹ್ಯಗಳು ಹೀಗೆ ಇವುಗಳ ಮೂಲಕ ಅಧ್ಯಯನ ಕೈಗೊಂಡಿರುತ್ತೇನೆ. ಚಿತ್ರದುರ್ಗದ ಐತಿಹ್ಯಗಳ ಅಧ್ಯಯನವು ಮುಖ್ಯವಾಗಿ ಈ ವರ್ಗೀಕರಣ ವಿಧಾನವನ್ನನುಸರಿಸಿ ಸಾಗುತ್ತದೆ. ಮೂಲತಃ ಗದ್ಯ ನಿರೂಪಣೆಯಲ್ಲಿದ್ದು ಕಾಲಕ್ರಮದಲ್ಲಿ ಪದ್ಯಮಾಧ್ಯಮದಲ್ಲಿ ಕಾಣಿಸಿಕೊಂಡ ಐತಿಹ್ಯಗಳನ್ನು ಸಂಗ್ರಹಿಸುವುದು. ವ್ಯಕ್ತಿ, ಸ್ಥಳ, ಘಟನಾ ಸಂಬಂಧಿಸಿದ ಐತಿಹ್ಯಗಳನ್ನು ಸಂಗ್ರಹಿಸಿ ವಿಶ್ಲೇಷಿಸುವುದು. ಅದೇ ರೀತಿ ಈ ಪರಿಸರದಲ್ಲಿ ವಿಶೇಷವಾಗಿ ಕಂಡು ಬರುವ ಪಶುಪಾಲಕ ಸಮುದಾಯದ ಮಹತ್ವವಿರುವುದನ್ನು ಗಮನದಲ್ಲಿಟ್ಟುಕೊಳ್ಳಲಾಗುವುದು. ಒಟ್ಟಿನಲ್ಲಿ ಇಲ್ಲಿ ವಿವರಿಸಿದ ವರ್ಗೀಕರಣಗಳೇನಿದ್ದರೂ ಈ ಪರಿಸರದಲ್ಲಿ ದೊರೆಯುವ ಐತಿಹ್ಯಗಳನ್ನೆಲ್ಲಾ ನಿರ್ದಿಷ್ಟವಾಗಿ ಗೆರೆಯೆಳೆದು ಅಧ್ಯಯನಕ್ಕೆ ವರ್ಗೀಕರಿಸುವುದು ಕಷ್ಟ ಸಾಧ್ಯವೆಂಬ ವಸ್ತುಸ್ಥಿತಿಯನ್ನು ತಿಳಿದುಕೊಂಡೇ ಇಲ್ಲಿನ ಅಧ್ಯಯನಕ್ಕೆ ಒಳಪಡಿಸಿದ್ದೇನೆ.



**ಕೊನೆ ಟಿಪ್ಪಣಿಗಳು**

೧. ಲಕ್ಷ್ಮಣ್ ತೆಲಗಾವಿ(ಸಂ), ೧೯೮೭, **ಹರತಿಸಿರಿ**, ಪು. ೭೯.

೨. ಸೋಮಶೇಖರ ಇಮ್ರಾಪುರ(ಸಂ), ೧೯೯೪, **ಜಾನಪದ ಸಾಹಿತ್ಯ ದರ್ಶನ, ಭಾಗ-೧೫**, ಪು. ೨೮.

೩. ಲಕ್ಷ್ಮಣ್ ತೆಲಗಾವಿ(ಸಂ), ೧೯೮೭, **ಹರತಿಸಿರಿ**, ಪು. ೭೯.

೪. ಸೋಮಶೇಖರ ಇಮ್ರಾಪುರ(ಸಂ), ೧೯೯೪, **ಜಾನಪದ ಸಾಹಿತ್ಯ ದರ್ಶನ, ಭಾಗ-೧೫**, ಪು. ೨೮.

೫. ಜವರೇಗೌಡ ದೇ., ೨೦೦೧, **ಜಾನಪದ ಅಧ್ಯಯನ**, ಪುಟ ೧೯೪.

೬. ಸೋಮಶೇಖರ ಇಮ್ರಾಪುರ(ಸಂ), ೧೯೯೪, **ಜಾನಪದ ಸಾಹಿತ್ಯ ದರ್ಶನ, ಭಾಗ-೧೫,** ಪು. ೮.

೭. ಅದೇ ಪುಸ್ತಕ, ಪು. ೯.

೮. ಸುಬ್ಬಣ್ಣ ರೈ ಎ., ೧೯೯೪, **ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು,** ಪು. ೧೦.

೯. ಸೋಮಶೇಖರ ಇಮ್ರಾಪುರ(ಸಂ), ೧೯೯೪, **ಜಾನಪದ ಸಾಹಿತ್ಯ ದರ್ಶನ, ಭಾಗ-೧೫,** ಪು. ೨೬.

೧೦. ಅದೇ ಪುಸ್ತಕ, ಪು. ೨೬.

೧೧. ಕಿಟ್ಟೆಲ್ ಆರ್.ಎಫ್.(ಸಂ), ೧೯೮೩, **ಕನ್ನಡ-ಇಂಗ್ಲಿಷ್ ಡಿಕ್ಸನರಿ,** ಪು. ೨೬.

೧೨. ಬಸವರಾಧ್ಯ(ಪ್ರ.ಸಂ.), **ಸಂಕ್ಷಿಪ್ತ ಕನ್ನಡ ನಿಘಂಟು,** ಪು. ೧೮೩.

೧೩. ಶಿವರಾಮ ಕಾರಂತ(ಸಂ), ೧೯೬೭, **ಸಿರಿಗನ್ನಡ ಅರ್ಥಕೋಶ,** ಪು. ೭೭.

೧೪. ಚಂದ್ರಶೇಖರ ಕಂಬಾರ(ಸಂ), ೧೯೮೫, **ಕನ್ನಡ ಜಾನಪದ ವಿಶ್ವಕೋಶ,** ಪು. ೨೫೦.

೧೫. ಇಂಗ್ಲೀಷ್-ಕನ್ನಡ ನಿಘಂಟು, ೧೯೮೫, ಪು. ೬೬೦.

೧೬. ಜವರೇಗೌಡ ದೇ., ೨೦೦೧, **ಜಾನಪದ ಅಧ್ಯಯನ,** ಪು. ೧೮೧.

೧೭. ಶಿವರಾಮ ಕಾರಂತ(ಸಂ), ೧೯೬೭, **ಸಿರಿಗನ್ನಡ ಅರ್ಥಕೋಶ,** ಪು. ೭೭.

೧೮. ತಾಳ್ತಜೆ ವಸಂತಕುಮಾರ, ೧೯೮೫, **ಸಾರಸ,** ಪು. ೧೨೧.

೧೯. ಪುರುಷೋತ್ತಮ ಬಿಳಿಮಲೆ, ೧೯೯೦, **ಕರಾವಳಿ ಜಾನಪದ,** ಪು. ೭೪.

೨೦. ಸುಬ್ಬಣ್ಣ ರೈ ಎ., ೧೯೯೪, **ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು,** ಪು. ೧೦.

೨೧. ಅದೇ, ಪು. ೧೭, ೧೮.

೨೨. ಅದೇ, ಪು. ೧೮.

೨೩. ಅದೇ, ಪು. ೧೮-೧೯.

೨೪. ಅದೇ, ಪು. ೧೯.

೨೫. ಅದೇ, ಪು. ೨೦.

೨೬. ನಾಯಕ ಹಾ.ಮ.(ಪ್ರ.ಸಂ.), ೧೯೭೧, **ಕನ್ನಡ ವಿಶ್ವಕೋಶ, ಸಂಪುಟ-೩,** ಪು. ೨೫೭.

೨೭. ತಾಳ್ತಜೆ ವಸಂತಕುಮಾರ, ೧೯೮೫, **ಸಾರಸ,** ಪು. ೧೨೧.

೨೮. ಸುಬ್ಬಣ್ಣ ರೈ ಎ., ೧೯೯೪, **ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು,** ಪು. ೨೧.



ಅಧ್ಯಾಯ : ನಾಲ್ಕು

# ಚಿತ್ರದುರ್ಗ ಪರಿಸರದ ಐತಿಹ್ಯಗಳು

೪.೧. ಸ್ಥಳ ಪ್ರಧಾನ ಐತಿಹ್ಯಗಳು
೪.೨. ವ್ಯಕ್ತಿ ಪ್ರಧಾನ ಐತಿಹ್ಯಗಳು
೪.೩. ಘಟನಾ ಪ್ರಧಾನ ಐತಿಹ್ಯಗಳು

# ಅಧ್ಯಾಯ : ನಾಲ್ಕು

## ಚಿತ್ರದುರ್ಗ ಪರಿಸರದ ಐತಿಹ್ಯಗಳು

ಐತಿಹ್ಯಗಳಿಗೆ ಜನಪದ ಸಾಹಿತ್ಯ ಪ್ರಕಾರದಲ್ಲಿ ವಿಶಿಷ್ಟ ಸ್ಥಾನಮಾನವಿದೆ. ಈ ಪ್ರಕಾರವು ಎಂದೋ ನಡೆದ ಘಟನೆಗಳನ್ನು, ಸಂಗತಿಗಳನ್ನು ಕಥನಗಳ ಮೂಲಕ ಉಳಿಸಿಕೊಂಡು ಬಂದಿದ್ದು ಪ್ರಾಚೀನ ಕಾಲಘಟ್ಟದ ಸಾಮಾಜಿಕ ವ್ಯವಸ್ಥೆಯನ್ನು ತಿಳಿಯಲು ಸಹಕಾರಿಯಾಗಿವೆ. ಐತಿಹ್ಯಗಳು ಬಹುಮುಖಿ ಸಂಸ್ಕೃತಿಯಾಗಿದ್ದು, ಪ್ರಾದೇಶಿಕವಾಗಿ ಮತ್ತು ಸಮುದಾಯನಿಷ್ಠ ದೃಷ್ಟಿಯಿಂದ ವಿವಿಧತೆಯನ್ನು ಹೊಂದಿರುತ್ತವೆ. ಸ್ಥಳ ಪ್ರಧಾನ ಐತಿಹ್ಯವು ಆಯಾ ಪ್ರದೇಶದ ಸಾಂಸ್ಕೃತಿಕ ಹಿನ್ನೆಲೆಯ ಕುರಿತಾಗಿದ್ದು, ಅಲ್ಲಿನ ಸಾಮಾಜಿಕ ಸಂಗತಿಗಳನ್ನೂ ಒಳಗೊಂಡಿರುತ್ತದೆ.

ಪ್ರಾದೇಶಿಕ ಭಿನ್ನತೆಯಿರುವ ಚಿತ್ರದುರ್ಗ ಪರಿಸರವು ಸಾಂಸ್ಕೃತಿಕವಾಗಿ ಶ್ರೀಮಂತವಾಗಿದೆ. ಕಲೆ, ಸಾಹಿತ್ಯ ಅಥವಾ ಜನಪದ ಸಾಹಿತ್ಯ ಮತ್ತು ರಾಜಕೀಯಗಳಿಂದ ಈ ಪರಿಸರವು ಬಹುಮುಖಿ ಅಧ್ಯಯನಕ್ಕೆ ಅಗತ್ಯವಾದ ಪ್ರದೇಶ. ಆದರೆ ಜನಪದ ಸಾಹಿತ್ಯ ಸಮೃದ್ಧವಾಗಿರುವ ಈ ಜಿಲ್ಲೆಯಲ್ಲಿ ಬಹುತೇಕ ತಳಸಮುದಾಯಗಳು ಕಂಡುಬರುತ್ತವೆ. ಈ ಭಾಗದ ಜನರು ಮೌಖಿಕ ಸಂಸ್ಕೃತಿಗೆ ಅವಲಂಬಿತರಾದವರು. ಅಲ್ಲದೆ ತಮ್ಮ ಬದುಕಿನ ನೈಜ ಸಂಗತಿಗಳನ್ನು, ಘಟನೆಗಳನ್ನು ಮೌಖಿಕವಾಗಿ ಕಟ್ಟಿಕೊಂಡಿರುವುದರಿಂದ, ಐತಿಹ್ಯಗಳ ಅಧ್ಯಯನವು ಹೆಚ್ಚು ಅತ್ಯಗತ್ಯವಾಗಿದೆ.

ಇಲ್ಲಿಯವರೆಗೂ ರಚನೆಗೊಂಡಿರುವ 'ಲಿಖಿತ ಇತಿಹಾಸ'ವು ಬಹುಪಾಲು ಪ್ರಭುತ್ವವನ್ನೇ ಕೇಂದ್ರೀಕರಿಸಿದಂಥ ದೃಷ್ಟಿಕೋನದ್ದೇ ಆಗಿದೆ. ಆದರೆ ಈ ದೃಷ್ಟಿಕೋನವು ಮಿತಿಗಳಿಗೆ ಒಳಪಡುವಂಥದ್ದು. ಪ್ರಭುತ್ವಕ್ಕೆ ಮಾತ್ರ ಸೀಮಿತವಾದ ಈ ಬಗೆಯ ಇತಿಹಾಸ ಸಮಾಜದ ಇನ್ನುಳಿದ ಆಯಾಮಗಳನ್ನು ಗೌಣವಾಗಿಸುತ್ತದೆ. 'ಜನ' ಅಥವಾ 'ಜನಪದ'ರನ್ನೊಳಗೊಂಡ ಚರಿತ್ರೆಯ ಚಹರೆಗಳು ಇಲ್ಲಿ ಪ್ರಧಾನಧಾರೆಗೆ ಬರುವುದೇ ಇಲ್ಲ. ಈವರೆಗೂ ರಚನೆಗೊಂಡಿರುವ ಸಾಂಪ್ರದಾಯಿಕ ಚರಿತ್ರೆಗಳು ಪ್ರಭುತ್ವವನ್ನು ಹೊರತುಪಡಿಸಿದ ಆಳ್ವಿಕೆಗೆ ಒಳಪಟ್ಟವರ, ಜನಸಾಮಾನ್ಯರ ಚಹರೆಗಳನ್ನು ಕಟ್ಟಿಕೊಡುವಲ್ಲಿ ಸೋತಿವೆ. ಹೀಗೆ ಸೋಲುವುದರ ಜೊತೆಗೆ ಬಹುಮುಖಿ ನೆಲೆಯ ಸಾಂಸ್ಕೃತಿಕ ಒಳನೋಟಗಳ ಫಲಿತಗಳನ್ನು ಪಡೆಯುವಲ್ಲಿಯೂ ವಿಫಲವಾಗಿರುವುದುಂಟು. ಈ ಕೊರತೆಗಳನ್ನು

ಲಿಖಿತ ಚರಿತ್ರೆಗಳ ಜೊತೆ ಜೊತೆಯಾಗಿ ಮೌಖಿಕ ಚರಿತ್ರೆಯ ಆಕರಗಳ ಮೂಲಕ ತೌಲನಿಕವಾಗಿ ಪರಿಶೀಲಿಸುವ ಜರೂರು ಈ ಅಧ್ಯಯನದ್ದಾಗಿದೆ. ಈ ಹಿನ್ನೆಲೆಯಲ್ಲಿ 'ಜನ', 'ಜನಪದ' ಅಥವಾ 'ಜನಸಾಮಾನ್ಯ'ರನ್ನು ಹೆಚ್ಚಾಗಿ ಪ್ರತಿನಿಧಿಸಿ, ಪ್ರತಿಬಿಂಬಿಸುವ ವಿಭಿನ್ನ ಪ್ರಕಾರಗಳ ಮೌಖಿಕ ಆಕರಗಳನ್ನೇ ಈ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಅದರಲ್ಲೂ ವ್ಯಕ್ತಿ, ಸ್ಥಳ ಮತ್ತು ಘಟನೆಗಳ ನಿರೂಪಣೆಯನ್ನು ಕಟ್ಟಿಕೊಡುವಂಥ 'ಐತಿಹ್ಯ'ಗಳನ್ನೇ ನೇರವಾಗಿ ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಂಡಿರುವುದು ಇಲ್ಲಿನ ವಿಶೇಷತೆ. ಈ ಬಗೆಯ ನೋಟದಿಂದ 'ಜನಪದ'ರ ಇತಿಹಾಸ ಅಥವಾ 'ಜನಸಾಮಾನ್ಯ'ರ ಚರಿತ್ರೆಯನ್ನು ಕಟ್ಟಿಕೊಡಲು ಸಾಧ್ಯ ಎಂಬುದು ಇಲ್ಲಿನ ಆಶಯ. ಇದರ ಜೊತೆಗೆ ಸಂಸ್ಕೃತಿಗಳಲ್ಲಿನ ಬಹುಮುಖಿ ಚಹರೆ ಹಾಗೂ ಸಂಗತಿಗಳನ್ನು ಅನಾವರಣ ಮಾಡುವ ತುಡಿತವೂ ಹೌದು.

### ೪.೧. ಸ್ಥಳ ಪ್ರಧಾನ ಐತಿಹ್ಯಗಳು

ಒಂದು ಸ್ಥಳದ ಭೌಗೋಳಿಕ ವೈಶಿಷ್ಟ್ಯ ಅಸಾಮಾನ್ಯತೆಯನ್ನು ಗಮನಿಸಿಕೊಂಡು ಸ್ಥಳ ಐತಿಹ್ಯಗಳು ಹುಟ್ಟಿಕೊಂಡಿರುತ್ತವೆ. ಇವು ಸ್ಥಳ ಮಹಿಮೆ, ವ್ಯಕ್ತಿ ವಿಶೇಷಗಳು, ಸಂಪ್ರದಾಯಗಳು ಮತ್ತು ಘಟನೆಗಳನ್ನು ತಿಳಿಸುತ್ತವೆ. ಇವು ಸಂಕ್ಷಿಪ್ತ ರೂಪವಾಗಿದ್ದು ಗದ್ಯಾತ್ಮಕವಾಗಿರುವ ಈ ಸ್ಥಳ ಐತಿಹ್ಯಗಳು ಒಂದು ನಿರ್ದಿಷ್ಟ ಸ್ಥಳಕ್ಕೆ ಬದ್ಧವಾಗಿರುತ್ತವೆ. ವ್ಯಕ್ತಿಗಳೊಂದಿಗೆ ಸ್ಥಳಕ್ಕೆ ಹೆಚ್ಚಿನ ಮಹತ್ವವಿದೆ. ಆದರೆ ಇವು ಹುಟ್ಟಿಕೊಂಡ ಕಾಲವನ್ನು ನಿರ್ದಿಷ್ಟವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಆದರೆ ಇವುಗಳ ಪ್ರಸಾರ ವ್ಯಾಪ್ತಿಯು ಬಹುಮಟ್ಟಿಗೆ ಆ ಸ್ಥಳಕ್ಕೆ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳಿಗೆ ಸೀಮಿತವಾಗಿರುತ್ತವೆ. ಇಂತಹ ಐತಿಹ್ಯಗಳಿಗೆ ಹೆಚ್ಚಿನ ಮಹತ್ವ ಇದೆ.

### ಸ್ಥಳ ಪುರಾಣ

"ದ್ವಾಪರಯುಗದಲ್ಲಿ ಕೌರವರು ದಾಯಾದಿ ಮತ್ಸರದಿಂದ ಪಾಂಡವರನ್ನು ಲಾಕ್ಷಗೃಹಪ್ರವೇಶ ಮಾಡಿಸಿದ ಕಾಲದಲ್ಲಿ, ಭೀಮನು ಕುಂತಿಯುಕ್ತನಾಗಿ ಐದು ಮಂದಿಯನ್ನು ಹೊತ್ತುಕೊಂಡು ರಾತ್ರಿ ವೇಳೆಯಲ್ಲಿ ಹೊರಟು ಹೋಗುತ್ತಾ ದಾರಿಯಲ್ಲಿ ಹಿಡಿಂಬಾಶ್ರಮವೆಂಬ ಪರ್ವತವನ್ನು ಸೇರಿದನಂತೆ. ಆಗ ಹಿಡಿಂಬಾಸುರನು ಈ ಪಾಂಡವರನ್ನು ತಿನ್ನಬೇಕೆಂದು ಬಂದನು. ಭೀಮಸೇನನು ಆ ಅಸುರನೊಡನೆ ಕಾಳಗವನ್ನು ಮಾಡಿ ಅವನನ್ನು ಗುದ್ದಿ ಸಂಹಾರ ಮಾಡಿ ಅವನ ಹಲ್ಲುಗಳನ್ನು ಕಿತ್ತು ಬಿಟ್ಟನು. ತರುವಾಯ ಪಾಂಡವರು ಬೆಟ್ಟಕ್ಕೆ ಸಮೀಪದಲ್ಲಿ ಇಳಿದುಕೊಂಡರು. ಆ ಸ್ಥಳಕ್ಕೆ ಪಂಡರಹಳ್ಳಿ ಎಂದು ಹೆಸರಾಯಿತಂತೆ. ತರುವಾಯ ಈ ಗುಡ್ಡಕ್ಕೆ ಸೇರಿದ ಹುಲಿಗೊಂದಿ ಎಂಬ ಸ್ಥಳದಲ್ಲಿ ಪಾಂಡವರು ಪಂಚಲಿಂಗಗಳನ್ನು ಪ್ರತಿಷ್ಠಾಪನೆ ಮಾಡಿದರಂತೆ. ಈಗಲೂ ಆ ಸ್ಥಳದಲ್ಲಿ ಐದು ದೇವಸ್ಥಾನಗಳು ಇವೆ. ಅಲ್ಲಿ ಧರ್ಮೇಶ್ವರ, ಭೀಮೇಶ್ವರ, ಫಲ್ಗುಣೇಶ್ವರ, ನಕುಲೇಶ್ವರ, ಸಹದೇವೇಶ್ವರ ಎಂದು ಹೆಸರುಳ್ಳ ಐದು ಲಿಂಗಗಳು ಪ್ರತಿಷ್ಠೆಯಾಗಿವೆ".[೧] ಹೀಗೆ ಈ ಕೃತಿಯಲ್ಲಿ ಬರುವ ಸ್ಥಳಪುರಾಣ, ಐತಿಹ್ಯ ನನ್ನ ಅಧ್ಯಯನಕ್ಕೆ ಪೂರಕವಾಗಿ ಮಾಹಿತಿಯನ್ನು ಒದಗಿಸುತ್ತದೆ.

**ಚಿತ್ರದುರ್ಗ**

ಚಿತ್ರದುರ್ಗ ಒಂದು ಐತಿಹಾಸಿಕ ಸಾಂಸ್ಕೃತಿಕ ಕೇಂದ್ರ. ಇತಿಹಾಸದಲ್ಲಿ ಮಹತ್ತರ ಮೌಲ್ಯವಿರುವ ಈ ಜಿಲ್ಲೆ ಶೌರ್ಯ, ತ್ಯಾಗ ಹಾಗೂ ಮೌಲ್ಯಗಳಿಗೆ ಸಾಂಪ್ರದಾಯಿಕ ಕ್ಷೇತ್ರವಾಗಿ ಕಂಡು ಬರುತ್ತದೆ. ಚಿತ್ರದುರ್ಗವೆಂದು ಹೆಸರು ಬರಲು ಐತಿಹ್ಯ ಹೀಗಿದೆ. "ಚಂದ್ರವಳ್ಳಿಯ ಸಮೀಪದಲ್ಲಿರುವ ಧವಳೇಶ್ವರ ಗುಡ್ಡವು ದೂರಕ್ಕೆ ಪ್ರಸರಿಸಿದ ಛತ್ರಿಯಂತೆ ಕಾಣುವುದು. ಈ ಗುಡ್ಡಕ್ಕೆ ಪೂರ್ವದಲ್ಲಿ ಛತ್ರಿಕಲ್ಲು ಎಂದು ಹೆಸರಿದ್ದು, ಅದರ ಸಮೀಪದಲ್ಲಿದ್ದ ಈ ನಗರಕ್ಕೆ ಛತ್ರಕಲ್ಲು ಎಂದೂ ಹೆಸರು ಬಂದು, ಅನಂತರ ಚಿತ್ರಕಲ್ಲುದುರ್ಗವೆಂದು ಕರೆಯಲ್ಪಟ್ಟಿರಬಹುದು".[೨]

"ಚಿತ್ರದುರ್ಗವನ್ನು ಆಳಿದ ಪಾಳೆಯಗಾರರ ಮನೆಯ ದೇವರ ಹೆಸರು ಚಿತ್ರದೇವರು. ಈ ವಂಶದ ಮೂಲ ಪುರುಷನ ಹೆಸರು ಚಿತ್ರನಾಯಕ. ಆದುದರಿಂದ ಪಾಳೆಯಗಾರರು ತಮ್ಮ ಮನೆಯ ದೇವರ ಮತ್ತು ಮೂಲ ಹೆಸರಿನಲ್ಲಿ ಚಿತ್ರಕಲ್ಲುದುರ್ಗವೆಂದು ಕರೆದಿರಬಹುದು."[೩]

ಈ ನಗರವು ಪಾಳೆಯಗಾರರ ಆಳ್ವಿಕೆಗಿಂತ ಮುಂಚೆ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಟ್ಟಿರುವುದು ಕಂಡುಬರುತ್ತದೆ. ರಾಮಾಯಣ ಕಾಲದಲ್ಲಿ ಚಿನ್ಮೂಲಾದ್ರಿ, ಮಹಾಭಾರತದ ಕಾಲದಲ್ಲಿ ಹಿಡಿಂಬಪಟ್ಟಣ, ನಂತರ ಚಂದ್ರವಳ್ಳಿ, ಸೂಳ್ಗಲ್ಲು, ಚಿಮ್ಮತ್ತನೂರು ಪಟ್ಟಣ, ಪೆರುಮಾಳೆಪುರ, ಬ್ರಹ್ಮಪುರಿ, ಪಾಳೆಯಗಾರರ ಕಾಲದಲ್ಲಿ ಚಿತ್ರದುರ್ಗವೆಂದು, ಹೈದರಾಲಿ ಮತ್ತು ಟಿಪ್ಪು ಕಾಲದಲ್ಲಿ ಫರೂಕ್‌ಬಾದ್ ಎಂದು ಹೆಸರಿಟ್ಟರು. ಇವರ ಕಾಲನಂತರ ಆ ಹೆಸರು ಅಳಿದು ಚಿತ್ರದುರ್ಗವೆಂದು ಶಾಶ್ವತವಾಗಿ ಉಳಿದುಕೊಂಡು ಬಂದಿದೆ.

ಒಟ್ಟಿನಲ್ಲಿ ಚಿತ್ರದುರ್ಗದ ಅರಸರ ಮೂಲ ಪುರುಷ ಚಿತ್ರನಾಯಕನ ಹೆಸರಿನಲ್ಲಿ ಚಿತ್ರದುರ್ಗವೆಂದು ಹೆಸರಾಗಿದೆ. "ಕೃಷ್ಣದೇವರಾಯನ ದಿನಚರಿಯಲ್ಲಿ 'ಚಿಮ್ಮಟದುರ್ಗ' ಎಂದೂ ಚಿತ್ರದುರ್ಗ ಆಯಗಾರರ ವಿವರದಲ್ಲಿ 'ಚಿನ್ಮೂಲಗಿರಿದುರ್ಗ'ವೆಂದು ಕರೆಯಲ್ಪಟ್ಟಿದೆ".[೪] ಚಿತ್ರದುರ್ಗವನ್ನು ಪ್ರಸ್ತುತ ಜನಪದರು ದುರ್ಗವೆಂದೇ ಹೇಳುತ್ತಾರೆ.

**ಬೊಮ್ಮಗುಂಡನಕೆರೆ(ಬಿ.ಜಿ. ಕೆರೆ)**

ಬಿ.ಜಿ. ಕೆರೆ ಮೊಳಕಾಲ್ಮೂರು ತಾಲೂಕಿನಲ್ಲಿ ಕಂಡುಬರುವ ಒಂದು ಗ್ರಾಮ. ಬಳ್ಳಾರಿ, ಚಳ್ಳಕೆರೆ ರಾಜ್ಯ ಹೆದ್ದಾರಿ ಪಕ್ಕದಲ್ಲಿದೆ. ಈ ಗ್ರಾಮದ ಸ್ಥಳ ಐತಿಹ್ಯ ಹೀಗಿದೆ. ಹಿಂದೆ ಈ ಗ್ರಾಮದಲ್ಲಿ ಬೇಡ ಸಮುದಾಯಕ್ಕೆ ಸೇರಿದ ಬೊಮ್ಮಯ-ಗುಂಡಯ್ಯ ಎಂಬ ಸಹೋದರರು ಪಶುಪಾಲನೆ ಕೈಗೊಂಡು ಇಲ್ಲಿಯೇ ನೆಲೆಸಿದ್ದರಂತೆ. ಪ್ರತಿನಿತ್ಯ ದನಕರುಗಳಿಗೆ ನೀರು ಕುಡಿಸಲು 'ಉಪ್ಪುವಂಕ' ಮತ್ತು ಗೌರಸಮುದ್ರದ ಕೆರೆಯನ್ನೇ ಅವಲಂಬಿಸಿದ್ದರು. ಹೀಗೆ ಪ್ರತಿನಿತ್ಯ ನೀರು ಅರಸುತ್ತ ಇಷ್ಟು ದೂರ ಸಾಗುವುದು ಬೇಡವೆಂದು ಇಬ್ಬರು ಯೋಚನೆ ಮಾಡಿ ಇಲ್ಲಿಯೇ ಕೆರೆಯನ್ನು ಕಟ್ಟುವುದಕ್ಕೆ ತೀರ್ಮಾನಿಸಿದರು. ಇವರಿಬ್ಬರೆ ಪ್ರತಿನಿತ್ಯ ಮಣ್ಣಿನಿಂದ ಮೂರು ತಿಂಗಳೊಳಗೆ ಕೆರೆಯನ್ನು ನಿರ್ಮಿಸಿದರು. ಮಳೆಗಾಲದಲ್ಲಿ ಕೆರೆ ತುಂಬಿ ಬೇಸಿಗೆ ಕಾಲದವರೆಗೂ

ನೀರು ಸಂಗ್ರಹವಾಗಿರುತ್ತಿತ್ತು. ಹೀಗೆ ತಮ್ಮ ದನಕರುಗಳಿಗೆ ಅನುಕೂಲ ಮಾಡಿದರು. ಪ್ರಸ್ತುತ ಈ ಕೆರೆಯಲ್ಲಿ ನೀರು ಇರದೇ ಮಳೆಗಾಲದಲ್ಲಿ ಸಂಗ್ರಹವಾಗಿ ಕೆಲವು ದಿನಗಳಲ್ಲಿ ಖಾಲಿಯಾಗುತ್ತದೆ. ಹೀಗೆ ಬೊಮ್ಮಯ್ಯ-ಗುಂಡಯ್ಯ ಎಂಬ ಅಣ್ಣ-ತಮ್ಮಂದಿರು ನಿರ್ಮಾಣ ಮಾಡಿದ ಕೆರೆಗೆ ಬೊಮ್ಮಗುಂಡನಕೆರೆಯೆಂದು ಕರೆದು ಅದನ್ನು ಸಂಕ್ಷಿಪ್ತವಾಗಿ, ಬಿ.ಜಿ.ಕೆರೆಯೆಂದು ಕರೆಯುತ್ತಾರೆ. ತೆಲುಗಿನಲ್ಲಿ 'ಬೊಮ್ಮನ ಸೇರವು' ಎಂದೇ ಕರೆಯುತ್ತಾರೆ.

**ಗುಡ್ಡದ ರಂಗವ್ವನಹಳ್ಳಿ**

ಗುಡ್ಡದ ರಂಗವ್ವನಹಳ್ಳಿ ಚಿತ್ರದುರ್ಗ ತಾಲೂಕಿಗೆ ಸೇರಿದ ಒಂದು ಗ್ರಾಮ. ಪಾಳೆಯಗಾರರ ಕಾಲದಲ್ಲಿ ಮದಕರಿನಾಯಕನ ಉಪಪತ್ನಿಯಾದ ರಂಗವ್ವ ಗುಡ್ಡದ ತಪ್ಪಲಿನಲ್ಲಿ ವಾಸಿಸುತ್ತಿದ್ದಳು. ಈಕೆ ಉಯ್ಯಾಲೆ ಕಂಬದಲ್ಲಿ ಕುಳಿತು ಉಯ್ಯಾಲೆ ಆಡುತ್ತಿದ್ದರೆ ದುರ್ಗದ ಮೇಲಿರುವ ಮದಕರಿನಾಯಕನಿಗೆ ಕಾಣಿಸುತ್ತಿದ್ದಳಂತೆ. ಆಗ ಮದಕರಿಯು ಅರಮನೆಯಲ್ಲಿ ಯಾರಿಗೂ ಕಾಣದೇ ಗುಪ್ತ ಮಾರ್ಗದಲ್ಲಿ ಬಂದು ಹೋಗುತ್ತಿದ್ದನಂತೆ. ಗುಡ್ಡದ ತಪ್ಪಲಿನಲ್ಲಿ ವಾಸಿಸುತ್ತಿದ್ದ ರಂಗವ್ವನ ನೆಲೆಗೆ ಗುಡ್ಡದ ರಂಗವ್ವನಹಳ್ಳಿ ಎಂದು ಹೆಸರು ಬಂದಿದೆ.

**ಚಂದ್ರವಳ್ಳಿ**

ಚಿತ್ರದುರ್ಗದ ವಾಯುವ್ಯದ ಬೆಟ್ಟದ ತಪ್ಪಲಿನ ಪ್ರದೇಶವೇ ಚಂದ್ರವಳ್ಳಿ. ಪ್ರಾಗೈತಿಹಾಸಿಕ ಕಾಲದಿಂದಲೂ ಜನವಸತಿ ಇದ್ದಿತೆಂದು ತಿಳಿದುಬರುತ್ತದೆ. ಚಿತ್ರದುರ್ಗ ಎಂದು ಕರೆಯುವುದಕ್ಕಿಂತ ಮೊದಲು ಇದನ್ನು ಚಂದ್ರವಳ್ಳಿ, ಚಿನ್ಮೂಲಾದ್ರಿ ಎಂದು ಕರೆಯಲಾಗುತ್ತಿತ್ತು ಎಂದು ಇತಿಹಾಸ ಹೇಳುತ್ತದೆ. ಪಲ್ಲವರ ರಾಜಧಾನಿ ಕಂಚಿಗೆ ಹೋಗಿದ್ದ ಮಯೂರ ಶರ್ಮನನ್ನು ಕ್ಷತ್ರಿಯರೊಬ್ಬರು ಅವಮಾನಿಸಿದರು. ಆಗ ಚಂದ್ರವಳ್ಳಿ ಕಣಿವೆಗೆ ಬಂದಿದ್ದ ಮಯೂರ ಶರ್ಮ, ಇಲ್ಲಿ ಸೈನ್ಯವನ್ನು ಇಟ್ಟಿದ್ದನಂತೆ. ಚಂದ್ರವಳ್ಳಿ ಕೆರೆಯನ್ನು ಮಯೂರ ಶರ್ಮನೇ ಕಟ್ಟಿಸಿದ್ದಾನೆ ಎಂದು ತಿಳಿದುಬರುತ್ತದೆ. ನಂತರ ಪಾಳೆಯಗಾರರು ಚಂದ್ರವಳ್ಳಿ ಪ್ರದೇಶವನ್ನು ಅಭಿವೃದ್ಧಿ ಪಡಿಸಿದ್ದಾರೆ. ರಾಜರು ವಿಶ್ರಾಂತಿ ಪಡೆಯಲೆಂದು ಚಂದ್ರವಳ್ಳಿ ತೋಟಕ್ಕೆ ಬರುತ್ತಿದ್ದರಂತೆ. ವಿಶ್ರಾಂತಿ ವೇಳೆ ಶತ್ರುಗಳ ದಾಳಿ ನಡೆದರೆ ಪಾರಾಗಲು ನಿರ್ಮಿಸಲಾಗಿತ್ತು ಎನ್ನಲಾದ ಅಂಕಲಿ ಹೆಸರಿನ ಗುಹೆಯೂ ಇದೆ.

ಹುಲ್ಲೂರು ಶ್ರೀನಿವಾಸ ಜೋಯಿಸರು ಹಿಂದೆ ಚಿತ್ರದುರ್ಗಕ್ಕೆ ಕರೆಯಲಾದ ಹಲವು ಹೆಸರುಗಳಲ್ಲಿ ಚಂದ್ರವಳ್ಳಿಯು ಒಂದೆಂದು ಅಭಿಪ್ರಾಯಪಟ್ಟಿದ್ದಾರೆ. ಇಂದಿನ ಚಿತ್ರದುರ್ಗದ ಬಳಿ ಇದ್ದು ಈಗ ಹೂತು ಹೋಗಿರುವ ಪ್ರಾಚೀನ ರಾಜಧಾನಿ ನಗರವೆಂತಲೂ ಎಂದು ಬರೆದಿದ್ದಾರೆ. ಚಂದ್ರನಾಕೃತಿಯುಳ್ಳ ಕಣವೆಯಲ್ಲಿ ಈ ನಗರವಿದ್ದುದರಿಂದ ಚಂದ್ರವಳ್ಳಿ ಎಂಬ ಹೆಸರುಂಟಾಗಿರ ಬಹುದು. ಈ ಹೆಸರಿಗೆ ಇನ್ನೊಂದು ಊಹೆಯಿದೆ. ಇಲ್ಲಿ ದೊರೆತ ನಾಣ್ಯಗಳಲ್ಲಿ ಚುಟುಕುಲಾಂದಸ ಅಂದರೆ ಚಿಕ್ಕ ಕುಳಿಂದನ ನಾಣ್ಯ ಎಂಬ ಹೆಸರಿದೆ. ಜೈಮಿನಿ ಭಾರತದಲ್ಲಿ ಉಕ್ತವಾದ ಚಂದ್ರಹಾಸನ ಕಾಲಿನ ಬೆರಳು ಕತ್ತರಿಸಿದ ನಂತರ ಬಾಲಕನನ್ನು ರಕ್ಷಿಸಿ ಸಾಕಿದ ರಾಜನ

ಹೆಸರು ಕುಳಿಂದ - ರಾಜಧಾನಿ ಚಂದನಾವರಿ. ಆದ್ದರಿಂದ ಇದು ಕುಳಿಂದ ಚಂದನಾವತಿಯಾಗಿದ್ದು ಈಚೆಗೆ ಚಂದ್ರವಳ್ಳಿಯಾಗಿರಬಹುದು.

### ಹಿಡಿಂಬ ಪಟ್ಟಣ

ದ್ವಾಪರಯುಗದಲ್ಲಿ ದುರ್ಗದ ಪಟ್ಟಣದಲ್ಲಿ ಹಿಡಿಂಬಾಸುರನೆಂಬ ರಾಕ್ಷಸನು ವಾಸ ಮಾಡುತ್ತಿದ್ದನು. ಹಿಡಿಂಬ ವಾಸವಾಗಿದ್ದ ಪರ್ವತಕ್ಕೆ ಒಮ್ಮೆ ಪಾಂಡವರು ಬಂದಿಳಿದರು. ನರಮನುಷ್ಯರ ವಾಸನೆ ಹಿಡಿದ ಹಿಡಿಂಬನು ಅವರನ್ನು ಎಳೆದು ತರಲು ತಂಗಿ ಹಿಡಿಂಬೆಯನ್ನು ಕಳುಹಿಸಿದನು. ಅವಳು ಅಲ್ಲಿ ಹೋಗಿ ಭೀಮನ ರೂಪಕ್ಕೆ ಮರುಳಾಗಿ ನಿಂತಿರುವಾಗ ಹಿಡಿಂಬನು ತಡೆಯಲಾರದೆ ನುಗ್ಗಿ ಭೀಮನೊಡನೆ ಯುದ್ಧ ಮಾಡಿ ಸೋತು ಮಡಿಯುವ ವೇಳೆಯಲ್ಲಿ ತಾನು ಪೂಜಿಸುತ್ತಿದ್ದ ಲಿಂಗವನ್ನು ತೋರಿಸಿ ತನ್ನ ಹೆಸರು ಚಿರಾಯುವಾಗುವಂತೆ ಅದಕ್ಕೆ ತನ್ನ ಹೆಸರು ಇಡಬೇಕೆಂದು ಬೇಡಿಕೊಂಡನಂತೆ. ಆಗ ಭೀಮಸೇನನು ಒಪ್ಪಿ ಹಿಡಿಂಬೇಶ್ವರಲಿಂಗ ಎಂದು ಹೆಸರಿಟ್ಟನು. ನಂತರ ಹಿಡಿಂಬಿಯನ್ನು ಭೀಮನು ಲಗ್ನವಾಗಿದ್ದನು. ಅವರಿಗೆ ಮುಂದೆ ಘಟೋದ್ಭಜ ಎಂಬ ಪುತ್ರ ಹುಟ್ಟಿದನು. ಈ ಘಟೋದ್ಭಜನು ಅವನ ಮಗ ಮೇಘನಾಥನು ಇಲ್ಲಿ ಆಳುತ್ತಿದ್ದರು. ಇಲ್ಲಿ ಬೆಟ್ಟದ ಮೇಲಿರುವ ಶ್ರೀ ಗೋಪಾಲಕೃಷ್ಣ ದೇವರನ್ನು ಪಾಂಡವರ ವಂಶದ ಪರಿಕ್ಷತನ ಮಗನಾದ ಜನಮೇಜಯರಾಜನು ಪ್ರತಿಷ್ಠಾಪಿಸಿದನೆಂದು ಐತಿಹ್ಯ ಸಾರುತ್ತದೆ.

### ಮೊಳಕಾಲ್ಮೂರು

ಚಿತ್ರದುರ್ಗ ಜಿಲ್ಲೆಯ ಒಂದು ತಾಲೂಕು ಕೇಂದ್ರ. ಮೊಳಕಾಲ್ಮೂರು ಎಂಬ ಹೆಸರು ಬರಲು ಐತಿಹ್ಯ ಹೀಗಿದೆ. ಈ ಊರಿನ ಉತ್ತರಕ್ಕಿರುವ ಬೆಟ್ಟವನ್ನು ಹಿಂದೆ ರಾಜಮಹಾರಾಜರುಗಳ ಕಾಲದಲ್ಲಿ ಶತ್ರು ರಾಜ್ಯದ ರಾಜ್ಯರಾಗಲಿ ಇಲ್ಲವೇ ಸೈನಿಕರಾಗಲಿ ಆಕ್ರಮಿಸದಂತೆ ಈ ಬೆಟ್ಟದ ಮೇಲಿರುವ ಮೂರನೆಯ ಸಾಲಿನ ಕೋಟೆಯ ಕೆಳಭಾಗದಲ್ಲಿರುವ ವಿಶಾಲವಾದ ಹಾಗೂ ಇಳಿಜಾರದ ಬಂಡೆಗೆ ಎಣ್ಣೆ ಸುರವಿ ಅದರ ಮೇಲೆ ರಾಗಿ ಮತ್ತು ನವಣೆ ಕಾಳು ಹಾಕುತ್ತಿದ್ದರಂತೆ. ಆಗ ಕೋಟೆಯನ್ನು ಮುತ್ತಿಗೆ ಹಾಕಲು ಬೆಟ್ಟವನ್ನು ಹತ್ತಿ ಬರುವಂತಹ ಶತ್ರುಗಳು ಕಾಲು ಜಾರಿ ತಮ್ಮ ಮೊಣಕಾಲುಗಳು ಮುರಿದು ಬೀಳುತ್ತಿದ್ದರಂತೆ. ಹಾಗಾಗಿ ಈ ಊರಿಗೆ ಅಂದಿನಿಂದ ಮೊಣ(ಳ)ಕಾಲ್ಮೂರಿ ಎಂದೂ, ನಂತರ ಮೊಳಕಾಲ್ಮೂರು ಎಂಬ ಹೆಸರು ಬಂದಿದೆ ಎಂದು ಸ್ಥಳೀಯರು ಹೇಳುತ್ತಾರೆ. ಇಳಿಜಾರಿನಲ್ಲಿ ಎಣ್ಣೆ ಇಳಿದು ಬಿಟ್ಟರೆ ಹತ್ತುವುದೇ ಕಷ್ಟ. ಇನ್ನು ರಾಗಿ, ನವಣೆ ಹಾಕಿದರೆ ಕಾಲುಗಳು ಜಾರುವುದು ಸಹಜ. ಇಲ್ಲಿ ಶತ್ರುಗಳ ದಾಳಿಯನ್ನು ತಡೆಗಟ್ಟಲು ಈ ರೀತಿ ತಂತ್ರ ಮಾಡಿರಬಹುದು. ಅಂದಿನ ಕಾಲದಲ್ಲಿ ಈ ಊರು ನಾಯಕನಹಟ್ಟಿ ಪಾಳೆಯಗಾರರ ಆಳ್ವಿಕೆಗೆ ಒಳಪಟ್ಟಿತ್ತು. ಈ ಕೋಟೆಯಲ್ಲಿ ಅಂದು ದವಸ-ಧಾನ್ಯ, ತುಪ್ಪ ಇನ್ನೂ ಮುಂತಾದವುಗಳನ್ನು ಸಂಗ್ರಹಿಸಿದ್ದರಿಂದ ರಕ್ಷಣೆ ಮಾಡುತ್ತಿದ್ದಿರಬಹುದು. ಇದು ಒಂದು ತಂತ್ರಗಾರಿಕೆ ಇರಬಹುದು. ಶತ್ರುಗಳಿಗೆ ಭಯ ಹುಟ್ಟಿಸಲು ಉಪಯೋಗಿಸಿರಬಹುದು. ಪ್ರಸ್ತುತ

ಇದು ತಾಲೂಕು ಕೇಂದ್ರವಾಗಿದೆ. ಸದಾ ಬರಗಾಲಕ್ಕೆ ತುತ್ತಾಗಿ, ಅತ್ಯಂತ ಹಿಂದುಳಿದ ತಾಲೂಕುಗಳಲ್ಲಿ ಒಂದಾಗಿದೆ.

ಇನ್ನೊಂದು ಐತಿಹ್ಯ ಪ್ರಕಾರ - ಇಲ್ಲಿಯ ಒಬ್ಬ ರಾಜನು ತನ್ನ ಹೆಂಡತಿಯೊಂದಿಗೆ ವನವಿಹಾರಕ್ಕೆ ಹೋದಾಗ, ಅಲ್ಲಿಯೇ ಆಕೆ ಒಂದು ಗಂಡು ಮಗುವಿಗೆ ಜನ್ಮ ನೀಡುತ್ತಾಳೆ. ಆ ಮಗುವಿಗೆ ಹಣೆಯ ಮೇಲೆ ಒಂದು ಕಣ್ಣು ಇದ್ದಿತಂತೆ. ಇದರಿಂದ ಮುಂದೆ ವಯಸ್ಸಿಗೆ ಬಂದಾಗ, ಅವನಿಗೆ ಪಟ್ಟವನ್ನು ಕಟ್ಟುವಾಗ, ಬಾಸಿಂಗವನ್ನು ಹಣೆಯ ಬದಲಿಗೆ ಆತನ ಮೊಣ(ಳ) ಕಾಲಿಗೆ ಕಟ್ಟಿದ್ದರಂತೆ. ಈ ಒಂದು ಸಂಗತಿಯಿಂದ ಈ ಊರಿಗೆ ಮೊಣಕಾಲ್ಮೂರು ಎಂದಾಯಿತು ಎಂದು ಹಿರಿಯರು ಹೇಳುತ್ತಾರೆ. ಆದರೆ ಈ ಮೇಲಿನ ಪ್ರಸಂಗವನ್ನು ಗಮನಿಸಿದರೆ, ಈ ಒಂದು ಕಣ್ಣು ತ್ರಿನೇತ್ರ ಕದಂಬನಿಗೆ ಅನ್ವಯಿಸುತ್ತದೆ. ಇದರ ಒಂದು ಪ್ರಸಂಗದ ಪ್ರಕಾರ ಇಲ್ಲಿ ಕದಂಬರು ಆಳ್ವಿಕೆ ಮಾಡಿದ್ದಾರೆ. ನುಂಕೆಮಲೆಯಲ್ಲಿ ಅವರ ಕುರುಹುಗಳು ಇರುವುದರಿಂದ ಕಂದಬರ ರಾಜ ಇರಬಹುದು ಎಂದು ಈ ಐತಿಹ್ಯ ಪುಷ್ಠಿ ನೀಡುತ್ತದೆ. ತ್ರಿನೇತ್ರ ಕದಂಬನ ಹೆಸರನ್ನು ಮೈಸೂರು ಗೆಜೆಟಿಯರ್‌ನಲ್ಲಿ ಉಲ್ಲೇಖಿಸಲಾಗಿದೆ.

**ಜಟ್ಟಂಗಿ ರಾಮೇಶ್ವರ ಬೆಟ್ಟ**

ಜಟ್ಟಂಗಿ ರಾಮೇಶ್ವರ ಬೆಟ್ಟವು ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿನಲ್ಲಿ ಕಂಡುಬರುತ್ತದೆ. ಈ ಜಿಲ್ಲೆಯ ಐತಿಹಾಸಿಕ ಸ್ಥಳ ಹಾಗೂ ಪುಣ್ಯಕ್ಷೇತ್ರ. ರಾಮಾಯಣ ಕಾಲದಲ್ಲಿ ರಾಮ, ಸೀತೆ ಮತ್ತು ಲಕ್ಷ್ಮಣರು ವನವಾಸಕ್ಕೆ ಇಲ್ಲಿಗೆ ಬಂದಾಗ, ಒಮ್ಮೆ ರಾವಣನು ಸೀತೆಯನ್ನು ಲಂಕೆಗೆ ಕದ್ದೊಯ್ಯುತ್ತಿರುವಾಗ ಜಟಾಯುಯೆಂಬ ಪಕ್ಷಿ ರಾವಣನನ್ನು ತಡೆದು ಪ್ರತಿರೋಧ ಒಡ್ಡುತ್ತದೆ. ಈ ಕಾದಾಟದಲ್ಲಿ ರಾವಣನು ಜಟಾಯು ಪಕ್ಷಿಯ ರಕ್ಕೆಯನ್ನು ಕತ್ತರಿಸಿ ಹಾಕುತ್ತಾನೆ. ಹೀಗೆ ಜಟಾಯು ಗಾಯಗೊಂಡು ಜಟ್ಟಂಗಿ ಬೆಟ್ಟದ ಮೇಲೆ ಬಿದ್ದಿರುತ್ತದೆ. ರಾಮನು ಇದೇ ಹಾದಿಯಲ್ಲಿ ಸೀತೆಯನ್ನು ಹುಡುಕುತ್ತ ಬಂದ. ರಾಮನಿಗೆ ಸೀತಾಪಹರಣದ ಸಂಗತಿಯನ್ನು ವಿವರಿಸುತ್ತದೆ. ಸಾಯುವ ಮುನ್ನ ರಾಮನಿಗೆ ಮೋಕ್ಷ ನೀಡುವಂತೆ ಹೇಳಿ ಮಡಿಯುತ್ತದೆ. ಆಗ ರಾಮನು ಜಟಾಯುವಿಗೆ ಅಗ್ನಿ ಸಂಸ್ಕಾರ ಮಾಡಿ ಒಂದು ಲಿಂಗವನ್ನು ಪ್ರತಿಷ್ಠಾಪಿಸಿ ಮುಂದೆ ಹೋಗುತ್ತಾನೆ. ಈ ಬೆಟ್ಟದಲ್ಲಿ ಜಟಾಯುವಿಗೆ ಸಮಾಧಿ ಮಾಡಿ, ಶಿವಲಿಂಗವನ್ನು ಪ್ರತಿಷ್ಠಾಪಿಸಿದನು.

ಜಟಾಯು-ರಾಮ-ಈಶ್ವರ ಈ ಮೂರು ಹೆಸರುಗಳಿದ್ದು ಇದನ್ನು ಜಟ್ಟಂಗಿ ರಾಮೇಶ್ವ ಎಂದು ಕರೆಯುವರು. ಜಟ್ಟಂಗಿ ಎಂಬುದು ಜಟಾಯುವಿನಿಂದ ಬಂದಿದೆಯೆಂಬುದು ಪ್ರತೀತಿ. ಇಂದಿನ ರಾಮೇಶ್ವರಲಿಂಗವೆಂದು, ಅಗ್ನಿಸಂಸ್ಕಾರ ಮಾಡಿದ ಸ್ಥಳದಲ್ಲಿರುವ ಇಟ್ಟಿಗೆಯ ಕಟ್ಟಡವೇ ಜಟಾಯು ಸಮಾಧಿಯೆಂದು ಹೇಳಲಾಗುತ್ತದೆ. ಇಲ್ಲಿಯ ಬಂಡೆಯೊಂದರಲ್ಲಿ ಗುರುತು ಇದೆ. ಈ ಗುರುತನ್ನು ಜಟಾಯು ಪಕ್ಷಿಯ ರಕ್ತ ಹರಿದ ಕಾಲುವೆಯೆಂದು ಹೇಳುವರು. ಈ

ಕಾಲುವೆಯಲ್ಲಿ ನೀರನ್ನು ಹಾಕಿದರೆ ಅದು ಈಗಲೂ ಕೆಂಪುಬಣ್ಣದಲ್ಲಿ ಹರಿಯುತ್ತದೆಂಬ ಸ್ಥಳೀಯರ ನಂಬಿಕೆ. "ರಾಮೇಶ್ವರ ದೇವಾಲಯದ ಹಿಂಬದಿಯ ನಾಗರ ಪಡೆಗುಂಡಿನ ಮೇಲಿರುವ ಕ್ರಿ.ಶ. ೯೬೨ರ ಶಾಸನವು ಸೀತೆಯಂ ರಾವಣನುಯೆ ಜಟಾಯು ಕಾದಿ ಸತ್ತಲ್ಲಿ ರಾಮ ಪ್ರತಿಷ್ಟೆಗೆಯ್ದಲ್ಲಿ ಉಣಂದೇಗುಲಮಂ ಮಾಡಿದಂದೆ ಯಿಟ್ಟಿಗೆಯ ದೇಗಲಮ ಕಳೆದು ಕಳಶ ನಿರ್ಮಾಣಂ ಲಿಂಗಸಿವಜೀಯರ್ಬ್ಭಿಕ್ಷಾವೃತ್ತಿಯಿನ್ದ ಕಲ್ಲದೇಗುಲವುಂ ದೇಗುಲಂಗಳುಮಂ ಸಮಯಿಸಿ ಕೊಣ್ಡಗಳುಮಂ ಕಟ್ಟಿಸಿದರ್".[೫] ಹೀಗೆ ಐತಿಹ್ಯವು ಶಾಸನಗಳಲ್ಲಿ ಉಲ್ಲೇಖವಾಗಿದೆ.

ಜಟ್ಟಂಗಿ ರಾಮೇಶ್ವರ ದೇವಾಲಯವು ಚಾರಿತ್ರಿಕ, ಪೌರಾಣಿಕ ಹಾಗೂ ಐತಿಹ್ಯಗಳಲ್ಲಿ ಸ್ಥಾನ ಹೊಂದಿದೆ. ವೀರ ಕಂಪಿಲರಾಯ ಮತ್ತು ಕುಮಾರರಾಮರು ಜಟ್ಟಂಗಿ ರಾಮೇಶ್ವರನ ಭಕ್ತರಾಗಿದ್ದರು. ಕುಮಾರರಾಮನ ಗರಡಿ ಮನೆ ಎಂದು ಹೇಳುವ ಗವಿ ಒಂದು ಇದೆ. ಇದಲ್ಲದೆ ಈ ಭಾಗದ ಆರಾಧ್ಯ ದೈವವು ಆಗಿದೆ. ರಾಮಾಯಣ ಕಾಲದ ಇತಿಹಾಸ ಹೊಂದಿರುವ ಈ ಪುಣ್ಯ ಕ್ಷೇತ್ರದಲ್ಲಿ ಯುಗಾದಿ ಹಬ್ಬದ ಸಂದರ್ಭದಲ್ಲಿ ಹಲವು ಧಾರ್ಮಿಕ ಕಾರ್ಯಕ್ರಮಗಳನ್ನು ಆಚರಿಸುವುದು ಕಂಡುಬರುತ್ತದೆ. ಇಲ್ಲಿ ಪ್ರತಿವರ್ಷ ಜಾತ್ರೆ ಆಗುತ್ತದೆ. ಗಡಿ ಭಾಗದ ಎರಡು ರಾಜ್ಯಗಳ ಗ್ರಾಮಗಳಿಂದ ಅಪಾರ ಭಕ್ತರು ಆಗಮಿಸುತ್ತಾರೆ.

### ಏಕಾಂತ ತೀರ್ಥ

ಏಕಾಂತ ತೀರ್ಥವು ಮೊಳಕಾಲ್ಮೂರು ತಾಲೂಕಿನ ಜಟ್ಟಂಗಿ ರಾಮೇಶ್ವರ ದೇವಾಲಯದ ದಕ್ಷಿಣಕ್ಕೆ ಕೆಳಭಾಗದ ಕಲ್ಲು ಸೆರೆಗಳಲ್ಲಿದೆ. ಬಂಡೆಗಳ ಕೆಳಗೆ ಇರುವ ತಣ್ಣೀರು ದೋಣಿಯನ್ನು 'ಏಕಾಂತ ತೀರ್ಥ' ಎಂದು ಕರೆಯುವರು. ಇದು ನೈಸರ್ಗಿಕ ಗುಹೆಯಂತಿದ್ದು ಇಲ್ಲಿನ ನೀರು ಸದಾ ತಣ್ಣಗಿದ್ದು, ಇಂದಿಗೂ ಕುಡಿಯಲು ಮತ್ತು ದೇವಾಲಯದ ಪೂಜಾ ಕಾರ್ಯಗಳಿಗೆ ಬಳಸುತ್ತಾರೆ. ಈ ದೋಣಿಯ ಬಳಿ ಶ್ರೀರಾಮನು ಜಟಾಯುವಿಗೆ ಅಗ್ನಿ ಸಂಸ್ಕಾರ ಮಾಡಿದ ನಂತರ ಕೆಲವು ದಿವಸಗಳು ಏಕಾಂತವಾಗಿ ವಾಸವಾಗಿದ್ದುದರಿಂದ ಈ ಹೆಸರು ಬಂತೆಂದು ಸ್ಥಳದ ಐತಿಹ್ಯವಿದೆ.

ಬುದ್ಧನಿಗೆ ಏಕಾನಾಥನೆಂದು ಹೆಸರಿದ್ದು, ಬೌದ್ಧರು ನೆಲೆಸಿದ ಸ್ಥಳವಾದ್ದರಿಂದ ಬೌದ್ಧರಿಗೆ ಪುಣ್ಯ ತೀರ್ಥವಾಗಿದ್ದಿರಬಹುದು. ಬಹುಶಃ ಬೌದ್ಧ ಮತವು ನಶಿಸಿದ ಮೇಲೆ ಶ್ರೀರಾಮನ ಹೆಸರಿನಲ್ಲಿ ಏಕಾಂತ ತೀರ್ಥ ಎಂದು ಆರೋಪಿಸಿರಬಹುದು. ಪ್ರಾಚೀನ ಮಾನವನ ವಸತಿಗೆ ಯೋಗ್ಯವಾಗಿದ್ದ ಗುಹೆಯೊಂದಿದೆ. ಇಲ್ಲಿ ನೈಸರ್ಗಿಕ ಗುಹೆಗಳಿವೆ. ವಸತಿಯೋಗ್ಯವಾದ ಗುಹೆ ಹಾಗೂ ನೀರಿನ ತಾಣವಾದ ದೋಣಿ ಇರುವುದರಿಂದ ಈ ಸ್ಥಳವನ್ನು ಏಕಾಂತ ತೀರ್ಥವೆಂದು ಕರೆಯಲಾಗುತ್ತದೆ. ಒಟ್ಟಿನಲ್ಲಿ ಏಕಾಂತ ತೀರ್ಥವು ಪ್ರಾಚೀನ ಕಾಲದಿಂದಲೂ ಮಾನವನ ಜೀವನೆಲೆಯಾಗಿದ್ದು, ಇದರ ಬಳಿಯಿರುವ ಗುಹಾಲಯವು ಅಂದಿನ ವಸತಿ ತಾಣವು ಆಗಿದ್ದುದು ವಾಸ್ತವದ ಸಂಗತಿ.

**ಸೀತಾದೋಣಿ**

ಜಟ್ಟಂಗಿ ರಾಮೇಶ್ವರ ಬೆಟ್ಟದ ಮೇಲೆ ಒಂದು ದೋಣಿಯಿದೆ. ಈ ದೋಣಿಗೆ ಸೀತಾದೋಣಿ, ಸೀತಮ್ಮನ ದೋಣಿ, ಸೀತೆ ಹೊಂಡ ಎಂದು ಕರೆಯಲಾಗುತ್ತದೆ. ಸೀತೆ ವನವಾಸಕ್ಕೆ ಬಂದಾಗ ಇಲ್ಲಿ ಇರುವವರೆಗೂ ಈ ದೋಣಿಯಲ್ಲಿ ಪ್ರತಿದಿನ ಸ್ನಾನ ಮಾಡುತ್ತಿದ್ದಳಂತೆ. ಹೀಗೆ ಸೀತೆ ಸ್ನಾನ ಮಾಡುತ್ತಿದ್ದ ಸ್ಥಳಕ್ಕೆ ಸೀತಾದೋಣಿಯೆಂದು ಕರೆಯುವರು. ಇಲ್ಲಿ ಎರಡು ಜೊತೆ ಪಾದಗಳಿದ್ದು, ಒಂದು ಜೊತೆ ಸೀತೆಯದ್ದು ಇನ್ನೊಂದು ಜೊತೆ ರಾಮನ ಪಾದಗಳೆಂದು ಸ್ಥಳೀಯರು ಹೇಳುವರು. ಹೀಗೆ ಕಲ್ಲು ಬಂಡೆಗಳಿಂದ ಕೂಡಿರುವ ಈ ಬೆಟ್ಟದ ಮೇಲೆ ಮರದ ದಿಮ್ಮಿಗಳಿಂದ ಕೂಡಿದ ಜಟಾಯು ಸಮಾಧಿ ಮತ್ತು ಕಾಲಭೈರವ ದೇವಸ್ಥಾನ, ಚಾಮುಂಡೇಶ್ವರಿ, ಗಣಪತಿ, ಸೂರ್ಯದೇವರು ಸೇರಿದಂತೆ ಹತ್ತಾರು ಸಣ್ಣ ದೇವಸ್ಥಾನಗಳಿವೆ. ಜತೆಗೆ ೧೦೧ ಶಿವಲಿಂಗಗಳು ಇವೆ. ಇದು ಹಿಂದೆ ಜನವಸತಿ ಪ್ರದೇಶವಾಗಿದ್ದು, ಹತ್ತನೆಯ ಶತಮಾನಕ್ಕೆ ಮುನ್ನ ಇಟ್ಟಿಗೆಯಿಂದ ಕಟ್ಟಿಸಿದ ದೇವಸ್ಥಾನವನ್ನು, ನಂತರ 'ಲಿಂಗಶಿವಜೀವ' ಎಂಬ ಅರ್ಚಕ ಭಿಕ್ಷಾಟನೆ ಮೂಲಕ ಧನ ಸಂಗ್ರಹಿಸಿ ಕಲ್ಲಿನ ದೇವಸ್ಥಾನ ನಿರ್ಮಿಸಿದ ಎನ್ನಲಾಗಿದೆ. ಇಲ್ಲಿ ಪ್ರತಿವರ್ಷ ಜಾತ್ರೆ ನಡೆಯುತ್ತದೆ. ಇಲ್ಲಿಗೆ ಗಡಿ ಭಾಗದ ಎರಡು ರಾಜ್ಯಗಳ ಗ್ರಾಮಗಳಿಂದ ಅಪಾರ ಭಕ್ತರು ಆಗಮಿಸುತ್ತಾರೆ. ಜಾತ್ರೆಯ ಅಂಗವಾಗಿ ಬರುವ ಭಕ್ತರಿಗೆ ದಾಸೋಹ ವ್ಯವಸ್ಥೆ ಮಾಡಲಾಗುತ್ತದೆ.

**ಬೊಮ್ಮದೇವರಹಳ್ಳಿ**

ಮೊಳಕಾಲ್ಮೂರು ತಾಲೂಕಿನಲ್ಲಿ ಕಂಡುಬರುವ ಗ್ರಾಮ. ಗ್ರಾಮದ ಐತಿಹ್ಯ ಹೀಗಿದೆ. ಕರಡಿಹಳ್ಳಿಯಲ್ಲಿ ಒಬ್ಬ ದನಗಾಯಿ ಬಾಲಕ ಇದ್ದನು. ಆ ಬಾಲಕನು ಪ್ರತಿನಿತ್ಯ ಕರಡಿಹಳ್ಳಿಯಿಂದ ದನಗಳನ್ನು ಮೇಯಿಸುವುದಕ್ಕೆ ಬೊಮ್ಮದೇವರ ಹಳ್ಳಿಗೆ ಬರುತ್ತಿದ್ದನು. ಅವನ ದನಗಳಲ್ಲಿ ಒಂದು ಬಿಳಿ ಹಸು ಹಟ್ಟಿಯಿಂದ ರಾತ್ರಿ ವೇಳೆಯಲ್ಲಿ ತನ್ನ ಕರುವಿಗೆ ಹಾಲುಣಿಸದೆ, ಅಲ್ಲಿಯ ಅಡವಿಗೆ ಹೋಗಿ ಒಂದು ಕಲ್ಲು ಗುಂಡಿಗೆ ಹಾಲು ಎರೆದು ಬರುತ್ತಿತ್ತು. ಒಂದು ದಿನ ದನಗಾಯಿ ಬಾಲಕ ಆ ಹಸು ಕರುವಿಗೆ ಹಾಲುಣಿಸದೇ ಇರುವುದನ್ನು ಕಂಡು, ಸಂಶಯದಿಂದ ಒಂದು ದಿನ ರಾತ್ರಿ ಆ ಹಸುವನ್ನು ಪರೀಕ್ಷಿಸಲು ಹಿಂಬಾಲಿಸಿದನು. ಪ್ರತಿ ದಿನದಂತೆ ಹಸು ಕಲ್ಲುಗುಂಡಿಗೆ ಹಾಲನ್ನು ಕರೆಯುತ್ತಿತ್ತು. ಅದನ್ನು ಗಮನಿಸಿದ ದನಗಾಯಿ ಬಾಲಕ ಕಣ್ಣಾರೆ ಕಂಡ ಸಂಗತಿಯನ್ನು ತನ್ನ ಮನೆಯ ಹಿರಿಯರಿಗೆ ತಿಳಿಸಿದನು. ಮನೆಯ ಹಿರಿಯರು ಅದನ್ನು(ಕಲ್ಲುಗುಂಡನ್ನು) ಲಿಂಗವೆಂದು ಭಾವಿಸಿ ಪೂಜಿಸಿದರು. ಮುಂದೆ ಆ ಲಿಂಗಕ್ಕೆ ಆ ದನಗಾಯಿ ಬೊಮ್ಮಯ್ಯನ ಹೆಸರನ್ನು ಸೇರಿಸಿ ಬೊಮ್ಮಲಿಂಗದೇವರಹಳ್ಳಿ ಎಂದು ಕರೆದರು. ಆಗ ಇವರು ಕುಟುಂಬ ಸಮೇತ ಈ ಗ್ರಾಮಕ್ಕೆ ಬಂದು ನೆಲೆಸಿದರು. ಇವರ ವಾಸಸ್ಥಳಕ್ಕೆ ದೇವರ ಹೆಸರಿಟ್ಟಿದ್ದರಿಂದ ಬೊಮ್ಮ-ಲಿಂಗ-ದೇವರು ಈ ಮೂರು ಅಂಶಗಳು ಅಂದರೆ ವ್ಯಕ್ತಿ, ಘಟನೆ, ಸ್ಥಳ ಈ ಮೂರನ್ನು ಮೇಳೈಸಿಕೊಂಡು ಈ ಸ್ಥಳನಾಮ ಬಂದಿದೆ. ಈ ಗ್ರಾಮದ

ಸ್ಥಳ ಐತಿಹ್ಯ ಪಶುಪಾಲಕರ ನೆಲೆಯನ್ನು ಕುರಿತು ಹೇಳುತ್ತಿದ್ದು ಅವರು ಆರಾಧಿಸುತ್ತಿರುವ ಲಿಂಗದ ಕಲ್ಪನೆಯ ಬಗ್ಗೆ ವಿವರಿಸುತ್ತದೆ.

**ನಾಗಸಮುದ್ರ .**

ನಾಗಸಮುದ್ರ ಮೊಳಕಾಲ್ಮೂರು ತಾಲೂಕಿಗೆ ಸೇರಿದ ಗ್ರಾಮ. ಈ ಗ್ರಾಮದ ಬಗೆಗೆ ಒಂದು ಐತಿಹ್ಯ ಹೀಗಿದೆ. ಹಿಂದೆ ಈ ಊರಿನಲ್ಲಿ ಒಂದು ಹುತ್ತ ಬೆಳೆದಿದ್ದಿತಂತೆ. ಪಶುಪಾಲಕರು ತಮ್ಮ ದನಗಳನ್ನು ಮೇಯಿಸಲು ಅಡವಿ ಕಡೆ ಹೋಗುವಾಗ ಒಂದು ಗೊಡ್ಡು ಹಸುವೊಂದು ಪ್ರತಿದಿನ ಹುತ್ತಕ್ಕೆ ಹಾಲು ಎರೆದು ಬರುತ್ತಿದ್ದಿತಂತೆ. ಪಶುಪಾಲಕರು ಕಂಡು ಆ ಹುತ್ತದ ಕಡೆ ಹೋಗಿ ನೋಡಿದಾಗ ಲಿಂಗ ಇರುವುದು ಗೊತ್ತಾಗಿ ಊರಿನ ಜನರಿಗೆ ತಿಳಿಸಿದಾಗ ಆಗ ಜನರೆಲ್ಲಾ ಬಂದು ಇದು ನಾಗಲಿಂಗವೆಂದು ಹೆಸರಿಟ್ಟರಂತೆ. ಅಲ್ಲಿಯೇ ಪಕ್ಕದಲ್ಲಿ ಚಿನ್ನಹಗರಿ ನದಿ ಹರಿಯುವುದರಿಂದ ನಾಗಸಮುದ್ರ ಎಂಬ ಹೆಸರು ಪಡೆದಿರಬಹುದು. ಅಂದಿನಿಂದ ನಾಗರಲಿಂಗ ಹೋಗಿ ನಾಗಸಮುದ್ರ ಎಂಬ ಹೆಸರು ಪಡೆಯಿತೆಂದು ಸ್ಥಳೀಯರು ಹೇಳುತ್ತಾರೆ.

**ಭಟ್ಟರಹಳ್ಳಿ**

ಇದು ಮೊಳಕಾಲ್ಮೂರು ತಾಲೂಕಿಗೆ ಸೇರಿದ ಗ್ರಾಮ. ಭಟ್ಟಂಗಿ ಸ್ವಾಮಿತ್ವ, ಒಡೆತನ ಮಾಧವ ಬ್ರಾಹ್ಮಣರ ಅಗ್ರಹಾರ. ಈ ಗ್ರಾಮದಲ್ಲಿ ಕೃಷ್ಣಪೌಳಿ ಎಂಬುದು ಹಳೇಭಟ್ಟರಹಳ್ಳಿ ವಾಡಿಕೆಯಾಗಿದೆ. ಹಿಂದೆ ಬ್ರಾಹ್ಮಣರು ವಿಶೇಷವಾಗಿ ವಾಸಿಸುತ್ತಿದ್ದರಿಂದ ಹಾಗೂ ಭಟ್ಟರ ಸಮುದಾಯವೇ ಹೆಚ್ಚು ಇರುವುದರಿಂದ ಭಟ್ಟರಹಳ್ಳಿ ಎಂದು ಹೆಸರು ಪಡೆದಿದೆ. ಪ್ರಸ್ತುತ ಈ ಸಮುದಾಯದವರು ಉದ್ಯೋಗ ಹುಡುಕಿ ಬೆಂಗಳೂರು ಸೇರಿದ್ದಾರೆ. ವರ್ಷಕ್ಕೊಮ್ಮೆ ಯುಗಾದಿ, ರಾಮನವಮಿಯೆಂದು ಊರಿಗೆ ಬಂದು ತಿಂಗಳವರೆಗೆ ಇದ್ದು ಮತ್ತೆ ವಾಪಸ್ಸು ಹೋಗುತ್ತಾರೆ. ಇಲ್ಲಿ ಶ್ರೀರಾಮ ದೇವಾಲಯವಿದೆ. ಹಿಂದೆ ರಾಮ ಮತ್ತು ಸೀತೆ ಕಿಷ್ಕಿಂದೆಗೆ ಹೋಗುವಾಗ ಇಲ್ಲಿ ತಂಗಿದ್ದರೆಂದು ಇಲ್ಲಿಯೇ ರಾಮ ಏಕಾಂತವಾಗಿ ಕುಳಿತು ತಪ್ಪಸ್ಸು ಮಾಡಿದನಂತೆ. ಇಲ್ಲಿಯೇ ಒಂದು ಗುಡಿಯನ್ನು ಕಟ್ಟಿ ಮುಂದಕ್ಕೆ ಹೋದರಂತೆ.

**ಕಪ್ಪಡ ಬಂಡೆ ಹಟ್ಟಿ**

ಇದು ಮೊಳಕಾಲ್ಮೂರು ತಾಲೂಕಿಗೆ ಸೇರಿದ ಗ್ರಾಮ. ಇಲ್ಲಿ ಬೃಹತ್ ಬಂಡೆ ಇರುವುದರಿಂದ ಕಪ್ಪಡ ಬಂಡೆ ಹಟ್ಟಿಯೆಂದು ಹೆಸರು ಬಂದಿರಬಹುದು. ಈ ಹಟ್ಟಿಯಲ್ಲಿ ಬೇಡ ನಾಯಕರು ವಾಸಿಸುವರು. ಈ ಹಟ್ಟಿಯಲ್ಲಿ ಹಿಂದೆ ಯರಮಂಚಯ್ಯನ ಮಗ ಪೆದ್ದಯ್ಯನೆಂಬ ದನಗಾಯಿ ಇದ್ದನು. ಒಮ್ಮೆ ಕುರಿಮಂದೆಗೆ ಚಿರತೆ ದಾಳಿ ಮಾಡಿತು. ಆಗ ಚಿರತೆಯನ್ನು ಕಂಡ ಪೆದ್ದಯ್ಯನು ಕೋನಸಾಗರದ ಗುಡ್ಡದವರೆಗೆ ಓಡಿಸಿಕೊಂಡು ಹೋಗಿ ಅದರೊಂದಿಗೆ ಸೆಣಸಾಡಿ ಅದನ್ನು ಕೊಂದು ತಾನು ಸಹ ಹತನಾದನು. ಆತನ ಸ್ಮರಣಾರ್ಥವಾಗಿ ಕಪ್ಪಡ ಬಂಡೆ ಹಟ್ಟಿ ಬಳಿ ವೀರಗಲ್ಲನ್ನು ನೆಡಲಾಗಿದೆ. ಈತನ ಮೇಲೆ ಎರಗಿದ ಚಿರತೆಯನ್ನು ಧೈರ್ಯದಿಂದ ಎದುರಿಸುತ್ತಿರುವ

ಅವನಿಗೆ ಸಹಾಯ ಮಾಡಲು ಚಿರತೆಯ ಮೇಲೆ ಆಕ್ರಮಣ ಮಾಡಲು ನೆಗೆಯುತ್ತಿರುವ ನಾಯಿಗಳ ಚಿತ್ರ ಪರಿಣಾಮಕಾರಿಯಾದುದು. ಇದು ಕಪ್ಪಡ ಬಂಡೆ ಹಟ್ಟಿಯಲ್ಲಿದೆ.

**ಕರಿಓಬಿನಹಳ್ಳಿ**

ಇದು ಹಿರಿಯೂರು ತಾಲೂಕಿಗೆ ಸೇರಿದ ಗ್ರಾಮ. ಹಿರಿಯೂರು - ಚಳ್ಳಕೆರೆ ಮಾರ್ಗದ ಹರ್ತಿಕೋಟೆಗೆ ಹತ್ತಿರವಿದೆ. ಈ ಗ್ರಾಮಕ್ಕೆ ಹೆಸರು ಬರಲು ಐತಿಹ್ಯ ಹೀಗಿದೆ. ಈಕೆ ಹರ್ತಿಕೋಟೆ ಪಾಳೇಯಗಾರರ ಮಗಳು. ಈ ಅರಮನೆಯಲ್ಲಿ ಕಾಲ ಕಳೆಯುತ್ತ ಯುವರಾಣಿಯಂತೆ ಇರುವಳು. ಈಕೆ ಈ ಪರಿಸರದಲ್ಲಿ ಒಗಟು ಒಡ್ಡಿ ಒಗಟಿಗೆ ಉತ್ತರ ಕೊಟ್ಟರೆ, ಅವರಿಗೆ ಮದುವೆ ಆಗುತ್ತೇನೆ ಎಂದು ಡಂಗರು ಸಾರಿಸಿದಳು. ಕೆಲವರ ಪ್ರಕಾರ ಶಾಸನ ಹಾಕಿಸಿದ್ದಳಂತೆ ಎನ್ನುತ್ತಾರೆ. ಸೋತರೆ ಅವರಿಂದ ಸಾವಿರ ರಾಸುಗಳ ಪಶುಸಂಪತ್ತು ದಂಡದ ರೂಪವಾಗಿ ಕೊಡಬೇಕು. ಹೀಗೆ ಸೋತವರಿಂದ ತುರುಮಂದೆಗಳನ್ನು ವಶಪಡಿಸಿಕೊಳ್ಳುತ್ತಿದ್ದಳು. ಈ ಸುದ್ದಿ ಕೇಳಿದ ಹಟ್ಟಿಯ ಮಲ್ಲಪ್ಪನಾಯಕಬ್ಬನು ಆಕೆಯ ಒಗಟನ್ನು ಬಿಡಿಸಿ ಅವಳನ್ನು ಪಡೆಯಲೇಬೇಕು ಎನ್ನುವ ಛಲದಿಂದ ಉತ್ತರ ಹುಡುಕುತ್ತಿದ್ದನು. ಹೀಗೆ ಕಾಡಿನಲ್ಲಿ ತಿರುಗುತ್ತಿದ್ದಾಗ ಕರಡಿ(ಕಲ್ಡಿ) ಬುಳ್ಳಣ್ಣ ಎಂಬ ಗೊಲ್ಲ ಸಮುದಾಯದವನು ಸಿಕ್ಕಿದನು. ಅವನು ಮಲ್ಲಪ್ಪ ನಾಯಕನನ್ನು ವಿಚಾರಿಸಿದಾಗ ಹೀಗೆ ಹೇಳುತ್ತಾನೆ. ಕಪ್ಪೆ ಕಲಕದ ನೀರು, ಬಿಸಿಲಿಗೆ ಬಾಡದ ಹೂವು, ನಾಲ್ಕು ಏಣಿನ ಹಸಿರು ಕಲ್ಲು ಕಂಭ, ತಲೆಗೆ ಮೆತ್ತನೆಕಲ್ಲು, ಕಾಯಿಸದೇ ಆಗಿರೋ ತುಪ್ಪ, ಒಂಟಿಕೊಂಬಿನ ಮೇಕೆ. ಇದೇನು ಮಹಾ ಒಗಟು ನಾನು ಬಿಡಿಸ್ತೀನಿ. ಇಂತ ಸಾವಿರ ಒಗಟು ನನ್ನ ಜೇಬಿನಾಗ ಇದಾವೆ ಅದರ ರಹಸ್ಯ ಒಡೆದ. ಮಲ್ಲಪ್ಪ ನಾಯಕ ತಕ್ಷಣವೇ ಕರಿಯೋಬಿಯ ಬಳಿಗೆ ಹೋಗಿ ಎಳೆನೀರು - ಕಪ್ಪೆ ಕಲಕದ ನೀರು, ನವಿಲುಗರಿಯೇ - ಬಿಸಿಲಿಗೆ ಬಾಡದ ಹೂ, ಮುಂಗಾರ ಬಳ್ಳಿಯೇ - ನಾಲ್ಕು ಏಣಿನ ಹಸಿರು ಕಲ್ಲಕಂಭ, ತೋಳದಿಂಬೆ ತಲೆಗೆ ಮೆತ್ತನೆಯ ಕಲ್ಲು ಜೇನು ತುಪ್ಪವೇ - ಕಾಯಿಸದೆ ಆಗಿರೋ ತುಪ್ಪ, ಕೋಳಿನೇ - ಒಂಟಿಕೊಂಬಿನ ಮೇಕೆ-ಹೋತ ಎಂದು ಒಗಟನ್ನು ಬಿಡಿಸಿದ. ಮೊದಲೇ ಬಂದು ಸೋತು ಹೋಗಿದ್ದ ಮಲ್ಲಪ್ಪನಾಯಕ ಈ ಒಗಟು ಒಡಸಿದನೆಂಬ ನಂಬಿಕೆ ಕರಿಯೋಬಿಗೆ ಬರಲಿಲ್ಲ".[೬] ಹಟ್ಟಿಮಲ್ಲಪ್ಪನಾಯಕನನ್ನು ವಿಚಾರಿಸಿದಾಗ ನಿನಗೆ ಯಾರಾದರೂ ಸಹಾಯ ಮಾಡಿದ್ದಾರ ಎಂದಾಗ, ಗೆಳೆಯ ಕರಡಿ ಬುಳ್ಳ ಎಂದು ಗೊತ್ತಾದಾಗ ಕರಿಯೋಬಿ ಕರಡಿ ಬುಳ್ಳನಲ್ಲಿಗೆ ಹೋಗಿ ನೀನು ಒಗಟು ಬಿಡಿಸಿದ್ದೀಯಾ ನನ್ನನ್ನು ವಿವಾಹವಾಗು ಎಂದಾಗ, ಕರಡಿಬುಳ್ಳ ನನಗೆ ಈಗಾಗಲೇ ಎರಡು ಮದುವೆಯಾಗಿದೆ. ನನಗೆ ಬಾಲಮ್ಮ, ನಾಗಮ್ಮ ಎಂಬ ಹೆಂಡತಿಯರು. ಇವರಿಬ್ಬರು ಒಪ್ಪಿದರೆ ಮದುವೆಯಾಗುತ್ತೇನೆ ಎಂದು ಹೇಳಿದಾಗ, ಅವರ ಹತ್ತಿರ ಹೋಗಿ, ಅವರನ್ನು ಒಲೈಸಿಕೊಂಡು ಅವರ ಒಪ್ಪಿಗೆ ಮೇರೆಗೆ ಮದುವೆ ನೆರವೇರುತ್ತದೆ. ಹೀಗೆ ಮದುವೆಯಾಗಿ ಹತ್ತಾರು ವರ್ಷಗಳು ವಯಸ್ಸು ಕಳೆದರೂ ಕರಿಯೋಬಿಗೆ ಮಕ್ಕಳಾಗಲಿಲ್ಲ. ಆಗ ಬಾಲಮ್ಮನ ಇಬ್ಬರ ಮಕ್ಕಳಲ್ಲಿ ಮಾರುಮುತ್ತಿಯನ್ನು ದತ್ತು ತೆಗೆದುಕೊಂಡು ಅವನು ದೊಡ್ಡವನಾದ ಮೇಲೆ ನಾಯಕರ

ಸಮುದಾಯದಲ್ಲಿ ಹೆಣ್ಣು ತೆಗೆದು ಮದುವೆ ಮಾಡುತ್ತಾಳೆ. ಅವನಿಗೆ ಏಳು ಜನ ಮಕ್ಕಳಾಗುತ್ತವೆ. ಕರಿಯೋಬಿಗಾಗಿ ತಂದೆಯವರು ಸಾವಿರ ಎಕರೆ ಭೂಮಿಯನ್ನು ಹರತಿಕೋಟೆ ಸಮೀಪ ದಾನದ ರೂಪವಾಗಿ ಕೊಟ್ಟು ಅಲ್ಲಿ ಒಂದು ಮನೆಯನ್ನು ಕಟ್ಟಿ ಕೊಡುತ್ತಾರೆ. ಈ ಮನೆ ಕಟ್ಟಿ ಊರು ಸ್ಥಾಪಿಸಿದ್ದಕ್ಕೆ ಕರಿಯೋಬಿನಹಳ್ಳಿ ಎಂದು ಹೆಸರು ರೂಢಿಯಾಗಿ ಬಂದಿದೆ. ಕರಿಯೋಬಿ ಸತ್ತ ನಂತರ ಈ ಊರಿನ ಸಮೀಪ ಸಮಾಧಿ ಮಾಡುತ್ತಾರೆ. ಈಗಲೂ ಈಕೆಯ ಗುಡ್ಡೆಯನ್ನು ಕಾಣಬಹುದು.

**ಎತ್ತಿನಹಟ್ಟಿ**

ಎತ್ತಿನಹಟ್ಟಿ ಚಳ್ಳಕೆರೆ ತಾಲೂಕಿನ ನಾಯಕನಹಟ್ಟಿಗೆ ಹತ್ತಿರವಿರುವ ಗ್ರಾಮ. ಇಲ್ಲಿ ವಾಸಿಸುವ ಸಮುದಾಯ ಬೇಡನಾಯಕರು. ಇವರ ಮೂಲ ವೃತ್ತಿ ಪಶುಪಾಲನೆಯಾಗಿರುವುದರಿಂದ, ಇವರು ದನಗಳಿಗೆ ವಾಸಿಸಲು ಹಟ್ಟಿಯನ್ನು ಕಟ್ಟಿ ಅಲ್ಲಿಯೇ ವಾಸವಾಗತೊಡಗಿದರು. ಎತ್ತುಗಳು ವಾಸಿಸುವ ಸ್ಥಳವೇ ಎತ್ತಿನಹಟ್ಟಿ ಎಂದು ರೂಢಿಯಾಗಿ ಬಂದಿದೆ. ಈ ಗ್ರಾಮದ ಪಕ್ಕದಲ್ಲಿ ಹಿರೇಕೆರೆ ಕಾವಲಿದೆ. ಇಲ್ಲಿ ಪಶುಪಾಲನೆ ಕಂಡುಬರುತ್ತದೆ. ಪಶುಗಳಿಗೆ ಹಟ್ಟಿಯನ್ನು ಕಟ್ಟಿದ್ದರಿಂದ ಇಂತಹ ಸ್ಥಳನಾಮಗಳು ಈ ಪರಿಸರದಲ್ಲಿ ಕಂಡುಬರುತ್ತವೆ.

ಬಯಲುಸೀಮೆಯ ಈ ಪರಿಸರದಲ್ಲಿ ಬರುವ ಸಾಕಷ್ಟು ಹಟ್ಟಿಯ ಸ್ಥಳನಾಮಗಳು ವ್ಯಕ್ತಿ ಸೂಚಕವಾದವುಗಳು. ಏಕೆಂದರೆ ಒಂದು ಹಟ್ಟಿಯನ್ನು ಕಟ್ಟುವಲ್ಲಿ ಊರಿನ ಹಿರಿಯನ ಹಾಗೂ ಯಜಮಾನನ ಪಾತ್ರ ಮುಖ್ಯವಾದುದು. ಏಕೆಂದರೆ ಹಟ್ಟಿಗೆ ಅಗತ್ಯವಿರುವ ಜಾಗವನ್ನು ಕೊಡುವುದರಿಂದ ಅವರಿಗೆ ಹಟ್ಟಿಯ ಹೆಸರು ಪ್ರಾಪ್ತವಾಗುತ್ತದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದುದೇನೆಂದರೆ ಸಮುದಾಯವನ್ನು ಸೂಚಿಸುವ, ದೇವರನ್ನು ಸೂಚಿಸುವ ನಾಮಗಳನ್ನು ಸೇರಿಸಲಾಗಿದೆ. ಇಲ್ಲಿನ ಸ್ಥಳನಾಮಗಳು ನೇರವಾಗಿ ಹೆಸರನ್ನು ಹೇಳುತ್ತವೆ.

ಬೋರನಹಟ್ಟಿ, ಓಬಯ್ಯನಹಟ್ಟಿ, ಚಿತ್ರಯ್ಯನಹಟ್ಟಿ, ಕಾಟಪ್ಪನಹಟ್ಟಿ, ಕಾಕಿಬೋರನಹಟ್ಟಿ, ಬಸಯ್ಯನಹಟ್ಟಿ, ಪೇಲೂರಹಟ್ಟಿ, ಪಾಪಯ್ಯನಹಟ್ಟಿ, ಬಸಪ್ಪನಹಟ್ಟಿ, ಬಚ್ಚಬೋರನಹಟ್ಟಿ, ಒದ್ನಓಬಯ್ಯನ ಹಟ್ಟಿ, ತಿಪ್ಪಯ್ಯನಹಟ್ಟಿ ಇತ್ಯಾದಿ.

**ನಲಗೇತನಹಟ್ಟಿ**

ಇದು ಚಳ್ಳಕೆರೆ ತಾಲೂಕಿಗೆ ಸೇರಿದ ಗ್ರಾಮ. ನಾಯಕನಹಟ್ಟಿಯಿಂದ ೧೧ ಕಿಲೋಮೀಟರ್ ದೂರದಲ್ಲಿದೆ. ಇಲ್ಲಿ ಮ್ಯಾಸನಾಯಕ ಸಮುದಾಯದ ನಲಗೇತು ಎಂಬ ಬೆಡಗಿಗೆ ಸೇರಿದ ಅಣ್ಣ-ತಮ್ಮಂದಿರು ಇಲ್ಲಿಯೇ ಹಟ್ಟಿ ಕಟ್ಟಿ ವಾಸಿಸುತ್ತಿದ್ದರಿಂದ ನಲಗೇತನಹಟ್ಟಿ ಎಂದು ಹೆಸರು ಬಂದಿದೆ. ಇವರ ಮೂಲವೃತ್ತಿ ಪಶುಪಾಲನೆಯಾಗಿತ್ತು. ಇಲ್ಲಿ ಮ್ಯಾಸನಾಯಕರೇ ಹೆಚ್ಚು ಇರುವ ಹಟ್ಟಿ. ಇತರೆ ಸಮುದಾಯಗಳಾದ ಪಿಂಜಾರ, ಮಾದಿಗ ಸಮುದಾಯಗಳು ಕೂಡ ಇವೆ. ಇಲ್ಲಿ ಬಾಡಕಟ್ಟಿನ ಕಟ್ಟು ನಿಯಮಗಳು ಇಂದಿಗೂ ಇವೆ. ಈ ಹಟ್ಟಿಯಲ್ಲಿ ಯಾರು

ಕೋಳಿ ಸಾಕುವುದಿಲ್ಲ, ತಿನ್ನುವುದಿಲ್ಲ. ಬೇರೆ ಸಮುದಾಯವಿದ್ದರೂ ಸಹ ಕೋಳಿ ತಿನ್ನುವುದಿಲ್ಲ. ಈ ಹಟ್ಟಿಗೆ ಪ್ರವೇಶವೇ ಇಲ್ಲ. ಇಲ್ಲಿ ಹೋಗುವ ಬಸ್ಸುಗಳಲ್ಲಿ ಯಾರಾದರೂ ಕೋಳಿಯನ್ನು ಬಸ್ಸಿನಲ್ಲಿ ತಂದರೆ ಈ ಊರಿನಿಂದ ಒಂದು ಕಿಲೋಮೀಟರ್ ದೂರವೇ ಇಳಿದು ಮತ್ತೆ ಬಸ್ ವಾಪಸ್ಸು ಆದಾಗ ಅದೇ ಬಸ್ಸಿಗೆ ಹೋಗುವರು. ಒಮ್ಮೆ ಯಾರೋ ಒಬ್ಬ ಬಸ್ಸಿನಲ್ಲಿ ಈ ಗ್ರಾಮದ ಮೇಲೆ ಕೋಳಿ ತಂದಿದ್ದನಂತೆ. ಆಗ ಬಸ್ಸು ಈ ಹಟ್ಟಿ ಪ್ರವೇಶ ಪಡೆಯುವಷ್ಟರಲ್ಲಿ ಕೆಟ್ಟು ಹೋಗಿ ನಿಂತಿತಂತೆ. ಆಗ ಬಸ್ಸಿನ ಡ್ರೈವರು, ಜನರು ಈ ಹಟ್ಟಿಯಲ್ಲಿ ಇಳಿದು ಈ ಹಟ್ಟಿಯ ದೇವರಾದ ಚೆನ್ನಕೇಶವ ದೇವಸ್ಥಾನಕ್ಕೆ ಬಂದು ಪೂಜೆ ಮಾಡಿಕೊಂಡು ತಪ್ಪಾಯಿತು, ಇನ್ನ ಮೇಲೆ ಕೋಳಿಯನ್ನು ಬಸ್ಸಿನಲ್ಲಿ ತರುವುದಿಲ್ಲವೆಂದು ಪೂಜೆ ಮಾಡಿಸಿದರಂತೆ. ಆಗ ಬಸ್ಸು ಚಾಲುವಾಗಿ ಮುಂದೆ ಸಾಗಿತಂತೆ. ಅಂದಿನಿಂದ ಈ ಹಟ್ಟಿಯ ಬಸ್ಸಿನಲ್ಲಿ ಕೋಳಿ ಕೂಡ ನಿಷಿದ್ಧ. ಈ ಹಟ್ಟಿಯಲ್ಲಿ ಈ ಸಮುದಾಯದವರು ಬೇರೆ ಸಮುದಾಯದವರೊಂದಿಗೆ ಮದುವೆಯಾದರೆ ಹಟ್ಟಿಗೆ ಪ್ರವೇಶಿಸುವಂತಿಲ್ಲ ಹಾಗೂ ಸಮುದಾಯದಿಂದಲೇ ನಿಷೇಧ ಹೇರುವರು. ಈ ಹಟ್ಟಿಯಲ್ಲಿ ನಂಬಿಕೆ, ಆಚರಣೆಗಳನ್ನು ಇಂದಿಗೂ ಕಟ್ಟುನಿಟ್ಟಿನಿಂದಲೇ ಆಚರಿಸುತ್ತಾರೆ. ಇಲ್ಲಿ ವರ್ಷಕ್ಕೊಮ್ಮೆ ಮ್ಯಾಸಬೇಡ ಸಮುದಾಯದವರು ಚೆನ್ನಕೇಶವ ದೇವಸ್ಥಾನದ ಮುಂದೆ ಸಾಮೂಹಿಕ ವಿವಾಹ ಏರ್ಪಡಿಸುತ್ತಿದ್ದಾರೆ. ಇಲ್ಲಿನ ಸಾಮೂಹಿಕ ಮದುವೆಗಳು ನಾಡಿನಲ್ಲಿ ಉದಾಹರಣೆಯಾಗಿವೆ. ಇಲ್ಲಿ ಯಾವ ರಾಜಕೀಯ ವ್ಯಕ್ತಿ ಅಥವಾ ಶ್ರೀಮಂತನ ನೇತೃತ್ವದಲ್ಲಿ ನಡೆಯುವುದಿಲ್ಲ. ಇದು ಬುಡಕಟ್ಟಿನ ಸಮುದಾಯದಿಂದ ನಡೆಯುವಂತಹದ್ದು.

### ಬಗ್ಗಲ ರಂಗವ್ವನಹಳ್ಳಿ

ಇದು ಚಿತ್ರದುರ್ಗ ತಾಲೂಕಿಗೆ ಸೇರಿದ ಗ್ರಾಮ. ರಂಗವ್ವ ಎಂಬುವಳು ನಾಯಕ ಸಮುದಾಯಕ್ಕೆ ಸೇರಿದವಳು. ರಂಗವ್ವ ಈ ಊರಿಗೆ ಮದುವೆಯಾಗಿ ಬರುತ್ತಾಳೆ. ಈಕೆಯ ಗಂಡನು ತುಂಬಾ ಆಸೆ ಬುರಕನಾಗಿದ್ದನು. ಇವನು ಸದಾ ಹೆಂಡತಿಗೆ ಕಿರುಕುಳ ನೀಡುತ್ತಿದ್ದನಂತೆ. ಅದನ್ನು ತಡೆಯಲು ರಂಗವ್ವ ಮುಂದಾಗಿದ್ದರಿಂದ ಗಂಡನಿಗೆ ಎದುರು ಮಾತನಾಡುತ್ತೀಯ ಎಂದು ಅವಳ ಕಾಲುಗಳಿಗೆ ನಡೆಯದಂತೆ ಬಗ್ಗಲು(ಅರೇನಡಿಗೆ) ಹಾಕಿ ನಡೆಯುವಂತೆ ಕಟ್ಟಿದನಂತೆ. ಹೀಗೆ ಹಿಂಸೆಗೆ ಒಳಗಾದ ನೆನಪಿಗಾಗಿ ಈ ಗ್ರಾಮಕ್ಕೆ ಬಗ್ಗಲು ರಂಗವ್ವನ ಹಳ್ಳಿಯಾಗಿ ಕಾಲಕ್ರಮೇಣ ಬಗ್ಗಲು ರಂಗವನಹಳ್ಳಿಯೆಂದು ಕರೆಯುತ್ತಾರೆ. ಈ ಗ್ರಾಮದ ಹಿರಿಯರ ಅಭಿಪ್ರಾಯ.

### ಬೊಮ್ಮಕ್ಕನಹಳ್ಳಿ

ಇದು ಚಿತ್ರದುರ್ಗದಿಂದ ನಾಯಕನಹಟ್ಟಿಗೆ ಹೋಗುವ ಮಾರ್ಗದ ನಲಗೇತನಹಟ್ಟಿ ಸಮೀಪದಲ್ಲಿದೆ. ಇಲ್ಲಿ ಒಂದು ಬೆಟ್ಟವಿದೆ. ಅಲ್ಲಿ ಬೆಟ್ಟದ ಮೇಲೆ ಒಂದು ಗುಡಿಯಿದ್ದು, ಆ ಗುಡಿಯ ಪೂಜೆಯನ್ನು ಸದಾ ಒಬ್ಬ ಮಹಿಳೆ ಮಾಡುತ್ತಿದ್ದಳಂತೆ. ಅವಳು ನಾಯಕ ಸಮುದಾಯಕ್ಕೆ

ಸೇರಿದ್ದು, ಅವಳ ಹೆಸರು ಬೊಮ್ಮಕ್ಕ. ಮದುವೆ ನಂತರ ತುಂಬು ಗರ್ಭಿಣಿಯಾಗಿದ್ದು, ದೇವರ ಪೂಜೆಯನ್ನು ಮಾಡಲು ಬೆಟ್ಟ ಹತ್ತಲಾಗದ ಸ್ಥಿತಿಯಲ್ಲಿ ಬೆಟ್ಟದ ಮೇಲಿನಿಂದಲೇ ಅಲ್ಲಿರುವ ಸಿದ್ಧಲಿಂಗದೇವರ ಲಿಂಗ ಉರುಳಿ ಕೆಳಕ್ಕೆ ಬಂದಿದ್ದು, ಅಲ್ಲಿ ಅವಳ ಪೂಜೆ ಕಾರ್ಯ ಸಾಗಿದ್ದರಿಂದ, ಈ ಗ್ರಾಮದ ಸಿದ್ಧಲಿಂಗನ ಮೂಲಭಕ್ತಿ ಬೊಮ್ಮಕ್ಕನ ಹೆಸರಿನಲ್ಲಿ ಈ ಊರು ನಿರ್ಮಾಣವಾಗಿದೆ ಎಂದು ಹೇಳುತ್ತಾರೆ(ವಕ್ತೃ: ಗುಂಡುಬೋರಯ್ಯ, ಕಾತ್ರಿಕೆಹಟ್ಟಿ).

**ಹುಲ್ಲೂರು**

ಚಿತ್ರದುರ್ಗದಿಂದ ಹೊಳಲ್ಕೆರೆಗೆ ಹೋಗುವ ಮಾರ್ಗದಲ್ಲಿ ರಾಷ್ಟ್ರೀಯ ಹೆದ್ದಾರಿ-೧೩ರ ಬಲಭಾಗದಲ್ಲಿ ಕಿರುರಸ್ತೆ ಮೂಲಕ ಎರಡು ಕಿ.ಮೀ. ಕ್ರಮಿಸಿದರೆ ಹುಲ್ಲೂರು ಗ್ರಾಮ ಸಿಗುತ್ತದೆ. ಈ ಗ್ರಾಮವು ಚಾರಿತ್ರಿಕ ಮಹತ್ವ ಪಡೆದಿದೆ. ಈ ಗ್ರಾಮದ ಬಗೆಗೆ ಐತಿಹ್ಯ ಹೀಗಿದೆ. ಚಿತ್ರದುರ್ಗ ಪಾಳೆಯಗಾರರ ಬಳಿ ಚಿಕ್ಕಣ್ಣನೆಂಬ ಸೈನಿಕ ತನ್ನ ಕರ್ತವ್ಯವೊಂದರಲ್ಲಿ ಬಲಗೈ ಕಳೆದುಕೊಂಡಿದ್ದನು. ಈತ ಕೈಕಳೆದುಕೊಂಡಿದ್ದರೂ ಹಲವಾರು ಯುದ್ಧಗಳಲ್ಲಿ ಅದನ್ನು ಲೆಕ್ಕಿಸದೆ ನಿಷ್ಠೆಯಿಂದ ನಿರ್ವಹಿಸಿದ ಕಾರ್ಯವನ್ನು ಮುಗಿಸಿದ್ದಕ್ಕಾಗಿ ಪಾಳೆಯಗಾರರು ಈತನಿಗೆ ಚಿಕ್ಕರಸ ಎಂದು ಬಿರುದು ನೀಡಿ ಹುಲ್ಲೂರು, ತಿರುಮಲಾಪುರ ಗ್ರಾಮವನ್ನು ಉಂಬಳಿಯಾಗಿ ಕೊಟ್ಟಿದ್ದರಂತೆ. ಈ ಚಿಕ್ಕರಸನ ದನದ ಹಿಂಡು ಸಿಂಗಪುರದವರೆಗೂ ಬಂದು ಮೇಯಿತ್ತಿದ್ದವಂತೆ. ಈತ ತಿರುಮಲಾಪುರದಲ್ಲಿ ವಾಸ ಮಾಡುತ್ತಿದ್ದಾಗ ಹುಲ್ಲೂರು ಕೇವಲ ಹುಲ್ಲುಗಾವಲು ಪ್ರದೇಶವಾಗಿತ್ತಂತೆ. ಈ ದನಗಳು ಬರುವ ದಾರಿಯಲ್ಲಿ ಕೆರೆಕಟ್ಟುವ ಯೋಚನೆಯಾಗಿ ದಿನವೂ ದನಗಳು ತುಳಿದು ಗಟ್ಟಿ ಮಾಡುತ್ತಿದ್ದ ಏರಿಗೆ ಕೆರೆಕಟ್ಟಿದನಂತೆ. ಆದ್ದರಿಂದ ತನ್ನ ವಾಸವನ್ನು ಹುಲ್ಲುಗಾವಲಿನ ಬಳಿಯಿದ್ದ ದೇವಾಲಯ ಬಳಿ ಊರುಕಟ್ಟಿ ವಾಸಿಸುತ್ತಿದ್ದಕ್ಕಾಗಿ, ಆ ಪ್ರದೇಶವೇ ಇತಿಹಾಸ ಪ್ರಸಿದ್ಧ ಹುಲ್ಲೂರು ಗ್ರಾಮವಾಗಿದೆ.

**ಸೂರಮ್ಮನಹಳ್ಳಿ**

ಸೂರಮ್ಮನಹಳ್ಳಿ ಮೊಳಕಾಲ್ಮೂರು ತಾಲ್ಲೂಕಿಗೆ ಸೇರಿದ ಗ್ರಾಮ. ಈ ಗ್ರಾಮಕ್ಕೆ ಹಲವಾರು ಹೆಸರುಗಳಿಂದ ಗುರುತಿಸಲಾಗುತ್ತದೆ. ದುಪ್ಪಿ, ದೊಣ್ಣೆತಮ್ಮೇನಹಳ್ಳಿ, ಅಡವಿಮಲ್ಲಾಪುರ, ಅರಿವಿನದೊಡ್ಡಿ, ಕಮರಕಾವಲ್ ಮತ್ತು ಅಡವಿ ಸೂರಮ್ಮನಹಳ್ಳಿ. ಈ ಮೇಲಿನ ಸ್ಥಳಗಳಲ್ಲಿ ಜನವಸತಿಗಳು ನೆಲೆಸಿ ಹಲವು ಕಾರಣಗಳಿಂದ ಕಾಲಕಾಲಕ್ಕೆ ಈ ಸ್ಥಳಗಳನ್ನು ಬದಲಾಯಿಸಿವೆ. ಈ ಗ್ರಾಮಕ್ಕೆ ಸಂಬಂಧಿಸಿದ ಐತಿಹ್ಯ ಹೀಗಿದೆ. ಹಿಂದೆ ಬೇಡ ಸಮುದಾಯವು ಶ್ರೀಶೈಲ ಪ್ರಾಂತ್ಯದಲ್ಲಿ ಬರ, ಕ್ಷಾಮ ಉಂಟಾಗಿ ಮೇವು ನೀರು ಅರಸುತ್ತ ಜಿನಗಿಹಳ್ಳ ಸಮೀಪ ಕಂಪಳದೇವರಹಟ್ಟಿಗೆ ಬಂದು ತಲುಪಿತು. ನಂತರ ಅರಿವಿನ ದೊಡ್ಡಿಗೆ ಬಂದು ನೆಲೆಸಿತು. ಆರಂಭದಲ್ಲಿ ಈ ಪಶುಪಾಲಕರ ಮೇಲೆ ವಿಜಯನಗರದ ಸೈನಿಕರು ದಾಳಿ ಮಾಡಿ ಸಂಗ್ರಹಿಸಿದ ತುಪ್ಪವನ್ನು ಕೊಳ್ಳೆ ಹೊಡೆಯುತ್ತಿದ್ದರು. ಹೀಗೆ ಪದೇ ಪದೇ ದಾಳಿಗೆ ತುತ್ತಾಗುತ್ತಿದ್ದರು.

ಪ್ರತಿದಿನ ಪುರುಷರು ದನಗಳನ್ನು ಮೇಯಿಸಲು ಹತ್ತಾರು ಕಿಲೋಮೀಟರ್ ದೂರದವರೆಗೂ ತೆರಳುತ್ತಿದ್ದರು. ಈ ಸಮಯವನ್ನು ಅರಿತ ವಿಜಯನಗರದ ಸೈನಿಕರು ದನದ ಗೂಡಿನ ಬಳಿ ಬಂದು ತುಪ್ಪವನ್ನು ಕೊಳ್ಳೆ ಹೊಡೆಯಲು ಸಂಚು ರೂಪಿಸುತ್ತಿದ್ದರು. ಇದೇ ವೇಳೆಗೆ ಹಟ್ಟಿಯಿಂದ ಹೊರಬಂದ 'ಸೂರಮ್ಮ' ಎಂಬ ಮಹಿಳೆ ಹಟ್ಟಿಯ ಬಳಿಯಿದ್ದ ಗುಂಡುಕಲ್ಲುಗಳಿಂದ ಸೈನಿಕರಿಗೆ ಬೀಸಿ ಗಾಯಗೊಳಿಸಿದಳು. ಅಂದು ಸೂರಮ್ಮ ಸೈನಿಕರೊಂದಿಗೆ ದಿಟ್ಟತನದಿಂದ ಹೋರಾಡುತ್ತಲೇ ವೀರಮರಣ ಹೊಂದಿದಳು. ಅಡವಿಗೆ ತೆರಳಿದ ದನಗಾಯಿಗಳು ಸಂಜೆ ಹಟ್ಟಿಯ ಬಳಿ ಬಂದು ಸೂರಮ್ಮನ ಸಾವು ಕಂಡು ದುಃಖಿತರಾದರು. ಸೂರಮ್ಮನನ್ನು ಅಲ್ಲಿಯೇ ಸಮಾಧಿ ಮಾಡಿದರು. ಇಲ್ಲಿಯೇ ಇದ್ದರೆ ತಮ್ಮ ಸಂಸ್ಕೃತಿಗೆ ಧಕ್ಕೆ ಬರುತ್ತದೆಂದು ತಿಳಿದು ಅರಿವಿನ ದೊಡ್ಡಿಯನ್ನು ತೊರೆದು ನೆಲ ಊರು ಮತ್ತು ಬಂಡೆ ಊರುಗಳಲ್ಲಿ ನೆಲೆಸಿದರು. ನಂತರ ಅಲ್ಲಿಯೇ ಸಮೀಪ ಒಂದು ಹಟ್ಟಿಯನ್ನು ಕಟ್ಟಿಕೊಂಡು ಅದಕ್ಕೆ 'ಸೂರಮ್ಮನಹಟ್ಟಿ' ಎಂದು ಹೆಸರಿಟ್ಟರು. ಸೂರಮ್ಮನ ನೆನಪಿಗಾಗಿ ಈ ಹಟ್ಟಿಗೆ 'ಅಡವಿಸೂರಮ್ಮನಹಟ್ಟಿ' ಎಂದು ಕರೆದರು. ಪ್ರಸ್ತುತವಾಗಿ ಅಡವಿ ಮತ್ತು ಹಟ್ಟಿ ಲೋಪವಾಗಿ 'ಸೂರಮ್ಮನಹಳ್ಳಿ' ಎಂದು ಕರೆಯುತ್ತಾರೆ. ಸೂರಮ್ಮನ ನೆನಪಿಗಾಗಿ ಆಕೆಯ ವಾಸವಿದ್ದ ಸ್ಥಳದಿಂದ ದೊಡ್ಡದಾದ ಬಂಡೆಯನ್ನು ತಂದು ಆಕೆಯ ಪ್ರತೀಕವಾಗಿ ಈ ಹಳ್ಳಿಯಲ್ಲಿ ನೆಟ್ಟಿದ್ದಾರೆ. ಇದನ್ನು 'ಪಡ್ಲಪಾಲಯ್ಯ' ಎಂಬ ವ್ಯಕ್ತಿ ತಂದು ನೆಟ್ಟಿದ್ದರಿಂದ 'ಪಡ್ಲಾರು ಬಂಡೆ' ಎಂದು ಸಹ ಕರೆಯುತ್ತಾರೆ. ಈ ಬಂಡೆಯನ್ನು ಇಂದಿಗೂ ಬೊಮ್ಮಗುಂಡನಕೆರೆಗೆ ಹೋಗುವ ರಸ್ತೆಯ ಬದಿಯಲ್ಲಿ ಸೂರಮ್ಮನಹಳ್ಳಿಯಲ್ಲಿ ಕಾಣಬಹುದು.

### ತುಮ್ಮಲು

ಚಳ್ಳಕೆರೆ ತಾಲೂಕಿನಲ್ಲಿರುವ ಗೌರಸಮುದ್ರ ಗ್ರಾಮದಿಂದ ಎರಡು ಕಿ.ಮೀ. ದೂರವಿರುವ ತುಮ್ಮಲು ಎಂಬ ಪ್ರದೇಶವಿದೆ. ಈ ಪ್ರದೇಶ ಮಲ್ಲಸಮುದ್ರ ಮತ್ತು ಗೌರಸಮುದ್ರದ ಮಧ್ಯ ಬರುತ್ತದೆ. ಇಲ್ಲಿ ಹಿಂದೆ 'ತುಮ್ಮೆ' ಜಾತಿಯ ಮರಗಿಡಗಳು ಹೆಚ್ಚಾಗಿರುವುದರಿಂದ ಇದನ್ನು ತುಮ್ಮಲು ಎಂದು ಕರೆಯುತ್ತಾರೆ. ಈ ಮರಗಳು ಮುಳ್ಳುಗಳಿಂದ ಕೂಡಿದ್ದು, ಬನ್ನಿ ಮರಗಳನ್ನು ಹೋಲುತ್ತವೆ. ಇಲ್ಲಿ ಮಾರಮ್ಮನ ಸಮಾಧಿ ಇದೆ ಎಂದು ಸ್ಥಳೀಯರು ಹೇಳುತ್ತಾರೆ. ಇಲ್ಲಿ ಒಂದು ಪೌಳಿ ಇದ್ದು ಒಳಗಡೆ ಎರಡು ಕಟ್ಟೆಗಳಿವೆ. ಸುಮಾರು ಮೂವತ್ತು ಅಡಿಗಳಷ್ಟು ಎತ್ತರವಾದ ದೀಪಸ್ತಂಭವಿದೆ. ಜಾತ್ರೆಯ ಸಂದರ್ಭದಲ್ಲಿ ಈ ಸ್ತಂಭದ ಮೇಲೆ ದೀಪ ಹಚ್ಚುತ್ತಾರೆ. ಈ ಜಿಲ್ಲೆಯಲ್ಲಿ ವಿಜೃಂಭಣೆಯಿಂದ ನಡೆಯುವ ಜಾತ್ರೆಯಾಗಿದೆ. ಈ ಪ್ರದೇಶದಲ್ಲಿ ಬೇಡಗಂಪಳ ಹೋರಾಡಿದ, ನೆಲೆಯೂರಿದ ಸ್ಥಳ. ಇಲ್ಲಿಂದ ಸುಮಾರು ಒಂದು ಕಿ.ಮೀ. ಸಮೀಪ ಲಿಂಗದ ಗುಡಿಯಿದೆ. ಇಲ್ಲಿಯೆ ನೂರಾ ಒಂದು ಲಿಂಗಗಳಿವೆ ಎಂದು ಜನಪದರು ಹೇಳುತ್ತಾರೆ. ಯರಮಂಚನಾಯಕನು ಮಾರಮ್ಮನ ಸೂಚನೆಯ ಮೇರೆಗೆ ಇದನ್ನು ಪ್ರತಿಷ್ಠಾಪಿಸಿದ ಎಂದೂ ಹೇಳುತ್ತಾರೆ(ವಕ್ತೃ: ಬೋರಜ್ಜ, ೭೫ ವಯಸ್ಸು, ಬುಕ್ಕಂ ಬೂದಿ, ಯರಮಂಚಿಯವರು).

### ಚಳ್ಳಕೆರೆ

ಚಳ್ಳಕೆರೆ ಚಿತ್ರದುರ್ಗ ಜಿಲ್ಲೆಯ ಒಂದು ತಾಲೂಕು ಕೇಂದ್ರ. ಈ ಗ್ರಾಮಕ್ಕೆ ಹಿಂದೆ ಓರಂಗಲ್ಲು ಎಂಬ ಹೆಸರು ಇದ್ದಿತಂತೆ. ಒಮ್ಮೆ ಮಲ್ಲಿಕಾಫರನು ಈ ಓರಂಗಲ್ಲು ಗ್ರಾಮದ ಮೇಲೆ ದಾಳಿ ಮಾಡಿದನು. ಈ ದಾಳಿಯಿಂದ ಈ ಓರಂಗಲ್ಲು ನಾಶವಾದ ನಂತರ ಚಳ್ಳಕೆರಮ್ಮ ಎಂಬ ದೇವತೆಯು ದೊಡ್ಡೇರಿಯಿಂದ ಚಳ್ಳಕೆರೆಗೆ ಬಂದು ನೆಲೆಸಿದಳಂತೆ. ಈ ದೇವತೆಯ ಪ್ರಭಾವದಿಂದ ಚಳ್ಳಕೆರೆ ಎಂಬ ಹೆಸರು ಬಂದಿದೆ ಎಂದು ಸ್ಥಳೀಯರ ಅಭಿಪ್ರಾಯ. ಈ ದೇವಿಯ ದೇವಸ್ಥಾನವನ್ನು ಬೀದರ್- ಶ್ರೀರಂಗಪಟ್ಟಣ ಹೆದ್ದಾರಿ ಪಕ್ಕದಲ್ಲಿ ಚಳ್ಳಕೆರೆಯಲ್ಲಿ ಕಾಣಬಹುದು. ಈ ದೇವತೆಯು ಅಪಾರ ಭಕ್ತ ಸಮೂಹವನ್ನು ಹೊಂದಿದ್ದು, ಪ್ರತಿ ವರ್ಷ ಜಾತ್ರೆ ನಡೆಯುತ್ತದೆ. ಇನ್ನೊಂದು ಐತಿಹ್ಯ ಪ್ರಕಾರ ನಾಯಕನಹಟ್ಟಿಗೆ ಹೋಗುವ ಮಾರ್ಗದಲ್ಲಿ ಕೆರೆಕಲ್ಲು ಎಂಬ ಕೆರೆಯಿದೆ. ಈ ಕೆರೆಯ ಸುತ್ತಮುತ್ತ ಚಳ್ಳೆಹಣ್ಣಿನ ಮರಗಳು ದಟ್ಟವಾಗಿ ಬೆಳೆದಿದ್ದರಿಂದ ಚಳ್ಳೆಹಣ್ಣಿನಕೆರೆ>ಚಳ್ಳಕೆರೆ ಎಂದು ಹೆಸರು ಬಂದಿದೆ ಎಂದು ಸ್ಥಳೀಯರು ಹೇಳುತ್ತಾರೆ.

### ನೇತ್ರಯ್ಯನ ಹಟ್ಟಿ

ಚಳ್ಳಕೆರೆ ಸಮೀಪದಲ್ಲಿ ಕಂಡು ಬರುವ ಒಂದು ಗ್ರಾಮ. ಈ ಗ್ರಾಮದ ಬಳಿ ಪಕ್ಕದ ದಾರಿಯಲ್ಲಿ ಒಂದು ವೀರಗಲ್ಲಿದೆ. ಈ ವೀರಗಲ್ಲಿನ ಕಥೆ ಹೀಗಿದೆ; ಹಿಂದೆ ಒಮ್ಮೆ ಚಿರತೆಯೊಂದಿಗೆ ಹೋರಾಡಿ ಪ್ರಾಣತೆತ್ತ ಯರ್ರಪಾಪಯ್ಯ ಕುರಿಗಳನ್ನು ಎತ್ತೊಯ್ಯುತ್ತಿದ್ದ ಚಿರತೆಗಳ ಕಾಟದಿಂದ ಈ ಹಳ್ಳಿಯನ್ನು ಪಾರು ಮಾಡಿದನು. ಈ ವ್ಯಕ್ತಿಯನ್ನು ಸ್ಮರಿಸಲು ಈ ಹಳ್ಳಿಯವರು ಆತನ ಹೆಸರಿನಲ್ಲಿ 'ಪರವು' ಮಾಡಿ ವೀರಗಲ್ಲು ನಿಲ್ಲಿಸಿದ್ದಾರೆ.

### ಕಾಡುಸಿದ್ಧಾಪುರ

ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಕಂಡುಬರುವ ಒಂದು ಗ್ರಾಮ. ಈ ಗ್ರಾಮದ ಬಗೆಗೆ ಐತಿಹ್ಯ ಹೀಗಿದೆ. ಕಾಡುಸಿದ್ಧ ಎಂಬ ವ್ಯಕ್ತಿ ಈ ಊರಿನಲ್ಲಿ ಹಿಂದೆ ಇದ್ದ. ಈತನ ಮೂಲನೆಲೆ ಯಾವುದು ಎಲ್ಲಿಂದ ಬಂದವನು ಎಂಬುದು ತಿಳಿದಿಲ್ಲ. ಇಲ್ಲಿಯೇ ವಾಸ್ತವ್ಯ ಹೂಡಿದ್ದ. ಒಂದು ದಿನ ದನಕಾಯುವ ಹುಡುಗರು ಕಾಡುಸಿದ್ಧನ ಬಳಿ ಬಂದರು. ಹುಡುಗರಿಗೆ ಕಾಡುಸಿದ್ಧ ಹೀಗೆ ಹೇಳಿದನು. ಮಳೆ ಜೋರಾಗಿ ಬರುವುದು ನೀವು ಇಲ್ಲಿಂದ ಮನೆಗೆ ತೆರಳಿ ಎಂದನು. ದನಕಾಯುವ ಹುಡುಗರು ಸಿದ್ಧನ ಮಾತನ್ನು ದಿಕ್ಕರಿಸಿದರು. ಸಂಜೆ ವೇಳೆಗೆ ಗುಡುಗು ಸಹಿತ ಮಳೆ ಬಂದಿತು. ಇದನ್ನರಿತ ದನಗಾಹಿಗಳು ವಿಸ್ಮಯರಾದರು. ಈ ಸಂಗತಿ ಎಲ್ಲರಿಗೂ ಹಬ್ಬಿತು. ಹೀಗೆ ದಿನಗಳು ಕಳೆದಂತೆ ಕಾಡುಸಿದ್ಧನ ಹೆಂಡತಿ ತೀರಿಕೊಂಡಳು. ಶವವನ್ನು ಹೂಳಲು ಸ್ಮಶಾನಕ್ಕೆ ಹೋದಾಗ, ಶವ ಇದ್ದಕ್ಕಿದ್ದ ಹಾಗೆ ಕಣ್ಮರೆಯಾಯಿತು. ಮತ್ತೆ ನೋಡಿದರೆ ಸಿದ್ಧನ ಬಳಿ ಮಲಗಿತ್ತಂತೆ. ಆಗ ಸಿದ್ಧ ನನ್ನ ಹೆಂಡತಿಗೆ ಬಿಟ್ಟು ಹೋಗಲು ಮನಸಿಲ್ಲ. ನನ್ನ

ವಾಸ್ತವ್ಯದ ಎದುರಿಗೆ ಶವಸಂಸ್ಕಾರ ಮಾಡಿ ಎಂದು ಆದೇಶಿಸಿದನಂತೆ. ಅದರಂತೆ ಅಲ್ಲಿಯೇ ಮಾಡಿದರು. ಮುಂದೊಂದು ದಿನ ನಾನು ಸತ್ತರೆ ಇದೇ ಸ್ಥಳದಲ್ಲಿಯೇ ಶವಸಂಸ್ಕಾರ ಮಾಡಬೇಕೆಂದು ತಿಳಿಸಿದನು. ಇವನ ವಂಶಸ್ಥರೆಲ್ಲರನ್ನು ಇಲ್ಲಿಯೇ ಸಮಾಧಿ ಮಾಡುತ್ತಾರೆ. ಈ ಸಮಾಧಿ ಬಿರುಕು ಬಿಟ್ಟಾಗ, ಆ ದಿನ ಅವರ ಮನೆತನದವರಲ್ಲಿ ಸಾವು ಬರುತ್ತದೆ ಎಂಬ ನಂಬಿಕೆಯಿದೆ. ಈ ರೀತಿಯಾಗಿ ಕಾಡುಸಿದ್ಧನಿಂದ ನಿರ್ಮಾಣವಾದ ಸ್ಥಳಕ್ಕೆ ಕಾಡು ಸಿದ್ಧಾಪುರ ಎಂದು ನಾಮಕರಣಗೊಂಡಿದೆ.

**ನಾಯಕನಹಟ್ಟಿ**

ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿನಲ್ಲಿದೆ. ಇದು ಚಳ್ಳಕೆರೆಯಿಂದ ೨೦ ಕಿ.ಮೀ. ದೂರದಲ್ಲಿದೆ. ಈ ಹಟ್ಟಿಯನ್ನು ಸ್ಥಾಪಿಸಿದ ಮೂಲ ಪುರುಷರು ನಾಯಕರಾಗಿರುವುದರಿಂದ, ಸಹಜವಾಗಿ ನಾಯಕನಹಟ್ಟಿ ಎನಿಸಿತು. ನಾಯಕ(ಬೇಡ ಕಂಪಳ) ಹಿಂದೆ ಶ್ರೀ ಶೈಲ ಪ್ರದೇಶದಲ್ಲಿ ಪಶುಪಾಲನೆ ಕೈಗೊಂಡಿದ್ದ. ಒಮ್ಮೆ ಬರ, ಕ್ಷಾಮ, ಅನಾವೃಷ್ಟಿ ಉಂಟಾಗಿತ್ತು. ಇದರಿಂದ ಶುಕ್ಲ ಮಲ್ಲನಾಯಕನ ವಂಶಸ್ಥರು, ಮೇವು, ನೀರು, ಅರಸುತ್ತ ಕಂಪಳ ಜಿನಗಿ ಹಳ್ಳದ ಪೂರ್ವಕ್ಕೆ ಬೀಡುಬಿಟ್ಟಿತು. ಹೀಗೆ ಬೀಡು ಬಿಟ್ಟ ಕಂಪಳ ಕಾಟೇಮಲ್ಲನಾಯಕನ ನೇತೃತ್ವದಲ್ಲಿ ಕಂಪಳದೇವರಹಟ್ಟಿ, ಅರವಿನದೊಡ್ಡಿಯಲ್ಲಿ ನೆಲೆಸಿ, ಅಲ್ಲಿಂದ ಬೂದಿಗುಮ್ಮಲು(ದೇವರಹಳ್ಳಿ) ನಂತರ ಹೊಸಗುಡ್ಡ, ನಾಯುಕನಹಟ್ಟಿಗೆ ಬಂದು ಇಲ್ಲಿಯೇ ನೆಲೆನಿಂತಿತ್ತು. ಹಟ್ಟಿ ಹಾಕಿದ ಸ್ಥಳವೇ ನಾಯಕನಹಟ್ಟಿಯಾಯಿತು. ಹಟ್ಟಿ ಎಂದರೆ ದನಕರುಗಳು ನೆಲೆನಿಲ್ಲುವ ಸ್ಥಳ. ಇದನ್ನು ಪಶುಪಾಲನೆ ಹಿನ್ನೆಲೆಯಲ್ಲಿ ಹಟ್ಟಿ, ಗೂಡು, ದಡ್ಡಿ ಇತ್ಯಾದಿ ಅರ್ಥಗಳಿವೆ. ಹಟ್ಟಿಯಲ್ಲಿ ವಾಸಿಸುವವರು ಹಟ್ಟಿಕಾರರು. ಇದರ ಅರ್ಥ ಕೂಡ ಪಶುಪಾಲಕರು ಎಂಬುದಾಗಿದೆ. ಈ ಹಟ್ಟಿಯ ಮೂಲ ಪುರುಷ ಕಾಟೇಮಲ್ಲನಾಯಕ. ಇವರು ತಮ್ಮ ಪಶುಸಂಪತ್ತಿನ ರಕ್ಷಣೆಗಾಗಿ ಸಂಸ್ಥಾನ, ಕಟ್ಟೆಮನೆ ಹೀಗೆ ಕಟ್ಟಿಕೊಂಡಿದ್ದರು. ಇವರು ಪಾಳೆಯಗಾರಿಕೆ ಮಾಡಿದವರಲ್ಲ. ತಮ್ಮ ಪಶುಗಳ ರಕ್ಷಣೆಗೆ ಆತ್ಮವನ್ನು ಅರ್ಪಿಸಿಕೊಂಡು ಸದಾ ಅವುಗಳನ್ನು ಸಂರಕ್ಷಿಸಿ ಪೋಷಿಸಿ ಬೆಳೆಸಿರುವರು. ಪಶುಪಾಲಕ ಮೂಲದಿಂದ ತಮ್ಮ ಪಶುಸಂಪತ್ತಿನಿಂದ ಗುರುತಿಸಿಕೊಂಡವರು. ನಾಯಕನಹಟ್ಟಿಯಲ್ಲಿ ಬೇಡರ ಕಟ್ಟೆಮನೆ ಇದೆ. ಇಂದು ಚಾಲ್ತಿಯಲ್ಲಿ ಇಲ್ಲ. ನಾಯಕನಹಟ್ಟಿಯ ಮೂಲ ಪುರುಷ ಕಾಟಮಲ್ಲನಾಯಕ. ಮುಂದೆ ಮಲ್ಲಪ್ಪ ನಾಯಕನ ಕಾಲದಲ್ಲಿ ನಾಯಕನಹಟ್ಟಿ ವೈಭವದಿಂದ ಮೆರೆದು ಪಶುಪಾಲಕರ ಪಾಳೆಯಪಟ್ಟಾಗಿ ಬೆಳೆಯಿತು.

**ನನ್ನಿವಾಳ**

ನನ್ನಿವಾಳ ಚಳ್ಳಕೆರೆ ತಾಲೂಕಿನಲ್ಲಿರುವ ಒಂದು ಗ್ರಾಮ. ಈ ಗ್ರಾಮಕ್ಕೆ ಐತಿಹಾಸಿಕ ಹಿನ್ನೆಲೆ ಇದೆ. ಬೇಡರ ಸಾಂಸ್ಕೃತಿಕ ಕೇಂದ್ರ ಹಾಗೂ ಕಟ್ಟೆ ಮನೆಯೂ ಇದೆ. ಈ ಊರಿನ ಮೂಲ ಹೆಸರು 'ರತ್ನಗಿರಿ'. ನಂತರ ಕಟ್ಟೆ ಮನೆಗಳು ಅಸ್ತಿತ್ವಕ್ಕೆ ಬಂದಾಗ 'ಉಸುಕುಮರಿ' ಸಾವಡಿ ಎಂದೂ ಕರೆಯುತ್ತಿದ್ದರು. ಈ ಗ್ರಾಮದ ಐತಿಹ್ಯ ಹೀಗಿದೆ. ಹಿಂದೆ ಶಿವ-ಪಾರ್ವತಿಯರು

ಕೈಲಾಸದಲ್ಲಿ ಸಂಚರಿಸುತ್ತಿದ್ದಾಗ ನಂದಿ ವಾಹನವನ್ನು ಇಲ್ಲಿನ ಬೆಟ್ಟದ ಮೇಲೆ ಇಳಿಸಿದರಂತೆ. ನಂತರ ಇಲ್ಲಿ ಒಂದು ದಿನ ತಂಗಿ, ವಾಯು ವಿಹಾರ ಮಾಡಿ, ಲಿಂಗವನ್ನು, ನಂದಿಯನ್ನು ಸ್ಥಾಪಿಸಿ ಪೂಜೆ ಮಾಡಿ ಮರಳಿದರಂತೆ. ಶಿವ-ಪಾರ್ವತಿಯರು ನಂದಿ ವಾಹನವನ್ನು ಇಳಿಸಿ, ಇಲ್ಲಿಯ ಗುಡ್ಡದ ಮೇಲೆ ಈಶ್ವರಲಿಂಗ ನಂದಿಯನ್ನು ಸ್ಥಾಪಿಸಿ ಹೋಗಿದ್ದಕ್ಕಾಗಿ ನಂದಿವಾಸ ಎಂದು ಕರೆದರು. ನಂದಿ ವಾಹನ ಇಳಿದಿದ್ದರಿಂದ ನಂದಿವಾಸ>ನಂದಿವಾಳ ಎಂಬ ಹೆಸರು ಬಂದಿದೆ ಎಂದು ಐತಿಹ್ಯ ಹೇಳುತ್ತದೆ. ಈ ಊರಿಗೆ ಅಂಟಿಕೊಂಡಿರುವ ಬೆಟ್ಟ ಒಂದೇ ಕಲ್ಲಿನಲ್ಲಿದ್ದು ಉದ್ಭವ ಲಿಂಗದಂತೆ ಕಾಣುತ್ತದೆ. ಇದು ಏಕಶಿಲಾ ಬಂಡೆ. ಸಾವಿರಾರು ಅಡಿಗಳು ಎತ್ತರವಿದೆ. ದೂರದಿಂದ ನೋಡಿದರೆ ಬೆಟ್ಟವಿರಬಹುದು ಅಂದುಕೊಳ್ಳುತ್ತಾರೆ. ಹತ್ತಿರದಿಂದ ಗಮನಿಸಿದರೆ ಬೃಹತ್ತಾದ ಏಕಶಿಲಾ ಬಂಡೆ. ಶಿವ-ಪಾರ್ವತಿಯರು, ನಂದಿವಾಹನ ಬಂದಿದ್ದು ಜನರ ಕಟ್ಟಿದ ಕಥೆ ಆಗಿದೆ. ಇಲ್ಲಿ ಪಶುಪಾಲಕರು ಪಶುಪಾಲನೆ ಮಾಡುತ್ತ ನೆಲೆಸಿದವರು. ಇವರು ಶ್ರೀಶೈಲ ಮಲ್ಲಯ್ಯನ ಆರಾಧಕರಾಗಿರುವುದರಿಂದ ಶಿವಲಿಂಗವನ್ನು ಈ ಗುಡ್ಡದ ಮೇಲೆ ಸ್ಥಾಪಿಸಿರಬಹುದು. ಇವರು ಶೈವ ಪರಂಪರೆಗೆ ಸೇರಿದವರು. ಆದಿ ಶೈವ ಪರಂಪರೆಗೆ ಸೇರಿದವರಾಗಿರುವುದರಿಂದ ಶಿವಲಿಂಗ ಮತ್ತು ನಂದಿಯನ್ನು ಸ್ಥಾಪಿಸಿರಬಹುದು. ಬೇಡರು ಇದನ್ನು ಹಿಂದೆ ಶುಕ್ಲಗಿರಿ ಪರ್ವತ ಎನ್ನುತ್ತಿದ್ದರು. ಶುಕ್ಲಗಿರಿ ಎಂದರೆ ತಮ್ಮ ಪೂರ್ವಿಕ ಶುಕ್ಲಮಲ್ಲಯ್ಯ ಇಲ್ಲಿ ಪಶುಪಾಲನೆ ಮಾಡಿದನೆಂದು ಆತನಿಂದ ಈ ಬೆಟ್ಟವನ್ನು ಗುರುತಿಸುತ್ತಾರೆ.

ಇನ್ನೊಂದು ಐತಿಹ್ಯ ಪ್ರಕಾರ ಚಿತ್ರದುರ್ಗ ಪಾಳೆಯಗಾರರ ಅವನತಿ ನಂತರ, ಚಿತ್ರದುರ್ಗವು ಹೈದರಾಲಿ ವಶವಾದ ಮೇಲೆ ಇಲ್ಲಿ ಮುಸ್ಲಿಂರು ಆಳ್ವಿಕೆ ಮಾಡುತ್ತಾರೆ. ಹೈದರಾಲಿ ಇಲ್ಲಿ ಆಳ್ವಿಕೆ ಮಾಡುವ ಕಾಲದಲ್ಲಿ ಮೂರು ಮ್ಯಾಸಬೇಡರ ಕಟ್ಟೆಮನೆಗಳ ಮೇಲೆ ಕಣ್ಣುಬಿದ್ದು ಇವುಗಳ ಮೇಲೆ ಯುದ್ಧ ಸಾರುತ್ತಾನೆ. ಆಗ ಮೂರು ಕಟ್ಟೆಮನೆ ದೊರೆಗಳು ದುರ್ಗದ ಅರಸ ಸರ್ಜಪ್ಪ ನಾಯಕತ್ವದಲ್ಲಿ ಹೈದರಾಲಿ ಸೈನ್ಯವನ್ನು ಸೋಲಿಸಿದರು. ಆಗ ಮುಸ್ಲಿಂ ಸೈನ್ಯ ದಿಕ್ಕಾಪಾಲಾಗಿ ಓಡಿ ಹೋಯಿತು. ಮೂರು ಕಟ್ಟೆಮನೆಗಳ ದೊರೆಗಳು ಯುದ್ಧ ಮಾಡಬೇಕಾದರೆ ದುರ್ಗದ ಅರಸ ಸರ್ಜಪ್ಪ ದೊರೆಯು ಹೈದರಾಲಿ ಮಗಳಾದ ನನ್ನೆಮ್ಮನನ್ನು ಸೆರೆಹಿಡಿದು ತರುತ್ತಾನೆ. ಮುಸ್ಲಿಂರನ್ನು ಸೋಲಿಸಿದ್ದಕ್ಕಾಗಿ ಈ ಹೆಣ್ಣನ್ನು ನೀವೇ ವರಿಸಬೇಕು ಎಂದಾಗ, ಅದಕ್ಕೆ ನಾಯಕನಹಟ್ಟಿ, ಗೋನೂರು ಕಟ್ಟೆಮನೆ ದೊರೆಗಳು ಒಪ್ಪುವುದಿಲ್ಲ. ಆದರೆ ಕಿರಿಯವನಾದ ನನ್ನಿವಾಳದ ದೊರೆ ಚಿನ್ನಪಾಲ ನಾಯಕನು ನನ್ನಿಯಮ್ಮ(ನನ್ನೆಮ್ಮ) ಕಣ್ಣಿಗೆ ಪ್ರಿಯವಾದ ಹೆಣ್ಣು ಬಾಯಿಗೆ ರುಚಿಯಾದ ಹಣ್ಣು ನನಗಿರಲಿ ಎನ್ನುತ್ತಾನೆ. ನಮ್ಮ ಮಾವನವರು ಒಪ್ಪುವುದಾದರೆ ನಾನು ಅವಳನ್ನು ವರಿಸುತ್ತೇನೆ. ಹೀಗೆ ನನ್ನಿವಾಳದ ದೊರೆಯು ಮ್ಯಾಸ ಮಂಡಳಿಗೆ ವಿರುದ್ಧವಾಗಿ ನಡೆದುಕೊಂಡಿದ್ದರಿಂದ ಗೋನೂರು ದೊರೆಯು 'ತರಿಮರ' ಕಡಿದುಕೊಳ್ಳುತ್ತಾರೆ. 'ತರಿಮರ' ಎಂದರೆ ಸಂಬಂಧವನ್ನು ಕಡಿದುಕೊಳ್ಳುವುದು. ನಂದಿವಾಳದ ದೊರೆಯಿಂದ ದೂರವಾಗಿ ಒಬ್ಬರ ಮುಖ ಒಬ್ಬರು ನೋಡದ ಹಾಗೆ ಗಡಿರೇಖೆಯೊಳಗೆ ಬರದ ಹಾಗೆ ನಿಷೇಧ ಹೇರಿಕೊಳ್ಳುತ್ತಾರೆ.

ನನ್ನಮ್ಮ(ನನ್ನಿಯಮ್ಮ)ನನ್ನು ವರಿಸಲು ದೊರೆ ಒಪ್ಪಿಗೆ ಸೂಚಿಸುತ್ತಾನೆ. ನನ್ನೆಮ್ಮ ಕೂಡ ದೊರೆಯನ್ನು ಕೂಡುವುದಕ್ಕೆ ಕೆಲವು ಷರತ್ತುಗಳನ್ನು ಹಾಕುತ್ತಾಳೆ. ತಾನು ಹಾಕಿರುವ ಷರತ್ತುಗಳಿಗೆ ಒಪ್ಪುವುದಾದರೆ ಮಾತ್ರ ತಾನು ಈ ದೊರೆಗೆ ಒಲಿಯುವುದಾಗಿ ತಿಳಿಸುತ್ತಾಳೆ. ಅದರಂತೆ ದೊರೆ ಷರತ್ತುಗಳು ಯಾವುವು ಎಂದಾಗ, ನನ್ನಮ್ಮ ಷರತ್ತುಗಳನ್ನು ವಿವರಿಸುತ್ತಾಳೆ.

೧. ನನ್ನ ಹೆಸರು ಉಳಿಯಲು ತನ್ನ ಊರಿಗೆ ನನ್ನಿವಾಳವೆಂದು ಹೆಸರನ್ನು ಇಡುವುದು.

೨. ಮುಸ್ಲಿಂ ಸಂಪ್ರದಾಯದಂತೆ ನಿನ್ನ ಅನುಚರರಿಗೆ 'ಮುಂಜಿಶಾಸ್ತ್ರ' ಪದ್ಧತಿಯನ್ನು ನಡೆಸಿಕೊಂಡು ಬರುವುದು.

೩. ನಮ್ಮ ತಂದೆಯವರು ದೊರೆ ದರ್ಬಾರಿನಲ್ಲಿರುವಾಗ ಸ್ವೀಕರಿಸುವಾಗ ದೀಟಿ ಸಲಾಮನ್ನು ನೀನು ಜನರಿಂದ ಸ್ವೀಕರಿಸುವುದು.

ಹೀಗೆ ಮೂರು ಷರತ್ತುಗಳನ್ನು ಹಾಕಿದಳು. ದೊರೆ ಅವಳ ವ್ಯಾಮೋಹಕ್ಕೆ ಒಳಗಾಗಿ ಕೇಳಿದ ಎಲ್ಲಾ ಷರತ್ತುಗಳಿಗೆ ಒಪ್ಪಿಕೊಂಡನು. ನಂದಿವಾಳಕ್ಕೆ 'ನನ್ನಿವಾಳ'ವೆಂದು ನಾಮಕರಣ ಮಾಡಿ, ಇನ್ನು ಮುಂದೆ ತನ್ನ ಸಹಚರರು ಮುಸ್ಲಿಂರಂತೆ ಮುಂಜಿಯನ್ನು ಮಾಡಿಸಿಕೊಳ್ಳುವಂತೆ ಜನರಿಗೆ ಆಜ್ಞೆ ಮಾಡಿ ಆದೇಶ ಹೊರಡಿಸುತ್ತಾನೆ. ಹೀಗೆ ಅಂದಿನಿಂದ ನಂದಿವಾಳಕ್ಕೆ ನನ್ನಿವಾಳ ಎಂಬ ಹೆಸರು ಬಂದಿದೆ. ದೊರೆಯು ಮುಸ್ಲಿಂ ಯುವತಿಯ ಸಂಬಂಧವನ್ನು ಹೊಂದಿ ಅವಳಿಗೆ ಕೊಟ್ಟ ಷರತ್ತಿನಂತೆ ಈ ಸಂಪ್ರದಾಯವನ್ನು ತನ್ನ ವಂಶಸ್ಥರಿಗೆ ಹೇರುವ ಮೂಲಕ ಅವರ ಅನುಚರರು ಮುಂದುವರಿಸಿಕೊಂಡು ಬಂದಿದ್ದು, ಇಂದಿಗೂ ಹಳೆಯ ತಲೆಮಾರಿನ ವಯಸ್ಸಾದವರು ಮುಂಜಿ ಮಾಡಿಸಿಕೊಂಡಿರುವುದಾಗಿ ತಿಳಿಸುತ್ತಾರೆ. ಈಗಿನ ಪೀಳಿಗೆಯ ಮಂದಿ ಈ ಸಂಪ್ರದಾಯವನ್ನು ತಿರಸ್ಕರಿಸಿದ್ದಾರೆ. ಮುಂಜಿ ಆಚರಣೆಯು ಮುಸ್ಲಿಂರಂತೆ ಇರದೆ ಅದನ್ನು ಅನುಕರಿಸುವಂತೆ ಅದರ ಪ್ರತೀಕವಾಗಿ ನಡೆಸಿಕೊಂಡು ಬಂದಿದ್ದಾರೆ. ಸುಮಾರು ೧೨-೧೪ ವರ್ಷದ ಬಾಲಕರನ್ನು ಊರ ಹೊರಗಡೆ ಕರೆದುಕೊಂಡು ಹೋಗಿ ಆ ಹುಡುಗನ ಮಾರ್ಮಾಂಗಕ್ಕೆ ವೀಳ್ಯದ ಎಲೆಯನ್ನು ಸುತ್ತಿ ಸುರಳಿಯಂತೆ ಎರಡು ಬಟ್ಟಲು ಅಡಿಕೆಯ ಹೋಳುಗಳಿಂದ ಮಾಮಾರ್ಾಂಗದ ಎಲೆಯ ಸುರುಳಿಯನ್ನು ಕತ್ತರಿಸುತ್ತಾರೆ. ಇದನ್ನು ಮುಂಜಿ ಎಂಬುದಾಗಿ ಹೇಳುತ್ತಾರೆ. ಹೀಗೆ ಮುಸ್ಲಿಂರ ಮುಂಜಿಯನ್ನು ಅನುಕರಣೆ ಮಾಡುವ ಮೂಲಕ ಈ ಸಂಪ್ರದಾಯವನ್ನು ಉಳಿಸಿಕೊಂಡು ಬಂದಿದ್ದಾರೆ.

ಹಬ್ಬ, ದೇವರು, ಜಾತ್ರೆ ಸಂದರ್ಭದಲ್ಲಿ ದೊರೆ ಮೆರವಣಿಗೆ ಮೂಲಕ ಬಂದು ಸಿಂಹಾಸನದ ಕಟ್ಟೆಯನ್ನು ಹತ್ತಿ ನಿಲ್ಲುತ್ತಾನೆ. ಸಿಂಹಾಸನವೇರಿದ ದೊರೆಗೆ ಕುಲ ಸಾವಿರದವರಿಂದ ತಲೆಬಾಗಿ ನಮಸ್ಕರಿಸುತ್ತಾರೆ. ತಲೆಬಾಗಿ ಬಲಗೈ ಮುಂದಕ್ಕೆ ಚಾಚಿ ನಮಸ್ಕರಿಸುತ್ತಾರೆ. ಇದನ್ನು ದೀಟಿ ಸಲಾಮು ಎಂಬುದಾಗಿ ಕರೆಯಲಾಗುತ್ತದೆ. ಹೀಗೆ ನನ್ನಿವಾಳದ ಮ್ಯಾಸಬೇಡರು ಮುಸ್ಲಿಂರಲ್ಲಿ ಮತಾಂತರ ನಡೆದ ಬಗ್ಗೆ ಈ ನನ್ನೆಮ್ಮನ ಐತಿಹ್ಯ ಬೆಳಕು ಚೆಲ್ಲುತ್ತದೆ. ಒಬ್ಬ ಹೆಣ್ಣಿಗೆ

ಮನಸೋತು ತಮ್ಮ ಅನುಚರರನ್ನು ಅನುಸರಿಸುವಂತೆ ಮಾಡುವುದು ಒಂದು ಬುಡಕಟ್ಟಿಗೆ ವಿರುದ್ಧವಾದುದು. ಇಲ್ಲಿ ನನ್ನಿಯಮ್ಮ ಎಂಬ ಹೆಸರು ಮುಸ್ಲಿಂ ಸಮುದಾಯದಲ್ಲಿ ಪ್ರಸ್ತುತ ಕಂಡುಬರುವುದಿಲ್ಲ. ಹಿಂದೆ ಏನಾದರೂ ಇದ್ದಿರಬಹುದು. ನನ್ನಿಯಮ್ಮ ಎಂದರೆ ಮುಸ್ಲಿಂರಲ್ಲಿ ಚಿಕ್ಕಮ್ಮ ಎಂದಾಗುತ್ತದೆ ಎಂದು ಮುಸ್ಲಿಂ ಸಮುದಾಯವರನ್ನು ಪ್ರಶ್ನೆ ಮಾಡಿದಾಗ ಹೇಳಿದ ಮಾತು.

**ಖುಧಾಪುರ - ಬೋರೇದೇವರಹಟ್ಟಿ**

ಕು(ಖು)ಧಾಪುರ ಚಳ್ಳಕೆರೆ ತಾಲೂಕಿಗೆ ಸೇರಿದ ಒಂದು ಹಟ್ಟಿ. ಇದು ನಾಯಕಹಟ್ಟಿಯಿಂದ ಚಳ್ಳಕೆರೆಗೆ ಹೋಗುವ ಮಾರ್ಗದ ಎಡಬದಿಯಲ್ಲಿದೆ. ನಾಯಕನಹಟ್ಟಿಯಿಂದ ೪ ಕಿ.ಮೀ. ದೂರದಲ್ಲಿದೆ. ಈ ಊರಿಗೆ ಬೋರೆದೇವರಹಟ್ಟಿಯೆಂದು ತೆಲುಗಿನಲ್ಲಿ ಕರೆಯುತ್ತಾರೆ. ಈ ಊರಿನ ಐತಿಹ್ಯ ಹೀಗಿದೆ. ಹಿಂದೆ ಕೊಡಗಲು ಬೊಮ್ಮನಾಯಕನೆಂಬ ದೊರೆ ಇದ್ದನು. ಈತನ ಸ್ಥಳ ಮೊಳಕಾಲ್ಮೂರು ತಾಲೂಕಿನ ಅಡವಿ ಸೂರಮ್ಮನಹಳ್ಳಿಯ 'ಊಟಿಕುಂಟೆ', 'ಅರಿವಿನ ದೊಡ್ಡಿ' ಪ್ರದೇಶದವನು. ಈತನ ನೆಲಮಾಳಿಗೆಯ ಅರಮನೆ ಊಟಿಕುಂಟೆಯಲ್ಲಿದೆ. ಈತ ಒಬ್ಬ ಪಶುಪಾಲಕ. ತನ್ನ ಧೈರ್ಯ, ಸಾಹಸದಿಂದ ಪಾಳೆಯಗಾರನಂತೆ ಮೆರೆದನು. ಒಮ್ಮೆ ಈ ಪ್ರದೇಶದಲ್ಲಿ ಬೇಡರ ೧೨ ಪೆಟ್ಟಿಗೆ ದೇವರುಗಳನ್ನು ಮತ್ತು ಏಳು ಜನ ಅಜ್ಜನವರನ್ನು ನರಕಾಸುರನು ಅಪಹರಿಸಿ ನರಕದ ಕೋಟೆಗೆ ತಳ್ಳಿದನು. ಈ ಸುದ್ದಿ ತಿಳಿದು ಬೇಡಕಂಪಳ ಭಯಭೀತರಾದರು. ದೊರೆ ಯರಮಂಚಿನಾಯಕ ದಳವಾಯಿ-ಗಗ್ಗರಿದಾಸ ಇಬ್ಬರು ಪರಾಕ್ರಮಿಗಳಾಗಿದ್ದರೂ, ನರಕದ ಕೋಟೆಯನ್ನು ಬೇಧಿಸುವಲ್ಲಿ ಹೆದರಿದ್ದರು. ಇವರು ದೇವರಿಗೆ ಮತ್ತು ಅಜ್ಜಂದರಿಗಾಗಿ ದುಃಖುಸುತ್ತಿದ್ದರು. ದೊರೆ ಯರಮಂಚಿನಾಯಕ ಒಂದು ದಿನ ಹೀಗೆ ಡಂಗುರು ಹಾಕಿಸುತ್ತಾನೆ. ಇಡಿಮ್ಯಾಸ ಮಂಡಳಿಯಲ್ಲಿ ಯಾರು ೧೨ ಪೆಟ್ಟಿಗೆ ದೇವರುಗಳನ್ನು ಏಳು ಜನ ಮುತ್ತಿಗಾರರನ್ನು(ಅಜ್ಜನವರನ್ನು) ಕೋಟೆಯಿಂದ ಬಿಡಿಸಿ ತರುವರೋ, ಅವರಿಗೆ ಈ ಬೇಡ ಕಂಪಳದಲ್ಲಿ ಮೊದಲು ಹುಟ್ಟಿದ ಗಂಡು ಹೋರಿಗಳು, ಹೋತಗಳು, ಬೆಣ್ಣೆ ಮುದ್ದೆ, ತುಪ್ಪದ ಕೊಳಗಳನ್ನು ಬಹುಮಾನವಾಗಿ ಕೊಡುತ್ತೇವೆಂದು ಆದೇಶ ಹೊರಡಿಸಿದನು. ಈ ಸುದ್ದಿಯನ್ನು ತಿಳಿದ ಕೊಡಗಲು ಬೊಮ್ಮ ಅವನ ಸಹೋದರಿ ನಾವು ತರುತ್ತೇವೆ ಎಂದು ವೀಳ್ಯ ಪಡೆದರು. ಕೊಡಗಲು ಬೊಮ್ಮ ಮತ್ತು ತಂಗಿ ದೇವಮ್ಮ ಇಬ್ಬರು ನರಕದ ಕೋಟೆಗೆ ಹೋದರು. ನರಕದ ಕೋಟೆಗೆ ನುಗ್ಗಿ ನರಕಾಸುರನನ್ನು ಸಂಹಾರ ಮಾಡಿ ೧೨ ಪೆಟ್ಟಿಗೆ ದೇವರು ಏಳು ಜನ ಮುತ್ತಿಗಾರರನ್ನು ಕೋಟೆಯಿಂದ ಬಿಡಿಸಿ ತಂದರು. ತಂದ ಬೊಮ್ಮನಾಯಕನಿಗೆ ಬೇಡ ಕಂಪಳದಿಂದ ಸನ್ಮಾನಿಸಿ ಬಹುಮಾನ ಕೊಡಲು ತೀರ್ಮಾನಿಸಿದರು. ಆರಂಭದಲ್ಲಿ ತೆರಿಗೆಯನ್ನು ಬೊಮ್ಮನಾಯಕ ಖುಷಿಯಿಂದ ಕೊಡಲು ಆರಂಭಿಸಿದರು. ಹೀಗೆ ಕೊಡಗಲು ಬೊಮ್ಮನ ದುರಾಸೆ ಅತಿಯಾಗಿ ಜನಸಾಮಾನ್ಯರು ಬೇಸತ್ತರಲ್ಲದೆ ಮನೆಗಳಲ್ಲಿ ಬೆಣ್ಣೆ, ತುಪ್ಪ ತಿನ್ನುವಂತಿಲ್ಲ. ಹೋರಿ, ಟಗರು, ಹೋತುಗಳನ್ನು ಮಾರಾಟ ಮಾಡುವಂತಿಲ್ಲ. ಪ್ರತಿಯೊಂದಕ್ಕೂ

ದೊರೆಯ ಅಪ್ಪಣೆ ಬೇಕಾಗಿತ್ತು. ಜನರು ಇವನಿಂದ ತತ್ತರಸಿ, ದೊರೆಗೆ ತಮ್ಮ ದುಃಖಗಳನ್ನು ವಿವರಿಸಿದರು. ಬೊಮ್ಮನಿಗೆ ಇನ್ನು ಮುಂದೆ ತೆರಿಗೆಯನ್ನು ಕೊಡುವುದಿಲ್ಲ. ಹಲವು ವರ್ಷಗಳಿಂದ ಕೊಟ್ಟು ಅವನತಿ ಹಾದಿಯಲ್ಲಿದ್ದೇವೆ. ಇದನ್ನರಿತು ದೊರೆ ಜನರ ಕಷ್ಟ ನೋಡಿ ತೆರಿಗೆ ಕೊಡುವಾಗ ಇಷ್ಟು ವರ್ಷಗಳು ಬೊಮ್ಮನಿಗೆ ತಿಳಿಸಬೇಕಾಗಿತ್ತು ಎಂದು ಮನಗಂಡ. ಒಂದು ದಿನ ರಾತ್ರಿ ಬೇಡ ಕಂಪಳದೊಂದಿಗೆ ದೊರೆ ಸೇರಿ ಬೊಮ್ಮನ ಪ್ರದೇಶ ಬಿಟ್ಟು, ಚಿಂತನೆ ಮಾಡುವುದಕ್ಕಾಗಿ ಬೋರುವುನ ಮೈದಾನದಲ್ಲಿ ಬೀಡುಬಿಟ್ಟಿತು. ರಾತ್ರಿ ಬೊಮ್ಮನ ಬಗ್ಗೆ ಚಿಂತಿಸುತ್ತ ಮಲಗಿದರು. ಹೀಗೆ ಯಜಮಾನರ ಗುಂಪು ಮಲಗಿರುವಾಗ ರಾತ್ರಿಯ ಹೊತ್ತಿನಲ್ಲಿ ತಲೆಗೇನೋ ಒತ್ತಿದಂತಾಯಿತು. ಎದ್ದು ನೋಡಿದರೆ ಏನು ಕಾಣಿಸುತ್ತಿದ್ದಿಲ್ಲವಂತೆ. ಮಲಗಿದರೆ ಮತ್ತೆ ತಲೆಗೆ ಒತ್ತಿದಂತಾಯಿತು. ಅಲ್ಲದೆ ಭೂಮಿಯಿಂದ ಬೋರ್ಗ್ರೆವ ಶಬ್ದ ಕೇಳಿಸುತ್ತಿದ್ದಿತಂತೆ.

ಹೀಗೆ ಬೋರ್ಗ್ರೆಯುವ ಶಬ್ದ ಭೂಮಿಯಿಂದ ಹೊರಬರುವಾಗ ಇವರು ಇದನ್ನು ದೇವರಿರಬೇಕು ಎಂದು ತಿಳಿದು ದೊರೆಗೆ ತಿಳಿಸಿದರು. ದೊರೆ ಎಲ್ಲರೂ ಸೇರಿ ನಿನ್ನ ಸತ್ಯದಂತೆ ವಾರದೊಳಗೆ ಕೊಡಗಲು ಬೊಮ್ಮ ಸತ್ತರೆ ನಿನಗೆ ನೂರಾ ಒಂದು ಕಾಯಿ, ಏಳು ಗುಂಡಿಗೆ ಹೊಡೆಸಿ ಒಂದೇ ಹೋತುವನ್ನು ಏಳು ಭಾಗ ಕತ್ತರಿಸಿ ವಾಸೆ ಕೊಯ್ಯುತ್ತೇವೆ ಎಂದು ಕೇಳಿಕೊಂಡರು. ದೊರೆಯ ಕೋರಿಕೆಯಂತೆ ಶಾಪದಿಂದ ಕೊಡಗಲು ಬೊಮ್ಮನು ಆ ದಿನ ರಾತ್ರಿಯೇ ಸತ್ತು ಹೋದನು. ಅದರಂತೆ ಬೋರನಿಗೆ ವಾಸೆ ಕೊಯ್ದು ಹರಕೆಗಳನ್ನು ತೀರಿಸಿದರು. ನೆಲದಿಂದ ಭೋರ್ಗರೆದು ಬರುವ ಕಲ್ಲು ಗುಂಡುವಿಗೆ, ಗುಂಡು ಬೋರ ಎಂದು ಕರೆದು, ಈ ಗುಂಡು ಬೋರನೆ ದೇವರೆಂದು ಕರೆದರು. ಚಿಂತನೆ ಮಾಡುವುದಕ್ಕಾಗಿ ಬೀಡುಬಿಟ್ಟ ಸ್ಥಳದಲ್ಲಿ ಬೋರೆದೇವರು ಪ್ರತ್ಯಕ್ಷನಾಗಿದ್ದಕ್ಕೆ ಬೋರೆದೇವರು ಎಂದು ಕರೆದರು. ಅದಕ್ಕೆ ಇಲ್ಲಿಯೇ ಹಟ್ಟಿ ಕಟ್ಟಿ ನೆಲೆಸಿದಕ್ಕಾಗಿ, ಚಿಂತಗುಟ್ಲ ಬೋರೆದೇವರು ಹೀಗೆ ರೂಢಿಯಾಗಿ ಬೋರೆದೇವರಹಟ್ಟಿಯಾಯಿತು. ನಂತರ ಹೈದರಾಲಿ ನಾಯಕನಹಟ್ಟಿ ಪಾಳೆಯಗಾರರ ಮೇಲೆ ದಾಳಿ ಮಾಡಲು ಬಂದಾಗ ಇವರಿಂದ ಸೋತನು. ಸೋತು ನಾಯಕನಹಟ್ಟಿಯಿಂದ ಬರಬೇಕಾದರೆ ಈ ಬೋರೆ ದೇವರ ಹತ್ತಿರ ರಾತ್ರಿ ತಂಗಿದನು. ಬೆಳಿಗ್ಗೆ ಎದ್ದು ದೇವರಿಗೆ ಐದು ಗಂಟೆಯ ವೇಳೆಯಲ್ಲಿ ಪ್ರಾರ್ಥನೆ ಮಾಡುತ್ತಾ ಜೋರಾಗಿ ಖುಧಾ ಎಂದು ಪ್ರಾರ್ಥಿಸಿದನು. ಈ ಹಟ್ಟಿಯವರು ಆ ವೇಳೆಗೆ ಎದ್ದು ಚಳಿಗೆ ಬೆಂಕಿ ಕಾಯಿಸುತ್ತಿದ್ದರು. ಖುಧಾ ಎಂಬ ಶಬ್ದ ಕಿವಿಗೆ ಬಿದ್ದ ಮೇಲೆ ಬೋರೆದೇವರಗುಡಿ ಕಡೆ ಓಡಿ ಬಂದರು. ಮತ್ತೆ ಜೋರಾಗಿ ಖುಧಾ, ಖುಧಾ ಎಂದು ದೇವರು ಕೂಗುತ್ತಿದ್ದಾರೆ ಎಂದು ತಿಳಿದರು. ದೇವರು 'ಖುಧಾ' ಎಂದು ಕರೆಯುತ್ತಿರುವುದನ್ನು ಕೇಳಿಸಿಕೊಂಡು 'ಖುಧಾಪುರ' ಎಂದು ಕರೆದರು.

ಹೈದರಾಲಿಯು ನಾಯಕನಹಟ್ಟಿ ವಶವಾಗದೆ ಇರುವುದಕ್ಕೆ ಬೋರೆದೇವರ ಹತ್ತಿರ ಈ ದೇವರನ್ನು 'ಖುಧಾ' ಎಂದು ನೆನೆದು ಪ್ರಾರ್ಥನೆ ಮಾಡಿ ಹೋದನೆಂದು ತಿಳಿದುಬರುತ್ತದೆ. ಜನರು ಬೋರೆದೇವರು 'ಖುಧಾ' ಎಂದಿರಬೇಕು ಎಂದು ತಿಳಿದರು. ಅದರ ಸತ್ಯತೆ ಖುಧಾ

ಎಂದಿರುವುದು ಹೈದರಾಲಿಯು ಅವರ ಸಂಪ್ರದಾಯದಂತೆ ಬೆಳಿಗ್ಗೆ ಎದ್ದು ಪ್ರಾರ್ಥನೆ ಮಾಡಿರಬಹುದು. ಇಲ್ಲ, ಈ ದೇವರಿಗೆ ಪೂಜೆ ಮಾಡಿರಬಹುದು. ಒಟ್ಟಿನಲ್ಲಿ ಅಂದಿನಿಂದ ಖುದಾಪುರ ಎಂದು ಹೆಸರಾಯಿತು. 'ಖುಧಾ' ಎಂದರೆ ಮುಸ್ಲಿಂರು ದೇವರನ್ನು ನೆನೆಯುವುದು. ಖುಧಾ - ದೇವರು, ಅಲ್ಲ, ಪರಮಾತ್ಮ ಹೀಗೆ ಅರ್ಥಗಳಿವೆ. ಹೈದರಾಲಿಯಿಂದ 'ಖುಧಾ' ಎಂಬ ಹೆಸರು ಈ ಹಟ್ಟಿಗೆ ಬಂದಿದೆ. ತೆಲುಗಿನಲ್ಲಿ ಬೋರನಹಟ್ಟಿ, ಬೋರೆದೇವರಹಟ್ಟಿಯೆಂದು ಕರೆಯುತ್ತಾರೆ.

**ಕಂಪಳ ದೇವರಹಟ್ಟಿ**

ಇದು ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿಗೆ ಸೇರಿದ ಒಂದು ಹಟ್ಟಿ. ಇದು ಚಿನ್ನಹಗರಿಯ ಬಲದಂಡೆಯ ಮೇಲಿದೆ. ಪ್ರಾಚೀನ ಬೇಡರ ನೆಲೆ. ಕರ್ನಾಟಕದ ಚಿಕ್ಕ ತಿರುಪತಿ ಎಂದೂ ಸಹ ಕರೆಯುತ್ತಾರೆ. ವಿಶೇಷವಾಗಿ ಬೇಡನಾಯಕರು ವಾಸಿಸುವ ಹಟ್ಟಿ. ಹಿಂದೆ ಶ್ರೀಶೈಲ ಪ್ರಾಂತ್ಯದಲ್ಲಿ ಪಶುಪಾಲನೆ ಕೈಗೊಂಡ ಬೇಡಕಂಪಳವು ಒಮ್ಮೆ, ಬರ, ಕ್ಷಾಮ ಹೀಗೆ ಹಲವಾರು ಕಾರಣಗಳಿಂದ ಶ್ರೀ ಶೈಲ ಪರ್ವತ ಪ್ರದೇಶವನ್ನು ತೊರೆದು, ಮೇವು, ನೀರು ಹುಡುಕುತ್ತ ಜಿನಗಿ ಹಳ್ಳದ ಮೂಲಕ, ಈ ನದಿಯ ಪೂರ್ವಕ್ಕೆ ಬಂದು ಒಂದು ಲಕ್ಷ ಪಶುಸಂಕುಲ, ಹನ್ನೆರೆಡು ಪೆಟ್ಟಿಗೆ ದೇವರುಗಳು, ಮೂರು ಸಾವಿರ ಬೇಡಕಂಪಳ ಈ ನದಿಯ ಪೂರ್ವಕ್ಕೆ ಬೀಡುಬಿಟ್ಟಿತು. ಹೀಗೆ ಬೀಡುಬಿಟ್ಟ ಕಂಪಳ ಇಲ್ಲಿಯೇ ಹಟ್ಟಿಯನ್ನು ಕಟ್ಟಿಕೊಂಡು ನೆಲೆನಿಂತಿತು. ಹೀಗೆ ಕಂಪಳವು ನೆಲೆನಿಂತ ಸ್ಥಳವೇ ಕಂಪಳದೇವರಹಟ್ಟಿಯಾಗಿದೆ. ಶ್ರೀಶೈಲ ಪ್ರದೇಶದಿಂದ ಮೊದಲು ಬಂದ ತಂಡ ಇದಾಗಿದ್ದು, ಬೇಡನಾಯಕರ ಮೂಲನೆಲೆ ಇದೆ ಎಂದು ಹೇಳುತ್ತಾರೆ. ಇಲ್ಲಿಂದ ಈ ಕಂಪಳ ಎಲ್ಲಾ ಕಡೆ ಚದುರಿದೆ. ಇವರು ಬಂದು ನೆಲೆ ನಿಂತ ದಿನ ಗುರುವಾರವಾಗಿದ್ದರಿಂದ ಪ್ರತಿವರ್ಷ ಜಾತ್ರೆ ಗುರುವಾರ ಆರಂಭವಾಗಿ ಒಂಬತ್ತು ದಿನಗಳವರೆಗೆ ವಿಜೃಂಭಣೆಯಿಂದ ಜರುಗುತ್ತದೆ. ಇದು ಮ್ಯಾಸನಾಯಕರ ಕುಲಸಾವಿರದವರ ಗುರುಸ್ಥಾನ. ಹಾಗಾಗಿ ಈ ಹಟ್ಟಿ ಇವರಿಗೆ ಪವಿತ್ರ ಸ್ಥಳವಾಗಿದೆ. ಈ ಹಟ್ಟಿಯಲ್ಲಿ ಕಂಪಳರಂಗ, ಜಗಲೂರು ಪಾಪನಾಯಕ, ಗಾದ್ರಿಪಾಲನಾಯಕ ದೇವರ ಗುಡಿಗಳಿವೆ.

**ಹಿರಿಯೂರು**

ಹಿರಿಯೂರು ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕುಗಳಲ್ಲಿ ಒಂದಾಗಿದೆ. ಚಿತ್ರದುರ್ಗದಿಂದ ೪೦ ಕಿ.ಮೀ. ದೂರದಲ್ಲಿದೆ. ಈ ನಗರವು ವೇದಾವತಿ ನದಿಯ ಬಲದಂಡೆಯ ಮೇಲಿದೆ. ಹಿರಿಯೂರು ಎಂಬ ಹೆಸರು ಬರಲು ಐತಿಹ್ಯ ಹೀಗಿದೆ. ಹಿಂದೆ ಹಿರಿಯೂರಿಗೆ ಅನೇಕ ಹೆಸರುಗಳಿಂದ ಕರೆಯುತ್ತಿದ್ದರು. ಕವಿ ಬಬ್ಬೂರು ರಂಗನು ತನ್ನ ಕಾವ್ಯದಲ್ಲಿ 'ಘನಪುರಿ' ಎಂದೇ ಉಲ್ಲೇಖಿಸಿದ್ದಾನೆ. ಸುತ್ತಮುತ್ತ ಹೊನ್ನು ದೊರೆಯುತ್ತಿದ್ದರಿಂದ ಹೊನ್ನು ಹಿರಿಯೂರು ಎಂದು ಹೆಸರಾಗಿತ್ತು. ಹಿರಿಯ ಕೆರೆ ಎಂದು ಕರೆದು ಮುಂದೆ ಶಾಶ್ವತವಾಗಿ ಹಿರಿಯೂರು

ಎಂದು ರೂಢಿಯಾಗಿ ಬಂದಿರಬಹುದು. ಕ್ರಮೇಣ ಜನಸಾಮಾನ್ಯರ ಬಾಯಲ್ಲಿ ಹೊನ್ನು ಹಿರಿಯೂರು ಎಂಬ ಹೆಸರು ಬದಲಾವಣೆಗೊಂಡು ಹೊನ್ನು ಪದ ಬಿಟ್ಟು ಕೇವಲ ಹಿರಿಯೂರು ಎಂದಷ್ಟೇ ಆಗಿ ಇಂದಿಗೂ ಸಹ ಹಿರಿಯೂರು ಎಂದು ಗೌರವವನ್ನು ಉಳಿಸಿಕೊಂಡಿದೆ. ಸುತ್ತಮುತ್ತಲಿನ ಹಳ್ಳಿಗಳಲ್ಲಿ ಅಂದು ಇದೇ ಹಿರಿದಾದುದ್ದರಿಂದ ಹಿರಿಯ ಊರು. ಆದುದರಿಂದ ಹಿರಿಯೂರು ಎಂಬ ಹೆಸರು ಬಂದಿರಬಹುದು.

**ಧರ್ಮಪುರ**

ಧರ್ಮಪುರ ಹಿರಿಯೂರು ತಾಲೂಕಿಗೆ ಸೇರಿದ ಒಂದು ಗ್ರಾಮ. ಇದು ಪುರಾಣ ಪ್ರಸಿದ್ಧವಾದ ಸ್ಥಳ. ಹಿಂದೆ ಈ ಊರಿಗೆ 'ಉಪವಾಸಪುರ' ಎಂದು ಕರೆಯುತ್ತಿದ್ದರು. ಇನ್ನೊಂದು ಹೆಸರು ಕೂಡ ಇದ್ದಿತ್ತೆಂದು ಪ್ರೊ. ವೀರಣ್ಣನವರು ಹೇಳುತ್ತಾರೆ. ಅದರ ಹೆಸರು ದೊಮ್ಮಲಾಪುರವೆಂದು. ಒಮ್ಮೆ ಪಾಂಡವರು ಅಜ್ಞಾತವಾಸ ಕಾಲದ ಸಂದರ್ಭದಲ್ಲಿ ಇಲ್ಲಿಯೇ ಕೆಲಕಾಲ ಇದ್ದರಂತೆ. ಆ ದಿನ ಸಂಜೆಯಾಗುತ್ತಿದ್ದಂತೆ ಮಳೆ ಜಿಟಿ - ಜಿಟಿಯಾಗಿ ಬರುತ್ತಿದ್ದು, ಅಂದು ರಾತ್ರಿ ಅಡುಗೆ ಮಾಡಿಕೊಳ್ಳಲು ಪಾಂಡವರಿಗೆ ಸೌದೆ ಬೇಕಾಗಿದ್ದಿತಂತೆ. ಅಂದು ಸೌದೆಯೇ ಸಿಗಲಿಲ್ಲವೆಂದು, ಕೊನೆಗೆ ಧರ್ಮರಾಯ ಯೋಚನೆ ಮಾಡಿ ಒಂದು ಹುಣಸೆ ಮರದಿಂದ ಚಕ್ಕೆ ಕೆತ್ತಿ ಒಲೆಯನ್ನು ಹಚ್ಚಿದರಂತೆ. ಆಗ ಅವರಿಗೆ ಆ ಮರದ ಚಕ್ಕೆಯ ಬುಡ ಯಾವುದೋ, ಕೊನೆ ಯಾವುದೋ ಎಂಬುದನ್ನು ತಿಳಿಯದೆ ಸೌದೆಯನ್ನು ಬಳಸದೆ ಆ ದಿನ ಅಡುಗೆ ಮಾಡಿಕೊಳ್ಳದೆ ಉಪವಾಸವಿದ್ದರಂತೆ. ಹಾಗಾಗಿ ಈ ಗ್ರಾಮಕ್ಕೆ ಉಪವಾಸಪುರವೆಂದು ಇಟ್ಟರಂತೆ. ಪಾಂಡವರು ಉಪವಾಸವಿದ್ದಿದ್ದರಿಂದ ಉಪವಾಸಪುರವೆಂದು ರೂಢಿಯಾಗಿ ಬಂದಿರಬಹುದು. ಭಾರತೀಯ ಸಂಪ್ರದಾಯದಂತೆ ಒಲೆಯಲ್ಲಿ ಕಟ್ಟಿಗೆಯನ್ನು ಬುಡ ಮೊದಲು ಇಡುತ್ತಾರೆ. ಹಾಗಾಗಿ ಇವರಿಗೆ ಬುಡ ಯಾವುದೋ ಕೊನೇ ಯಾವುದು? ಗೊಂದಲವಾಗಿರಬೇಕು. ನಂತರ ಧರ್ಮರಾಯನೇ ಈ ಗ್ರಾಮವನ್ನು ಸ್ಥಾಪಿಸಿರುವುದರಿಂದ ಈ ಗ್ರಾಮಕ್ಕೆ ಧರ್ಮಪುರವೆಂದು ಹೆಸರು ಬಂದಿತೆಂದು ಸ್ಥಳೀಯರ ಅಭಿಪ್ರಾಯ. ಅಂದಿನಿಂದ ಈ ಊರಿನಲ್ಲಿ ಪ್ರತಿದಿನ ಐದು ಜನರು ಇರುತ್ತಾರೆಂದು ಸ್ಥಳೀಯರು ಹೇಳುತ್ತಾರೆ. ಉಪವಾಸ ಕಡ್ಡಾಯವೇನು ಅಲ್ಲ, ಆಕಸ್ಮಿಕವಾಗಿ ಉಪವಾಸವಿರುವುದು ಕಂಡು ಬರುವುದು.

ಹೀಗೆ ಪಾಂಡವರು ಉಪವಾಸ ಇದ್ದ ಕಾರಣದಿಂದಾಗಿ ಇಂದು ಕೂಡ ಈ ಊರಿನಲ್ಲಿ ಪ್ರತಿದಿನ ಐದು ಜನರು ಯಾವುದಾದರೂ ಕಾರಣದಿಂದ ಉಪವಾಸ ಇರುತ್ತಾರಂತೆ. ಈ ನಂಬಿಕೆ ಅಂದಿನಿಂದ ಇಂದಿನವರೆಗೂ ಪ್ರತೀತಿಯಾಗಿ ಉಳಿದುಬಂದಿದೆ. ಈ ಉಪವಾಸ ಕಡ್ಡಾಯವೇನು ಅಲ್ಲ, ಆಕಸ್ಮಿಕವಾಗಿ ಮನೆಯಲ್ಲಿ ಯಾರಾದರೂ ಜಗಳ ಮಾಡಿ ಊಟ ಮಾಡದೇ ಇರುವುದು. ಬೇರೆ ಊರಿನಿಂದ ಬಂದ ಜನರಿಗೆ ಬಸ್ಸುಗಳು ತಪ್ಪಿ ಅನಿವಾರ್ಯ ಕಾರಣದಿಂದ ಊಟ ಸಿಗದೆ ಇರಬಹುದು. ಪಾಂಡವರು ಇಲ್ಲಿ ತಂಗಿ ಹೋಗಿದ್ದ ಕಾಲದಲ್ಲಿ ಅವರು ಪಂಚಲಿಂಗಗಳನ್ನು ಸ್ಥಾಪಿಸಿ ಹೋಗಿದ್ದರು ಎಂದು ಇಲ್ಲಿನ ಸ್ಥಳೀಯರು ಹೇಳುತ್ತಾರೆ.

ಈ ಪಂಚಲಿಂಗಗಳು ಆಕರ್ಷಕವಾಗಿದ್ದು ನೋಡುಗರ ಮನಸ್ಸನ್ನು ಸೆಳೆಯುತ್ತವೆ. ಬಹುಶಃ ಇಲ್ಲಿ ನೊಳಂಬರು ಆಳ್ವಿಕೆ ಮಾಡುತ್ತಿರುವ ಸಂದರ್ಭದಲ್ಲಿ ರಾಜರುಗಳು ಪ್ರತಿಷ್ಠಾಪಿಸಿರಬಹುದು. ಈ ಪಂಚಲಿಂಗಗಳನ್ನು ಇಂದಿಗೂ ಸಹ ಕಾಣಬಹುದು. ಧರ್ಮರಾಯ, ಭೀಮ, ಅರ್ಜುನ, ನಕುಲ, ಸಹದೇವ. ಹೀಗೆ ಪಾಂಡವರು ಕೆಲವು ದಿನಗಳ ಕಾಲ ಇದ್ದು ಅವರೇ ಸ್ಥಾಪನೆ ಮಾಡಿದ ಸ್ಥಳಕ್ಕೆ ಧರ್ಮಪುರ ಎಂದು ಕರೆಯುತ್ತಾರೆ.

**ಹರಿಯಬ್ಬೆ**

ಹರಿಯಬ್ಬೆ - ಹಿರಿಯೂರು ತಾಲೂಕಿಗೆ ಸೇರಿದ ಒಂದು ಗ್ರಾಮ. ಹಿರಿಯೂರಿನಿಂದ ಧರ್ಮಪುರಕ್ಕೆ ಹೋಗುವ ಮಾರ್ಗದಲ್ಲಿ ಈ ಗ್ರಾಮ ಕಂಡು ಬರುತ್ತದೆ. ಈ ಗ್ರಾಮದ ಬಗೆಗೆ ಸ್ಥಳ ಐತಿಹ್ಯ ಹೀಗಿದೆ. ಈ ಗ್ರಾಮಕ್ಕೆ ಹರಿಯಬ್ಬೆ ಎಂಬ ಹೆಸರು ಬರಲು ಕಾರಣವೇನೆಂದರೆ, ವೇಣುಕಲ್ಲು ಗುಡ್ಡದಲ್ಲಿ ಇದ್ದಂತಹ ನಾಯಕರ ಕುಲ ಗುರುಗಳಾದ ಅಬ್ಬೆಗೂ ಮತ್ತು ದುರ್ಗದ ಪಾಳೆಯಗಾರನಾಗಿದ್ದಂತಹ ಕಸ್ತೂರಿರಂಗಪ್ಪ ನಾಯಕರ ಧರ್ಮಪತ್ನಿಯಾದ ಹರಿಯಾಲದೇವಿಗೂ ಅತ್ಯಂತ ಆತ್ಮೀಯ ಸಂಬಂಧ ಇದ್ದಿತಂತೆ. ಹೀಗೆ ಸ್ನೇಹ ಸಂಬಂಧ ಇದ್ದುದರಿಂದ ಹರಿಯಾಲದೇವಿ ತಮ್ಮ ನಾಯಕರ ಬಳಿ ತಮ್ಮಿಬ್ಬರ ಸ್ನೇಹದ ನೆನಪಿಗಾಗಿ ಒಂದು ಗ್ರಾಮವನ್ನು ಸ್ಥಾಪಿಸಬೇಕೆಂದು, ನಾಯಕರ ಬಳಿ ಪ್ರಾರ್ಥಿಸಿಕೊಂಡಳು. ಆಗ ನಾಯಕರು ಪತ್ನಿಯ ಕೋರಿಕೆಯನ್ನು ಅರಿತು ಇಬ್ಬರ ಹೆಸರನ್ನು ಸೇರಿಸಿ ಒಂದೇ ಹೆಸರಿನಲ್ಲಿ ಹರಿಯೆಬ್ಬೆಯೆಂದು ಕಟ್ಟಿಸಿದರಂತೆ.

**ಕಣಜನಹಳ್ಳಿ**

ಹಿರಿಯೂರು ತಾಲ್ಲೂಕಿಗೆ ಸೇರಿದ ಒಂದು ಗ್ರಾಮ. ಈ ಗ್ರಾಮಕ್ಕೆ ಕಣಜನಹಳ್ಳಿ ಎಂಬ ಹೆಸರು ಬರಲು ಕಾರಣವೇನೆಂದರೆ, ಅಲ್ಲಿನ ಸ್ಥಳೀಯರು ಹೀಗೆ ಹೇಳುತ್ತಾರೆ; ಈ ಗ್ರಾಮವು ಹಿಂದೆ ಪಾಳೇಗಾರರ ಕಾಲದಲ್ಲಿ ಆಯಕಟ್ಟಿನ ಪ್ರದೇಶವಾಗಿತ್ತು. ಈ ಗ್ರಾಮ ನಿಡಗಲ್ಲು ಸಂಸ್ಥಾನಕ್ಕೆ ಸೇರಿದ್ದು ನಿಡಗಲ್ಲಿಗೂ ಕಡೆಹುಡೆ ಎನ್ನುವ ಸೇನಾ ಠಾಣ್ಯಕ್ಕೂ ಮಧ್ಯ ಈ ಗ್ರಾಮವಿದ್ದುದರಿಂದ ನಡುವಲ ಹುಡೆ ಎನ್ನುತ್ತಿದ್ದರು. ನಿಡಗಲ್ಲು ಪಾಳೆಯಗಾರರು ನಿಡಗಲ್ಲಿನಿಂದ ಸಂಡೂರ ಸಂಸ್ಥಾನಕ್ಕೆ ಸೇನೆ ಮುಂತಾದವು ಈ ಮಾರ್ಗದಲ್ಲಿ ಸಂಚರಿಸುತ್ತಿದ್ದಾಗ ಅಪತ್ಕಾಲದಲ್ಲಿ ದವಸ - ಧಾನ್ಯಗಳನ್ನು ಸಂಗ್ರಹಿಸಲು ಈ ಗ್ರಾಮವನ್ನು ಕೇಂದ್ರವನ್ನಾಗಿ ಹಾಗೂ ಭೌಗೋಳಿಕವಾಗಿ ಆಯ್ಕೆ ಮಾಡಿಕೊಂಡಿದ್ದರು. ಹೀಗೆ ವಸೂಲಾದ ಕಂದಾಯ ಪೊಗದಿ ಮುಂತಾದವುಗಳನ್ನು ಊರಿನ ಸುತ್ತಮುತ್ತಲಿನ ಹಲವಾರು ಕಣಜಗಳನ್ನು ತೆಗೆದು ಅವುಗಳಲ್ಲಿ ದವಸ - ಧಾನ್ಯ ಪೊಗದ ರಕ್ಷಿಸಿ ಇಡುತ್ತಿದ್ದರಿಂದ ಈ ಊರಿಗೆ ಕಣಜನಹಳ್ಳಿ ಎಂದು ನಾಮಕರಣಗೊಂಡಿದೆ. ಅಂದಿನ ಕಾಲದ ಕಣಜಗಳು ಇಂದಿಗೂ ಕಾಣಬಹುದು.

**ಬ್ಯಾಡರಹಳ್ಳಿ**

ಈ ಗ್ರಾಮವು ಹಿರಿಯೂರು ತಾಲೂಕಿಗೆ ಸೇರಿದೆ. ಹಿರಿಯೂರಿನಿಂದ ಧರ್ಮಪುರಕ್ಕೆ ಹೋಗುವ ಮಾರ್ಗದಲ್ಲಿ ಸುಮಾರು ಹತ್ತು ಕಿಲೋಮೀಟರ್ ದೂರದಲ್ಲಿದೆ. ಈ ಗ್ರಾಮಕ್ಕೆ

ಬ್ಯಾಡರಹಳ್ಳಿ ಎಂದೂ ಕರೆಯಲು ಕಾರಣ, ನಿಡಗಲ್ಲು ಪಾಳೆಯಗಾರರ ಕಾಲದಲ್ಲಿ ಸೈನ್ಯಕ್ಕೆ ಬೇಡರು ಹೆಚ್ಚಾಗಿ ಸೇವೆ ಸಲ್ಲಿಸುತ್ತಿದ್ದರಿಂದ ಅವರಿಗೆ ಉಂಬಳಿಯಾಗಿ ಒಂದು ಹಳ್ಳಿಯನ್ನು ಪಾಳೆಯಗಾರರು ಕಟ್ಟಿಸಿ ಅದಕ್ಕೆ ಬ್ಯಾಡರಹಳ್ಳಿ ಎಂದು ಹೆಸರಿಟ್ಟರಂತೆ. ಇನ್ನೊಂದು ಹೇಳಿಕೆ ಹೀಗಿದೆ. ಈ ಗ್ರಾಮಕ್ಕೆ ವಿಶೇಷವಾಗಿ ಮತ್ತು ಸುತ್ತಲಿನ ಪರಿಸರದ ರಕ್ಷಣೆಯ ಜವಾಬ್ದಾರಿಯನ್ನು ನಾಯಕ ಸಮುದಾಯದವರು ಹೊತ್ತಿದ್ದರಿಂದ ಹಾಗೆಯೇ ನಾಯಕ ಸಮುದಾಯದವರಿಗೆ ಮತ್ತೊಂದು ಹೆಸರಾದ ಶಬ್ದರೂಪವೇ ಬೇಡ ಎಂದಿರುವುದರಿಂದ ಬೇಡರಹಳ್ಳಿ ಎಂಬ ಹೆಸರಿದೆ. ಇತ್ತೀಚಿನ ದಿನಗಳಲ್ಲಿ ರೂಢಿಯಲ್ಲಿ ಬ್ಯಾಡರಹಳ್ಳಿಯಾಗಿದೆ ಎಂದು ಹೇಳಬಹುದು.

**ಕೂಡಲಹಳ್ಳಿ**

ಕೂಡಲಹಳ್ಳಿ ಹಿರಿಯೂರು ತಾಲ್ಲೂಕಿನಲ್ಲಿ ಕಂಡುಬರುವ ಒಂದು ಗ್ರಾಮ. ಈ ಗ್ರಾಮದ ಬಳಿ ವೇದಾವತಿ ಮತ್ತು ಸುವರ್ಣಮುಖಿ ನದಿಗಳ ಸಂಗಮದಿಂದ ಕೂಡಲಹಳ್ಳಿ ಎಂಬ ಹೆಸರು ಬಂದಿದೆ. ಈ ನದಿಗಳ ಸಂಗಮದ ದಡದಲ್ಲಿ ಸಂಗಮೇಶ್ವರ ದೇವಸ್ಥಾನವಿದೆ. ಈ ಸಂಗಮೇಶ್ವರನ ಬಗೆಗೆ ಐತಿಹ್ಯ ಹೀಗಿದೆ. ಈ ದೈವವು ಉದ್ಭವ ಲಿಂಗವಾಗಿ ಒಡಮೂಡಿದೆ. ಒಮ್ಮೆ ಈ ನದಿ ದಡದಲ್ಲಿ ಗೊಲ್ಲರು ವಾಸವಾಗಿದ್ದರಂತೆ. ಇವರು ಪ್ರತಿದಿನ ದನಕರುಗಳನ್ನು ಈ ನದಿ ತೀರದಲ್ಲಿ ಮೇಯಿಸುತ್ತಿದ್ದರು. ಹೀಗೆ ಹಲವು ದಿನಗಳು ಕಳೆದವು. ಒಂದು ದಿನ ಆ ದನಗಳಲ್ಲಿ ಒಂದು ಗೊಡ್ಡು ಹಸು(ಬಂಜೆ) ಒಂದು ಪೊದೆಯಲ್ಲಿರುವ ಕಲ್ಲಿಗೆ ಪ್ರತಿದಿನ ಹಾಲು ಎರೆದು ಬರುತ್ತಿದ್ದಿತಂತೆ. ಹೀಗೆ ಪ್ರತಿದಿನ ಹೋಗಿ ಬರುತ್ತಿದ್ದ ಈ ಹಸವನ್ನು ಗಮನಿಸಿದ ದನಗಾಯಿ ಪೊದೆಯ ಹತ್ತಿರ ಹೋಗಿ ನೋಡಿದಾಗ ಅಲ್ಲಿ ಲಿಂಗವು ಕಾಣಿಸಿತಂತೆ. ಸಂಜೆ ಹಟ್ಟಿಗೆ ತೆರಳಿ ಊರಗೌಡನಿಗೆ ತಿಳಿಸಿದಾಗ, ಗೌಡ ಹಾಗೂ ಊರಿನ ಜನರು ಬಂದು ಎರಡು ನದಿಗಳ ಸಂಗಮದಲ್ಲಿ ಒಡಮೂಡಿದ ಲಿಂಗಕ್ಕೆ ಕೂಡಲ ಸಂಗಮೇಶ್ವರ ಎಂಬ ಹೆಸರಿಟ್ಟು ಸಣ್ಣ ಗುಡಿಯನ್ನು ನಿರ್ಮಿಸಿದರು. ಈ ಗುಡಿ ಪ್ರಸ್ತುತ ಜೀರ್ಣೋದ್ಧಾರಗೊಂಡಿದೆ. ಹಾಗೆಯೇ ಮುಜಿರಾಯಿ ಇಲಾಖೆಗೆ ಸೇರಿದೆ. ಈ ಸ್ಥಳ ಪುಣ್ಯ ಸ್ಥಳವಾಗಿದೆ. ಈ ಸಂಗಮದಲ್ಲಿ ಬಾಗಿನ ಅರ್ಪಣೆ, ಶ್ರಾವಣಮಾಸದಲ್ಲಿ ವಿಶೇಷ ಪೂಜೆ ನಡೆಯುತ್ತದೆ. ಈ ಎರಡು ನದಿಗಳ ಪ್ರಭಾವದಿಂದ ಈ ಕೂಡಲಹಳ್ಳಿಯಲ್ಲಿ ಸುವರ್ಣ, ಸುವರ್ಣಮ್ಮ, ವೇದಾವತಿ, ಸಂಗಮೇಶ ಈ ಹೆಸರುಗಳನ್ನು ಪ್ರಸ್ತುತ ಕಾಣಬಹುದು. ಈ ಊರಿನಲ್ಲಿ ಪಾತೇಲಿಂಗ ದೇವರು ಸಹ ಇದೆ.

**ಜಾನುಕೊಂಡ**

ಜಾನುಕೊಂಡ ಚಿತ್ರದುರ್ಗ ತಾಲೂಕಿಗೆ ಸೇರಿದ ಗ್ರಾಮ. ಇದು ಚಿತ್ರದುರ್ಗ - ಹೊಳಲ್ಕೆರೆ ರಸ್ತೆಯಲ್ಲಿ ಕಂಡು ಬರುತ್ತದೆ. ಈ ಗ್ರಾಮವು ಐತಿಹಾಸಿಕ ಮಹತ್ವವನ್ನು ಹೊಂದಿರುವ ಗ್ರಾಮವಾಗಿದೆ. ಈ ಗ್ರಾಮದಲ್ಲಿ ಬೃಹತ್ ಶಿಲಾಸಮಾಧಿಗಳು ಕಂಡುಬಂದಿವೆ. ಈ ಗ್ರಾಮದ ಐತಿಹ್ಯ ಹೀಗಿದೆ. ಜಾನಪ್ಪ ಎಂಬುವನು ಚಿತ್ರದುರ್ಗದ ನಾಯಕರ ಕಾಲದಲ್ಲಿ ಸೈನಿಕನಾಗಿದ್ದನು.

ಈತ ಒಮ್ಮೆ ದಂಡಿನ ಜೊತೆ ಯುದ್ಧಕ್ಕೆ ಹೋದಾಗ ಹಲವಾರು ದಿನಗಳು ಕಳೆದರೂ ಮನೆಗೆ ಹಿಂದಿರುಗಿ ಬರಲಿಲ್ಲ. ಆಗ ಇವನ ಹೆಂಡತಿ ಬರದಿದ್ದರಿಂದ ಚಿಂತೆಗೊಳಗಾದಳು. ಹೀಗೆ ಮನೆ ಮಂದಿಯೆಲ್ಲ ದುಃಖದಲ್ಲಿ ತೊಡಗಿದರು. ಹೀಗೆ ದಿನಗಳು ಕಳೆದಂತೆ ನನ್ನ ಪತಿ ಯುದ್ಧದಲ್ಲಿ ಬಹುಶಃ ಮಡಿದಿರಬೇಕು ಎಂದು ತಿಳಿದಳು. ಇನ್ನೊಂದು ಕಡೆ ಮುಸ್ಲಿಂರ ಆಳ್ವಿಕೆಯಿದ್ದು, ಅವರು ಸಿಕ್ಕ ಸಿಕ್ಕ ಮಹಿಳೆಯರನ್ನು ಬಲತ್ಕರಿಸುತ್ತಿದ್ದರು. ಇದನ್ನು ನೋಡಿದ ಜಾನಪ್ಪನ ಹೆಂಡತಿ ಮುಸ್ಲಿಂರ ದೌರ್ಜನ್ಯಕ್ಕೆ ಹೆದರಿ ಒಂದು ದಿನ ಯೋಚನೆ ಮಾಡಿ ಅಗ್ನಿಪ್ರವೇಶಿಸುವುದೇ ಒಳ್ಳೆಯ ಮಾರ್ಗ ಎಂದು ನಿಶ್ಚಿಯಿಸಿ ತನ್ನ ಬಂಧುಗಳಿಗೆ ತಿಳಿಸಿದಳು. ಊರು ಬಾಗಿಲಲ್ಲಿ ಅಗ್ನಿಕೊಂಡ ಮಾಡಿಸಿ ತನ್ನ ಬಂಧುಗಳಿಗೆಲ್ಲಾ, ತನ್ನ ಗಂಡನ ಸಮಾಧಿಯನ್ನು ತನ್ನ ಸಮಾಧಿಯ ಬಳಿಯೇ ಮಾಡಬೇಕೆಂದು ತಿಳಿಸಿ ಅಗ್ನಿಪ್ರವೇಶ ಮಾಡಿದಳಂತೆ. ಆಕೆ ಪ್ರವೇಶದ ನಂತರ ಆಕೆಯ ಗಂಡ ಬರುತ್ತಾನೆ. ಈತನ ಹೆಂಡತಿಯ ಸಾವಿನ ಸುದ್ದಿಯನ್ನು ತಿಳಿದು ನಾನು ಬದುಕಿ ಇರುವುದು ಏನು ಪ್ರಯೋಜನವೆಂದು ತಿಳಿದು ತಾನು ಸಾಯುತ್ತಾನೆ. ನಂತರ ಆತನ ಸಮಾಧಿಯನ್ನು ಆಕೆಯ ಸಮಾಧಿಯ ಬಳಿಯೇ ಮಾಡುತ್ತಾರೆ. ಈ ಸಮಾಧಿಗಳ ಮೇಲೆ ಗಂಡು ಹೆಣ್ಣಿನ ಚಿತ್ರಗಳನ್ನು ಕೆತ್ತಿ ನಿಲ್ಲಿಸಿದ್ದಾರೆ. ಹೀಗೆ ಈ ಊರಿಗೆ ಅಗ್ನಿಪ್ರವೇಶ ಮಾಡಿದ್ದರಿಂದ ಜಾನುಕೊಂಡ ಎಂಬ ಹೆಸರು ಬಂದಿದೆ. ಜಾನಪ್ಪ ಆತನ ಹೆಂಡತಿ ಕೊಂಡ ಏರಿದಕ್ಕಾಗಿ ಜಾನಪ್ಪನ ಕೊಂಡ, ಜಾನುಕೊಂಡ ಎಂಬುದಾಗಿದೆ. ಅಂದು ಪಾಳೆಯಗಾರರ ಕಾಲದಲ್ಲಿ ಯುದ್ಧಗಳಿಗೆ ತೆರಳಬೇಕಾದರೆ ತಿಂಗಳುಗಟ್ಟಲೆ ಸೈನಿಕರು ಊರಿಗೆ ಹಿಂದಿರುಗುತ್ತಿರಲಿಲ್ಲ. ಸೈನಿಕರು ಸತ್ತ ನಂತರ ಮುಸ್ಲಿಂರು ಊರುಗಳನ್ನು ಕೊಳ್ಳೆ ಹೊಡೆದು ಮಹಿಳೆಯರನ್ನು ಅಪಹರಿಸುತ್ತಿದ್ದರಂತೆ, ಇದನ್ನು ತಿಳಿದ ಕೆಲವು ಮಹಿಳೆಯರು ಮಾನಕ್ಕೆ ಅಂಜಿ ಆತ್ಮ ಅರ್ಪಣೆ ಮಾಡಿಕೊಳ್ಳುತ್ತಿದ್ದರು. ಜಾನಪ್ಪನ ಹೆಂಡತಿ ಕೂಡ ಇದೆ ಮನಸ್ಥಿತಿಯವಳಾಗಿದ್ದರಿಂದ ಮಾನಕ್ಕೆ ಅಂಜಿ ಅಗ್ನಿಪ್ರವೇಶ ಮಾಡಿರಬೇಕು. ಅಂದು ಸೈನಿಕರಾದ ಎಷ್ಟು ಕುಟುಂಬಗಳು ಈ ರೀತಿ ಅಗ್ನಿಪ್ರವೇಶ ಮಾಡಿರುವ ಉದಾಹರಣೆಗಳು ಸಿಗುತ್ತವೆ.

**ಮುಷ್ಟಲಗುಮ್ಮಿ(ಮುಚ್ಚಲಗುಮ್ಮಿ)**

ಮುಷ್ಟಲಗುಮ್ಮಿ ಚಳ್ಳಕೆರೆ ತಾಲೂಕಿಗೆ ಸೇರಿದ ಗಡಿ ಗ್ರಾಮ. ಇದು ಚಿನ್ನಹಗರಿ ನದಿಯ ಬಲ ದಂಡೆಯ ಮೇಲಿದೆ. ಇದರ ಮೂಲ ಹೆಸರು ಮುಚ್ಚಲಗುಮ್ಮಿ ಎಂದು ಕರೆಯುತ್ತಿದ್ದರು. 'ಮುಚ್ಚಲು ಗುಮ್ಮಿ' ಎಂಬುದು ತೆಲುಗು ಪದ. ಕಳ್ಳರು ವಾಸಿಸುವ ಪ್ರದೇಶ, ಸ್ಥಳ, ತಗ್ಗು ಎಂಬ ಅರ್ಥಗಳಿವೆ. ಮುಚ್ಚಲು-ಕಳ್ಳರು, ಗುಮ್ಮಿ-ಕಳ್ಳರ ಅಡಗು ತಾಣಕ್ಕೆ ಗುಮ್ಮಿ ಎಂದು ಕರೆಯುವರು. ಹಿಂದೆ ಕಳ್ಳರು ನೆಲೆಸಿದರಂತೆ. ಇಲ್ಲಿ ಕಳ್ಳರು ನೆಲೆಸಲು ಸುತ್ತಲೂ ಅಡವಿ ಇದ್ದಿತೆಂದು, ಅಡವಿಯಲ್ಲಿ ಪಶುಸಂಕಲದ ಹಟ್ಟಿಗಳು ಅಧಿಕವಾಗಿದ್ದವಂತೆ. ಹಾಗಾಗಿ ಕಳ್ಳರು ಇಲ್ಲಿ ನೆಲೆಸಲು ಪ್ರಮುಖ ಕಾರಣವಾಗಿರಬೇಕು. ಇವರು ಇಲ್ಲಿಯೇ ಸುತ್ತಮುತ್ತಲಿನ ಹಟ್ಟಿಗಳಿಗೆ

ತೆರಳಿ ದನಕರು, ಕುರಿಮೇಕೆ ಹೀಗೆ ಕಳ್ಳತನದಿಂದ ಹೊಡೆದುಕೊಂಡು ಬರುತ್ತಿದ್ದರಂತೆ. ಇಲ್ಲಿನ ಸುತ್ತಮುತ್ತಲಿನ ಪಶುಪಾಲಕರು ಈ ಊರಿನ ಕಡೆ ಹೋಗಲು ಹೆದರುತ್ತಿದ್ದರಂತೆ. ಈ ಪ್ರದೇಶದಲ್ಲಿ ಕೊಡಗಲುಬೊಮ್ಮನಾಯಕ ಆಳುತ್ತಿದ್ದನಂತೆ. ಇವನು ಕೂಡ ಜನಗಳಿಂದ ತೆರಿಗೆ ವಸೂಲಿ ಮಾಡಿ ಈ ಮುಚ್ಚಲ ಗುಮ್ಮಿಯಲ್ಲಿ ಸಂಗ್ರಹಿಸುತ್ತಿದ್ದನಂತೆ. ಬೊಮ್ಮಯ್ಯನಿಗೆ ಸೇರಿದ ತುಪ್ಪದಕೊಳಗಳನ್ನು ಕಳ್ಳರು ರಾತ್ರಿ ಬಂದು ಕಳ್ಳತನ ಮಾಡಿದರಂತೆ. ಈ ಸುದ್ದಿ ಬೊಮ್ಮನಿಗೆ ತಿಳಿದು ಇಲ್ಲಿ ಕೋಟೆಯನ್ನು ಕಟ್ಟಿಸಿ ಅದರ ಮೇಲೆ ದಿನಾಲು ಬೆಂಕಿ ಹಾಕಿಸುತ್ತಿದ್ದನಂತೆ. ಅಂದಿನಿಂದ ಕಳ್ಳರು ಮಲ್ಲೂರಹಳ್ಳಿ ಕಡೆ ಸಾಗಿದರಂತೆ. ಹೀಗೆ ಒಂದು ಕಾಲಕ್ಕೆ ಮುಚ್ಚಲಗುಮ್ಮಿಯಾಗಿದ್ದ ಪ್ರಸ್ತುತ ಅಕ್ಷರಗಳ ಲೋಪದಿಂದಾಗಿ ಮುಷ್ಟಲಗುಮ್ಮಿಯಾಗಿದೆಯೆಂದೇ ಹೇಳಬಹುದು. ಪ್ರಸ್ತುತ ಈ ಗ್ರಾಮದಲ್ಲಿ ಕಳ್ಳರ ನೆಲೆಗಳು ಇವೆಯೆಂದು ತೋರಿಸುತ್ತಾರೆ. ಆದರೆ ಅವು ಈ ಸಾಮಾನ್ಯ ಬಯಲು ಪ್ರದೇಶಗಳಾಗಿವೆ. ಈ ಗ್ರಾಮದಲ್ಲಿ ಕೋಟೆ ಮಾತ್ರ ಇದೆ. ಇದು ಕೊಡಗಲು ಬೊಮ್ಮನ ಕೋಟೆ ಎಂದೂ ಕರೆಯುತ್ತಾರೆ. ಈ ಪ್ರದೇಶದಲ್ಲಿ ಊರಿಗೊಂದು ಈ ತರಹ ಕೋಟೆಗಳನ್ನು ಕಾಣಬಹುದು. ಬಹುಶಃ ಕೊಡಗಲು ಬೊಮ್ಮನ ಕಾಲದವೇ, ಇಲ್ಲ ನಾಯಕನಹಟ್ಟಿ ಪಾಳೆಯಗಾರರ ಕಾಲದವೇ ಎಂಬ ಗೊಂದಲವಿದೆ. ಈ ಊರಿನಲ್ಲಿ ಮಾತ್ರ ಬೊಮ್ಮಯ್ಯನ ಕುರುಹುಗಳಿವೆ. ಈ ಗ್ರಾಮದಲ್ಲಿ ಬೊಮ್ಮಯ್ಯನ ಪ್ರಭಾವದಿಂದಾಗಿ ಬೊಮ್ಮಣ್ಣ, ಬೊಮ್ಮಯ್ಯ, ಬೊಮ್ಮಕ್ಕ, ಬೊಮ್ಮನಾಯಕ ಈ ರೀತಿಯ ಹೆಸರುಗಳು ಹೆಚ್ಚಾಗಿ ಕಂಡುಬರುತ್ತವೆ.

ಈ ಮುಷ್ಟಲಗುಮ್ಮಿ ಸುತ್ತಮುತ್ತಲಿನ ಹಳ್ಳಿಗಳಿಗೆ ಹಿಂದೆ ವಿದ್ಯಾಕಾಶಿ ಇದ್ದ ಹಾಗೆ. ಹಿಂದೆ ಶಿಕ್ಷಣ ಪಡೆಯಬೇಕು ಎಂದರೆ ಈ ಪ್ರದೇಶದವರು ಚಳ್ಳಕೆರೆ, ಜಗಲೂರು, ಮೊಳಕಾಲ್ಮೂರಿಗೆ ಹೋಗಬೇಕಾಗಿತ್ತು. ಅಂದಿನ ಕಾಲದಲ್ಲಿ ವೀರಭದ್ರೇಶ್ವರ ಪ್ರೌಢಶಾಲೆಯನ್ನು ಈ ಒಂದು ಕುಗ್ರಾಮದಲ್ಲಿ ಸ್ಥಾಪಿಸಿ, ಇಲ್ಲಿಯ ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡಿದ ಸಂಸ್ಥೆ ಎಂಬ ಹೆಮ್ಮೆ. ಒಂದು ಕಾಲದಲ್ಲಿ ಕಳ್ಳರು ನೆಲೆಸಿದಂತಹ ಪ್ರದೇಶವು ನಂತರ ಕಾಲಘಟ್ಟದಲ್ಲಿ 'ವಿದ್ಯಾಕಾಶಿ' ಎಂದು ಹೆಸರು ಪಡೆಯಿತು. ಇಲ್ಲಿನ ಸುತ್ತಮುತ್ತಲಿನ ಹಳ್ಳಿ, ಹಟ್ಟಿಗಳಲ್ಲಿ ನಾಯಕ ಸಮುದಾಯವೇ ಅತಿ ಹೆಚ್ಚಾಗಿ ಕಂಡು ಬರುತ್ತಿದ್ದು ಇವರಿಗೆ ವಿದ್ಯಾದಾನ ನೀಡಿದ ಗ್ರಾಮ ಕಳ್ಳರ ಊರು ಅಲ್ಲ ಎಂದೂ ಸ್ಥಳೀಯರ ಅಭಿಪ್ರಾಯ. ಒಟ್ಟಿನಲ್ಲಿ ಈ ಗ್ರಾಮದಲ್ಲಿ ಪ್ರಸ್ತುತ ಯಾವುದೇ ಕಳ್ಳತನ, ಕಳ್ಳರೂ ಯಾವುದು ಕಂಡು ಬರುವುದಿಲ್ಲ.

**ಮುತ್ತಿಗಾರಹಳ್ಳಿ**

ಮುತ್ತಿಗಾರಹಳ್ಳಿ ಮೊಳಕಾಲ್ಮೂರು ತಾಲೂಕಿಗೆ ಸೇರಿದ ಒಂದು ಗ್ರಾಮ. ಇದು ಬಿ.ಜಿ. ಕೆರೆಯಿಂದ ಮೂರು ಕಿ.ಮೀ. ದೂರದಲ್ಲಿದೆ. ಹಿಂದೆ ಶ್ರೀಶೈಲ ಪ್ರದೇಶದಿಂದ ಬೇಡಕಂಪಳವು ಪಶುಪಾಲನೆಗೆ ಮೇವು, ನೀರು ಅರಸುತ್ತ ಮುತ್ತಿಗಾರಹಳ್ಳಿ ಅಡವಿಗೆ ಬಂದು ನೆಲೆಸಿದರಂತೆ.

ಅಂದು ಇಲ್ಲಿ ದಟ್ಟವಾದ ಹುಲ್ಲುಗಾವಲು ಪ್ರದೇಶ ಇದ್ದಿತಂತೆ. ಶ್ರೀಶೈಲದಿಂದ ಏಳು ಜನ ಮುತ್ತಿಗಾರರು ಆರಂಭದಲ್ಲಿ ಇಲ್ಲಿಯೇ ಶ್ರೀಶೈಲ ಮಲ್ಲಯ್ಯನ ಎತ್ತುಗಳಿಗೆ ಹಟ್ಟಿ ಕಟ್ಟಿಕೊಂಡು ಅದರ ಸಮೀಪದಲ್ಲಿಯೇ ತಮ್ಮ ಕುಟುಂಬಗಳಿಗೆ ವಾಸಿಸಲು ಗುಡಿಸಲುಗಳನ್ನು ಕಟ್ಟಿ ನೆಲೆಸಿದ್ದರಿಂದ ಈ ಊರಿಗೆ ಮುತ್ತಿಗಾರಹಳ್ಳಿಯೆಂದು ಹೆಸರಾಯಿತು. ಈ ಏಳು ಜನ ಮುತ್ತಿಗಾರರು ನಾಯಕ ಸಮುದಾಯಕ್ಕೆ ಸೇರಿದ್ದು, ಅಂದು ಈ ಸಮುದಾಯದ ಕುಟುಂಬ ಮಾತ್ರ ವಾಸವಿದ್ದಿತೆಂದು, ನಂತರ ಬೇರೆ ಬೇರೆ ಸಮುದಾಯದವರು ಇಲ್ಲಿಗೆ ಬಂದು ನೆಲೆಸಿ ವಾಸ ಮಾಡಿದರು. ಇವರು ಕೋಳಿಗಳನ್ನು ಸಾಕಿದರು. ನಾಯಕ ಸಮುದಾಯಕ್ಕೆ ಕೋಳಿಗಳು ಇರುವ ಊರಿನಲ್ಲಿರುವುದು ವಾಸ ಮಾಡುವುದು ಸರಿಯಲ್ಲವೆಂದು, ಇಲ್ಲಿಂದ ಮುತ್ತಿಗಾರರ ವಂಶಸ್ಥರು ಈ ಊರನ್ನು ತೊರೆದು, ಅಲ್ಲಿಂದ ಒಂದು ಕಿಮೀ. ದೂರದಲ್ಲಿ ಪ್ರತ್ಯೇಕವಾಗಿ ಹಟ್ಟಿಯನ್ನು ಕಟ್ಟಿ ಅದಕ್ಕೆ ಮ್ಯಾಸರಹಟ್ಟಿಯೆಂದು ನಾಮಕರಣ ಮಾಡಿಕೊಂಡರು. ಅಲ್ಲಿ ಇಂದು ನಾಯಕ ಸಮುದಾಯದವರು ಮಾತ್ರ ವಾಸಿಸುತ್ತಾರೆ. ಪ್ರಸ್ತುತ ಶ್ರೀಶೈಲ ಮಲ್ಲಯ್ಯನ ದೇವರೆತ್ತುಗಳನ್ನು ಕಾಯುವ ಕಿಲಾರಿಗಳು ಈ ಹಟ್ಟಿಯವರೆ ಮುಂದುವರಿಸಿಕೊಂಡು ಬಂದಿದ್ದಾರೆ. ಈ ಶ್ರೀಶೈಲ ಮಲ್ಲಯ್ಯನ ಎತ್ತುಗಳು ಇಲ್ಲಿಯ ಅಡವಿಯಲ್ಲಿಯೇ ನೆಲೆಸಿವೆ.

**ಚಿನ್ಮೂಲಾದ್ರಿ**

ತ್ರೇತಾಯುಗದಲ್ಲಿ ಒಮ್ಮೆ ಲಂಕಾಧಿಪತಿಯಾದ ರಾವಣನು ಕೈಲಾಸ ಪರ್ವತವನ್ನೆತ್ತಲು ಹೋದನು. ನಂದಿಕೇಶ್ವರನನ್ನು ವಂದಿಸದೇ ಅಲಕ್ಷಿಸಿ ಮುನ್ನುಗ್ಗಿದನು. ನಂದಿ ಚಿಮ್ಮಿದ ರಭಸಕ್ಕೆ ಅಲ್ಲಿಂದ ಹಾರಿ ಬಂದು ದುರ್ಗದ ಪರ್ವದಲ್ಲಿ ಬಿದ್ದು ಬಿಟ್ಟನಂತೆ. ನಂತರ ಜ್ಞಾನೋದಯವಾಗಿ ಇಲ್ಲಿಂದಲೇ ನಂದಿಕೇಶ್ವರನನ್ನು ಸ್ತುತಿಸಿ, ಇಲ್ಲಿಂದ ಹೊರಟನಂತೆ. ಹೀಗೆ ರಾವಣಾಸುರನ ಚಿತ್ತ ಬದಲಾವಣೆಗೆ ಕಾರಣವಾಗಿ ಬಂದಿತು. ಜ್ಞಾನವಿತ್ತ ಸ್ಥಳವಾದುದ್ದರಿಂದ ಈ ಬೆಟ್ಟಕ್ಕೆ 'ಚಿನ್ಮೂಲಾದ್ರಿ' ಎಂದು ಹೆಸರು.

**೪.೨. ವ್ಯಕ್ತಿ ಪ್ರಧಾನ ಐತಿಹ್ಯಗಳು**

ಈ ಐತಿಹ್ಯಗಳಲ್ಲಿ ಅಸಾಮಾನ್ಯವಾದ ಅಥವಾ ವಿಶಿಷ್ಟವಾದ ವ್ಯಕ್ತಿಯೊಬ್ಬನ ಸಾಧನೆಯ ನಿರೂಪಣೆಯಿರುತ್ತದೆ. ಐತಿಹ್ಯದ ಉಳಿದೆಲ್ಲಾ ವಿವರಗಳು ಆ ವ್ಯಕ್ತಿಯ ಸಾಧನೆಗೆ ಪೋಷಕವಾಗಿಯೇ ಬರುತ್ತವೆ. ವ್ಯಕ್ತಿ ಒಂದು ನಿರ್ದಿಷ್ಟ ಸ್ಥಳಕ್ಕೆ ಹುಟ್ಟಿಕೊಂಡಿದ್ದರು, ಅಲ್ಲಿ ಸ್ಥಳದ ಮಹತ್ವವನ್ನು ಮೀರಿ ವ್ಯಕ್ತಿತ್ವ ಕೆಲಸ ಮಾಡುತ್ತಿರುತ್ತದೆ. ಅಲ್ಲದೆ ವ್ಯಕ್ತಿಯಿಂದಾಗಿಯೇ ಆ ಸ್ಥಳಕ್ಕೆ ಆ ಹೆಸರು ಬಂದಿರಬಹುದು. ವ್ಯಕ್ತಿಪ್ರಧಾನ ಐತಿಹ್ಯಗಳಲ್ಲಿ ಅಲ್ಲಿನ ಘಟನೆಗೆ ಸಂಬಂಧಿಸಿ ಎರಡು ಅಂಶಗಳು ಮುಖ್ಯವಾಗುತ್ತವೆ. ವ್ಯಕ್ತಿಯ ಪಾತ್ರವು ಇಲ್ಲಿ ಪ್ರಧಾನವಾಗಿರುತ್ತದೆ. ವ್ಯಕ್ತಿಯ ಸುತ್ತ ಐತಿಹ್ಯದ ಘಟನೆ ಸನ್ನಿವೇಶಗಳು ಹಬ್ಬಿರುತ್ತವೆ. ಎಲ್ಲಾ ವ್ಯಕ್ತಿಗಳ ಬಗೆಗೂ ಐತಿಹ್ಯ ಹುಟ್ಟಿಕೊಳ್ಳುವುದಿಲ್ಲ. ಐತಿಹ್ಯ ಹುಟ್ಟಬೇಕಾದರೆ ಆ ವ್ಯಕ್ತಿ ಅಸಾಮಾನ್ಯ, ವಿಶಿಷ್ಟನಾಗಿರಬೇಕು. ಜನಸಾಮಾನ್ಯರೆಲ್ಲರೂ ಐತಿಹ್ಯಗಳ ವ್ಯಕ್ತಿಗಳಾಗಿರುವುದಿಲ್ಲ. ಸಾಮಾನ್ಯರಿಗಿಂತ ಪ್ರಸಿದ್ಧ, ಅಸಾಮಾನ್ಯ ವ್ಯಕ್ತಿಯಾಗಿರಬೇಕು.

ಚಿತ್ರದುರ್ಗ ಪರಿಸರದ ಇಂತಹ ಐತಿಹ್ಯಗಳಲ್ಲಿ ಪೌರಾಣಿಕ ವ್ಯಕ್ತಿಗಳು, ಐತಿಹಾಸಿಕ ವ್ಯಕ್ತಿಗಳು ಕಂಡುಬರುತ್ತಾರೆ.

**ಗೌರಸಮುದ್ರ ಮಾರಮ್ಮ - ಉಪ್ಪಾರರ ಕೆಂಚಮನಿಗೆ ಸಂಬಂಧಿಸಿದ ಐತಿಹ್ಯ**

ಮಲ್ಲಸಂದ್ರ ಚಳ್ಳಕೆರೆ ತಾಲೂಕಿನಲ್ಲಿ ಕಂಡುಬರುವ ಒಂದು ಗ್ರಾಮ. ಹಿಂದೆ ಮಲ್ಲಸಂದ್ರ ದಟ್ಟವಾದ ಅಡವಿಯಿಂದ ಆವೃತ್ತವಾಗಿತ್ತು. ಇಲ್ಲಿ ಕ್ರೂರಮೃಗಗಳು ಸಹ ಇದ್ದವು. ಇಲ್ಲಿ ಹಿಂದೆ ಮಾರಮ್ಮ ಯರಮಂಚನಾಯಕ ಮತ್ತು ಆತನ ಪರಿವಾರದವರು ದನಗಳನ್ನು ಕಾಯುತ್ತ, ಗೆಡ್ಡೆ-ಗೆಣಸುಗಳನ್ನು ತಿನ್ನುತ್ತಾ ಕಾಲ ಕಳೆಯುತ್ತಿದ್ದರು. ಮಲ್ಲಸಂದ್ರದ ಹತ್ತಿರ ಉಪ್ಪಿನ ಮಾಳೆ ಇಟ್ಟುಕೊಂಡು ಉಪ್ಪಾರರು ಇರುತ್ತಿದ್ದರು. ಇಲ್ಲಿ ಉಪ್ಪನ್ನು ತಯಾರಿಸುತ್ತಿದ್ದರು. ಅವರಲ್ಲಿ ಗಿರಿತಿಮ್ಮಪ್ಪ ಎಂಬ ವ್ಯಕ್ತಿ ಇದೇ ವೃತ್ತಿಯನ್ನು ಮಾಡಿಕೊಂಡು ಈ ಮೂಲಕವೇ ಜೀವನ ಸಾಗಿಸುತ್ತಿದ್ದನು. ಈ ಉಪ್ಪಿನ ಮಾಳೆಗಳು ಮಾರಮ್ಮನ ವಾಸವಾಗಿರಲು ಯೋಗ್ಯವಾದ ಸ್ಥಳವೆಂದು ಯೋಚಿಸಿದಳು. ಮಾರಮ್ಮನ ಪ್ರಭಾವದಿಂದ ಉಪ್ಪಿನ ಗದ್ದೆಗಳಲ್ಲಿಯ ಒಂದು ಗದ್ದೆಯಲ್ಲಿ ಗೆದ್ದಲು ಕಾಣಿಸಿಕೊಂಡು ಅದರಲ್ಲಿ ಒಂದು ಸಣ್ಣ ರಂಧ್ರ ಕಾಣಿಸಿತು. ಉಪ್ಪಿನ ಗದ್ದೆಯಲ್ಲಿ ಎಲ್ಲಿಂದ ಗೆದ್ದಲು ಬಂದಿರಬಹುದು. ಉಪ್ಪಾರರು ಆ ದಿನ ರಂಧ್ರಕ್ಕೆ ಚೆನ್ನಾಗಿ ಗಾರೆ ಹಾಕಿ ಉಪ್ಪಿನ ರಸ ಹೊಯ್ದು ಮನೆಗಳಿಗೆ ಹೊರಟು ಹೋದರು. ಮರುದಿವಸ ಬಂದು ನೋಡಿದರೆ, ಹಿಂದಿನ ದಿವಸಕ್ಕಿಂತಲೂ ದೊಡ್ಡ ರಂಧ್ರ ಬಿದ್ದಿತ್ತು. ಅದನ್ನು ನೋಡಿಕೊಡು ಹೋಗಿ ಗಿರಿತಿಮ್ಮಪ್ಪನಿಗೆ ವಿಷಯ ತಿಳಿಸಿದರು. ಗಿರಿತಿಮ್ಮಪ್ಪ ಅವರಿಗೆ ಸರಿಯಾಗಿ ಗಾರೆ ಹಾಕಿಲ್ಲ, ಈ ದಿನ ಹೋಗಿ ಗೆದ್ದಲು ಎಲ್ಲಿಯವರೆಗೆ ಇರುತ್ತದೋ ಅಲ್ಲಿಯವರೆಗೆ ಅಗೆದು ಚೆನ್ನಾಗಿ ಗಾರೆ ಹಾಕಿ ಉಪ್ಪಿನ ರಸವನ್ನು ಹಾಕಿರಿ ಎಂದು ತಮ್ಮಂದಿರಿಗೆ ಹೇಳಿದನು. ಅದರಂತೆ ಮಾಡಿದರು. ಮರುದಿನ ಬಂದು ನೋಡಿದರೆ ಆ ಜಾಗದಲ್ಲಿ ದೊಡ್ಡ ಹುತ್ತವೇ ಬೆಳೆದಿರುತ್ತದೆ. ಆ ಹುತ್ತವನ್ನು ನೋಡಿ ಆಶ್ಚರ್ಯಪಟ್ಟು ಅವರು ಅಣ್ಣನ ಹತ್ತಿರ ಹೋಗಿ ತಿಳಿಸುತ್ತಾರೆ. ಗಿರಿತಿಮ್ಮಪ್ಪ ತಾನೇ ಹೋಗಿ ಅಗೆದು ಗೆದ್ದಲು ಮಣ್ಣನ್ನು ತೆಗೆದು ಅಲ್ಲಿಂದ ಗಾರೆಕಲ್ಲು ಭರ್ತಿ ಮಾಡುತ್ತ ನೆಲಸಮಕ್ಕೆ ಬಂದಾಗ ಗಾರೆ ಹಾಕಿ ಭರ್ತಿ ಮಾಡಿ ಒಣಗಿದ ನಂತರ ಉಪ್ಪು ನೀರನ್ನು ಹಾಕಿಸಿ ಮನೆಗೆ ಬರುತ್ತಾನೆ. ಮರುದಿನ ಬಂದು ನೋಡಲಾಗಿ ಮೊದಲಿಗಿಂತಲೂ ಹುತ್ತ ದೊಡ್ಡದಾಗಿ ಬೆಳೆದಿರುತ್ತದೆ. ಇದು ಬಹಳ ಆಶ್ಚರ್ಯವಾಯಿತು. ಇದಕ್ಕೆ ಎಲ್ಲಿಯಾದರೂ ಶಾಸ್ತ್ರ ಕೇಳೋಣವೆಂದು ಅಯಿವೋದಿ ಮಠಕ್ಕೆ ಬಂದರು. ಅಯಿವೋದಿ ಮಠವೆಂದು ಈಗಿನ ಗೌರಸಮುದ್ರವನ್ನು ಕರೆಯುತ್ತಿದ್ದರು. ಅಲ್ಲಿ ಮಠದ ತಿಮ್ಮಪ್ಪ ಎಂಬ ಜೋತಿಷ್ಯಕಾರನು ಇದ್ದನು. ಆತನ ಹತ್ತಿರಕ್ಕೆ ಉಪ್ಪಾರ ಗಿರಿತಿಮ್ಮಪ್ಪನು ಬಂದು ಈ ಕುರಿತು ಕೇಳುತ್ತಾನೆ. ಅಲ್ಲಿ ಒಬ್ಬ ಹೆಣ್ಣು ದೇವತೆ ನಿಮಗೆ ಒಲಿದು ಬಂದು ನೆಲೆಸಿರುತ್ತಾಳೆ. ನೀವು ಪ್ರತಿನಿತ್ಯ ಆ ಹುತ್ತಕ್ಕೆ ಪೂಜೆ ಮಾಡಿ ಹೀಗೆ ಭಕ್ತಿಯಿಂದ ಪೂಜಿಸಿದರೆ ನಿಮಗೆ ಈಗಾಗಲೇ ಒಲಿದಿರುವ ಅವಳು ನಿಮ್ಮನ್ನು ಕಾಪಾಡುತ್ತಾಳೆ ಎಂದು ಹೇಳುತ್ತಾನೆ. ಅದರಂತೆ ಉಪ್ಪಾರ

ಗಿರಿತಿಮ್ಮಪ್ಪ ಹುತ್ತಕ್ಕೆ ಪೂಜೆ ನಡೆಸುತ್ತೇವೆಂದು ಒಪ್ಪಿಕೊಂಡು ಮನೆಗೆ ಬರುತ್ತಾನೆ. ದಾರಿಯಲ್ಲಿ ಮಾರಮ್ಮನು ಹಣ್ಣು ಹಣ್ಣು ಮುದುಕಿಯಾಗಿ ದನ ಕಾಯುವವಳಂತೆ ಒಂದು ಗಿಡದ ಕೆಳಗೆ ನಿಂತುಕೊಂಡು ಉಪ್ಪಾರರನ್ನು ಎಲ್ಲಿಗೆ ಹೋಗಿದ್ದರಪ್ಪ ಎಂದು ಕೇಳಿದಳು. ಆಗ ಅವರು ನಮ್ಮ ಉಪ್ಪಿನ ಮಾಳೆಯ ಗದ್ದೆಗಳಲ್ಲಿ ಹುತ್ತು ಬೆಳೆಯುತ್ತಿತ್ತು. ಅದಕ್ಕೆ ಶಾಸ್ತ್ರ ಕೇಳಲಿಕ್ಕೆ ಹೋಗಿದ್ದೀವಿ. ಪ್ರತಿನಿತ್ಯ ಹುತ್ತಕ್ಕೆ ಪೂಜೆ ಮಾಡಿರಿ ಎಂದು ಹೇಳಿದರು. ಅದರಂತೆ ಒಪ್ಪಿಕೊಂಡು ಬಂದೆವು. ಅದಕ್ಕೆ ಮಾರಮ್ಮ ಹಾಗೆಯೇ ಮಾಡಿ ಒಳ್ಳೆದಾಗುತ್ತದೆ ಎಂದು ಹೇಳಿ ಅದೃಶ್ಯವಾದಳು.

ಉಪ್ಪಾರಗಿರಿ ತಿಮ್ಮಪ್ಪನಿಗೆ ಒಬ್ಬಳೇ ತಂಗಿ ಇದ್ದಳು. ಅವಳ ಹೆಸರು ಕೆಂಚಮ್ಮ. ಕೆಂಚಮ್ಮನಿಗೆ ಪ್ರತಿದಿನ ಹುತ್ತಕ್ಕೆ ಪೂಜೆ ಮಾಡಲು ಹೇಳಿದ್ದನು. ಕೆಂಚಮ್ಮನು ಅದೇ ರೀತಿ ಪ್ರತಿದಿನ ಪೂಜೆ ಮಾಡಿಕೊಂಡು ಬರುತ್ತಿದ್ದಳು. ಒಮ್ಮೊಮ್ಮೆ ಆಕೆಯ ಭಕ್ತಿಗೆ ಮೆಚ್ಚಿದ ಮಾರಮ್ಮ ತನ್ನ ನಿಜ ರೂಪ ತೋರಿಸುತ್ತಿದ್ದಳು. ಕ್ರಮೇಣ ಈ ಮಾರಮ್ಮ ಕೆಂಚಮ್ಮನ ಮೈಮೇಲೆ ಬಂದು ಭಕ್ತಾಧಿಗಳಿಗೆ, ಕಾಯಿಲೆಗಳು ಗುಣವಾಗಲು ಬೇವಿನಸೊಪ್ಪು ಕೊಟ್ಟು, ಭಂಡಾರ ಹಚ್ಚಿ ಕಳುಹಿಸುತ್ತಿದ್ದಳು. ಹೀಗೆ ಕೊಟ್ಟ ಬೇವಿನಪತ್ರೆಯಿಂದಲೇ ಎಷ್ಟೋ ಜನರ ಮನ ವೇದನೆಗಳು ಗುಣಮುಖವಾಗುತ್ತಿದ್ದವು. ಕೆಂಚಮ್ಮ ವಯಸ್ಸಿಗೆ ಬಂದ ಮೇಲೆ ಆಕೆಯನ್ನು ಐವೋದಿ ಮಠದ ಉಪ್ಪಾರ ನಿಂಗಪ್ಪನಿಗೆ ಕೊಟ್ಟು ಲಗ್ನ ಮಾಡಿದರು. ಕೆಂಚಮ್ಮನು ಗಂಡನ ಮನೆಗೆ ಹೋಗುವಾಗ ಪೂಜೆ ಮಾಡುವುದು ಇಂದಿಗೆ ತಪ್ಪಿತು ಎಂದು ದುಃಖಪಡುತ್ತ ಬಂದು ರಾತ್ರಿ ಮಲಗಿದಾಗ ಸ್ವಪ್ನದಲ್ಲಿ ಮಾರಮ್ಮ ಕಾಣಿಸಿಕೊಂಡಳು.

ವಿವಾಹವಾಗಿ ನೀನು ಗಂಡನ ಮನೆಗೆ ಹೋಗುವಾಗ ಒಂದು ಪೆಟ್ಟಿಗೆಯಲ್ಲಿ ಹುತ್ತದ ಮಣ್ಣನ್ನು, ಸಾಲಿಗ್ರಾಮವನ್ನು, ಒಂದು ಪುಟ್ಟ ಸಲಕೆಯನ್ನು ತೆಗೆದುಕೊಂಡು ಹೋಗು. ಇವು ನಿನ್ನ ಹತ್ತಿರ ಇಟ್ಟುಕೊಂಡು ಪೂಜೆ ಮುಂದುವರೆಸು ಎಂದು ಹೇಳಿದಂತಾಯಿತು. ಸಾಲಿ ಗ್ರಾಮವನ್ನು ತೊಳೆಯಬೇಕಾದರೆ ಕಣ್ಣಿಗೆ ಬಟ್ಟೆ ಕಟ್ಟಿಕೊಂಡು ಅಭಿಷೇಕ ಮಾಡು ಎಂದು ಹೇಳಿದಂತಾಯಿತು. ಮರುದಿನ ಹುತ್ತದ ಪೂಜೆಗೆ ಹೋದಾಗ ಅಲ್ಲಿ ಒಂದು ಸಾಲಿಗ್ರಾಮ ಇರುತ್ತದೆ. ಮಾರಮ್ಮ ಹೇಳಿದಂತೆ, ಸ್ವಲ್ಪ ಹುತ್ತದ ಮಣ್ಣನ್ನು ಸಲಕೆಯನ್ನು ತೆಗೆದುಕೊಂಡು ಒಂದು ಪೆಟ್ಟಿಗೆಯಲ್ಲಿಟ್ಟು ವಿವಾಹ ನಂತರ ಐವೋದಿ ಸಿದ್ದಿಹಳ್ಳಿಗೆ ಈಕೆ ತರುತ್ತಾಳೆ. ತನ್ನ ಪಕ್ಕದಲ್ಲಿಯೇ ಒಂದು ಗುಡಿಸಲಿನಲ್ಲಿಟ್ಟು ಇದನ್ನು ಪೂಜಿಸಲು ಆರಂಭಿಸುತ್ತಾಳೆ. ಒಮ್ಮೊಮ್ಮೆ ಮಾರಮ್ಮ ಪ್ರತ್ಯಕ್ಷವಾಗಿ ಕೆಂಚಮ್ಮನೊಂದಿಗೆ ಮಾತಾಡುತ್ತಿದ್ದಳು. ಒಬ್ಬರಿಗೊಬ್ಬರು ತಲೆಯಲ್ಲಿ ಹೇನು ನೋಡಿಕೊಳ್ಳುತ್ತಿದ್ದರು. ಬೇರೆಯವರು ಬಂದರೆ ಅವರಿಗೆ ಮಾರಮ್ಮ ಕಾಣಿಸದೆ ಇರುವುದು ಹೀಗೆ ನಡೆಯುತ್ತಿತ್ತು. ಹೀಗೆ ಮಾರಮ್ಮನಿಗೆ ಕೆಂಚಮ್ಮನು ಪ್ರೀತಿಯ ಭಕ್ತೆಯಾಗಿದ್ದಳು. ಪ್ರತಿದಿನವು ಕೆಂಚಮ್ಮನು ಮನೆಯಲ್ಲಿ ಕೆಲಸಗಳೆಲ್ಲವನ್ನು ಮುಗಿಸಿಕೊಂಡು ಹುಲ್ಲು ತರಲು ಹೋಗುತ್ತಿದ್ದಳು. ಆಕೆ ಹುಲ್ಲಿಗೆ ಹೋಗುವುದರೊಳಗಾಗಿ ಮಾರಮ್ಮ ತನ್ನ ಭಕ್ತಳು ಹುಲ್ಲಿಗೆ ಬರುತ್ತಾಳೆ ಎಂದು ಇವಳು ಬರುವ ವೇಳೆಗಾಗಲೇ ಹುಲ್ಲನ್ನು ಕಿತ್ತು ಹೊರೆಯನ್ನು ಕಟ್ಟಿ ಹಿಡುತ್ತಿದ್ದಳು. ಕೆಂಚಮ್ಮ

ಬಂದ ನಂತರ ಪ್ರೀತಿಯಿಂದ ಮಾತನಾಡಿಸಿ ಹುಲ್ಲಿನ ಹೊರೆ ಹೊರಿಸಿ ಕಳುಹಿಸುತ್ತಿದ್ದಳು. ಹೀಗೆ ಹಲವಾರು ದಿನ ನಡೆಯಿತು. ಹೀಗೆ ಒಂದು ದಿನ ಕೆಂಚಮ್ಮನ ಗಂಡ ಅನುಮಾನದಿಂದ ಯೋಚಿಸಿದನು. ಹೀಗೆ ಹೋಗಿ ಹಾಗೆಯೇ ಇಷ್ಟು ದೊಡ್ಡ ಹುಲ್ಲಿನ ಹೊರೆ ತರುವಳಲ್ಲ ಏನಿರಬಹುದು ಎಂದು ತಿಳಿದು ಗಂಡ ಒಂದು ದಿನ ಆಕೆಗೆ ತಿಳಿಯದಂತೆ ಹಿಂಬಾಲಿಸಿಕೊಂಡು ಬಂದಿರುತ್ತಾನೆ. ಕೆಂಚಮ್ಮನು ಪ್ರತಿದಿನವೂ ಬರುವ ಸ್ಥಳಕ್ಕೆ ಬಂದಾಗ ಹುಲ್ಲಿನ ಹೊರೆ ಸಿದ್ಧವಾಗಿತ್ತು. ಮಾರಮ್ಮನು ಕೆಂಚಮ್ಮನಿಗೆ ಹೀಗೆಂದು ಹೇಳುತ್ತಾಳೆ. ಕೆಂಚಮ್ಮ ನಿನ್ನ ಗಂಡನು ನಿನ್ನನ್ನು ಅನುಮಾನದಿಂದ ಹಿಂಬಾಲಿಸಿ ಬಂದಿರುವನು. ಆದ್ದರಿಂದ ಜಾಗ್ರತೆಯಿಂದ ಹೊರಡು ಎಂದು ಹೇಳಿ ಮರ ಹತ್ತಿ ಕುಳಿತುಕೊಂಡಳು.

ಕೆಂಚಮ್ಮನ ಗಂಡ ತನ್ನ ಹೆಂಡತಿಯ ಬಳಿ ಬಂದು ನಿನ್ನ ಹತ್ತಿರ ಈಗ ಮಾತನಾಡಿದವರು ಯಾರು ಎಂದೂ ಕೇಳುತ್ತಾನೆ. ಕೆಂಚಮ್ಮ ಮರದ ಕಡೆ ತೋರಿಸುತ್ತಾಳೆ. ಇದು ಎಂಥವರಿಗೂ ಅನುಮಾನ ಬರುವುದು ಸಹಜ. ಅದರಂತೆ ಕೆಂಚಮ್ಮನ ಗಂಡ ಅನುಮಾನಿಸುವುದರಲ್ಲಿ ತಪ್ಪೇನಿಲ್ಲ ಎನಿಸುತ್ತದೆ. ಆಗ ಮರದ ಕಡೆ ನೋಡುತ್ತಾನೆ. ಮೈಯೆಲ್ಲಾ ಕಣ್ಣುಗಳಿದ್ದ. ಮದುಕಿ. ಭಯಪಟ್ಟು ಯಾರೋ ಹೆಣ್ಣು ದೇವತೆ ಇರಬಹುದು ಎಂದು ನಮಸ್ಕರಿಸುತ್ತಾನೆ. ಅಂದಿನಿಂದ ಕೆಂಚಮ್ಮನ ಹಿಂದೆ ಹಿಂಬಾಲಿಸುವುದನ್ನು ಬಿಡುತ್ತಾನೆ. ಕೆಂಚಮ್ಮ ಭಕ್ತಿಯಿಂದ ಪೂಜೆಯನ್ನು ಮುಂದುವರಿಸುತ್ತಾಳೆ. ಅನೇಕರು ಈಕೆಯ ಬಳಿ ಬಂದು ಕಷ್ಟ, ಸುಖ ಹೇಳಿಕೊಂಡು ಈಕೆ ಕೊಟ್ಟ ಬೇವು ಭಂಡಾರ ಬಳಸಿ ತಮ್ಮ ಸಮಸ್ಯೆಗಳನ್ನು ನಿವಾರಿಸಿಕೊಳ್ಳುತ್ತಿದ್ದರು. ಕೆಂಚಮ್ಮನಿಗೆ ಮಕ್ಕಳಿರುವುದಿಲ್ಲ. ಇಬ್ಬರು ಯೋಚಿಸಿ ದೊಡ್ಡ ರುದ್ರಪ್ಪ ಎಂಬಾತನನ್ನು ದತ್ತು ತೆಗೆದುಕೊಂಡಿದ್ದರು. ಆತನು ಗತಿಸಿದ ನಂತರ, ಶಿರಿಗೆಪ್ಪ ಎಂಬಾತನು ನಿಷ್ಠೆಯಿಂದ ಪ್ರತಿ ಮಂಗಳವಾರ ಮಾರಮ್ಮನನ್ನು ಪೂಜೆ ಮಾಡುತ್ತಾನೆ.

ಹಿಂದೆ ಕೆಂಚಮ್ಮನು ಮಾರಮ್ಮನ ಮಹಿಮೆಯನ್ನು ಜನಗಳಿಗೆ ತೋರಿಸಿಕೊಟ್ಟಾಗ ಜನಗಳು ಮಾರಮ್ಮನ ಅರಿಕೆಯನ್ನು ಒಪ್ಪಿಸುವುದಕ್ಕೆ ಆಗಿಂದಾಗ್ಗೆ ಬರುತ್ತಿದ್ದರು. ಭಾದ್ರಪದ ಶುದ್ಧ ಮೊದಲನೆಯ ಮಂಗಳವಾರ ಹುತ್ತವಿರುವ ಸ್ಥಳಕ್ಕೆ ಮಾರಮ್ಮನ ಪೆಟ್ಟಿಗೆಯನ್ನು ಹೊರಡಿಸುತ್ತೇವೆ. ಮಾರಮ್ಮನ ಅಪೇಕ್ಷೆಯಂತೆ ಅಂದು ಹುತ್ತವಿರುವ ಜಾಗದಲ್ಲಿ ಜ್ಯೋತಿ ಬೆಳಗುತ್ತೇವೆ. ಮಾರಮ್ಮ ತಾಯಿಯು ಆ ದಿನ ಜ್ಯೋತಿ ರೂಪದಲ್ಲಿ ಬಂದಿರುವ ಎಲ್ಲಾ ಭಕ್ತಾದಿಗಳಿಗೂ ದರ್ಶನ ನೀಡುತ್ತಾಳೆಂದು ಕೆಂಚಮ್ಮನ ಹೇಳಿಕೆಯಾಗಿದೆ. ಜಾತ್ರೆಗೆ ಬಂದ ಜನರು ಜ್ಯೋತಿಯ ದರ್ಶನ ಮಾಡದೆ ಹೋಗಬಾರದು. ಹೋಗಿದ್ದೆ ಆದ್ದಲ್ಲಿ ಜಾತ್ರೆಗೆ ಬಂದ ಫಲ ದೊರಕುವುದಿಲ್ಲ ಎಂದು ಜನರಲ್ಲಿ ಈಗಲೂ ನಂಬಿಕೆ ಇದೆ. ಇಲ್ಲಿ ಹುತ್ತವಿರುವ ಸ್ಥಳಕ್ಕೆ 'ತುಮ್ಮಲು' ಎಂದು ಕರೆಯುತ್ತಾರೆ.

**ತಿಮ್ಮಪ್ಪನಿಗೆ ಸಂಬಂಧಿಸಿದ ಐತಿಹ್ಯ**

ತಿಮ್ಮಪ್ಪ ಎಂಬ ವ್ಯಕ್ತಿ ಗೊಲ್ಲ ಸಮುದಾಯಕ್ಕೆ ಸೇರಿದವನು. ಈತನು ಕುರಿಗಳನ್ನು ಪಾಲನೆ ಮಾಡುತ್ತಿದ್ದನು. ಈತನಿಗೆ ತಮ್ಮಂದಿರು, ತಂಗಿಯರು ಇದ್ದರು. ಅವರು ವ್ಯವಸಾಯ

ಕೆಲಸ ಮಾಡುತ್ತ ಜೀವನ ಸಾಗಿಸುತ್ತಿದ್ದರು. ಇವರು ತಮ್ಮ ಕುರಿಗಳಿಗೆ ಹೊಲದಲ್ಲಿ ಮಂದೆಯನ್ನು ಇಟ್ಟುಕೊಂಡಿದ್ದರು. ಪ್ರತಿದಿನ ಕುರಿಗಳನ್ನು ಕಾಯಲು ಅಡವಿಗೆ ಹೋಗಿ ಬರುತ್ತಿದ್ದರು. ತಿಮ್ಮಪ್ಪನ ತಂಗಿಯಾದ ನಾಗಮ್ಮ ಪ್ರತಿದಿನ ಮನೆಯಿಂದ ಕುರಿಮಂದೆಗೆ ಹೋಗಿ ಹಾಲು ತರುತ್ತಿದ್ದಳು. ಹೀಗೆ ಬರುವಾಗ ದಾರಿಯ ಪಕ್ಕದಲ್ಲಿ ಒಂದು ಹುತ್ತವಿತ್ತು. ನಾಗಮ್ಮ ಅದಕ್ಕೆ ಹಾಲು ಹಾಕಿ ಬರುತ್ತಿದ್ದಳು. ಇದನ್ನು ಗಮನಿಸಿದ ಕೆಲವರು ಆಕೆಯ ಮನೆಗೆ ಹೋಗಿ ನಿಮ್ಮ ಹುಡುಗಿ ಪ್ರತಿದಿನ ಹುತ್ತಕ್ಕೆ ಹಾಲನ್ನು ಸುರಿದು ಬರುತ್ತಾಳೆ. ಆದರೆ ನಾಗಮ್ಮ ಮನೆಗೆ ಬರುವಾಗ ಹಾಲು ತರುವುದನ್ನು ತಪ್ಪಿಸಿರುವುದಿಲ್ಲ. ಹೀಗೆ ಜನರು ಹೇಳಿದ ಮಾತುಗಳನ್ನು ಮನೆಯಲ್ಲಿ ನಂಬಲಿಲ್ಲ. ಹೀಗೆ ಒಂದು ದಿನ ನಾಗಮ್ಮನವರ ಅಣ್ಣ ತಿಮ್ಮಪ್ಪ ಆಕೆಗೆ ಗೊತ್ತಾಗದಂತೆ ಪರೀಕ್ಷಿಸಬೇಕೆಂದು ಹುತ್ತದ ಹತ್ತಿರ ಗಿಡದ ಮರೆಯಲ್ಲಿ ಅವಿತು ಕುಳಿತನು. ಎಂದಿನಂತೆ ನಾಗಮ್ಮ ಮಂದೆಯಿಂದ ಹಾಲು ತೆಗೆದುಕೊಂಡು ಹಿಂದಿರುಗಿದಳು. ಹೀಗೆ ದಾರಿಯಲ್ಲಿ ಬರುವಾಗ ಹುತ್ತಕ್ಕೆ ಹಾಲನ್ನು ಸುರವಿ ನಮಸ್ಕರಿಸಿ ಮನೆಯ ಕಡೆ ಹೊರಡುತ್ತಾಳೆ. ಮನೆಗೆ ಬರುವ ವೇಳೆಗೆ ಮತ್ತೆ ಕೈಯಲ್ಲಿ ಹಾಲು ತುಂಬಿದ ಬಿಂದಿಗೆ ಇರುತ್ತದೆ.

ತಿಮ್ಮಪ್ಪ ಮನೆಗೆ ಹೋಗಿ ಅವಸರವಾಗಿ ಮನೆಯಲ್ಲಿ ಕೇಳಲು ಮಾರಮ್ಮ ತಿಮ್ಮಪ್ಪನಿಗೆ ಶರೀರವೆಲ್ಲಾ ಕಣ್ಣುಗಳುಳ್ಳವಳಾಗಿ ಕಾಣಿಸಿಕೊಂಡಳು. ಇದನ್ನು ನೋಡಿದ ತಿಮ್ಮಪ್ಪನು ಆಕೆಗೆ ನಮಸ್ಕರಿಸಿದಾಗ ನನ್ನನ್ನು ಪರೀಕ್ಷೆ ಮಾಡಲು ಬಂದಿರುವೆಯಾ, ಇಂದಿನಿಂದ ನಿಮ್ಮ ಮನೆಯಲ್ಲಿರಲು ನಾನು ಇಷ್ಟಪಡುವುದಿಲ್ಲವೆಂದು ಹೇಳಿ ಹೊರಟು ಬಂದು ಗೌರಸಮುದ್ರದ ತುಮ್ಮಲು ಸ್ಥಳದಲ್ಲಿದ್ದ ಹುತ್ತಕ್ಕೆ ಬಂದು ಹುತ್ತದಲ್ಲಿ ನೆಲೆಸಿದಳು.

**ಬಳೆಗಾರಜ್ಜನ ಗುಡ್ಡೆ**

ಬಳೆಗಾರಜ್ಜನ ಗುಡ್ಡೆ ಗೌರಸಮುದ್ರದಿಂದ ತುಮ್ಮಲಿಗೆ ಹೋಗುವ ದಾರಿಯ ಎಡಬದಿಯಲ್ಲಿದೆ. ಜಾತ್ರೆ ಸಂದರ್ಭದಲ್ಲಿ ಬಳೆ ಮಾರಾಟ ಮಾಡುವುದು ಬಳೆಗಾರಜ್ಜನ ವೃತ್ತಿ. ಹಿಂದೆ ಒಂದು ವರ್ಷ ಗೌರಸಮುದ್ರ ಮಾರಮ್ಮನ ಜಾತ್ರೆಗೆ ತುಮ್ಮಲಿಗೆ ಬಳೆ ಮಾರಲು ಬಂದಿದ್ದನು. ಈತನು ಜಾತ್ರೆ ಆದ ಮೇಲೆ ಕೂಡ ತುಮ್ಮಲಿನಲ್ಲಿ ಸಂಜೆಯವರೆಗೆ ಇದ್ದನು. ಜನರೆಲ್ಲರು ಹೊರಟು ಹೋದರು. ಹೊತ್ತು ಮುಳುಗಿ ಕತ್ತಲಾದರೂ ತುಮ್ಮಲಿನಲ್ಲಿಯೇ ಇದ್ದನು. ಆಗ ಮಾರಮ್ಮ ಬಂದು ಆತನ ಬಳಿ ನನಗೆ ಬಳೆ ತೊಡಿಸು ಎಂದು ಕೇಳಿ ತನಗೆ ಬೇಕಾದ ಬಳೆಗಳನ್ನು ತೊಡಸಿಕೊಂಡಳು. ಒಂದು ಬಟ್ಟೆಯಲ್ಲಿ ಕಟ್ಟಿರತಕ್ಕ ಹಣದ ಗಂಟನ್ನು ಬಳೆಗಾರನಿಗೆ ಕೊಟ್ಟಳು. ಈ ಬಟ್ಟೆಯಲ್ಲಿ ಕಟ್ಟಿರತಕ್ಕ ಹಣದ ಗಂಟನ್ನು ಬಿಚ್ಚಿ ನೋಡದೆ ಹಿಂದಕ್ಕೆ ತಿರುಗಿ ನೋಡದಂತೆ ಹೊರಟು ಹೋಗು, ಹಾಗೇನಾದರೂ ಹಿಂದಕ್ಕೆ ತಿರುಗಿ ನೋಡಿದ್ದೆ ಆದರೆ, ನಿನಗೆ ತೊಂದರೆಯಾಗುತ್ತೆ ಎಂದು ಹೇಳಿ ಮರೆಯಾದಳು. ಬಳೆಗಾರನು ಹಾಗೆಯೇ ಆಗಲಿ ಎಂದು ಒಪ್ಪಿಕೊಂಡನು. ಗೌರಸಮುದ್ರ ಕಡೆ ಬರುತ್ತಿರುವಾಗ ಸಹಜ ಕುತೂಹಲದಿಂದ ಮಾರಮ್ಮನು ಕೊಟ್ಟಿರತಕ್ಕ ಹಣದ ಗಂಟನ್ನು ಬಿಚ್ಚಿ ನೋಡಿದನು. ಕಣ್ಣಿಗೆ ವಜ್ರ, ಮುತ್ತುಗಳು ಕಂಡು

ಇನ್ನಷ್ಟು ಐಶ್ವರ್ಯವನ್ನು ಕೇಳಿ ಪಡೆದಿದ್ದರೆ ಚೆನ್ನಾಗಿರುತ್ತಿತ್ತು ಎಂದು ದುರಾಸೆ ಪಟ್ಟನು. ಈ ಮಾರಮ್ಮನು ಹೇಳಿದ ಮಾತನ್ನು ಉಲ್ಲಂಘನೆ ಮಾಡಿ ಹಿಂದಕ್ಕೆ ತಿರುಗಿ ನೋಡಿದನು. ಹೀಗೆ ತಿರುಗಿ ನೋಡಿದಾಗ ಈತನು ಅಲ್ಲಿಯೇ ರಕ್ತಕಾರಿ ನಾಲಿಗೆ ಕಡಿದುಕೊಂಡು ಪ್ರಾಣ ಬಿಟ್ಟನು. ಆ ದಿನ ರಾತ್ರಿ ಯಾರಿಗೂ ಈತನು ಸತ್ತಿರುವ ಸುದ್ದಿ ತಿಳಿಯಲಿಲ್ಲ. ಮಾರನೆಯ ದಿನ ದನ ಕಾಯುವ ಹುಡುಗರಿಂದ ಬಳೆಗಾರನು ಸತ್ತಿರುವ ವರ್ತಮಾನ ಗ್ರಾಮಸ್ಥರಿಗೆ ತಿಳಿಯಿತು. ಗ್ರಾಮಸ್ಥರು ಕೆಂಚಮ್ಮನ ಹತ್ತಿರ ಬಳೆಗಾರನ ವಿಚಾರವನ್ನು ಕೇಳಿದರು. ಅವನು ಎಷ್ಟು ಹೇಳಿದರೂ ಕೇಳದೆ ನನ್ನ ಮಾತು ತಿರಸ್ಕರಿಸಿದ್ದರಿಂದ ಆತನಿಗೆ ಸಾವು ಬಂದಿದೆ. ಆತನನ್ನು ಅಲ್ಲಿಯೇ ಸಮಾಧಿ ಮಾಡಿರಿ ಎಂದು ಹೇಳಿದಳು. ಅದರಂತೆ ಆತನನ್ನು ಅಲ್ಲಿಯೇ ಸಮಾಧಿ ಮಾಡಲಾಯಿತು. ಇಂದಿಗೂ ಈ ಬಳೆಗಾರನ ಸಮಾಧಿಯ ಕಟ್ಟೆ ಕಂಡು ಬರುತ್ತದೆ. ಸಾವಿರಾರು ಭಕ್ತರು ಪ್ರತಿವರ್ಷವು ಪೂಜಿಸುತ್ತಾರೆ. ತುಮ್ಮಲಿನಲ್ಲಿ ರಾತ್ರಿಯಾದ ಮೇಲೆ ಉಳಿಯಬಾರದು ಎಂದು ಇಂದಿಗೂ ಪ್ರತೀತಿ ಇದೆ. ಇಂದಿಗೂ ಜಾತ್ರೆಯಾದ ಮೇಲೆ ಅಲ್ಲಿ ಯಾರು ಇರುವುದಿಲ್ಲ. ಅಲ್ಲಿ ಇಂದಿಗೂ ಮಾರಿಯ ಅವತಾರದಲ್ಲಿ ಮಾರಮ್ಮ ತಿರುಗುತ್ತಾಳೆ ಎಂಬ ನಂಬಿಕೆ ಈ ಪ್ರದೇಶದಲ್ಲಿದೆ.

**ಅರವಜ್ಜಿ**

ಅರವಜ್ಜಿಯ ಮೂಲ ನನ್ನಿವಾಳ. ಈಕೆ ಗಾದ್ರಿಪಾಲನಾಯಕನ ಸಮಕಾಲೀನಳು. ಈಕೆಯ ಸಮಾಧಿ ನನ್ನಿವಾಳ ಸಮೀಪವಿದೆ. ಅರವಜ್ಜಿ ಎನ್ನುವುದು ಈಕೆಯ ಹೆಸರು. ಈ ಸಮಾಧಿ ಇರುವ ಸ್ಥಳವನ್ನು 'ಅರವಬ್ಬ ಏಣು' ಎನ್ನುತ್ತಾರೆ. 'ಏಣು' ಎಂದರೆ ದಿಬ್ಬ ಎಂದರ್ಥ. ಗಾದ್ರಿಪಾಲನಾಯಕನು ಹುಲಿಗಳಿಂದ ತಪ್ಪಿಸಿಕೊಂಡು ವಲಸೆ ಹೋಗುವಾಗ ಈತನ ಜೊತೆಯಲ್ಲಿ ಈತನ ಸೋದರತ್ತೆಯಾದ ಅರವಜ್ಜಿ ಇದ್ದಳು. ಜೊತೆಗೆ ಜಜ್ಜಿಲಬ್ಬ ಗುಡ್ಡೆಬ್ಬ, ಗಟ್ಟಿಮೀದಬ್ಬ ಯರದಾಯಬ್ಬ ಎಂಬ ಮಹಿಳೆಯರಿದ್ದರು. ಇವರಿಗೆ ವಯಸ್ಸಾಗಿತ್ತು. ವಲಸೆ ಹೋಗುವಾಗ ಮಾರ್ಗ ಮಧ್ಯದಲ್ಲಿ ಒಬ್ಬೊಬ್ಬರಾಗಿ ಅಸುನೀಗುತ್ತಾರೆ. ಇವರನ್ನೆಲ್ಲಾ ಅಲ್ಲಲ್ಲಿಯೇ ಸಮಾಧಿ ಮಾಡುತ್ತಾರೆ. ಅರವಜ್ಜಿ ಸತ್ತಾಗ ಸಮಾಧಿ ಮಾಡಿ ಗಾದ್ರಿಪಾಲನಾಯಕ ಪೂಜೆ ಮಾಡಿ ತನ್ನ ಪ್ರಯಾಣವನ್ನು ಮುಂದುವರಿಸುತ್ತಾನೆ. ಆತನ ಅನುಯಾಯಿಗಳು ಶ್ರದ್ಧೆಯಿಂದ ಪೂಜಿಸುತ್ತ ಬರುತ್ತಿದ್ದಾರೆ. ಈ ಅಜ್ಜಿಯ ಜಾತ್ರೆಯು ಅರವತ್ತು ವರ್ಷಗಳ ನಂತರ ೨೦೦೪ರಲ್ಲಿ ನಡೆದಿದೆ ಎಂದು ಸ್ಥಳೀಯರು ಹೇಳುತ್ತಾರೆ. ಈ ಜಾತ್ರೆಯು ಏಳು ದಿನಗಳ ಕಾಲ ನಡೆಯುತ್ತದೆ. ಈ ಮಹಿಳೆಯರ ಸಮಾಧಿಗಳಿಗೆ ಸುತ್ತಮುತ್ತಲ ಹಟ್ಟಿಗಳವರು ಹಬ್ಬ ಹರಿದಿನಗಳಲ್ಲಿ ಪೂಜೆ ಮಾಡಿಕೊಂಡು ಹೋಗುತ್ತಾರೆ. ಈಕೆ ಪಶುಪಾಲನೆಯ ಕಡೆ ಶ್ರದ್ಧೆಯಿಂದ ಗಮನಹರಿಸಿದ್ದ ಮಹಿಳೆ ಎಂಬುದಂತೂ ಸ್ಪಷ್ಟವಾಗುತ್ತದೆ. ನನ್ನಿವಾಳ ಒಂದು ಕಟ್ಟೆಮನೆಯಾಗಿದ್ದು, ಇಲ್ಲೊಬ್ಬ ದೊರೆಯು ಇರುತ್ತಾನೆ. ಈ ಊರಿನಲ್ಲಿ ಅನೇಕ ಹಟ್ಟಿಗಳಿದ್ದು ಇವರೆಲ್ಲ ಸೇರಿ ಅರವಜ್ಜಿ ಮಾಡುತ್ತಾರೆ. ಅರ ಎಂಬುದು ತೆಲುಗು ಪದ. ಇದರ ಪ್ರಕಾರ ಪೂಜಾರಿ, ಶಿಕ್ಷಕಿ, ಅಡುಗೆ

ಮಾಡುವವರು, ಹಸುಗಳಿಗೆ ಮೇವು ಪೂರೈಸುವ ಕೆಲಸದ ಮೇಲ್ವಿಚಾರಣೆಯನ್ನು ಮಾಡುವವಳು ಎಂಬ ಅರ್ಥವಿದೆ.

**ಮಲಿಯಮ್ಮ**

ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿಗೆ ಸೇರಿದ ತುಮಕೂರ್ಲಹಳ್ಳಿ ಅಡವಿಯ ಬಳಿ ಮಲಿಯಮ್ಮನ ಗುಡಿಯಿದೆ. ಈಕೆಯು ಬೇಡ ಸಮುದಾಯಕ್ಕೆ ಸೇರಿದ ಒಬ್ಬ ಪಶುಪಾಲಕಿ. ಶ್ರೀಶೈಲದಿಂದ ಬೇಡಕಂಪಳದ ಜೊತೆ ಮುತ್ತಿಗಾರರೊಂದಿಗೆ ಅಕ್ಕರಾಯಮ್ಮ, ಮಲೆಯಮ್ಮ, ಮಾರಮ್ಮ ಇವರು ಸಹ ಜೊತೆಯಲ್ಲಿ ಬಂದಿದ್ದರಂತೆ. ಇವರು ಈ ಸಮುದಾಯದ ಪುರುಷರಷ್ಟೆ ಹಾಗೂ ಧೈರ್ಯಶಾಲಿಗಳು ಪ್ರಮುಖ ಪಶುಪಾಲಕಿಯರು. ಮಲಿಯಮ್ಮ ಮುತ್ತಿಗಾರರ ಎತ್ತುಗಳನ್ನು ಪಾಲನೆ ಮಾಡಿ ಇದೇ ಅಡವಿಯಲ್ಲಿ ಐಕ್ಯವಾದಳು. ಈಕೆಗೆ ಈ ಎತ್ತುಗಳನ್ನು ಕಾಯಲು ಉತ್ತರ ಕಡೆ ದಿಕ್ಕಿಗೆ ಬಿಟ್ಟಿದ್ದರಂತೆ. ಅದರಂತೆ ಈಕೆ ಇಲ್ಲಿಯೇ ಐಕ್ಯವಾದಳು. ಈ ಮುತ್ತಿಗಾರರು ಹಂಪಿ ಕಡೆ ಹೋದಾಗ ಅಲ್ಲಿಂದ ವಾಪಾಸು ಬರುವಾಗ ಸಂಡೂರು ಗಂಡಿಯಿಂದ ದಾರಿ ಮಾಡಿಕೊಂಡು ಬಂದರೆಂದು ಜನಪದರು ಹೇಳುತ್ತಾರೆ. ಸಂಡೂರು ಗಂಡಿಯಲ್ಲಿ ನೆಲೆಸಿರುವ ಮಲಿಯಮ್ಮ ಒಬ್ಬರೆ ಎನ್ನುತ್ತಾರೆ. ಈಗಲೂ ಈ ಅಡವಿಯ ಎತ್ತುಗಳ ಕಿಲಾರಿಗಳು, ಮಲಿಯಮ್ಮ ನಮ್ಮ ಎತ್ತುಗಳಿಗೆ ರಕ್ಷಣೆ ಮಾಡುವಳು ಎಂಬುದು ಇವರ ನಂಬಿಕೆ. ಮಲಿಯಮ್ಮ ಹಿಂದೆ ಗೆದ್ದವಲ್ಲಿ ರಾಜನ ಸೇನೆಯನ್ನು ಎದುರಿಸಿ ಎತ್ತುಗಳನ್ನು ರಕ್ಷಿಸಿದಳು. ಗೆದ್ದವಲ್ಲಿ ರಾಜ ಸೋತು ಮಲಿಯಮ್ಮನಿಗೆ ಶರಣಾಗತನಾದನು. ಮಲಿಯಮ್ಮನ ನೇತೃತ್ವದಲ್ಲಿ ಮಧ್ಯೆ ಕರ್ನಾಟಕದ ಕಡೆ ಬಂದವರು. ಹಾಗಾಗಿ ಈ ಮಲಿಯಮ್ಮನಿಗೆ ಪ್ರತಿವರ್ಷ ಮಾರಮ್ಮ ಹಬ್ಬದ ಸಂದರ್ಭದಲ್ಲಿ ಈ ಸಮುದಾಯದವರು ಬಲಿ ಸೇವೆ ಮಾಡುತ್ತಾರೆ. ಮುತ್ತಿಗಾರು ದೇವರೆತ್ತುಗಳಿಂದ ವೀಸಲು ಹಾಲು ತಂದು ಮಲಿಯಮ್ಮನಿಗೆ ನೈವೇದ್ಯ ಮಾಡುತ್ತಾರೆ. ಹೀಗೆ ಈ ಸಮುದಾಯದಲ್ಲಿ ಹಬ್ಬ ಹರಿದಿನಗಳಲ್ಲಿ ಮದುವೆ ಸಂದರ್ಭಗಳಲ್ಲಿ ಪೂಜೆ ಮಾಡುವರು. ಮಲಿಯಮ್ಮ ಜಾತ್ರೆಯ ಸಂದರ್ಭದಲ್ಲಿ ಮಲೆದೇವರು ಎಂದು ೨೭ ವರ್ಷಗಳ ಕೆಳಗೆ ಮಾಡಿದರು. ನಂತರ ಈ ವರ್ಷ ಮಾಡಿದ್ದಾರೆ. ಮಲಿಯಮ್ಮನ ಆರಾಧನೆ ಎತ್ತಿನಗೂಡಿನಲ್ಲಿ ಸಹ ಮಾಡುತ್ತಾರೆ. ಈ ಆರಾಧನೆಯನ್ನು ಮಲೆದೇವರು ಎಂದು ಕರೆಯುತ್ತಾರೆ.

**ಹಿಡಾಲಗಂಗಿ - ಗಡಾಲಗಂಗಿ**

ಗೊರ್ಲಬಯ್ಯಪ್ಪರಾಜು ಅಥವಾ ಗೋರ್ಲುಬೈಯಣ್ಣ ಎಂಬಾತನು ಬೇಡ ಸಮುದಾಯಕ್ಕೆ ಸೇರಿದವನು. ಈತ ಒಮ್ಮೆ ಬೇಟೆಗಾಗಿ ಕಾಡಿಗೆ ಹೋಗಿರುತ್ತಾನೆ. "ಕಾಡಿನ ಒಂದು ಗವಿಯಲ್ಲಿ ಹಿಡಾಲಗಂಗಿ ಎಂಬ ಚೆಲುವೆ ಇರುತ್ತಾಳೆ. ಈಕೆಯ ತಾಯಿ ಗಡಾಲಗಂಗಿ ಆಹಾರ ಸಂಪಾದನೆಗಾಗಿ ಹೊರಗೆ ಹೋಗಿರುತ್ತಾಳೆ. ಕಾಡಿನಲ್ಲಿ ಅಲೆದು ಬೈಯಣ್ಣ ದಣಿದು ಬಾಯಾರಿಕೆಯಿಂದ ನೀರನ್ನು ಹುಡುಕುತ್ತ ಹೀಗೆ ಕಾಡಿನಲ್ಲಿ ಹೋಗುತ್ತಾನೆ. ಕಾಡಿನ ಮಧ್ಯದಲ್ಲಿ

ಗವಿ ಬಳಿ ಹೋಗಿ ನೀರು ಕೇಳುತ್ತಾನೆ. ಆಗ ಹಿಡಾಲಗಂಗಿ ನೀರು ಕೊಡುತ್ತಾಳೆ. ಇವಳ ಚೆಲುವಿಗೆ ಮಾರು ಹೋದ ಈತ ಗವಿಯೊಳಗೆ ಹೋಗಿ ಕ್ಷಣಾರ್ಧದಲ್ಲಿ ಆಕೆಯೊಂದಿಗೆ ಸ್ನೇಹ ಬೆಳೆಸುತ್ತಾನೆ. ಅಲ್ಲಿ ಸ್ವಲ್ಪ ಕಾಲ ಕಳೆಯುತ್ತಿರುವಾಗಲೇ ಯುವತಿಯ ತಾಯಿ ಬರುತ್ತಾಳೆ. ಬರುತ್ತಲೇ ಹೊಸ ವಾಸನೆ ಹೊಡೆಯುತ್ತದೆ ಎಂದು ಮಗಳಲ್ಲಿ ಕೇಳುತ್ತಾಳೆ. ಏನೂ ಇಲ್ಲ ವಾಸನೆ ಎಂದು ಭಯದಿಂದ ಹೇಳುತ್ತಾಳೆ. ಇಲ್ಲಿ ಯಾರು ಬಂದಿಲ್ಲ ಎಂದೂ ಸುಳ್ಳು ಹೇಳುತ್ತಾಳೆ. ಮರುದಿನ ಮತ್ತೆ ಆಹಾರ ಸಂಪಾದನೆಗಾಗಿ ಸಂಚಾರ ಹೊರಡುತ್ತಾಳೆ. ಇತ್ತ ಮಗಳು ತನ್ನ ಸ್ನೇಹಿತ ಬೈಯಣ್ಣನೊಂದಿಗೆ ಹೊರಟು ಬಿಡುತ್ತಾಳೆ. ಹೀಗೆ ಇಬ್ಬರು ಪ್ರಯಾಣ ಬೆಳೆಸುತ್ತಾರೆ. ದಾರಿಯಲ್ಲಿ ಅವರ ಬಟ್ಟೆ ಹರಿದು ಪೊದೆ ಮುಳ್ಳುಗಳಿಗೆ ಸಿಕ್ಕಿ ಹಾಕಿಕೊಂಡಿರುತ್ತದೆ. ಮನೆಗೆ ಮರಳಿದ ತಾಯಿ ಮಗಳು ಇಲ್ಲದಿರುವುದನ್ನು ಗಮನಿಸಿ ಯಾರು ಕರೆದೊಯ್ದಿದ್ದಾರೆ. ನಿನ್ನೆಯೇ ವಾಸನೆ ಬಂದಿತ್ತು. ಇದು ಮೋಸವಾಯಿತು ಎಂದು ದಾರಿ ಗುರುತಿಸಿಕೊಂಡು ಹಿಂಬಾಲಿಸಿ ಬರುತ್ತಾಳೆ”.[೬] ಅಲ್ಲಿ ರೈತರು ಹೊಲದಲ್ಲಿ ವ್ಯವಸಾಯ ಮಾಡುತ್ತಿರುತ್ತಾರೆ. ಕುಂಟೆ ಹೊಡೆಯುತ್ತಿರುತ್ತಾರೆ. ಗೊರ್ಲುಬೈಯ್ಯಣ್ಣ ಹೀಗೆ ಹೇಳುತ್ತಾನೆ. ನೀವು ಬರುವವರೆಗೆ ನಾನು ಕುಂಟೆ ಹೊಡೆಯುತ್ತೇನೆ. ನಿಮ್ಮ ಮನೆಯಿಂದ ಊಟ ತಂದು ಕೊಡಿ ಎಂದು ಕೇಳುತ್ತಾನೆ. ಆಹಾರ ಪಡೆದು ತಿಂದು ಹೀಗೆ ಮುಂದೆ ಸಾಗುತ್ತಾರೆ.

ಹೀಗೆ ಸಾಗುವಾಗ ಗರಣಿ ಹಳ್ಳದಲ್ಲಿ ಅಗಸರು ಬಟ್ಟೆ ಒಗೆಯುವುದನ್ನು ಕಂಡು ಅವರ ಬಳಿ ಬಂದು, ಹಿಂದೆ ನಮ್ಮನ್ನು ರಾಕ್ಷಸಿ ಹಿಂಬಾಲಿಸಿಕೊಂಡು ಬರುತ್ತಿದ್ದಾಳೆ. ಹಾಗಾಗಿ ನೀವು ನಮ್ಮಿಬ್ಬರಿಗೆ ರಕ್ಷಣೆ ಕೊಡಬೇಕು ಎಂದು ಬೈಯಣ್ಣ ಕೇಳಿಕೊಳ್ಳುತ್ತಾನೆ. ಹೀಗೆ ಅಗಸರು ಅವರ ಮನೆಗಳಲ್ಲಿ ಬಚ್ಚಿಡುತ್ತಾರೆ. ಗಡಾಲಗಂಗಿ ಇಲ್ಲಿಗೆ ಬಂದು ಯಾರಾದರೂ ಒಬ್ಬ ಯುವಕ, ಯುವತಿ ಬಂದರೇ ಎಂದು ಕೇಳಲು ನಮಗೆ ಗೊತ್ತಿಲ್ಲ ಎಂದು ಅಗಸರು ತಿಳಿಸುತ್ತಾರೆ. ಅಲ್ಲಿಂದ ಮುಂದುವರೆದು ಊರೊಳಗೆ ಹೋದ ಈಕೆ ಈ ಊರ ಬಂಡೆ ಮೇಲೆ ಮುತ್ತುರತ್ನ ಹೊಯಿಸುತ್ತೇನೆ, ತಳ ಇಲ್ಲದ ಸೇರಲ್ಲಿ ಯಾವ ಗಂಡಸು ಬಂದು ಇದನ್ನು ಅಳೆಯುತ್ತಾನೋ ಅವನೇ ಧೀರ ಎಂದು ಡಂಗುರ ಹಾಕಿಸುತ್ತಾಳೆ. ತನ್ನ ಮಗಳನ್ನು ಕರೆದುಕೊಂಡು ಹೋದವ ವೀರನಾಗಿದ್ದು ಅವನು ಈ ಮೂಲಕ ಬಯಲಿಗೆ ಬರುತ್ತಾನೆ ಎಂಬ ನಿರೀಕ್ಷೆಯಲ್ಲಿ ಅವಳು ಈ ತರಹ ಕೆಲಸಕ್ಕೆ ಕೈ ಹಾಕಿರುತ್ತಾಳೆ. ಅವಳ ನಿರೀಕ್ಷೆಯಂತೆಯೇ ಬೈಯ್ಯಣ್ಣ ಬಂದು ಮುತ್ತುರತ್ನ ಅಳೆಯುತ್ತಾನೆ. ಇವನೇ ತನ್ನ ಮಗಳನ್ನು ಕರೆದೊಯ್ದುವ ಎಂದು ಅವಳಿಗೆ ಗೊತ್ತಾಗುತ್ತದೆ. ಅಲ್ಲಿಂದ ಬಂದು ಬೈಯಣ್ಣ ಕೆರೆಕಟ್ಟೆಯ ಮೇಲೆ ನಿಂತು ಅಲ್ಲಿ ಭತ್ತದ ಮಧ್ಯ ಬೆಳೆದ ಕಳೆ ಕೀಳುತ್ತಿದ್ದ ಮಹಿಳೆಯರನ್ನು ಹಾಸ್ಯ ಮಾಡುತ್ತಾನೆ. ಒಂದೇ ಗಂಟೆಕಳೆಯನ್ನು ಇಬ್ಬರು ಕೀಳುತ್ತಿದ್ದುದ್ದನ್ನು ಒಬ್ಬನೇ ಕಿತ್ತು ತೋರಿಸುತ್ತಾ ಪ್ರತಿಹಾಸ್ಯ ಮಾಡುತ್ತಾನೆ. ಆಗ ಬೈಯಣ್ಣ ಗದ್ದೆಯಲ್ಲಿ ಬಗ್ಗಿ ಕೀಳುತ್ತಿರುವಾಗ ಇದೇ ಗದ್ದೆಯಲ್ಲಿ ಅಡಗಿ ಹೊಂಚು ಹಾಕಿ ಕಾಯುತ್ತಿದ್ದ ಗಡಾಲಗಂಗಿ ಅವನನ್ನು ಬಿಗಿಯಾಗಿ ಹಿಡಿದು ಆತನ ಕೈಯ ಉಗುರುಗಳನ್ನು

ಕಿತ್ತು ಬಿಡುತ್ತಾಳೆ. ಅವನು ಪ್ರತಿಯಾಗಿ ಹೊಡೆಯುತ್ತಾನೆ. ಆಕೆ ಮೂರ್ಛೆ ಹೋಗುತ್ತಾಳೆ. ಆಗ ದುಃಖದಿಂದ ಅಳುತ್ತಾಳೆ. ನನ್ನ ಮಗಳನ್ನು ಅಪಹರಿಸಿದ ನಿನ್ನ ವಂಶ ಎಂದಿಗೂ ಉದ್ಧಾರವಾಗದಿರಲಿ, ಹೆಣ್ಣು ಹೆಚ್ಚದಿರಲಿ, ಗಂಡು ಬೆಳೆಯದಿರಲಿ ಎಂದು ಶಾಪ ಕೊಡುತ್ತಾಳೆ. ತನ್ನ ಮಗಳನ್ನು ಮತ್ತೆ ತನ್ನ ಮನೆಗೆ ಕರೆದೊಯ್ಯಲು ಸಾಧ್ಯವಾಗದೇ ಅಲ್ಲಿಯೇ ಮಡಿಯುತ್ತಾಳೆ. ಮಗಳು ಆಘಾತದಿಂದ ಅಲ್ಲಿಯೇ ಶಿಲೆಯಾಗುತ್ತಾಳೆ. ಬೈಯ್ಯಣ್ಣ ಹೋಗಿ ಗುಡೇಕೋಟೆ ಬಳಿ ಇರುವ ಶರಣರ(ಚಕ್ಕಬಂಡೆ) ಗುಡ್ಡ ಸೇರಿಕೊಳ್ಳುತ್ತಾನೆ. ತನ್ನ ತಾಯಿಯಾದ ಗಡಾಲಗಂಗಿಯ ಗಂಡ ಯಾರೆಂದು ಗೊತ್ತಿಲ್ಲ. ಮುಕ್ತವಾಗಿ ಬದುಕಿದಳೇ ಇಲ್ಲವೆ ಗಂಡಿನ ಕ್ರೌರ್ಯಕ್ಕೆ ಬಲಿಯಾಗಿರಬೇಕು. ಮುಗ್ಧೆಯಾದ ತನ್ನ ಮಗಳನ್ನು ತಾನಿಲ್ಲದಾಗ ಬೈಯಣ್ಣ ಕರೆದೊಯ್ದಾಗ ಆತನ ಬೆನ್ನಟ್ಟಿ ಆತನನ್ನು ಕೊಲ್ಲುವಷ್ಟು ಆಕೆಗೆ ಕೋಪ ಬರುತ್ತದೆ. ಅಮಾಯಕಳಾದ ಮಗಳು ಆತನ ಪ್ರೀತಿಯ ನಟನೆಗೆ ಮರುಳಾಗಿ ತನ್ನ ಅಸ್ತಿತ್ವ ಕಳೆದುಕೊಳ್ಳುವಳೇನೋ ಎಂಬ ಭಯ ಆಕೆಯನ್ನು ಕಾಡಿರಬಹುದು. ಹೀಗೆ ಅವನನ್ನು ಹಿಂಬಾಲಿಸಿ ಸೋತು ಕೊನೆಯ ಹಂತದಲ್ಲಿ ಶಾಪ ಕೊಡುತ್ತಾಳೆ. ಅದರಂತೆ ಉತ್ತರಕ್ಕೆ ಹೋದವನು ಹಿಂದಿರುಗಿ ಬಂದಿಲ್ಲವೆಂದು ಜನಪದರು ಹೇಳುವರು. ಒಟ್ಟಾರೆ ಹೇಳುವುದಾದರೆ ತಾಯಿ-ಮಗಳು ಇವರು ರಾಕ್ಷಸ ಕುಲದವರಲ್ಲ. ಇವರ ನಿಜರೂಪದ ಸತ್ಯದ ಸಂಗತಿಯನ್ನು ಜನಪದರು ಈ ರೀತಿ ಕತೆ ಕಟ್ಟಿರಬಹುದು. ಇದು ವಾಸ್ತವಕ್ಕೆ ಹತ್ತಿರವಾದುದು. ಆದರೆ ಗಡಾಲಗಂಗಿ ರಾಕ್ಷಸಿ ಅಲ್ಲ ಎನ್ನುವುದು ಇಲ್ಲಿ ಗಮನಿಸುವಂಥದ್ದು. ಬೈಯಣ್ಣನನ್ನು ಬಹುಶಃ ಯಾರಾದರೂ ಸಾಯಿಸಿರಬಹುದು ಅನಿಸುತ್ತದೆ. ಹಾಗಾಗಿ ಆತ ಹಿಂದಿರುಗಿ ಬಂದಿಲ್ಲ. ಹೀಗೆ ಮುಗ್ಧ ಮಗಳು ತಾಯಿ ಅವನತಿ ಹೊಂದುತ್ತಿರುವುದು, ಕೊನೆಗೆ ಶಾಪ ಹಾಕುವುದು ನಾಶವಾಗಲೆಂದು ಅಸಹಾಯಕ ಹೆಣ್ಣು ತನ್ನ ಪ್ರಯತ್ನ ವಿಫಲವಾದಾಗ ಕೊನೆಯ ಅಸ್ತ್ರವಾಗಿ ಇದನ್ನು ಬಳಸಲು ನೊಂದ ಧ್ವನಿ. ಈಕೆ ಇವರಿಗೆ ರಾಕ್ಷಸಿಯಂತೆ ಕಂಡುಬರುತ್ತಿದ್ದಾಳೆ. ಮಗಳ ಮೇಲಿನ ಪ್ರೀತಿ ಅವಳ ಬದುಕು ದುಷ್ಟನಿಂದ ಹಾಳಾಗಬಾರದೆಂದು ಪ್ರತಿಯೊಬ್ಬ ತಾಯಿಯ ಕನಸು ಕೂಡ ಆಗಿರುವುದು ಇಲ್ಲಿ ವ್ಯಕ್ತವಾಗುತ್ತದೆ.

**ಗರೀಬ್‌ಸಾಬಿ ಮಠ**

ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆಯಿಂದ ಐದು ಕಿ.ಮೀ. ದೂರದಲ್ಲಿದೆ. ಇದು ಮುಸ್ಲಿಂ ಸಂತನೊಬ್ಬನ ಸಮಾಧಿಯಾಗಿದ್ದು, ಇದನ್ನು ಗರೀಬ್‌ಸಾಬಿ ಮಠ ಎಂದು ಕರೆಯುತ್ತಾರೆ. ಈ ಸಂತ ಯಾರು, ಎಲ್ಲಿಯವರು, ಯಾವಾಗ ಇಲ್ಲಿಗೆ ಬಂದ ಎಂಬ ಖಚಿತ ಮಾಹಿತಿಗಳು ಯಾರಿಗೂ ತಿಳಿದಿಲ್ಲವೆಂದೇ ಹೇಳಬಹುದು. ಈತನ ಸುತ್ತ ಐತಿಹ್ಯಗಳು ಮಾತ್ರ ದೊರೆಯುತ್ತವೆ. ಈ ಪ್ರದೇಶಕ್ಕೆ ಹಿಂದೆ ದೊಡ್ಡೇರಿ ಎಂದು ಕರೆಯುತ್ತಿದ್ದರು. ಈಗ ಹಾಳು ದೊಡ್ಡೇರಿ ಎಂಬ ಐತಿಹಾಸಿಕ ಸ್ಥಳದ ನೆಲೆಯೇ ಆಗಿದೆ. ಹಿಂದೆ ಈ ದೊಡ್ಡೇರಿಯಲ್ಲಿ ನವಾಬರು ಆಳುತ್ತಿದ್ದಾಗ, ಅವರಿಗೆ ಕುದುರೆ ಮುಂತಾದ ಯುದ್ಧ ಸಾಮಗ್ರಿಗಳನ್ನು ಸರಬರಾಜು ಮಾಡುತ್ತಿದ್ದ ಅರಬರ ತಂಡದಲ್ಲಿ ಇವರು ಬಂದಿದ್ದರಂತೆ. ಬಹುಶಃ ಈ ತಂಡದಲ್ಲಿ ಬಂದ ಫಕೀರರು ಇರಬಹುದು.

ಆದರೆ ಐತಿಹ್ಯ ಪ್ರಕಾರ ಇವರು ಪೆನುಗೊಂಡದ ಕಡೆಯಿಂದ ಬಂದರಂತೆ. ಇವರು ಯಾರ ಜೊತೆಯಲ್ಲೂ ಬೆರೆಯದೆ ಸದಾ ಒಬ್ಬಂಟಿಯಾಗಿ ಇರುತ್ತಿದ್ದರಂತೆ. ಹಳ್ಳಕ್ಕೆ ದನ ಕಾಯಲು ಬಂದ ಹುಡುಗರು ಕೀಟಲೆ ಮಾಡಿದರು ಅವರು ಮಿಸುಕುತ್ತಿರಲಿಲ್ಲವಂತೆ. ಕೊನೆಗೆ ಅವರು ಸತ್ತಾಗ ಅಲ್ಲಿಯೇ ಸಮಾಧಿ ಮಾಡಿದರಂತೆ. ಇದನ್ನೇ ಜನ ಗರೀಬ್‌ಸಾಬಿ ಮಠ ಎಂದೂ ಕರೆಯುತ್ತಾರೆ. ಆದರೆ ಇಲ್ಲಿ ಯಾವ ಮಠವೂ ಇಲ್ಲ. ಈ ಸಂತನ ಹೆಸರೇ ಸೂಚಿಸುವಂತೆ ಬಡವನಾಗಿದ್ದ ಸಂತನನ್ನು ಗರೀಬ್‌ಸಾಬಿ ಎಂದೂ ಕರೆದಿರಬಹುದು. ಮೊದಲು ಈತನಿಗೆ ಹಿಂದೂ ಭಕ್ತರೆ ಹೆಚ್ಚು ಇದ್ದಿರಬೇಕೆಂಬುದನ್ನು ಅವರ ಹೆಸರಿನೊಂದಿಗೆ ಬೆರೆತುಕೊಂಡ ಮಠ ಸಂಕೇತಿಸುತ್ತದೆ. ಮೊದಲಿಗೆ ಇದೊಂದು ಬಯಲು ಸಮಾಧಿಯಾಗಿತ್ತು. ಆದರೆ ಇತ್ತೀಚೆಗೆ ಕೆಲವು ಮುಸ್ಲಿಂ ಸಮುದಾಯದವರು ಆಸಕ್ತಿ ವಹಿಸಿ ಗುಂಬಜ್ ನಿರ್ಮಾಣ ಮಾಡಿದ್ದಾರೆ. ವಾರದ ದಿನವಾದ ಶುಕ್ರವಾರ ಅಲ್ಲಿ ನೂರಾರು ಹಿಂದೂ - ಮುಸ್ಲಿಂ ಭಕ್ತರು ಸೇರುತ್ತಾರೆ. ಇಲ್ಲಿ ಮುಕ್ತವಾಗಿ ಮಾಂಸದ ಅಡುಗೆಯನ್ನು ಮಾಡಿರುತ್ತಾರೆ. ಸಾವಿರಾರು ಹಿಂದೂ ಭಕ್ತರು ತಮ್ಮ ಕಷ್ಟ ಪರಿಹಾರಗಳಿಗೆ ಹರಕೆ ಕಟ್ಟಿಕೊಳ್ಳುವ ಸಂಪ್ರದಾಯವಿದೆ. ವರ್ಷಕ್ಕೊಮ್ಮೆ ಇಲ್ಲಿ ಉರುಸ್ ನಡೆಸುವುದು ಸಂಪ್ರದಾಯವಾಗಿದ್ದು, ಒಂದು ದೊಡ್ಡ ಜಾತ್ರೆಯೇ ಆಗುತ್ತದೆ. ಚಳ್ಳಕೆರೆಯ ಫಕೀರರೊಬ್ಬರ ಮನೆಯಿಂದ ಗಂಧ ಬರುವುದರೊಂದಿಗೆ ಈ ಕಾರ್ಯಕ್ರಮ ಪ್ರಾರಂಭವಾಗಿ, ಎರಡನೆಯ ದಿನ ಕವ್ವಾಲಿ ಕಾರ್ಯಕ್ರಮದೊಂದಿಗೆ ಮುಕ್ತಾಯವಾಗುತ್ತದೆ.

ಈ ಮೇಲಿನ ಐತಿಹ್ಯವನ್ನು ಗಮನಿಸಿದಾಗ ಅರಬರ ತಂಡದಲ್ಲಿ ಇವರು ಬಂದರಂತೆ ಜನಪದರು ಹೇಳುವುದನ್ನು ನೋಡಿದರೆ, ಇವರು ಸೂಫಿ ಸಂತರೆಂದು ಹೇಳಬಹುದು. ಸೂಫಿ ಪಂಥ ಮೊದಲು ಅರೇಬಿಯಾದಲ್ಲಿ ಉಗಮವಾಗಿ ಆನಂತರ ಪರ್ಶಿಯಾ, ಇರಾಕ್ ಮೂಲಕ ಭಾರತಕ್ಕೆ ಹರಡಿತು. ಈ ಸೂಫಿ ಸಂತರು ಮೂಲಭೂತವಾದಕ್ಕೆ ವಿರುದ್ಧವಾದ ಆಲೋಚನೆಯನ್ನು ಹೊಂದಿದ್ದು ಉದಾರವಾದ ಸಮಾನತೆಯ ತತ್ವದಲ್ಲಿ ನಂಬಿಕೆಯುಳ್ಳವರಾಗಿದ್ದರು. ಹಾಗಾಗಿ ಅರಬರ ತಂಡದಲ್ಲಿ ಬಂದಿರಬಹುದು. ಇವನು ಹಿಂದೂ-ಮುಸ್ಲಿಂರನ್ನು ಬೆಸೆದು ಭಾವೈಕ್ಯತೆಗೆ ಮಾದರಿಯಾಗಿದ್ದಾನೆ. ಹಾಗಾಗಿ ಈತನ ಸಮಾಧಿಯನ್ನು ಹಿಂದೂ - ಮುಸ್ಲಿಂ ಭಾವೈಕ್ಯತೆಯ ಗರೀಬ್‌ಸಾಬಿ ಮಠ ಎಂದು ಕರೆಯುತ್ತಾರೆ.

**ಚಿಲುಮೆ ಸ್ವಾಮಿ**

ಚಿಲುಮೆ ಸ್ವಾಮಿ (ಗದ್ದುಗೆ) ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿನಲ್ಲಿದೆ. ಇದು ಆಂಧ್ರದ ಗಡಿ ಭಾಗಕ್ಕೂ ಹೊಂದಿಕೊಂಡಿರುವ ನಾಗಗೊಂಡನಹಳ್ಳಿ ಸಮೀಪ ಮೂರು ಕಿ.ಮೀ. ದೂರ ಸಾಗಿದರೆ ಈ ಚಿಲುಮೆ ಸ್ವಾಮಿ ಗದ್ದುಗೆ ಸಿಗುತ್ತದೆ. ಚಿಲುಮೆ ಸ್ವಾಮಿಗಳು ಯಾವ ಕಾಲಮಾನದವರು, ಯಾರು ಎಂದು ತಿಳಿಯುವುದಿಲ್ಲ. ಯಾವ ದಾಖಲೆಗಳು ಇಲ್ಲ. ಆದರೆ ಐತಿಹ್ಯಗಳು ಮಾತ್ರ ಸಾಕಷ್ಟು ಹುಟ್ಟಿಕೊಂಡಿವೆ. ಈತನ ಬಗೆಗೆ ಐತಿಹ್ಯ ಹೀಗಿದೆ. ನೂರಾರು ವರ್ಷಗಳ ಹಿಂದೆ ಸಾಮಾನ್ಯ ಮನುಷ್ಯನೊಬ್ಬ ನಾಗಗೊಂಡನಹಳ್ಳಿ ಸಮೀಪ

ವೇದಾವತಿ ನದಿಯ ದಂಡೆಯ ಮೇಲೆ ಚಿಲುಮೆ ಮಾಡಿಕೊಂಡು ತಪಸ್ಸಿಗೆ ಕೂತನಂತೆ. ಮಳೆ, ಗಾಳಿ, ಬಿಸಿಲು ಎನ್ನದೆ ತಪಸ್ಸು ಮಾಡುತ್ತಿದ್ದಾಗ ಪ್ರವಾಹ ಬಂದು ಹೂತು ಹೋದನಂತೆ. ಹೀಗೆ ದನ ಕುರಿ ಕಾಯುವ ಹುಡುಗರು ಬೇಸಿಗೆ ಕಾಲದಲ್ಲಿ ಕುಡಿಯುವ ನೀರಿಗಾಗಿ ಚಿಲುಮೆ ತೋಡುವಾಗ ಕೂದಲು ಸಿಕ್ಕವಂತೆ. ಆಗ ಇಲ್ಲಿ ತಪಸ್ಸು ಮಾಡುತ್ತಿದ್ದ ವ್ಯಕ್ತಿಯ ಕೂದಲು ಇರಬೇಕು ಎಂದು ಭಾವಿಸಿದರು. ಈ ಹುಡುಗರು ಈ ಸ್ಥಳವನ್ನು ಚಿಲುಮೆ ಸ್ವಾಮಿ ತಪಸ್ಸಿಗೆ ಹೋದ ಸ್ಥಳವನ್ನು ಜೀವೈಕ್ಯ ಆಗಿರಬಹುದು ಎಂದು ಭಾವಿಸಿ ಚಿಲುಮೆ ಸ್ವಾಮಿ ಗದ್ದುಗೆ ಎಂದು ಕರೆದರು. ಹೀಗೆ ಚಿಲುಮೆ ತೋಡಿಕೊಂಡು ಚಿಲುಮೆಯೊಳಗೆ ಸದಾ ಕುಳಿತಕೊಳ್ಳುತ್ತಿದ್ದ ವ್ಯಕ್ತಿಗೆ ಈ ಹೆಸರು ಸಹಜವಾಗಿ ಬಂದಿರಬಹುದು. ಸ್ವಾಮಿ ಎನ್ನುವ ಪದ ಇತ್ತೀಚೆಗೆ ಸೇರಿಕೊಂಡಿರಬಹುದು.

ಇನ್ನೊಂದು ಐತಿಹ್ಯ ಪ್ರಕಾರ ಚಿಲುಮೆ ಸ್ವಾಮಿ ಎಂಬ ಪವಾಡ ಪುರುಷ ತ್ರೇತಾಯುಗದಲ್ಲಿ ತಪಸ್ಸು ಮಾಡುತ್ತಾ ಜೀವ ಸಮಾಧಿಯಾದರು. ನಂತರ ಅವರು ಈ ಕಾಲದಲ್ಲಿ ತಾನು ಬದುಕಲಾರನೆಂದು ಜೀವ ಸಮಾಧಿ ಮಾಡಿಸಿಕೊಂಡರೆಂದು ಜನರು ಹೇಳುತ್ತಾರೆ. ಇದನ್ನು ಸಮರ್ಥಿಸುವಂತೆ ವೇದಾವತಿ ನದಿಯ ದಂಡೆಯ ಮೇಲೆ ಅವರ ಸಮಾಧಿ ಗದ್ದುಗೆ ಇದೆ. ಇವರು ಜನಗಳೊಂದಿಗೆ ಬೆರೆಯುತ್ತಿರಲಿಲ್ಲವಂತೆ. ಹಳ್ಳಿಯ ದನ ಕಾಯುವ ಹುಡುಗರೊಂದಿಗೆ ಯಾವಾಗಾದರೊಮ್ಮೆ ಮಾತನಾಡುತ್ತಿದ್ದರಂತೆ. ಬೇಯಿಸಿದ ಯಾವ ಆಹಾರವನ್ನು ಇವರು ತಿನ್ನುತ್ತಿರಲಿಲ್ಲ. ಏನಿದ್ದರೂ ನೆನೆಯಿಸಿದ ಪದಾರ್ಥಗಳನ್ನು ಮಾತ್ರ ಸೇವಿಸುತ್ತಿದ್ದರಂತೆ. ಪ್ರಸ್ತುತ ಇಲ್ಲಿಗೆ ಬೇಯಿಸಿದ ಆಹಾರವನ್ನು ಗದ್ದುಗೆಯ ಹತ್ತಿರ ತೆಗೆದುಕೊಂಡು ಹೋಗುವುದಿಲ್ಲ. ಏನಿದ್ದರೂ ಈ ಸ್ವಾಮಿಯ ಪೂಜೆಗೆ ನೀರಲ್ಲಿ ನೆನೆಹಾಕಿದ ಕಡಲೆಬೇಳೆ ಕೋಸಂಬರಿಯನ್ನು ಮಾತ್ರ ಇಲ್ಲಿ ಎಡೆಗೆ ಇಡುವುದು ವಾಡಿಕೆಯಾಗಿದೆ. ಇಲ್ಲಿನ ಜನರು ತಲತಲಾಂತರದಿಂದ ಚಿಲುಮೆ ಸ್ವಾಮಿಯನ್ನು ಆರಾಧಿಸುತ್ತಾ ಬರುತ್ತಿದ್ದಾರೆ. ಇಲ್ಲಿ ವರ್ಷಕ್ಕೊಮ್ಮೆ ಜಾತ್ರೆಯಾಗುತ್ತದೆ. ಇಲ್ಲಿ ದನಗಳ ಜಾತ್ರೆ ನಡೆಯುತ್ತದೆ. ಈ ಭಾಗದ ಜನರು ಚಿಲುಮಪ್ಪ, ಚಿಲುಮೇಶಿ ಎಂಬ ಹೆಸರಿನಿಂದ ಗುರುತಿಸಿಕೊಂಡಿದ್ದಾರೆ. ಪ್ರಸ್ತುತ ಸಾವಿರಾರು ಭಕ್ತರು ಇಲ್ಲಿಗೆ ಬಂದು ತಮ್ಮ ಹರಕೆಗಳನ್ನು ತೀರಿಸಿ ಹೋಗುತ್ತಾರೆ. ಪ್ರತಿವರ್ಷ ಇಲ್ಲಿ ನೂರಾರು ಮದುವೆಗಳು ಆಗುತ್ತವೆ, ಜವುಳ ತೆಗೆಸುವುದು ಇತ್ಯಾದಿ ಕಾರ್ಯಕ್ರಮಗಳು ಇಲ್ಲಿ ನೆರವೇರುತ್ತವೆ.

ಈ ಮೇಲಿನ ಐತಿಹ್ಯವನ್ನು ಗಮನಿಸಿದರೆ ಚಿಲುಮೆ ಸ್ವಾಮಿ ಮೂಲತಃ ಒಬ್ಬ ಪಶುಪಾಲಕನೇ ಇರಬೇಕು ಅನಿಸುತ್ತದೆ. ಪಶುಪಾಲಕ ಹುಡುಗರೊಂದಿಗೆ ಮಾತಾಡುತ್ತಿದ್ದನು. ದನಕಾಯುವ ಹುಡುಗರು ಚಿಲುಮೆ ತೋಡುವಾಗ ಕೂದಲು ಸಿಕ್ಕಿತು. ಹೀಗೆ ದನಕಾಯುವ ಒಬ್ಬ ದನಗಾಯಿ ಆಗಿರುವುದು ಸ್ಪಷ್ಟವಾಗಿ ತಿಳಿದುಬರುತ್ತದೆ. ಆದರೆ ಕಾಲಕ್ರಮೇಣ ಚಿಲುಮಪ್ಪನೇ ಶೈವೀಕರಣಗೊಂಡು ಚಿಲುಮೆ ಸ್ವಾಮಿ ಆದಂತೆ ಕಾಣುತ್ತದೆ. ಸ್ವಾಮಿ ಎನ್ನುವುದು ಇತ್ತೀಚೆಗೆ ಸೇರಿಸಿರುವುದು ಎನಿಸುತ್ತದೆ.

**ನಲಟಬ್ಬ (ಸೊನ್ನಲಬ್ಬ)**

ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿನ ಕೆರೆಯಾಗಲಹಳ್ಳಿ(ಶರಣಂಪಲ್ಲಿ) ಸಮೀಪ ಒಂದು ಸಣ್ಣ ಗುಡಿಯಿದ್ದು, ಅದರಲ್ಲಿ ಒಂದು ಸ್ತ್ರೀದೇವತೆಯ ಪ್ರತಿಮೆ ಇದೆ. ಈ ಪ್ರತಿಮೆಯನ್ನು 'ನಲಟಬ್ಬ' ಎಂದು ಕರೆಯುತ್ತಾರೆ. ನಲಟಬ್ಬ ಎಂಬುದು ತೆಲುಗು ಪದ. ಇದರ ಕನ್ನಡ ಪದ ಕಪ್ಪು ಅಜ್ಜಿ ಎಂದು. ಇಲ್ಲಿ ಜನರು ಸೊನ್ನಲಬ್ಬ ಎಂದು ಕರೆಯುವುದು ಸಾಮಾನ್ಯವಾಗಿ ರೂಢಿಯಾಗಿದೆ. ಈ ಪ್ರತಿಮೆಯಲ್ಲಿ ಸ್ತನಗಳು ಎದ್ದು ಕಾಣುವಂತಿದ್ದು, ಹೀಗೆ ಎದ್ದು ಕಾಣುವುದರಿಂದ ಸೊನ್ನಲಬ್ಬ ಎಂದು ಕರೆಯುತ್ತಾರೆ. ಆದರೆ ಈಕೆಯ ಮೂಲ ಹೆಸರು ನಲಟಬ್ಬ ಎಂಬುದಾಗಿದೆ. ಇವಳು ನಾಯಕ ಸಮುದಾಯಕ್ಕೆ ಸೇರಿದವಳು. ಹಾಗಾಗಿ ಅವರ ಭಾಷೆಯಲ್ಲಿ 'ನಲಟಬ್ಬ' ಎನ್ನುವರು. ಈಕೆಯ ಸಂತತಿಯವರು ತಮ್ಮನ್ನು ನಲಟಬ್ಬನವ್ರು ಎಂಬ ಬೆಡಗಿನ ಮೂಲಕ ಗುರುತಿಸಿಕೊಳ್ಳುತ್ತಾರೆ. ಚಳ್ಳಕೆರೆಯ ಕಾಟಪ್ಪನ ಹಟ್ಟಿಯಲ್ಲಿರುವ ಕಾಟಪ್ಪನ ಸಂಬಂಧಿಕಳು ಎಂದು ಹಿರಿಯರು ಹೇಳುತ್ತಾರೆ. ಇವಳು ಕಾಮಗೇತಿ ವಂಶಕ್ಕೆ ಸೇರಿದವಳೆಂದು ಸ್ಪಷ್ಟವಾಗಿ ತಿಳಿಯುತ್ತದೆ. ಇವಳ ಸಂತತಿಯವರು ವರ್ಷಕ್ಕೊಮ್ಮೆ ಈ ಪ್ರತಿಮೆಯ ಬಳಿ ಬಂದು ವಿಶೇಷವಾದ ಪೂಜೆ ಸಲ್ಲಿಸುತ್ತಾರೆ.

ರೆಪ್ಪಲು ಸೂರಿಯ ಮಕ್ಕಳಾದ ದಡ್ಡಿ ಸೂರನಾಯಕ, ದಡ್ಡಿ ಕಾಮನಾಯಕ, ದಡ್ಡಿ ಯರಪಾಲ ನಾಯಕ ತಾವು ಪರಸ್ಪರ ಬೇರೆಯಾಗುವಾಗ ತಮ್ಮ ಪಶುಸಂಪತ್ತನ್ನು, ಆಯುಧಗಳನ್ನು ಹಂಚಿಕೊಳ್ಳುವ ಸಂದರ್ಭದಲ್ಲಿ ಮೂರು ದಿನಗಳ ಕಾಲ ಈ ಕುರಿತು ಪಂಚಾಯಿತಿ ನಡೆಯುತ್ತದೆ. ಹೀಗೆ ಮೂರು ದಿನಗಳ ಕಾಲ ಪಂಚಾಯಿತಿ ನಡೆದು ದೀಪದ ಎಣ್ಣೆ ಮುಗಿಯುತ್ತದೆ. ಈಕೆ ಇದನ್ನು ಗಮನಿಸಿ ತಿಪ್ಪಯ್ಯನ ಕೋಟೆ ಬಳಿ ಗರಣಿ ಹಳ್ಳದ ತಿರುಗುವ ಮಡುವಿನಲ್ಲಿ ಈ ನೀರು ತಂದು ಹಾಕಿ ದೀಪ ಉರಿಸಿದಳು. ಸಮುದಾಯದಲ್ಲಿ ನ್ಯಾಯ ಪಂಚಾಯಿತಿ ಬಗೆಹರಿಯದಿದ್ದಾಗ ತಾನೇ ನಿರ್ಣಯ ಮಾಡಿ ಹಂಚಿದಳು. ಸಭೆಗೆ ಬೆಳಕು ತೋರಿ ಸಂಪತ್ತನ್ನು ಹಂಚಿದಳು. ರೆಪ್ಪಲು ಸೂರಿಯ ಸಂತತಿಯವರು ಅಪರೂಪಕ್ಕೊಮ್ಮೆ ಇಲ್ಲಿ ವಾಸ್ಯೆ ಕೊಯ್ಯುವ(ಬಲಿ) ಸಂಪ್ರದಾಯ ಉಳಿಸಿಕೊಂಡು ಬಂದಿದ್ದಾರೆ. ಮ್ಯಾಸಬೇಡರ ಪೆಟ್ಟಿಗೆ ದೇವರುಗಳು ಆಗಾಗ್ಗೆ ಇಲ್ಲಿ ಬಂದು ಸೇರುತ್ತವೆ. ತಮ್ಮಲ್ಲಿ ಐಕ್ಯಮತ ಕಾಯ್ದುಕೊಳ್ಳುವುದಕ್ಕಾಗಿ ತಾವೆಲ್ಲ ಒಂದೇ ಮೂಲದವರು ಎಂದು ನೆನಪಿಸುವ, ಮತ್ತೆ ಒಂದು ಗೂಡುವ ಸಂಪ್ರದಾಯವಿದು.

**ಜೋಗಪ್ಪನ ಬಂಡೆ**

ಸುಂಕೆಮಲೆ ಬೆಟ್ಟದಲ್ಲಿ ಕವಿಕಾಳಿದಾಸನನ್ನು ಸ್ತುತಿಸುವ ಒಂದು ಶ್ಲೋಕವಿರುವ ಶಾಸನದ ಬಂಡೆಯಿಂದ ಪಶ್ಚಿಮದಲ್ಲಿ ಒಂದು ಕೂಗು ಬಂಡೆಯಿದೆ. ಈ ಬಂಡೆಯ ಎದುರಿಗೆ ನಿಂತು ಕೂಗಿದರೆ ಕೂಗಿದ ಧ್ವನಿ ಅಲೆ ಅಲೆಯಾಗಿ ಪ್ರತಿಧ್ವನಿಸುತ್ತದೆ. ವಿಶೇಷವಾಗಿ ಇಲ್ಲಿ ನಿಂತು ಕೂಗುವವರು ಜೋಗಪ್ಪಾ ಜೋಗಪ್ಪಾ ಎಂದೂ ಕೂಗುತ್ತಾರೆ. ಜೋಗಪ್ಪಾ ಪದ ಬಿಟ್ಟು ಬೇರೆ

ಕೂಗಿದರೆ ಅದು ಅಸ್ಪಷ್ಟವಾಗುತ್ತದೆ ಎಂದು ಸ್ಥಳೀಯರ ಹೇಳಿಕೆ. ಜೋಗಪ್ಪ ಎಂದು ಕೂಗಿದರೆ ಅದು ಮತ್ತೊಮ್ಮೆ ಜೋಗಪ್ಪ ಎಂದು ಪ್ರತಿಧ್ವನಿಸುತ್ತದೆ. ಹಿಂದೆ ಜೋಗಿ ಸಮುದಾಯದವರು ಇಲ್ಲಿ ವಾಸಿಸುತ್ತಿದ್ದರಂತೆ. ಇಲ್ಲಿ ಒಂದು ಮಠ ಇದೆ. ನಾಥಪಂಥ ಪರಂಪರೆಯ ಮಠಗಳಲ್ಲಿ ಇದು ಒಂದು ಎಂದು ಹೇಳುತ್ತಾರೆ. ಜೋಗಿ ಸಮುದಾಯಕ್ಕೆ ಸೇರಿದವರು ವರ್ಷಕ್ಕೊಮ್ಮೆ ಈ ನೆಲೆಗೆ ಬಂದು, ಒಂದು ದಿನ ತಂಗಿ ಪೂಜೆ ಮಾಡಿಕೊಂಡು ಹೋಗುತ್ತಾರೆ. ಇಲ್ಲಿ ಕಿನ್ನರಿ ಜೋಗಿಗಳು ಜೋಗಿ ದೀಕ್ಷೆ ಪಡೆದು ಅಂದಿನಿಂದ ಜೋಗಪ್ಪನ ವೇಷ ಧರಿಸಿ ಧಾರ್ಮಿಕ ಭಿಕ್ಷಾಟನೆಗೆ ಹೋಗುತ್ತಾರೆ. ಸದರಿ ಮಠಕ್ಕೆ ಸೇರಿದ ಕಿನ್ನರಿಜೋಗಿಗಳು ಪ್ರತಿವರ್ಷ ಜಾತ್ರೆಯ ವೇಳೆಗೆ ಮಠಕ್ಕೆ ಕಾಣಿಕೆ ನೀಡುವರು.

**ಚಳ್ಳಕೆರಮ್ಮ**

ಗ್ರಾಮೀಣ ಜೀವನದಲ್ಲಿ ಅನಾದಿಕಾಲದಿಂದಲೂ ಹಾಸುಹೊಕ್ಕಾಗಿ ಬೆರೆತು ಬಂದಿರುವ ಗ್ರಾಮದೇವತೆಗಳು ಜನಪದ ಬದುಕಿನ ಒಂದು ಭಾಗವಾಗಿವೆ. ಇಡೀ ಗ್ರಾಮದ ಐಕ್ಯತೆ ಸಾಮರಸ್ಯದ ಜೀವಾಳ ಈ ಗ್ರಾಮದೇವತೆಯೇ ಆಗಿರುತ್ತದೆ. ಈ ದೇವತೆಗಳು ಗ್ರಾಮೀಣರ ಮಾನಸಿಕ ಅಗತ್ಯವೆನ್ನಬಹುದು. ದೇವತೆಯಿಲ್ಲದೆ ಅವರು ಯಾವುದನ್ನು ಆರಂಭಿಸುವುದಿಲ್ಲ. ಈ ದೇವತೆಗಳನ್ನು ಮಾನವ ತನ್ನ ರಕ್ಷಣೆಗಾಗಿ ನಿರ್ಮಿಸಿಕೊಂಡು ಅವುಗಳಲ್ಲಿ ಚೇತನಶಕ್ತಿ ಹುದುಗಿದೆ ಎಂದು ಕೊಂಡು ಅನಾದಿಕಾಲದಿಂದಲೂ ತುಂಬ ಭಯ-ಭಕ್ತಿಯಿಂದ ನಂಬಿ ಪೂಜಿಸಿದ್ದಾನೆ. ಆ ಮೂಲಕ ನಂಬಿಕೆ ಹುಟ್ಟು ಹಾಕಿ ಅದರ ಆಧಾರದ ಮೇಲೆ ಆಚಾರ-ವಿಚಾರ, ರೂಢಿ-ಸಂಪ್ರದಾಯಗಳ ಗೋಪುರ ಕಟ್ಟಿ ಅಂದಿನಿಂದ ಇಂದಿನವರೆಗೂ ಪ್ರಕೃತಿಯ ನಡುವೆ ಬದುಕಲು ಆರಂಭಿಸಿದ್ದಾನೆ.

'ಚಳ್ಳಕೆರಮ್ಮ' ಚಳ್ಳಕೆರೆಯ ಜನಪದರ ಆರಾಧ್ಯ ದೇವತೆ. ಶತಮಾನಗಳಿಂದಲೂ ಜನಪದರು ಆರಾಧಿಸಿಕೊಂಡು ಬಂದಿದ್ದು, ಇಂದಿಗೂ ಮುಂದುವರೆಸಿಕೊಂಡು ಹೋಗುತ್ತಿದ್ದಾರೆ. ಗ್ರಾಮದ ಐಕ್ಯತೆ, ಸಾಮರಸ್ಯದ ಜೀವಾಳವಾಗಿ ಚಳ್ಳಕೆರಮ್ಮ ಜನಪದರಲ್ಲಿ ಇಂದಿಗೂ ನೆಲೆಸಿರುವಳು. ಗ್ರಾಮೀಣ ಜನಪದರ ರಕ್ಷಣೆ ಮತ್ತು ಜನಪದರ ಚೇತನಶಕ್ತಿಯಾಗಿ ಪಡೆದಿರುವಳು. ಆಧುನಿಕತೆಯಿಂದಾಗಿ ಇಂದೂ ಅನೇಕ ರೂಪಾಂತರಗಳು ಗ್ರಾಮದಲ್ಲಿ ಕಂಡರೂ ಚಳ್ಳಕೆರಮ್ಮನ ಬಗ್ಗೆ ಇರುವ ನಂಬಿಕೆ, ಆಚರಣೆ, ಸಂಪ್ರದಾಯ, ರೂಢಿಗಳು ಚಳ್ಳಕೆರೆಯ ಸುತ್ತಮುತ್ತಲಿನ ಜನಪದರಲ್ಲಿ ಬೇರೂರಿವೆ.

**ಚಳ್ಳಕೆರೆ ಎಂಬ ಹೆಸರು ಬಂದಿದ್ದು**

ಚಳ್ಳಕೆರೆಯಿಂದ ನಾಯಕನಹಟ್ಟಿಗೆ ಹೋಗುವ ಮಾರ್ಗದ ಎಡಬದಿಯಲ್ಲಿ ಕೆರೆಕಲ್ಲುಕೆರೆ ಅನ್ನುವ ಕೆರೆ ಇದೆ. ಈ ಕೆರೆಯ ಸುತ್ತಲೂ ದಟ್ಟವಾಗಿ ಚಳ್ಳೆಹಣ್ಣಿನ ಮರಗಳು ಬೆಳೆದಿರುತ್ತವೆ. ಇದರಿಂದ ಚಳ್ಳೆಹಣ್ಣಿನಕೆರೆ>ಚಳ್ಳಕೆರೆ ಎಂಬ ಹೆಸರು ರೂಢಿಯಾಗಿ ಬಂದಿದೆ. ಜನಪದರ

ಪ್ರಕಾರ ಈ ಕೆರೆಯ ಸಮೀಪ ಚಳ್ಳಕೆರೆಯಮ್ಮ ದೇವತೆಯು ನೆಲೆಸಿದ್ದರಿಂದ ಚಳ್ಳಕೆರೆ ಎಂಬ ಹೆಸರು ಬಂದಿದೆ.

**ಚಳ್ಳಕೆರೆಯಮ್ಮ ದೇವಸ್ಥಾನ**

ಈ ದೇವಸ್ಥಾನವು ಚಳ್ಳಕೆರೆ ಪಟ್ಟಣದಲ್ಲಿದ್ದು, ಶ್ರೀರಂಗಪಟ್ಟಣ-ಬೀದರ್ ರಾಜ್ಯ ಹೆದ್ದಾರಿಯನ್ನು ಹೊಂದಿಕೊಂಡಿದೆ. ಈ ದೇವತೆ ಮೂಲ ಚಿತ್ರದುರ್ಗ ಕೋಟೆಯೊಳಗೆ ಇದ್ದಿತೆಂದು, ಇಲ್ಲಿನ ಸ್ಥಳೀಯರು ಹೇಳುತ್ತಾರೆ. ಈಕೆ ಪಾಳೆಯಗಾರರ ಮನೆದೇವತೆಯು ಹೌದು. ಪಾಳೆಯಗಾರರ ಅವನತಿ ನಂತರ ಈ ದೇವತೆಯನ್ನು ಅವರ ವಂಶಸ್ಥರಾದ ದೊಡ್ಡ ಮದಕರಿನಾಯಕನನ್ನು, ತಮ್ಮ ಮನೆ ದೇವತೆಯಾದ ಚಳ್ಳಕೆರೆಯಮ್ಮನನ್ನು ಎತ್ತಿನಗಾಡಿಯ ಮೂಲಕ ದೊಡ್ಡೇರಿಗೆ ತಂದು ಅಲ್ಲಿ ಸ್ವಲ್ಪ ದಿನಗಳ ಕಾಲ ತಂಗಿ ನಂತರ ಚಳ್ಳಕೆರೆಗೆ ತಂದು ಪ್ರತಿಷ್ಠಾಪಿಸಿದರಂತೆ. ಚಳ್ಳಕೆರೆ ಎಂಬ ಹೆಸರು ಈ ದೇವತೆಯ ಹೆಸರಿನಿಂದ ಬಂದಿದೆ ಎಂದು ಹೇಳುತ್ತಾರೆ. ಚಳ್ಳಕೆರೆಯಲ್ಲಿ ಈ ಗ್ರಾಮದೇವತೆಗೆ ಮೂರು ವರ್ಷಕ್ಕೊಮ್ಮೆ ಹಾಗೂ ಐದು ವರ್ಷಕ್ಕೊಮ್ಮೆ ಜಾತ್ರೆ ಆಗುತ್ತದೆ. ಆಕೆಯ ಜಾತ್ರೆಯಲ್ಲಿ ತಾಳಿಭಾಗ್ಯ ಕೊಡುವ ವಿಶಿಷ್ಟ ಸಂಪ್ರದಾಯವಿದೆ. ಈ ಗ್ರಾಮದೇವತೆ ಮೂಲತಃ ಒಬ್ಬ ಬ್ರಾಹ್ಮಣರ ಹೆಣ್ಣುಮಗಳು. ಈಕೆಯ ಸೌಂದರ್ಯಕ್ಕೆ ಮನಸೋತು ಕೆಳಸಮುದಾಯದವನೊಬ್ಬ ಸುಳ್ಳು ಹೇಳಿ ಮದುವೆಯಾಗಿ ಸಂಸಾರ ಮಾಡುತ್ತಾನೆ. ಹೆತ್ತ ಮಗನನ್ನು ಹುಡುಕುತ್ತ ಬಂದ ತಾಯಿಯಿಂದ, ಸಮುದಾಯ ತಿಳಿದು ಹತಾಶಳಾದ ಹೆಣ್ಣು, ತನಗೆ ಮೋಸ ಮಾಡಿ ಮದುವೆಯಾದ ಗಂಡನನ್ನು ಕೋಣನ ರೂಪದಲ್ಲಿ ಬಲಿ ತೆಗೆದುಕೊಳ್ಳುತ್ತಾಳೆ. ಕಳೆದ ವರ್ಷದ ಜಾತ್ರೆಯಲ್ಲಿ ಹಾಕಿದ್ದ ಮಾಂಗಲ್ಯವನ್ನು ತೆಗೆದು ಆಕೆಯನ್ನು ವಿಧವೆ ಮಾಡುತ್ತಾರೆ. ಎರಡನೇ ದಿನ ಕಡಿದ ಕೋಣದಿಂದ ತೆಗೆದ ನೆಣದಿಂದ ದೇವಿಯ ಎದುರಿನ ದೃಷ್ಟಿ ಕಂಬದ ಬಳಿ ಕೋಣದ ತಲೆಯ ಮೇಲೆ ದೀಪ ಹಚ್ಚಿ ರಾತ್ರಿಯೆಲ್ಲ ಉರಿಸುತ್ತಾರೆ. ಇದರಿಂದ ಆಕೆಗೆ ತನ್ನ ಗಂಡನನ್ನು ಶಿಕ್ಷಿಸಿದ ಸಂತೃಪ್ತಿ ಸಿಗುತ್ತದೆ ಎಂಬ ನಂಬಿಕೆ ಇದೆ. ಅವಳಿಗೆ ತಾಳಿ ಧಾರಣೆ ಆಗುತ್ತದೆ. ಆಗ ಸುಮಂಗಲಿಯಾಗುತ್ತಾಳೆ. ಈ ತಾಳಿಯನ್ನು ಪಾಳೆಯಗಾರರು ತಮ್ಮ ಮನೆದೇವತೆ ಮತ್ತು ಮನೆಯ ಮಗಳು ಎಂಬ ಭಾವನೆಯಿಂದ ಕೊಡುತ್ತಾರೆ. ಪ್ರತಿವರ್ಷ ದುರ್ಗದ ಪಾಳೆಯಗಾರರ ವಂಶಸ್ಥರು ನಿರ್ವಹಿಸಿಕೊಂಡು ಬರುತ್ತಿದ್ದಾರೆ.

ಜನಪದರು ಮತ್ತೊಂದು ಕಥೆಯನ್ನು ಚಳ್ಳಕೆರಮ್ಮನ ಕುರಿತು ಹೇಳುವರು. ಚಳ್ಳಕೆರೆಯಮ್ಮನ ಮೂಲ ದೊಡ್ಡೇರಿ. ಅಲ್ಲಿಂದ ಚಳ್ಳಕೆರೆಗೆ ಆಗಮಿಸಿ ಚಳ್ಳಕೆರೆಯಮ್ಮನಾಗಿ ಪ್ರಸಿದ್ಧಿ ಪಡೆದಿರುವ ಈಕೆಯ ಇತಿಹಾಸವನ್ನು ಕೆದಕಿದರೆ ಜನಪದ ಕತೆಗಳು ಲಭ್ಯವಾಗುತ್ತವೆ. ಬುಡಕಟ್ಟು ಸಮುದಾಯದ ಕಾಟಪ್ಪನಿಗೆ ಚಳ್ಳಕೆರೆಯಮ್ಮ ತಂಗಿಯಾಗಬೇಕು. ಇರುವ ತಂಗಿಯರಲ್ಲಿ ಈಕೆಯನ್ನು ಅತ್ಯಂತ ಪ್ರೀತಿಯಿಂದ ಅಣ್ಣ ನೋಡಿಕೊಳ್ಳುತ್ತಿದ್ದ. ದೊಡ್ಡೇರಿಯಿಂದ ಚಳ್ಳಕೆರೆಗೆ ನಡೆದು ಬರುವಾಗ ದಾರಿ ಮಧ್ಯದಲ್ಲಿ ಬಾಯಾರಿಕೆ ನೀಗಿಸಿಕೊಳ್ಳಲು ಹಳ್ಳವೊಂದಕ್ಕೆ ಇಳಿಯುವಳು. ಅಲ್ಲಿ ಈಚಲು

ಮರಕ್ಕೆ ಕಟ್ಟಿದ ಕುಂಬದಲ್ಲಿನ ಹೆಂಡವನ್ನು ನೀರೆಂದು ಕುಡಿದಳು. ಇದನ್ನು ನೋಡಿದ ಅಣ್ಣ ಕಾಟಪ್ಪ ತನ್ನ ತಂಗಿಯ ಮೇಲೆ ಕೋಪಗೊಂಡು ಅರ್ಧ ದಾರಿಯಲ್ಲಿ ತಂಗಿಯನ್ನು ಬಿಟ್ಟು ಬರುತ್ತಾನೆ.

ಸಂಸ್ಕಾರ ಹೊಂದಿದ ಕುಟುಂಬದ ಹೆಣ್ಣುಮಗಳು ಹೆಂಡ ಕುಡಿದಳಲ್ಲಾ! ಎಂಬ ಬೇಸರದಿಂದ ಚಳ್ಳಕೆರೆಯ ಕಾಟಪ್ಪನ ಹಟ್ಟಿಗೆ ಬಂದ ಅಣ್ಣ, ತಂಗಿಯನ್ನು ಮರೆತು ಬಿಡಬೇಕು ಎಂದು ನಿರ್ಧರಿಸುತ್ತಾನೆ. ಅಣ್ಣನ ಹಿಂದೆಯೇ ಧಾವಿಸಿದ ಚಳ್ಳಕೆರೆಯಮ್ಮ ಮನೆಗೆ ಹೋಗದೆ ತನ್ನ ತಂಗಿ ಬಿಡಾರದಮ್ಮ ಇದ್ದ ಸ್ಥಳಕ್ಕೆ ಹೋಗಿ ನೆಲೆಯೂರುತ್ತಾಳೆ ಎಂದು ಹಿರಿಯರು ಹೇಳುತ್ತಾರೆ.

ಚಳ್ಳಕೆರೆಯಮ್ಮ, ಬಿಡಾರದಮ್ಮ, ಓರಗಲ್ಲಮ್ಮ ಈ ಮೂರು ಜನ ಅಕ್ಕ-ತಂಗಿಯರು. ಚಳ್ಳಕೆರೆಯಮ್ಮ ಮತ್ತು ಬಿಡಾರದಮ್ಮ ಒಂದೇ ಗುಡಿಯೊಳಗೆ ಅಕ್ಕಪಕ್ಕದಲ್ಲಿ ಕುಳಿತು ನಿತ್ಯವು ಅಪಾರ ಭಕ್ತ ಸಮೂಹದಿಂದ ಪೂಜಿಸಲ್ಪಡುತ್ತಾರೆ. ಇಬ್ಬರು ಹೆಣ್ಣು ದೇವತೆಗಳು ಒಂದೇ ಗರ್ಭಗುಡಿಯಲ್ಲಿದ್ದು ತಮ್ಮದೇ ಆದ ಶಕ್ತಿಯನ್ನು ಹೊಂದಿದ್ದಾರೆ. ಸ್ತ್ರೀಯರ ಇಷ್ಟಾರ್ಥಗಳನ್ನು ಪೂರೈಸುವ ಮಾತೆಯಾಗಿ ಚಳ್ಳಕೆರೆಯಮ್ಮ ಈ ಭಾಗದ ಜನರಲ್ಲಿ ಅನೇಕ ಭರವಸೆಗಳನ್ನು ಮೂಡಿಸಿದ್ದಾಳೆ.

ಐತಿಹ್ಯ ಪ್ರಕಾರ ಚಳ್ಳಕೆರಮ್ಮ, ಬಿಡಾರದಮ್ಮ, ಓರಗಲ್ಲಮ್ಮ ಈ ಮೂರು ಜನ ಅಕ್ಕ-ತಂಗಿಯರು ಅನ್ಯೋನ್ಯವಾಗಿದ್ದರು. ಬಿಡಾರದಮ್ಮನಿಗೆ ಕಂಕಣ ಭಾಗ್ಯ ಕೂಡಿ ಬರಲಿಲ್ಲ. ಚಳ್ಳಕೆರೆಯಮ್ಮ ಲಗ್ನವಾಗಿದ್ದಳು. ಸಂತಾನ ಭಾಗ್ಯ ಇರಲಿಲ್ಲ. ಓರಗಲ್ಲಮ್ಮನಿಗೆ ಮಾತ್ರ ಮನೆ ತುಂಬಾ ಮಕ್ಕಳಿದ್ದರು ಎಂಬ ಜನಪದ ಕತೆ ಹೆಣ್ಣು ದೇವತೆಗಳ ಚಾರಿತ್ರಿಕತೆಯನ್ನು ತೆರೆದಿಡುತ್ತದೆ. ಚಳ್ಳಕೆರೆಯಮ್ಮ ಮತ್ತು ಬಿಡಾರದಮ್ಮ, ತನ್ನ ತಂಗಿಯಾದ ಓರಗಲ್ಲಮ್ಮನ ಮಕ್ಕಳನ್ನು ನೋಡಲು ಮನೆಗೆ ಹೋದಾಗ ತನ್ನ ಅಕ್ಕಂದಿರು ಮಕ್ಕಳಾಗದ ಬಂಜೆಯರು ಇಂಥವರು ನನ್ನ ಮಕ್ಕಳನ್ನು ನೋಡಬಾರದೆಂದು ದೊಡ್ಡ ಪುಟ್ಟಿ(ಜಲ್ಲೆ)ಯಲ್ಲಿ ಬಚ್ಚಿಡುತ್ತಾಳೆ. ಓರಗಲ್ಲಮ್ಮ ಸತ್ಯವನ್ನು ಅರಿತು, ಚಳ್ಳಕೆರೆಯಮ್ಮ ಮತ್ತು ಬಿಡಾದರಮ್ಮ ಓರಗಲ್ಲಮ್ಮನನ್ನು ಕುರಿತು ನೀನು ಅಕ್ಕಂದಿರಿಗೆ ಸುಳ್ಳು ಹೇಳುತ್ತೀಯಾ, ನಿನ್ನ ಮಕ್ಕಳು ಎಲ್ಲಿದ್ದಾರೋ ಅಲ್ಲೇ ಕಲ್ಲಾಗಲಿ ಎಂಬ ಶಾಪ ನೀಡುತ್ತಾರೆ. ಅಂದೇ ಓರಗಲ್ಲಮ್ಮನ ಮಕ್ಕಳು ಕಲ್ಲಾಗಿ ಬಿಡುತ್ತಾರೆ. ಇಂದಿಗೂ ಅಲ್ಲಿನ ಜನಪದರಲ್ಲಿರುವ ನಂಬಿಕೆಯಾಗಿದೆ. ಪ್ರಸ್ತುತ ಓರಗಲ್ಲಮ್ಮನ ಗುಡಿಯಲ್ಲಿ ಕಲ್ಲುಗಳು ಇರುವುದನ್ನು ಈಗಲೂ ಕಾಣಬಹುದು. ಇದುವರೆಗೂ ಚಳ್ಳಕೆರೆಯಮ್ಮನ ಜಾತ್ರೆ ಬಿಟ್ಟರೆ ಉಳಿದ ದೇವತೆಗಳ ಜಾತ್ರೆ, ಉತ್ಸವಗಳು ನಡೆದಿಲ್ಲ. ವಿಶೇಷವೆಂದರೆ ಒಂದೇ ಗರ್ಭಗುಡಿಯಲ್ಲಿ ಕುಳಿತಿರುವ ಬಿಡಾರದಮ್ಮನಿಗೆ ಹೆಚ್ಚು ಅಲಂಕಾರವನ್ನು ಮಾಡುವಂತಿಲ್ಲ. ಓರಗಲ್ಲಮ್ಮ, ಉಡುಸಲಮ್ಮ ದೇವತೆಗಳನ್ನು ಇಂದಿಗೂ ಅನೇಕ ಭಕ್ತಾದಿಗಳು ಪೂಜಿಸುತ್ತಾದರೂ ಜಾತ್ರೆಗಳನ್ನು ಮಾಡಿದ ಉದಾಹರಣೆಗಳಿಲ್ಲ. ಮೂರು ಮತ್ತು ಐದು ವರ್ಷಗಳಿಗೊಮ್ಮೆ ನಡೆಯುವ ಚಳ್ಳಕೆರಮ್ಮನ ಜಾತ್ರೆ ಈ ಭಾಗದಲ್ಲಿ ಅತ್ಯಂತ ಹೆಚ್ಚು ಪ್ರಸಿದ್ಧ ಪಡೆದಿರುವುದನ್ನು ಕಾಣಬಹುದು.

ಚಳ್ಳಕೆರಮ್ಮ ದೇವಿಗೆ ಕಾಮಗೇತಿಯವರು ಕೈಮುಗಿಯುವುದಿಲ್ಲ. ಬುಡಕಟ್ಟು ನಾಯಕ ಸಮುದಾಯದಲ್ಲಿ ಬರುವ ಕಾಮಗೇತಿ ಬೆಡಗಿನ ಜನರು ಚಳ್ಳಕೆರೆಯಮ್ಮನಿಗೆ ತಲತಲಾಂತರ ದಿಂದಲೂ ಕೈಮುಗಿಯುವುದಿಲ್ಲ. ಇಂತಹ ದೊಡ್ಡ ಜಾತ್ರೆಯಲ್ಲೂ ದೇವಿಯ ದೇಗುಲದ ಕಡೆ ಹೆಜ್ಜೆ ಹಾಕುವುದಿಲ್ಲವೆಂದು, ಇಂತಹ ನಂಬಿಕೆಯೊಂದು ಅನಾದಿಕಾಲದಿಂದಲು ಮುಂದುವರಿದು ಕೊಂಡು ಬಂದಿರುವುದನ್ನು ನೋಡಬಹುದಾಗಿದೆ. ಮೂಲತಃ ಕಾಮಗೇತಿ ಬೆಡಗಿನ ಹೆಣ್ಣು ಮಗಳಾದ ಚಳ್ಳಕೆರೆಯಮ್ಮ ತನ್ನ ಅಣ್ಣ ಕಾಟಪ್ಪನೊಂದಿಗೆ ದೊಡ್ಡೇರಿಯಿಂದ ಬರುವಾಗ ದಾಹ ತಣಿಸಿಕೊಳ್ಳಲು ಈಚಲು ಮರದ ಹೆಂಡವನ್ನು ನೀರೆಂದು ಕುಡಿದದ್ದೆ ಕಾಮಗೇತಿಯವರ ಮನಸ್ಸಿಗೆ ಕಾರಣವಾಗಿದೆ. ಸಂಸ್ಕಾರವಂತರಾಗಿ ಬಾಳುತ್ತಿದ್ದ ಮನೆತನದಲ್ಲಿ ಜನಿಸಿದ ಹೆಣ್ಣುಮಗಳು ಹೆಂಡ ಕುಡಿದಳಲ್ಲ ಎಂಬ ಕಾರಣಕ್ಕೆ ಅಂದಿನಿಂದ ಕಾಮಗೇತಿ ಬೆಡಗಿನ ಈಕೆಯ ಅಣ್ಣತಮ್ಮಂದಿರು ಈಕೆಯನ್ನು ಮರೆತುಬಿಟ್ಟಿದ್ದಾರೆ. ಅಂದಿನಿಂದ ಇಂದಿನವರೆಗೂ ಇಲ್ಲಿನ ಕಾಮಗೇತಿಯರು ಈ ದೇವಿಗೆ ನಮಿಸುವುದಿಲ್ಲ. ಈ ಸಮುದಾಯದಲ್ಲಿ ಈಚಲ ಚಾಪೆಯ ಮೇಲೆ ಕುಳಿತುಕೊಳ್ಳುವುದಿಲ್ಲ ಮತ್ತು ಮಲಗುವುದಿಲ್ಲ ಎಂಬ ಸತ್ಯಾಂಶ ತಿಳಿದುಬರುತ್ತದೆ.

**ಆಚರಣೆಗಳು:-** ಬುಡಕಟ್ಟು ಸಾಂಸ್ಕೃತಿಕ ಪರಂಪರೆಯ ಚಾರಿತ್ರಿಕ ಹಿನ್ನೆಲೆ ಇರುವುದರಿಂದ ಸಹಜವಾಗಿಯೇ ಜಾತ್ರೆಯಲ್ಲಿ ಪಾರಂಪರಿಕ ಆಚರಣೆಗಳು, ನಂಬಿಕೆಗಳು ತನ್ನದೇ ಆದ ವಿಶಿಷ್ಟತೆಯನ್ನು ಪಡೆಯುತ್ತಾ ಇಂದಿಗೂ ಮುಂದುವರಿಯುತ್ತಿರುವುದು ಕಂಡುಬರುತ್ತದೆ.

೧. ವಿಶಿಷ್ಟ ಹರಕೆ

೨. ತಾಳಿಭಾಗ್ಯ ಸಂಪ್ರದಾಯ

೩. ಸಿಡಿ, ಗಾವು

ಚಳ್ಳಕೆರೆಯಮ್ಮ ಜಾತ್ರೆ ಮೂರು ವರ್ಷ ಹಾಗೂ ಐದು ವರ್ಷಕ್ಕೊಮ್ಮೆ ಮಾರ್ಚ್ ತಿಂಗಳಲ್ಲಿ ನಡೆಯುತ್ತದೆ. ಚಿತ್ರದುರ್ಗ ಮದಕರಿನಾಯಕರ ವಂಶಕ್ಕೆ ಸೇರಿದ ವೀರಭದ್ರನಾಯಕರ ಮನೆತನದವರು ಇಂದಿಗೂ ಈ ದೇವಿಯ ಜಾತ್ರೆಯಲ್ಲಿ ತಾಳಿಭಾಗ್ಯ ಕೊಡುವ ಸಂಪ್ರದಾಯವನ್ನು ಪಾಲಿಸಿಕೊಂಡು ಬರುತ್ತಿರುವುದು ನಡೆದುಕೊಂಡು ಬಂದಿದೆ. ಮಹಿಳೆಯರು ತಮ್ಮ ಇಷ್ಟಾರ್ಥಗಳನ್ನು ನೇರವೇರಿಸಿಕೊಳ್ಳಲು ಹಲವು ಹರಕೆಗಳನ್ನು ಮಾಡಿಕೊಳ್ಳುತ್ತಾರೆ. ಇದರಲ್ಲಿ ಹಸಿರು ಬಳೆಗಳನ್ನು ಅರ್ಪಿಸುವುದು ವಿಶೇಷ. ಇಂದಿಗೂ ಪ್ರತಿ ಮಂಗಳವಾರ ಹಾಗೂ ಶುಕ್ರವಾರ ದೇವಿಗೆ ವಿಶೇಷ ಪೂಜೆ ನಡೆಯುತ್ತದೆ. ಕುಂಕುಮಾರ್ಚನೆ ಮಾಡಿಸುವುದು, ಉಡಿಗೆ ಸೀರೆ ಉಡಿಸುವುದು, ಎಲೆಪೂಜೆ ಕಟ್ಟಿಸುವುದು, ಉಡಿ ಅಕ್ಕಿ ನೀಡುವ ಸಂಪ್ರದಾಯಗಳು ಹಿಂದಿನಿಂದಲೂ ನಡೆದುಕೊಂಡು ಬಂದಿವೆ. ಪಟ್ಟಣದಲ್ಲಿರುವ ಕೆಲವು ರಾಜಕಾರಣಿಗಳು, ಅಧಿಕಾರಿಗಳು, ದಿನನಿತ್ಯ ಕೂಲಿ ಮಾಡುವವರು ಚಳ್ಳಕೆರಮ್ಮನಿಗೆ ಬೆಳಗಿನ ದರ್ಶನ ಪಡೆದು ಮುಂದಿನ ಕೆಲಸಕ್ಕೆ ತೆರಳುತ್ತಾರೆ.

ಚಳ್ಳಕೆರಮ್ಮನ ಜಾತ್ರೆ ಆರು ದಿನಗಳ ಕಾಲ ನಡೆಯುತ್ತದೆ. ಈ ಜಾತ್ರೆಯಲ್ಲಿ ಹಿಂದಿನಿಂದಲೂ ನಿರ್ವಹಿಸಿಕೊಂಡು ಬಂದ ಹನ್ನೆರಡು ಸಮುದಾಯಗಳ ಆಯಗಾರರು ತಮ್ಮ ತಮ್ಮ ಕೆಲಸಕಾರ್ಯಗಳನ್ನು ಮುಂದುವರಿಸಿಕೊಂಡು ಬರುತ್ತಿರುವುದು ಕಂಡುಬರುತ್ತದೆ.

ಉದಾಹರಣೆಗೆ : ಈಚಲ ಹೆಂಡ ದೊಡ್ಡೇರಿ ಈಡಿಗರ ಮನೆಯಿಂದ ಜಾತ್ರೆಯ ಸಂದರ್ಭದಲ್ಲಿ ಹೆಂಡವನ್ನು ತಂದು ಚಳ್ಳಕೆರಮ್ಮನಿಗೆ ನೈವೇದ್ಯ ಮಾಡುತ್ತಿರುವುದನ್ನು ಇಂದಿಗೂ ಕಾಣಬಹುದು.

**ಸಾರುವುದು** - ಈ ಜಾತ್ರೆಯು ಸಾರುವಿಕೆಯಿಂದ ಆರಂಭವಾಗುವುದು. ಗ್ರಾಮದೇವತೆಯ ಹಬ್ಬಕ್ಕೆ ಗ್ರಾಮದ ಜನರು ಮಾನಸಿಕ ಮತ್ತು ಆರ್ಥಿಕವಾಗಿ ಸಿದ್ಧಗೊಳಿಸುವ ಆರಂಭದ ಆಚರಣೆ. ಊರಿನ ಪ್ರಮುಖ ಮುಖಂಡರು, ಗೌಡರು, ಆಯಗಾರರು, ಪೂಜಾರಿ ಸೇರಿ ಜಾತ್ರೆಯ ರೂಪುರೇಷೆಗಳ ಬಗ್ಗೆ ಚರ್ಚಿಸುವರು. ೧೫ ದಿನಕ್ಕೆ ಮುಂಚೆ ಸಾರು ಹಾಕುವರು.

### ಗಂಗೆ ಪೂಜೆ

ಜಾತ್ರೆಯ ಮೊದಲ ದಿನ ಗಂಗೆಪೂಜೆ ಕಾರ್ಯ ನಡೆಯುತ್ತದೆ. ಚಳ್ಳಕೆರೆಯಿಂದ ದೊಡ್ಡೇರಿಯ ಗರಣಿಹಳ್ಳಕ್ಕೆ ಹೋಗಿ ಪೂಜೆ ಮುಗಿಸಿಕೊಂಡು ಅಂದೇ ಹಿಂದಿರುಗುತ್ತಾರೆ. ಈ ಗಂಗೆ ಪೂಜೆಗೆ ಹೋಗುವಾಗ ಬರುವಾಗ ಮಹಿಳೆಯರು ಸೋಬಾನೆ ಪದಗಳನ್ನು ಹಾಡುತ್ತಾರೆ.

### ಸಿಡಿ ಆಡುವುದು

ಸಿಡಿ ಆಡುವುದು ಜಾತ್ರೆಯ ಪ್ರಧಾನವಾದ ಆಚರಣೆ. ಸುಮಾರು ಹದಿನೆಂಟು ಅಡಿ ಉದ್ದದ ಸಿಡಿ ಕಂಬಕ್ಕೆ ಹಸಿರು ಮತ್ತು ಹಳದಿ ಬಣ್ಣವನ್ನು ಬಳಿದಿರುತ್ತಾರೆ. ಅದನ್ನು ಜಾತ್ರೆಗಿಂತ ನಾಲ್ಕೈದು ದಿನ ಮುಂಚಿತವಾಗಿ ಸಿಡಿ ಬಂಡಿಗೆ ಕಟ್ಟುತ್ತಾರೆ. ಸಿಡಿ ಉತ್ಸವದಲ್ಲಿನ ಬಂಡಿಗೆ ಬಣ್ಣದ ಹೂ ಹಾಗೂ ಬೇವಿನಸೊಪ್ಪಿನಿಂದ ಶೃಂಗಾರ ಮಾಡುತ್ತಾರೆ. ಬಿಳಿ ಬಟ್ಟೆ ಧರಿಸಿ, ಕಾಲಿಗೆ ಗೆಜ್ಜೆ ಕಟ್ಟಿದ ಹರಿಜನರ ಭಕ್ತನೊಬ್ಬನನ್ನು ಮೊದಲು ಬೆನ್ನಿಗೆ ಹಗ್ಗ ಹಾಕಿ ಸಿಡಿಮರದ ತುದಿಗೆ ಕಟ್ಟುತ್ತಾರೆ. ಸಿಡಿ ಮರವನ್ನು ಕೆಳಕ್ಕೆ, ಮೇಲಕ್ಕೆ ತಿರುಗಿಸಿದಾಗ ಕೈಯಲ್ಲಿ ಬೇವಿನಸೊಪ್ಪು ಹಿಡಿದು ಇನ್ನೊಂದು ಕೈಯಲ್ಲಿ ಭಂಡಾರವನ್ನು ಹಿಡಿದು, ಭಕ್ತರು ಕೈಕಾಲುಗಳನ್ನು ಹಿಂದಕ್ಕೆ ಮುಂದಕ್ಕೆ ಆಡಿಸುತ್ತಾರೆ. ಹೀಗೆ ಎರಡು ಮೂರು ನಿಮಿಷಕ್ಕೆ ಒಂದು ಬಾರಿ ಹರಕೆ ಮಾಡಿಕೊಂಡ ಭಕ್ತರನ್ನು ಸಿಡಿ ಆಡಲು ಅನುವು ಮಾಡಿಕೊಡುತ್ತಾರೆ. ಸುಮಾರು ಎರಡು ಕಿಲೋಮೀಟರ್ ದೂರದವರೆಗೂ ಹದಿನಾರು ಜೊತೆಯ ಎತ್ತುಗಳನ್ನು ಹೂಡಿ, ಸಿಡಿ ಬಂಡಿಯನ್ನು ಸಾಗಿಸುತ್ತಾರೆ. ಸಿಡಿ ಉತ್ಸವದಲ್ಲಿ ಭಜನೆ, ಕೋಲಾಟ, ಸೋಮನ ಕುಣಿತ, ನಂದಿಕೋಲು ಕುಣಿತ, ವಿವಿಧ ಜನಪದ ವಾದ್ಯಗಳೊಂದಿಗೆ ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಮಾಡುತ್ತಾರೆ. ಸಿಡಿ ನೋಡಲು ಸುತ್ತಮುತ್ತಲ ಹಟ್ಟಿಯವರು ಹಾಗೂ ದಾವಣಗೆರೆ, ಚಿತ್ರದುರ್ಗ, ಶಿವಮೊಗ್ಗ, ಪಾವಗಡ, ನೆರೆಯ ರಾಜ್ಯದ ಆಂಧ್ರಪ್ರದೇಶದ ಜನರು ಬರುತ್ತಾರೆ.

**ಬಲಿ**

ಈ ದೇವತೆಗೆ ಬಲಿ ಪ್ರಧಾನ. ದೇವತೆಗೆ ಕೋಣ, ಕುರಿ, ಮೇಕೆ, ಬಲಿಗಳನ್ನು ಕೊಡುವರು. ಪಟ್ಟದ ಕೋಣಕ್ಕೆ ಹೂವಿನಹಾರ, ಕುಂಕುಮ ಹಚ್ಚಿ ಅದರ ಮೈ ತುಂಬಾ ಎಣ್ಣೆ ಸವರಿ ಹೂ, ಹಾರಗಳಿಂದ ಶೃಂಗರಿಸುತ್ತಾರೆ. ನಂತರ ಕೋಣವನ್ನು ನಗರದ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಮಾಡಿ ಆ ದಿನದ ರಾತ್ರಿ ಹನ್ನೆರಡು ಗಂಟೆಗೆ ಊರಿನ ತಳವಾರನ ಕೈಯಿಂದ ಕೋಣವನ್ನು ಬಲಿ ಕೊಡುತ್ತಾರೆ. ನಂತರ ಹೊಟ್ಟೆ ಬಗೆದು ರಕ್ತ ಮತ್ತು ಕಸರು ತೆಗೆದು ಊರಿನ ಸುತ್ತಲು ಚರಗ ಚಲ್ಲುತ್ತಾರೆ. ದೇವಿಯ ಎದುರಿಗೆ ತಲೆಯನ್ನು ಇಟ್ಟು ಬಾಯಿಯೊಳಗೆ ಬಲಗಾಲನ್ನು ಇಡುವರು. ಅದರ ತಲೆಯ ಮೇಲೆ ಅದರ ನೆಣದಿಂದ ದೀಪ ಹಚ್ಚುತ್ತಾರೆ.

**ಹರಕೆ**

ಹೆಣ್ಣು ಮಕ್ಕಳು ಹೆಚ್ಚಾಗಿ ತಮ್ಮ ಇಷ್ಟಾರ್ಥಗಳನ್ನು ನೇರವೇರಿಸಿಕೊಳ್ಳಲು ಹರಕೆಗಳನ್ನು ಹೊರುತ್ತಾರೆ. ದಡಾರ, ಸಿಡುಬು, ಮತ್ತಿತರ ರೋಗರುಜಿನಗಳು, ಮಕ್ಕಳ ಫಲ, ಮದುವೆ, ಉದ್ಯೋಗ ಇನ್ನೂ ಮುಂತಾದವುಗಳಿಗೆ ಹರಕೆ ಮಾಡಿಕೊಳ್ಳುತ್ತಾರೆ. ತಮ್ಮ ಇಷ್ಟಾರ್ಥಗಳು ನೆರವೇರಿದಾಗ, ಭಕ್ತಾದಿಗಳು ಬೇವಿನ ಉಡುಗೆ, ಜವಳ ಕಾರ್ಯ, ಒಪ್ಪತ್ತು, ಉರುಳುಸೇವೆ, ಕಾಣಿಕೆ ಹಾಗೂ ಕುರಿ, ಮೇಕೆ ಬಲಿ ಕೊಡುವುದು, ಗಾವು ಮರಿ ನೀಡುವುದು ಇನ್ನೂ ಮುಂತಾದವುಗಳ ಮೂಲಕ ತಮ್ಮ ತಮ್ಮ ಹರಕೆಗಳನ್ನು ಈ ದೇವತೆಗೆ ತೀರಿಸುತ್ತಾರೆ.

ಕೋಲಾಟ, ಭಜನೆ, ಸೋಮನ ಕುಣಿತ, ನಂದಿಕೋಲು, ಸೋಬಾನೆ, ಬಯಲಾಟ ಇನ್ನೂ ಮುಂತಾದ ಕಲಾ ಪ್ರದರ್ಶನಗಳು ಕಂಡು ಬರುತ್ತವೆ. ಬಾಲಕಿಯರು ಜಾತ್ರೆಯ ಸಂದರ್ಭದಲ್ಲಿ ಚಳ್ಳಕೆರೆಯ ಸುತ್ತಮುತ್ತಲ ಹಟ್ಟಿಗಳಲ್ಲಿ ಕೋಲಾಟ ಆಡುವುದನ್ನು ಕಾಣಬಹುದು.

**ಗಾವು ಜಿಗಿಯುವುದು**

ಈ ಜಾತ್ರೆಯಲ್ಲಿ ಗಾವು ಜಿಗಿಯುವುದು ಒಂದು ವಿಶಿಷ್ಟವಾದ ಆಚರಣೆ. ಒಂದು ಕಪ್ಪು ಬಣ್ಣದ ಹೋತುಮರಿಯನ್ನು ಪೋತರಾಜನು ಹಲ್ಲುಗಳಿಂದ ಸಿಗಿದು ಅದರ ರಕ್ತವನ್ನು ಕುಡಿದು, ಅದರ ಗೋಮಾಳ ಕೊರಳನ್ನು ಹಾಗೂ ಮಾಂಸವನ್ನು ಕಿತ್ತು ತಿನ್ನುವುದೇ ಈ ಆಚರಣೆಯ ಮುಖ್ಯ ಕ್ರಿಯೆ.

ಪೋತುರಾಜನು ನಾಯಕ ಸಮುದಾಯಕ್ಕೆ ಸೇರಿದ್ದು, ಇವರ ಮೂಲ ನೆಲೆ ದಾವಣಗೆರೆ ಜಿಲ್ಲೆಯ ಜಗಲೂರು ತಾಲೂಕಿನ ಆಕನೂರಿನವರು. ಇವರಿಗೆ ವಂಶಪಾರಂಪರ್ಯವಾಗಿ ಬಂದಿರುವ ವೃತ್ತಿಯಾಗಿದ್ದು ಹಿರಿಯರು ವಯಸ್ಸು ಕಳೆಯುತ್ತಲೇ ತಮ್ಮ ಮಕ್ಕಳನ್ನು ಈ ಕಲೆಯಲ್ಲಿ ತಯಾರು ಮಾಡುತ್ತಾರೆ. ಮೂರು ದಿನ ಮುಂಚಿತವಾಗಿ ಗಾವು ಸಿಗಿಯುವ ಪೋತುರಾಜರು ಉಪವಾಸವಿದ್ದು ಮಡಿಯಿಂದ ದೇವತೆಗೆ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಈ ಪೋತುರಾಜರನ್ನು ಪಟ್ಟಣದಲ್ಲಿ ಮೆರವಣಿಗೆ ಮಾಡಿ, ಗಂಗೆ ಪೂಜೆಗೆ ಹೊಳೆಗೆ ಹೋಗಿ ಗಂಗೆ ಪೂಜೆ ಮಾಡಿಕೊಂಡು

ಅಲ್ಲಿಯೇ ವೇಷ ಧರಿಸಿಕೊಂಡು ಸೊಂಟಕ್ಕೆ ಗಂಟೆಯ ಸರದ ಚರ್ಮಪಟ್ಟಿಯನ್ನು ಕಟ್ಟಿ, ಕಾಲಿಗೆ ವಿಶೇಷ ಕಡಗ ತೊಟ್ಟು ಮೈತುಂಬ ಅರಿಶಿಣವನ್ನು ಹಚ್ಚಿಕೊಂಡು, ಮುಖಕ್ಕೆ ಮಾತ್ರ ಹೋತನ ಆಕಾರ ಕಾಣುವ ರೀತಿಯಲ್ಲಿ ಅರಿಶಿಣ-ಕುಂಕುಮವನ್ನು ಬಳಿದುಕೊಳ್ಳುತ್ತಾರೆ. ಉದ್ದನೆಯ ಕೂದಲು ಬೆನ್ನಿನವರೆಗೆ ಇಳಿ ಬಿಟ್ಟು ಮೀಸೆ ತಿರುವುತ್ತಾ, ಚಾಟಿ ಹೆಗಲ ಮೇಲೆ ಹಾಕಿಕೊಂಡು ಉರುಮೆ ವಾದ್ಯದವರೊಂದಿಗೆ ಕುಣಿಯುತ್ತಾ, ಕೇಕೆ ಹಾಕುತ್ತಾ ವೀರನಾಟ್ಯ ಮಾಡುತ್ತಾ, ಎರಡು ಕೈಯಲ್ಲಿರುವ ಚಾವಟಿಗಳನ್ನು ಬೆನ್ನಿಗೆ ಹೊಡೆದುಕೊಳ್ಳುತ್ತಾ ಗಾವು ಮರಿಯನ್ನು ಹೆಗಲ ಮೇಲೆ ಹೊತ್ತುಕೊಂಡು ದೇವಸ್ಥಾನದ ಮುಂಭಾಗಕ್ಕೆ ಬಂದು ಒಂದು ಸುತ್ತು ಪ್ರದಕ್ಷಿಣೆ ಹಾಕಿ, ದೇವತೆಯ ಎದುರುಗಡೆ ನಿಂತು, ದೇವತೆಯ ಅಪ್ಪಣೆ ಕೇಳುತ್ತಾನೆ, ದೇವತೆಯ ಅಪ್ಪಣೆ ಪಡೆದ ಮೇಲೆ ಗ್ರಾಮಸ್ಥರ ಒಪ್ಪಿಗೆಯನ್ನು ಪಡೆಯುತ್ತಾನೆ. ನಂತರ ಅಲ್ಲಿದ್ದವರಿಗೆ ಗಾವು ಗುಂಡಿಯನ್ನು ತೆಗೆಯಲು ಹೇಳುತ್ತಾನೆ. ಮತ್ತೊಮ್ಮೆ ದೇವರನ್ನು ನೆನೆದು ಮೇಕೆಮರಿಯನ್ನು ಮಂತ್ರಿಸಿ ಕೆಲವು ನಿಮಿಷಗಳ ಕಾಲ ನಿಶ್ಯಬ್ಧವಾಗಿ ಮಲಗಿಸುತ್ತಾನೆ. ಆಗ ಅಲ್ಲಿದ್ದ ಭಕ್ತರೆಲ್ಲ ಪೋತುರಾಜನಿಗೆ ಕಾಣಿಕೆ ಕೊಡುತ್ತಾರೆ. ಪೋತುರಾಜನು ಮತ್ತೊಮ್ಮೆ ಕೊಂಡಾಡಿ ಗಾವು ಮರಿಯನ್ನು ಎದೆಗೆ ಅವಚಿಕೊಂಡು ಗಾವು ಸಿಗಿಯಲು ಸಿದ್ಧನಾಗುತ್ತಾನೆ. ಗಾವು ಮರಿಯ ಬಾಯಿಯನ್ನು ತನ್ನ ಹಲ್ಲುಗಳಿಂದಲೇ ಸೀಳುತ್ತಾನೆ. ಸಿಗಿದ ಮಾಂಸದ ತುಂಡುಗಳನ್ನು ಬಟ್ಟೆಯಲ್ಲಿ ಕಟ್ಟಿ ಗುಂಡಿಯಲ್ಲಿ ಮುಚ್ಚುತ್ತಾರೆ. ಉಳಿದ ಪೋತರಾಜರು ವೀರನಾಟ್ಯ ಮಾಡುತ್ತಾ, ಅಬ್ಬರಿಸುತ್ತಾ, ಕೇಕೆ ಹಾಕುತ್ತ ಕುಣಿಯುವರು.

ಹೀಗೆ ಜನಪದರ ಸಂಸ್ಕೃತಿಯಲ್ಲಿ ಬೆರತು ಹೋಗಿರುವ ಚಳ್ಳಕೆರೆಯಮ್ಮನನ್ನು ಬುಡಕಟ್ಟು ಸಮುದಾಯದ ಹೆಣ್ಣುಮಗಳು ಎನ್ನಲಾಗುತ್ತದೆ. ಇಂದಿಗೂ ಬುಡಕಟ್ಟು ಸಾಂಸ್ಕೃತಿಕ ಪರಂಪರೆಯ ಮುಂದುವರಿದ ಭಾಗವಾಗಿ ಇಲ್ಲಿ ನಡೆಯುವ ಉಡಿ ತುಂಬುವ ಕಾರ್ಯ, ಅಮ್ಮನಿಗೆ ಮಾಂಗಲ್ಯಧಾರಣೆ, ಹಿಟ್ಟಿನಾರತಿ, ಉಡಿಗೆ ಸೀರೆ, ಹಸಿರು ಬಳೆ ಅರ್ಪಿಸುವುದು, ಸಿಡಿ ಉತ್ಸವ, ಪೋತರಾಜರ ವೀರನಾಟ್ಯ ಆಚರಣೆಗಳು ಸಾಕ್ಷಿಯಾಗಿ ನಿಲ್ಲುತ್ತವೆ.

### ಏಕನಾಥೇಶ್ವರಿ

ಏಕನಾಥೇಶ್ವರಿ ಚಿತ್ರದುರ್ಗದ ಏಳು ಶಕ್ತಿ ದೇವತೆಗಳಲ್ಲಿ ಒಬ್ಬಳು. ಈ ದೇವತೆಯ ದೇವಸ್ಥಾನವು ದುರ್ಗದ ಕೋಟೆಯೊಳಗಿದೆ. ಮೊದಲು ಈ ಸ್ಥಳದಲ್ಲಿ ಈ ದೇವತೆಯು ಮುಳ್ಳು ಪೊದೆಗಳಲ್ಲಿ ಅಡಗಿದ್ದಳಂತೆ. ಈ ಗುಹಾಂತರ ದೇವಾಲಯದ ಮುಖಮಂಟಪವನ್ನು ಪಾಳೆಯಗಾರರ ಕಾಲದಲ್ಲಿ ನಿರ್ಮಿಸಲಾಗಿದೆ. ಈ ಏಕನಾಥೇಶ್ವರಿಯ ಐತಿಹ್ಯ ಹೀಗಿದೆ. ಒಮ್ಮೆ ಪಾರ್ವತಿಯು ಮಣ್ಣಿನಿಂದ ಮಾಡಿದ ವಿಗ್ರಹವನ್ನು ಕಾವಲಿಟ್ಟು ಸ್ನಾನ ಮಾಡಿಲಿಕ್ಕೆ ಹೋದಳು. ಅದೇ ಸಮಯಕ್ಕೆ ಬಂದ ಶಿವನು ಸ್ನಾನಗೃಹ ಪ್ರವೇಶ ಮಾಡುವಾಗ ಕಾವಲುಗಾರ ಶಿವನನ್ನು ತಡೆಯುತ್ತಾನೆ. ಶಿವನು ಅವನ ತಲೆಯನ್ನು ಉರುಳಿಸಿ ಸ್ನಾನಗೃಹ ಪ್ರವೇಶ ಮಾಡುತ್ತಾನೆ.

ಪಾರ್ವತಿಯು ಶಿವನನ್ನು ನೋಡಿ ನಾಚಿಕೊಂಡು ಭೂಮಿಯೊಳಗೆ ಇಳಿದು ಬಿಟ್ಟಳಂತೆ. ಆಗ ತಲೆ ಮಾತ್ರ ಕಾಣಿಸುತ್ತಿದ್ದಿತಂತೆ. ಆಗ ಶಿವ ಏಕೆ ನಾಚುತಿ ಈಶ್ವರಿ ಎಂದು ತಲೆಯ ಕೂದಲನ್ನು ಹಿಡಿದು ನಿಲ್ಲಿಸಿದನಂತೆ. ಹೀಗೆ ಇಳಿದ ದೇವಿಯು ಏಕನಾಥೇಶ್ವರಿ ಎಂಬ ಹೆಸರಿನಿಂದ ಅಲ್ಲಿಯೇ ಬಂಡೆಯ ಮೇಲೆ ಮೂಡಿದಳಂತೆ. ಏಕೆ ನಾಚುತಿ ಈಶ್ವರಿಯು ಏಕನಾಥೇಶ್ವರಿಯಾದಳು. ಶಿವನು ಕೂಡ ಇಲ್ಲಿಯೇ ಮೂಡಿದನಂತೆ. ಇವರಿಬ್ಬರನ್ನು ಕಾದುಕೊಂಡು ಗಣಪತಿಯು ಆನೆ ರೂಪದ ಬಂಡೆಯಲ್ಲಿ ಉದ್ಭವಿಸಿದನಂತೆ. ಆದರೆ ಪ್ರತಿಭಾ ವ್ಯಕ್ತಿಯೊಬ್ಬನ ಕಲ್ಪನಾ ವಿನ್ಯಾಸದೊಂದಿಗೆ ಏಕೆ ನಾಚುತಿ ಈಶ್ವರಿ ಐತಿಹ್ಯವನ್ನು ಸೃಷ್ಟಿಸಿರಬೇಕು.

**ಧವಳಪ್ಪನ ಗುಡ್ಡ**

ಚಿತ್ರದುರ್ಗ ನಗರದಲ್ಲಿ ಅಂಕಲಿ ಮಠದ ಸಮೀಪ ಛತ್ರಿಯಾಕಾರದ ಎತ್ತರವಾದ ಗುಡ್ಡವಿದೆ. ಆ ಗುಡ್ಡಕ್ಕೆ ಧವಳಪ್ಪನ ಗುಡ್ಡ ಎಂದು ಹೆಸರು. ಫಕ್ಕೀರ ಮತ್ತು ಧವಳಪ್ಪ ಇಬ್ಬರು ಸ್ನೇಹಿತರು. ದಿನಾಲು ಕೋಟೆಯನ್ನು ಸುತ್ತಾಡಿ ರಾತ್ರಿ ಗವಿಯಲ್ಲಿ ಮಲಗುತ್ತಿದ್ದರು. ಒಮ್ಮೆ ಫಕ್ಕೀರನಲ್ಲಿ ಒಂದು ದುಗ್ಗಾಣಿಯನ್ನು ಸಾಲ ಪಡೆದು ಖರ್ಚು ಮಾಡಿರುತ್ತಾನೆ. ಆ ದುಗ್ಗಾಣಿಯನ್ನು ಫಕ್ಕೀರನಿಗೆ ಕೆಲವು ದಿನಗಳ ನಂತರ ಕೊಡುತ್ತೇನೆಂದು ಹೇಳಿ ವರ್ಷಾನುಗಟ್ಟಲೆಯಾದರೂ ದುಗ್ಗಾಣಿ ವಾಪಸ್ಸು ಕೊಡುವುದಿಲ್ಲ. ದಿನೇ ದಿನೇ ಕಳೆದಂತೆ ಧವಳಪ್ಪನಿಗೆ ತನ್ನಲ್ಲೇ ಖಿನ್ನತೆ ಕಾಡಿ ಫಕ್ಕೀರನಿಗೆ ಮುಖ ತೋರಿಸಬಾರದೆಂದು ಮರೆಮಾಚಿ ಎತ್ತರವಾದ ಬೆಟ್ಟದಲ್ಲಿ ಅಡಗಿ ಕುಳಿತನು. ಹೀಗೆ ಕುಳಿತ ಸ್ಥಳವೇ ಧವಳಪ್ಪನ ಗುಡ್ಡವೆಂದು ಹೆಸರು ಪಡೆಯಿತು. ಈಗಲೂ ಈ ಗುಡ್ಡವಿದೆ.

**ಕಣಿವೆ ಮಾರಮ್ಮ**

ಕಣಿವೆ ಮಾರಮ್ಮನ ದೇವಸ್ಥಾನ ಚಿತ್ರದುರ್ಗ ನಗರದ ಪೊಲೀಸ್ ಆವರಣದಲ್ಲಿದೆ. ಈ ಮಾರಮ್ಮನ ಐತಿಹ್ಯ ಹೀಗಿದೆ; ಕಣಿವೆ ಮಾರಮ್ಮನ ಮೂಲ ಗುಡಿ ಕುಂಚಿಗನಾಳ್ ಕಣಿವೆಯಲ್ಲಿದೆ. ಹಿಂದೆ ಈ ಗುಡಿಯಲ್ಲಿ ನಿಧಿ ಇದೆಯೆಂದು ಕಳ್ಳರು ರಾತ್ರಿ ವೇಳೆಯಲ್ಲಿ ವಿಗ್ರಹವನ್ನು ಬಗೆದು, ವಿಗ್ರಹವನ್ನು ಛಿದ್ರ ಛಿದ್ರ ಮಾಡಿ ಎಸೆದು ಹೋಗಿದ್ದರಂತೆ. ಮಾರನೆಯ ದಿನ ಊರಿನ ಗ್ರಾಮಸ್ಥರು ಪೊಲೀಸರಿಗೆ ತಿಳಿಸಿದಾಗ, ಪೊಲೀಸ್ ಸಿಬ್ಬಂದಿ ಬಂದು ಎಲ್ಲವನ್ನು ಪರಿಶೀಲಿಸಿ ಅಲ್ಲಿ ದೊರಕಿರುವ ಅಮ್ಮನ ವಸ್ತುಗಳನ್ನು ತೆಗೆದುಕೊಂಡು ಹೋಗಿ ಠಾಣೆಯ ಒಂದು ಕೋಣೆಗೆ ಹಾಕಿದರು. ಕೆಲವು ದಿನಗಳ ತರುವಾಯ ಠಾಣೆಯಲ್ಲಿ ರಾತ್ರಿ ವೇಳೆಯಲ್ಲಿ ಗೆಜ್ಜೆ ಬಳೆ ಶಬ್ದ ಉಂಟಾಗಿ ಸಿಬ್ಬಂದಿಗೆ ಕಾಡುತ್ತಿದ್ದಳು. ನನ್ನನ್ನು ನೀವು ನಿರ್ಲಕ್ಷಿಸಿ ಮೂಲೆಗೆ ಹಾಕಿದ್ದೀರಿ. ನೀವು ನನ್ನನ್ನು ಪೂಜೆ ಮಾಡಿಲ್ಲ ಎಂದರೆ, ನಿಮ್ಮನ್ನು ನಿದ್ರೆ ಮಾಡಲು ಬಿಡುವುದಿಲ್ಲ ಎಂದಳಂತೆ. ಅದರಂತೆ ಪೊಲೀಸ್ ಠಾಣೆಯ ಆವರಣದಲ್ಲಿ ಸಣ್ಣ ಗುಡಿಯನ್ನು ಕಟ್ಟಿಸಿ ಅಂದಿನಿಂದ ಪೂಜೆ ಮಾಡತೊಡಗಿದರು. ಪ್ರಸ್ತುತ ದೊಡ್ಡ ದೇವಸ್ಥಾನ ನಿರ್ಮಾಣವಾಗಿದೆ. ಈ ಮಾರಮ್ಮ ಅಪಾರ ಭಕ್ತ ಸಮೂಹ ಹೊಂದಿದೆ.

### ತೊಂಡೂರು ರಾಕ್ಷಸಿ

ತೊಂಡೂರು ರಾಕ್ಷಸಿಗೆ ಸಂಬಂಧಿಸಿದ ಐತಿಹ್ಯ ಹೀಗಿದೆ(ಒಮ್ಮೆ ತೊಂಡೂರು ರಾಕ್ಷಸಿ ಕರಿಭಂಟನನ್ನು ಕೊಲ್ಲಲು ಅಟ್ಟಿಸಿಕೊಂಡು ಬಂದಾಗ ಕರಿಭಂಟನು ಹಾಯ್‌ಕಲ್ಲಿನಲ್ಲಿ ಬಚ್ಚಿಟ್ಟುಕೊಂಡನು. ರಾಕ್ಷಸಿ ಅಲ್ಲಿಗೆ ಬಂದು ಊರಿನ ಪ್ರಮುಖರಾದ ಏಳು ಜನ ಗೌಡರಲ್ಲಿ ದೂರು ನೀಡುತ್ತಾಳೆ. ಕರಿಭಂಟ ನನ್ನ ಗಂಡ. ನನ್ನನ್ನು ಬಿಟ್ಟು ಓಡಿ ಬಂದಿದ್ದಾನೆ ಎಂದು ಸುಳ್ಳು ಹೇಳುತ್ತಾಳೆ. ಆದರೆ ಕರಿಭಂಟ ಈಕೆ ನನ್ನ ಹೆಂಡತಿ ಅಲ್ಲವೆಂದು ಹೇಳಿದಾಗ ಗೌಡರು ಹೆಣ್ಣಿನ ಪರವಾಗಿಯೇ ನ್ಯಾಯ ಹೇಳುತ್ತಾರೆ. ನೀನು ಇಲ್ಲಿಯೇ ಕಲ್ಲು ದೇಗುಲದಲ್ಲಿ ಈಕೆಯೊಂದಿಗಿರು, ನಿನ್ನ ಪ್ರಾಣಕ್ಕೆ ಅಪಾಯವಾದರೆ ನಾವು(ಏಳು ಜನ ಗೌಡರು) ನಮ್ಮ ಪ್ರಾಣವನ್ನು ನಿನಗೊಪ್ಪಿಸುತ್ತೇವೆ ಎಂದರು. ಅವರಿಬ್ಬರು ಗುಡಿಯಲ್ಲಿದ್ದಾಗ ರಾತ್ರಿ ರಾಕ್ಷಸಿ ಕರಿಭಂಟನನ್ನು ಕೊಂದು ಬಿಡುತ್ತಾಳೆ. ತರುವಾಯ ಅಲ್ಲಿಂದ ಹೊರಡುತ್ತಾಳೆ. ಇದನ್ನು ಕಂಡ ಜನರು ಊರಿನ ಗೌಡರಿಗೆ ತಿಳಿಸುತ್ತಾರೆ. ಏಳು ಜನ ಗೌಡರು ಬಂದು ಇದನ್ನು ಕಂಡು ಅಲ್ಲಿಯೇ ಪ್ರಾಣಿ ಕಳೆದುಕೊಳ್ಳುತ್ತಾರೆ. ಹೀಗೆ ಏಳು ಗೌಡರು ಮಡಿದಿರುವುದಕ್ಕೆ ಐತಿಹ್ಯಗಳ ಕುರುಹುಗಳಾಗಿ ಸ್ಥಳೀಯರು ಕಲ್ಲುಗಳನ್ನು ತೋರಿಸುತ್ತಾರೆ.

### ನಾಯಕನಹಟ್ಟಿ ತಿಪ್ಪೇಸ್ವಾಮಿ

'ನಾಯಕನಹಟ್ಟಿ' ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿನಲ್ಲಿ ಬರುವ ಒಂದು ಪುಣ್ಯಕ್ಷೇತ್ರ. ತಿಪ್ಪೇಸ್ವಾಮಿ ಎಂಬ ಪವಾಡ ಪುರುಷ ಕರ್ನಾಟಕದ ಹಲವು ಭಾಗಗಳಲ್ಲಿ ಸಂಚರಿಸಿ ನಾಯಕನಹಟ್ಟಿಗೆ ಬಂದು ನೆಲೆಸಿ, ಇಲ್ಲಿಯೇ ಐಕ್ಯನಾದನೆಂದು ತಿಳಿದುಬರುತ್ತದೆ. ಇವನು ಸತ್ತ ನಂತರ ದೈವಕ್ಕೇರಿ ಮಧ್ಯ ಕರ್ನಾಟಕ ಭಾಗದ ಜನಸಮುದಾಯಗಳ ಪ್ರಮುಖ ಆರಾಧ್ಯ ದೈವನಾಗಿದ್ದಾನೆ. ತಿಪ್ಪೇಸ್ವಾಮಿಯನ್ನು ಕುರಿತಂತೆ ಲಿಖಿತ ಆಧಾರಗಳು ಎಲ್ಲಿಯೂ ದೊರೆಯುವುದಿಲ್ಲ. ಆದರೆ ಜನಪದರು ತಮ್ಮ ಪರಂಪರೆಯ ನೆನೆಪುಗಳನ್ನು ಮೌಖಿಕ ರೂಪದಲ್ಲಿ ಉಳಿಸಿಕೊಂಡು ಬಂದಿರುತ್ತಾರೆ. ತಿಪ್ಪೇಸ್ವಾಮಿಯನ್ನು ಕುರಿತ ಐತಿಹ್ಯಗಳು ವಿಪುಲವಾಗಿ ದೊರೆಯುತ್ತವೆ.

### ಬಿಳಿನೀರು ಚಿಲುಮೆ

ಬಿಳಿನೀರು 'ಚಿಲುಮೆ' ಮೊಳಕಾಲ್ಮೂರು ತಾಲೂಕಿನ ಕೊಂಡ್ಲಹಳ್ಳಿ ಗ್ರಾಮದಿಂದ ಮೂರು ಕಿ.ಮೀ. ದೂರದಲ್ಲಿದೆ. ಈ ಬಿಳಿನೀರು ಚಿಲುಮೆಯ ಐತಿಹ್ಯ ಹೀಗಿದೆ. ಒಮ್ಮೆ ತಿಪ್ಪೇಸ್ವಾಮಿ ರಾಯದುರ್ಗದ ಸಮೀಪ ನೆಲೆಸಿದ್ದರಂತೆ. ಫಣಿಯಪ್ಪ ಎಂಬ ವ್ಯಾಪಾರಿಯು ತಿಪ್ಪೇಸ್ವಾಮಿಯ ಮಹಿಮೆಯನ್ನು ನೋಡಿ ಭಕ್ತನಾದನು. ತಿಪ್ಪೇಸ್ವಾಮಿಯನ್ನು ನಾಯಕನಹಟ್ಟಿಗೆ ಬರಲು ಕೇಳಿಕೊಂಡನು. ತಿಪ್ಪೇಸ್ವಾಮಿ ಫಣಿಯಪ್ಪ ಜೊತೆಗೂಡಿ ಕಾಲುನಡಿಗೆಯಲ್ಲಿ ರಾಯದುರ್ಗದಿಂದ ನಾಯಕನಹಟ್ಟಿ ಕಡೆ ಪ್ರಯಾಣ ಬೆಳೆಸಿದರು. ಹೀಗೆ ಬರುವಾಗ ದಾರಿಯ ಮಧ್ಯದಲ್ಲಿ ಹಸಿವು ನೀಗಿಸಿಕೊಳ್ಳಲು ಮುಂದಾಗುತ್ತಾರೆ. ತಂದಿದ್ದ ಬುತ್ತಿಯನ್ನು ಬಿಚ್ಚಿ ಊಟ ಮಾಡುತ್ತಿರುವಾಗ

ನೀರಿಲ್ಲದ್ದನ್ನು ಕಂಡ ತಿಪ್ಪೇಸ್ವಾಮಿ ನೀರು ತರುವಂತೆ ಸ್ನೇಹಿತ ಫಣಿಯಪ್ಪನಿಗೆ ತಿಳಿಸುತ್ತಾನೆ. ಫಣಿಯಪ್ಪ ಸುತ್ತಲು ಹುಡುಕಿದರೂ ನೀರು ಸಿಗಲಿಲ್ಲವೆನ್ನುತ್ತಾನೆ. ತಿಪ್ಪೇಸ್ವಾಮಿ ನೀರು ಅಗತ್ಯವಾಗಿ ಬೇಕಾಗಿರುವುದರಿಂದ ಊಟ ಮಾಡಿದ ಸ್ಥಳದಲ್ಲಿಯೇ ತನ್ನ ಬೆತ್ತದಿಂದ ನೆಲವನ್ನು ಅಗೆದು ಚಿಲುಮೆಯನ್ನು ತೋಡುತ್ತಾನೆ. ಆಗ ನೀರು ಬರುತ್ತದೆ. ಇಬ್ಬರು ದಾಹ ತೀರಿಸಿಕೊಳ್ಳುತ್ತಾರೆ. ಬೆತ್ತದಿಂದ ಅಗೆದ ಚಿಲುಮೆಯ ನೀರು ತೆಂಗಿನಕಾಯಿ ಒಳಗಿನ ಬಿಳಿನೀರಿನಂತಿರುವುದರಿಂದ ಇದಕ್ಕೆ ಬಿಳಿನೀರು ಚಿಲುಮೆ ಎಂದು ಕರೆಯುತ್ತಾರೆ. ಬಹುಶಃ ಇಲ್ಲಿ ಸುಣ್ಣದ ಕಲ್ಲುಗಳಿಂದ ನೀರು ತಿಳಿಯಾಗಿ ಬಿಳಿ ಬಣ್ಣದಿಂದ ಕೂಡಿರಬಹುದು. ಹಾಗಾಗಿ ಎಳನೀರು ತರಹ ಕಂಡುಬರುತ್ತದೆ.

ಈ ಪ್ರದೇಶದ ಸುತ್ತಲೂ ೪೦೦-೬೦೦ ಅಡಿ ಆಳದ ಕೊಳವೆ ಬಾವಿ ಕೊರೆಸಿದರೂ ನೀರು ಸಿಗುತ್ತಿಲ್ಲ. ಆದರೆ ಇಪ್ಪತ್ತು ಅಡಿಯ ಬಾವಿಯಲ್ಲಿ ನೀರು ಬತ್ತಿಲ್ಲದಿರುವುದು ಇದೊಂದು ತಿಪ್ಪೇಸ್ವಾಮಿಯ ಪವಾಡವೇ ಎಂಬಂತೆ ಮಾಡಿದೆ. ಇಲ್ಲಿ ತಿಪ್ಪೇಸ್ವಾಮಿಯ ದೇವಸ್ಥಾನ ನಿರ್ಮಾಣವಾಗಿದೆ. ಪ್ರತಿ ವರ್ಷ ಕಾರ್ತಿಕ ಮಾಸದಲ್ಲಿ ಜಾತ್ರೆಯಾಗುತ್ತದೆ. ಅಪಾರ ಭಕ್ತ ಸಮೂಹವನ್ನು ಹೊಂದಿದೆ. ಇದೊಂದು ಪುಣ್ಯ ಸ್ಥಳವೆಂದು ಹೆಸರು ಪಡೆದಿದೆ.

**ಹೈದರಾಲಿಗೆ ಪುತ್ರ ಸಂತಾನ ಕರುಣಿಸಿದ್ದು**

"೧೭-೧೮ನೇ ಶತಮಾನದಲ್ಲಿ ಹೈದರಾಲಿ ಚಿತ್ರದುರ್ಗ ಸಂಸ್ಥಾನದ ಮೇಲೆ ದಂಡೆತ್ತಿ ಬಂದ. ಹೀಗೆ ಬಂದಂತಹ ಸಮಯದಲ್ಲಿ ಪ್ರಯಾಣ ಮಾಡಿ ದಣಿವಾಗಿರುತ್ತದೆ. ರಾತ್ರಿ ವೇಳೆಯಾಗಿರುವುದರಿಂದ ತಿಪ್ಪೇರುದ್ರಸ್ವಾಮಿ ಗದ್ದುಗೆಯ ಪಕ್ಕ ಬಿಡಾರವನ್ನು ಹೂಡುತ್ತಾನೆ. ಹೀಗೆ ರಾತ್ರಿ ವೇಳೆಯಲ್ಲಿ ಮಲಗಿರುವಾಗ ತಿಪ್ಪೇರುದ್ರಸ್ವಾಮಿ ಹೈದರನ ಕನಸಿನಲ್ಲಿ ಬಂದು ನಿನಗೆ ಒಂದು ಗಂಡು ಸಂತಾನವಾಗುತ್ತದೆ. ತುಂಬಾ ಹೆಸರುವಾಸಿಯಾದ ಮಗು ಹುಟ್ಟುತ್ತಾನೆ ಎಂದು ಹೇಳಿದರು. ಇದನ್ನು ಕೇಳಿ ಹೈದರನಿಗೆ ಆಶ್ಚರ್ಯವಾಗುತ್ತದೆ. ಪುತ್ರ ಸಂತಾನವಿಲ್ಲದ ಹೈದರನಿಗೆ ಈ ಮಾತನ್ನು ಕೇಳಿ ತುಂಬಾ ಸಂತೋಷವಾಗುತ್ತದೆ. ಇದಕ್ಕೆ ಪ್ರತಿಯಾಗಿ ಏನು ಕೊಡಲಿ ಎಂದು ಕೇಳಿದಾಗ ಬಿಡಾರದ ಪಕ್ಕ ಗದ್ದುಗೆಯಿದೆ. ಅಲ್ಲಿ ಒಂದು ಗೋರಿ ಕಟ್ಟಿಸಿ ಕೊಡಿ ಎಂದು ಹೇಳಿದರು. ಸ್ವಲ್ಪ ಸಮಯದ ಬಳಿಕ ಹೈದರನಿಗೆ ಸ್ವಾಮಿ ಹೇಳಿದಂತೆ ಗಂಡು ಮಗು ಹುಟ್ಟಿತು. ಅದರ ನೆನಪಿಗಾಗಿ ಹೊರಮಠದಲ್ಲಿ ಗದ್ದುಗೆಯನ್ನು ಕಟ್ಟಿಸಿದನು. ಹೊರಮಠ ಮುಸ್ಲಿಂ ಶೈಲಿಯಲ್ಲಿದೆ. ಇದು ಸ್ವಾಮಿ ಜೀವ ಸಮಾಧಿ ಮಠವಾಗಿದೆ. ಹೈದರಾಲಿ ಮಗನಿಗೆ 'ತಿಪ್ಪುಸಾಬ್' ಎಂದು ಹೆಸರಿಟ್ಟರು. ಅದು ಬ್ರಿಟಿಷರ ಆಡಳಿತ ಭಾಷೆಯಲ್ಲಿ 'ಟಿಪ್ಪುಸಾಬ್' ಎಂದು ಕರೆಯಲ್ಪಟ್ಟಿತು".[೭]

**ಮಾಡಿದವರಿಗೆ ನೀಡು ಭಿಕ್ಷೆ**

ಹಟ್ಟಿಯ ದೊರೆ ಮಲ್ಲಪ್ಪನಾಯಕನು ಚೌಡಮ್ಮನಹಳ್ಳಿ, ದಾಸರಹಳ್ಳಿ, ತುರುವನೂರ ಕಡೆಯಿಂದ ಹರಿದುಬರುವ ಹಳ್ಳಗಳಿಗೆ ಅಡ್ಡಲಾಗಿ ಓರೇಕೆರೆ ಕಟ್ಟಲು ಆರಂಭಿಸಿದರು. ತಿಪ್ಪೇಸ್ವಾಮಿಯವರು

ಈ ಕೆರೆಯ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದರು. ಕೆರೆ ಕಟ್ಟಿಸುವಾಗ ಕೂಲಿಕಾರರಿಗೆ ಕೆಲಸ ಮುಗಿದ ಸಂಜೆಯ ಹೊತ್ತಿಗೆ ಕೆಲಸ ಮಾಡಿದ ಸ್ಥಳದಲ್ಲಿ ಮರಳಕುಪ್ಪೆಗಳನ್ನು ಮಾಡಿಕೊಳ್ಳಲು ಹೇಳುತ್ತಿದ್ದರಂತೆ. ಆ ಮರಳಿನ ಕುಪ್ಪೆ ಮೇಲೆ ಸ್ವಾಮಿಗಳು ಬೆತ್ತವನ್ನು ಇಟ್ಟು ಮಾಡಿದವರಿಗೆ ನೀಡು ಭಿಕ್ಷೆ ಎಂದು ಮೂರು ಭಾರಿ ಹೇಳುತ್ತಿದ್ದರಂತೆ. ನಂತರ ಕೂಲಿಕಾರರು ಮರಳು ಕೆದಕಿ ನೋಡಿದರೆ ಎಲ್ಲರಿಗೂ ಒಂದೇ ರೀತಿಯ ಹಣ ದೊರೆಯತ್ತಿರಲಿಲ್ಲ. ಅವರವರ ಶ್ರಮಕ್ಕೆ ತಕ್ಕಂತೆ ದೊರೆಯುತ್ತಿತ್ತು. ಗರ್ಭಿಣಿ ಹೆಣ್ಣುಮಕ್ಕಳಿಗೆ ಎರಡು ಪಟ್ಟು ಕೂಲಿ ಸಿಗುತ್ತಿತ್ತು. ಮೈಗಳ್ಳರ ಮರಳ ಕುಪ್ಪೆಯಲ್ಲಿ ಒಂದು ಕಾಸು ಇರುತ್ತಿರಲಿಲ್ಲವಂತೆ. ಹಟ್ಟಿಯ ಸುತ್ತಿನ ಕೆರೆಗಳ ಮಾಗಾಣಿಯಲ್ಲಿ ಬೆಳೆ ಬಂದಾಗ ಬಸಿರಿ ಹೆಂಗಸರಿಗೆ 'ಬಸಿರು ಪಟ್ಟು' ಎಂದು ಅವರು ಮಾಮೂಲಿ ಕೂಲಿಯ ಎರಡು ಪಟ್ಟು ಕೊಡುವ ಸಂಪ್ರದಾಯ ಉಳಿದುಕೊಂಡು ಬಂದಿತ್ತು. ಆದರೆ ಇತ್ತೀಚೆಗೆ ಮಳೆ ಕಾಲಕ್ಕೆ ಸರಿಯಾಗಿ ಬರದೆ ಕೆರೆ ತುಂಬದೆ. ಈ ಕೆರೆಗಳ ಕಾಲುವೆಗಳಿಗೆ ನೀರು ಹರಿಸುವುದು ಸಾಧ್ಯವಾಗುತ್ತಿಲ್ಲ. ಹಾಗಾಗಿ 'ಬಸಿರಿ ಪಟ್ಟು' ಸಂಪ್ರದಾಯ ಕಂಡುಬರುವುದಿಲ್ಲವೆಂದು ಹೇಳಬಹುದು.

### ಸತ್ತ ಎಮ್ಮೆ ಹಾಲು ಕರೆದಿದ್ದು

ಒಂದು ದಿನ ತಿಪ್ಪೇಸ್ವಾಮಿ ಶಿವಪೂಜೆಯನ್ನು ಮುಗಿಸಿಕೊಂಡು ಭೋಜನಕ್ಕೆ ಕುಳಿತ ಸಂದರ್ಭದಲ್ಲಿ ಮಾಳಮ್ಮನಿಗೆ ಕುಡಿಯಲು ಹಾಲನ್ನು ಕೇಳುತ್ತಾನೆ. ಮಾಳಮ್ಮನ ಮನಸ್ಸಿನಲ್ಲಿ ಒಂದು ದಿನ ಹಾಲು ಕೊಟ್ಟರೆ ಪ್ರತಿದಿನವು ಕೇಳುತ್ತಾರೆ ಎಂದು ಯೋಚಿಸಿ ಈ ದಿನ ಎಮ್ಮೆಗೆ ಸಾಯುವ ರೋಗ ಬಂದು ಹಾಲು ಕರೆದಿಲ್ಲವೆಂದು ಹೇಳುತ್ತಾಳೆ. ತಿಪ್ಪೇಸ್ವಾಮಿ ಆಗಲಿ ಬಿಡಿ ಎಂದೂ ಸುಮ್ಮನಾಗುತ್ತಾನೆ. ಮಾಳಮ್ಮನ ಬಾಯಿಯಲ್ಲಿ, 'ಆಡಿದ ಮಾತು ಬೆನ್ನಿಗೆ ಮೂಲವೆಂಬಂತೆ', ಕೊಟ್ಟಿಗೆಯಲ್ಲಿದ್ದ ಎಮ್ಮೆ ಸಾಯುತ್ತದೆ. ಮಾಳಮ್ಮ ತಿಪ್ಪೇಸ್ವಾಮಿಯನ್ನು ಕಂಡು ಸುಳ್ಳು ಹೇಳಿದ್ದನ್ನು ಕ್ಷಮಿಸಿ ಎಂದು ಪರಿತಪಿಸುತ್ತಾಳೆ. ಆಗ ತಿಪ್ಪೇಸ್ವಾಮಿ ಸತ್ತು ಬಿದ್ದಿದ್ದ ಆ ಎಮ್ಮೆಯನ್ನು ಬದುಕಿಸಿ ಹಾಲು ಕರೆಯುತ್ತಾರೆ.

## ೪.೩. ಘಟನಾ ಪ್ರಧಾನ ಐತಿಹ್ಯಗಳು

ಘಟನೆಯನ್ನು ಮುಖ್ಯವಾಗಿಟ್ಟುಕೊಂಡು ಹುಟ್ಟಿಕೊಳ್ಳುವ ಐತಿಹ್ಯಗಳು ಘಟನಾ ಐತಿಹ್ಯ ಗಳಾಗಿರುತ್ತವೆ. ಈ ಐತಿಹ್ಯಗಳಲ್ಲಿ ವ್ಯಕ್ತಿ ಮತ್ತು ಸ್ಥಳಗಳು ಘಟನೆಗೆ ಪೂರಕವಾಗಿ ಮಾತ್ರ ಬರುತ್ತವೆ. ಒಂದು ನಿರ್ದಿಷ್ಟ ಘಟನೆ ಪ್ರಧಾನವಾಗಿರುವುದು, ಸ್ಥಳ ಮತ್ತು ವ್ಯಕ್ತಿಗಳು ಎರಡನೇ ಸ್ಥಾನದಲ್ಲಿರುತ್ತವೆ. ಇಲ್ಲಿ ಘಟನೆಯೇ ಐತಿಹ್ಯದ ಕೇಂದ್ರಬಿಂದು. ಘಟನೆಯು ವ್ಯಕ್ತಿ-ವ್ಯಕ್ತಿಯ ನಡುವೆ ನಡೆದಿರಬಹುದು. ಅದು ಜನರ ಗುಂಪು, ಜನಸಮೂಹವೇ ಇರುತ್ತದೆ.

ಒಂದು ಘಟನೆ ಐತಿಹ್ಯವಾಗಬೇಕಾದರೆ ಸಮಾಜದ ದೃಷ್ಟಿಯಲ್ಲೇ ಅದು ಸಾಕಷ್ಟು ವಿಶಿಷ್ಟ ಅಥವಾ ಮಹತ್ವದ ಘಟನೆಯಾಗಿರಬೇಕಾಗುತ್ತದೆ. ಘಟನಾ ಐತಿಹ್ಯಗಳಲ್ಲಿ ವ್ಯಕ್ತಿಗಿಂತಲೂ ಬಹಳಷ್ಟು ಸಂದರ್ಭಗಳಲ್ಲಿ ಸಮುದಾಯವೇ ಮುಖ್ಯವಾಗಿ ಪಾಲ್ಗೊಳ್ಳುತ್ತದೆ. ಘಟನೆ ಅನ್ನುವಾಗ ಕಣ್ಣಿಗೆ ಕಂಡದ್ದು ಮುಖ್ಯವಾಗುತ್ತದೆ ಎಂದು ಹೇಳಬಹುದು.

## ನುಂಕೇಮಲೆ ಭೈರವ

ನುಂಕೇಮಲೆ ಪ್ರದೇಶವು ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ಸಮೀಪದಲ್ಲಿದೆ. ಈ ಪ್ರದೇಶಕ್ಕೆ ನುಂಕೇಮಲೆ ಎಂಬ ಹೆಸರು ಬರಲು ಕಾರಣ ಹೀಗಿದೆ, ಭೈರವ ಎಂಬ ವ್ಯಕ್ತಿ ಇಲ್ಲಿ ರಾಕ್ಷಸರನ್ನು ಸಂಹಾರ ಮಾಡಿ ನೆಲೆಸಿದನೆಂದು ಐತಿಹ್ಯವಿದೆ. ನುಂಕೇಮಲೆ ಭೈರವ ಎಂಬ ಹೆಸರು ಮೂರು ಜನರ ಹೆಸರನ್ನು ಒಳಗೊಂಡಿದೆ. ಇಲ್ಲಿ ನುಂಕವ್ವ-ಮಲಿಯವ್ವ ಮತ್ತು ಭೈರವ ಈ ಮೂರು ಹೆಸರು ಮೇಳೈಸಿಕೊಂಡು ಈ ಕ್ಷೇತ್ರ ನುಂಕೇಮಲೆ ಭೈರವ ಎಂಬ ಹೆಸರು ಪಡೆದಿದೆ. ಈ ನುಂಕೆಮಲೆ ಭೈರವನ ಐತಿಹ್ಯ ಹೀಗಿದೆ;

ಒಮ್ಮೆ ಭೂಲೋಕದಲ್ಲಿ ರಾಕ್ಷಸರ ಹಾವಳಿ ಹೆಚ್ಚಾದಾಗ ನರಮಾನವರು ಭಯಗೊಂಡು ಶಿವನನ್ನು ಧ್ಯಾನ ಮಾಡಿದರು. ಈ ಸಂದರ್ಭದಲ್ಲಿಯೇ ದೇವತೆಗಳು ಸಹ ಪರಮಾತ್ಮನಲ್ಲಿ ಬೇಡಿಕೊಂಡರು. ಇದನ್ನರಿತ ಶಿವನು ತನ್ನ ಬೆವರಿನಿಂದ ಕಾಲ ಭೈರವನನ್ನು ಕಳುಹಿಸಿದನು. ಇವನ ಸಹಾಯಕ್ಕಾಗಿ ಅಕ್ಕಳಾದ ಕರ್ಪೂರದಮ್ಮನನ್ನು ಭೂಲೋಕಕ್ಕೆ ಕಳುಹಿಸಿದನು. ಭೈರವನು ಕೈಲಾಸದಿಂದ ಕುಮತಿ ಪ್ರದೇಶಕ್ಕೆ ಬಂದನು. ಚಿನ್ನಹಗರಿ ನದಿಯ ದಡದಲ್ಲಿ ತನ್ನ ವಾಸ್ತವ್ಯ ಹೂಡಿ ನೆಲೆನಿಂತನು. ಈ ಪ್ರದೇಶದಲ್ಲಿ ನಡೆಯುವ ಅನ್ಯಾಯವನ್ನು ಸುಧಾರಿಸಲು ದುಷ್ಟರನ್ನು ಶಿಕ್ಷಿಸುತ್ತ ಮಾನವರನ್ನು ರಕ್ಷಣೆ ಮಾಡಲು ಮುಂದಾದನು. ಕಂಪಳದೇವರಹಟ್ಟಿ(ಮೊಳಕಾಲ್ಮೂರು ತಾಲೂಕು) ಸಮೀಪ ಇವನು ನೆಲೆಸಿದ ಅರಮನೆ ಇದೆಯೆಂದು ಸ್ಥಳೀಯರು ತೋರಿಸುತ್ತಾರೆ. ಈ ಅರಮನೆಯಲ್ಲಿ ಶಿವಲಿಂಗವಿದೆ. ಇಲ್ಲಿಯೇ ಎದುರಗಡೆ ಕಟ್ಟೆಯ ಮೇಲೆ ಪಾದಗಳಿವೆ. ಅವನ್ನು ಇವನ ಪಾದಗಳೆಂದು ಜನರು ಪೂಜೆ ಮಾಡುತ್ತಾರೆ.

ಇಲ್ಲಿಂದ ಹೊಸಗುಡ್ಡದ ಕಡೆ ಪ್ರಯಾಣ ಬೆಳೆಸುತ್ತಾನೆ. ಅಲ್ಲಿ ಕಾಟಯ್ಯ ಮತ್ತು ಬೋಸಯ್ಯ ಎಂಬುವವರನ್ನು ಭೇಟಿ ಮಾಡಿ ಸ್ನೇಹ ಬೆಳೆಸುತ್ತಾನೆ. ಇವರು ಬೇಟೆಗಾರಿಕೆಯಲ್ಲಿ ನಿಸ್ಸೀಮರಾಗಿದ್ದರು. ಇವರು ದುಷ್ಟಶಕ್ತಿಗಳನ್ನು ಸೆದೆಬಡಿಯುತ್ತಿದ್ದರು. ಅಲ್ಲಿಂದ ಹಿಂದಿರುಗಿ ಕುಮುತಿ ಪ್ರದೇಶಕ್ಕೆ ಬಂದನು. ಇಲ್ಲಿ ರಾಕ್ಷಸರಿಗೆ ಮತ್ತು ಭೈರವನಿಗೆ ಘೋರ ಯುದ್ಧವಾಗುತ್ತದೆ. ರಾಕ್ಷಸರು ತಪ್ಪಿಸಿಕೊಂಡು ಓಡಿ ಹೋಗುವಾಗ ಅವರ ಕಾಲಿಗೆ ಬಾಣಗಳನ್ನು ಬಿಡುತ್ತಾನೆ. ನಂತರ ಅವರನ್ನು ಸಂಹಾರ ಮಾಡುತ್ತಾನೆ. ಇಲ್ಲಿ ರಾಕ್ಷಸರನ್ನು ಸೆದೆಬಡಿದನೆಂದು ತಿಳಿಸುವ ರಾಕ್ಷಸರ ಕಲ್ಲುಗಳು ಕುಮತಿ ಪ್ರದೇಶದಲ್ಲಿವೆ. ಇವು ಮನುಷ್ಯನಾಕೃತಿಯಲ್ಲಿವೆ. ಕುಮತಿಯಿಂದ ನುಂಕೆಮಲೆ ಪ್ರದೇಶದವರೆಗೆ ದಾರಿಯುದ್ದಕ್ಕೂ ಭೈರವನು ರಾಕ್ಷಸರನ್ನು ಸಂಹಾರ ಮಾಡಿದನೆಂದು ಜನಪದರು ಹೇಳುತ್ತಾರೆ. ಸುಮಾರು ಇಪ್ಪತ್ತು ಕಿಲೋಮೀಟರ್ ಉದ್ದಕ್ಕೂ ಅಲ್ಲಲ್ಲಿ ರಾಕ್ಷಸರೆಂದು ಹೇಳುವ ಕಲ್ಲುಗಳು ಈ ಪ್ರದೇಶದಲ್ಲಿವೆ.

ಭೈರವನು 'ಕುಮತಿ'(ಚಿನ್ನಹಗರಿ ನದಿದಂಡೆ)ಯಲ್ಲಿ ತನ್ನ ವಾಸ್ತವ್ಯ ಹೂಡಿದನು. ಅದರ ಕುರುಹುವಾಗಿ ಕಂಪಳದೇವರಹಟ್ಟಿ ಸಮೀಪ ನುಂಕಪ್ಪನ ದೇವಸ್ಥಾನವಿದೆ. ಕೆಲವರ ಪ್ರಕಾರ

ಇದೇ ಅವನ ಅರಮನೆ ಎನ್ನುತ್ತಾರೆ. ಇಂದಿಗೂ ಈ ಪ್ರದೇಶದಲ್ಲಿ ಹಿಂದೆ ಇವನು ನೆಲೆಸಿದ್ದನೆಂಬುದಕ್ಕೆ ಕುರುಹಾಗಿ ದೇವಸ್ಥಾನ, ವಿಗ್ರಹಗಳು, ಪಾದಗಳು ಇವೆ. ಇಲ್ಲಿಂದ ಪೂರ್ವದಿಕ್ಕಿನ ಕಡೆಯಿರುವ ಮೊಳಕಾಲ್ಮೂರು ಪರಿಸರದ ನುಂಕೆಮಲೆ ಬೆಟ್ಟಗಳು ಆತನಿಗೆ ಘನಘೋರವಾಗಿ ಕಂಡವು. ಉತ್ಸಾಹ ಭರಿತನಾದ ಭೈರವನು ಅಕ್ಕನ ಅಪ್ಪಣೆಯನ್ನು ಪಡೆದು ಈ ಬೆಟ್ಟಕ್ಕೆ ಪ್ರಯಾಣ ಬೆಳೆಸಿದನು. ಮೇಲುಗಿರಿಯಲ್ಲಿ ರಾಕ್ಷಸರು ವಾಸ ಮಾಡುವುದನ್ನು ಗಮನಿಸಿ ತನ್ನ ಕುದುರೆಯೊಂದಿಗೆ ಬೆಟ್ಟವನ್ನು ಹತ್ತಿಸುವನು.

ಹೀಗೆ ಭೈರವನು ಬೆಟ್ಟವನ್ನು ಹತ್ತಿಸುವಾಗ ಮಾರ್ಗ ಮಧ್ಯದಲ್ಲಿ ಕುದುರೆಯ ಲಗಾಮು ಹರಿಯುತ್ತದೆ. ಅದೇ ಸಂದರ್ಭದಲ್ಲಿ ಹರಳಯ್ಯನು ಆ ಬೆಟ್ಟದ ತಪ್ಪಲಿನ ಪ್ರದೇಶದಲ್ಲಿ ಸೌದೆಗಳನ್ನು ಸಂಗ್ರಹಿಸುತ್ತಾನೆ. ಸಂಕಷ್ಟಕ್ಕೆ ಸಿಲುಕಿದ ಭೈರವನನ್ನು ಕಂಡು ಹರಳಯ್ಯ ಸಹಾಯ ಮಾಡಲು ಮುಂದಾಗುತ್ತಾನೆ. ಕುದುರೆಯ ಲಗಾಮು ಹರಿದಾಗ ಕುದುರೆ ಕೆರಳುತ್ತದೆ. ಆಗ ಕುದುರೆಯು ಸಣ್ಣ ಬಂಡೆಯನ್ನು ಕಾಲಿನಿಂದ ಕೆದುರಿ ಎಬ್ಬಿಸುತ್ತದೆ. ಆ ಎಬ್ಬಿಸಿದ ಸ್ಥಳವನ್ನು ಸ್ಥಳೀಯರು ಇದೆ ಕುದುರೆಯ ಹೆಜ್ಜೆ, ಲಗಾಮು ಹರಿದಾಗ ಕುದುರೆ ಆರ್ಭಟ ಮಾಡಿದ ಸ್ಥಳವಿದು ಎಂದು ತೋರಿಸುತ್ತಾರೆ.

ಇಂತಹ ಪರಿಸ್ಥಿತಿಯನ್ನು ಹರಳಯ್ಯ ಮನಗಂಡು ತನ್ನ ಜೀವನವನ್ನು ಲೆಕ್ಕಿಸದೆ, ತನ್ನ ಅಂಗಾಲಿನಿಂದ ನರಗಳನ್ನು ಉಂಗುಟದಿಂದ ಕಿತ್ತು ಕುದುರೆಗೆ ಲಗಾಮನ್ನಾಗಿ ಮಾಡಿಕೊಡುತ್ತಾನೆ. ಭೈರವನು ಹರಳಯ್ಯನ ಸಹಾಯದಿಂದ ಮುಂದೆ ಪ್ರಯಾಣ ಬೆಳೆಸುತ್ತಾನೆ. ಈ ಕ್ಷೇತ್ರ ನಿನ್ನ ಕೈವಶವಾದರೆ ಈ ಹೊಂಡದಲ್ಲಿ ಸಮುದಾಯ ಭೇದವಿಲ್ಲದೆ ನೀರನ್ನು ಬಳಸಬೇಕೆಂದು ಮತ್ತು ಇಲ್ಲಿಗೆ ಬರುವ ಭಕ್ತಾದಿಗಳಿಂದ ಮೊದಲ ಪೂಜೆ ನಿನಗೆ ಸಲ್ಲಬೇಕೆಂದು ಭೈರವನು ಹರಳಯ್ಯನಿಗೆ ಹೇಳುತ್ತಾನೆ. ಅದರಂತೆ ಮುಂದೆ ವಶವಾದಾಗ ಅದನ್ನು ನೆರವೇರಿಸುತ್ತಾನೆ. ಜಾತ್ರೆಯ ಸಂದರ್ಭದಲ್ಲಿ ಸಮುದಾಯ ಭೇದವಿಲ್ಲದೆ ನೀರನ್ನು ಬಳಸುತ್ತಾರೆ ಹಾಗೂ ಹರಳಯ್ಯನಿಗೆ ಈ ಕ್ಷೇತ್ರದಲ್ಲಿ ಮೊದಲು ಪೂಜೆ ಸಲ್ಲುತ್ತದೆ. ಹೀಗೆ ಹರಳಯ್ಯನ ಸಹಾಯದಿಂದ ಭೈರವನು ಮುಂದೆ ಪ್ರಯಾಣ ಬೆಳೆಸಿ ಮೇಲುಗಿರಿಯಲ್ಲಿ ರಾಕ್ಷಸರಿರುವರೆಂದು ತಿಳಿಯುತ್ತದೆ. ರಾಕ್ಷಸರೊಂದಿಗೆ ಯುದ್ಧ ಮಾಡುವಾಗ ಭೈರವನು ಮೂರ್ಛೆ ಹೋಗುತ್ತಾನೆ. ಭೈರವನ ಅಕ್ಕ ತಮ್ಮನು ಬರಲಿಲ್ಲವೆಂದು ಬೇಡರ ಕಾಟಯ್ಯ, ಬೋಸಯ್ಯ ಮತ್ತು ಅವರ ನಾಯಿಗಳೊಂದಿಗೆ ನುಂಕೆಮಲೆ ಬೆಟ್ಟಕ್ಕೆ ಬರುತ್ತಾರೆ. ಅಕ್ಕ ತಮ್ಮನನ್ನು ನೋಡಿ ತನ್ನ ಸೀರೆಯನ್ನು ನೀರಿನಲ್ಲಿ ನೆನೆಸಿ ತಂದು ಭೈರವನನ್ನು ಎಚ್ಚರಗೊಳಿಸುತ್ತಾಳೆ. ನಂತರ ಭೈರವ ಜೋಗಿ ವೇಷವನ್ನು ಧರಿಸಿ ಮರಳಿ ಹೋಗುತ್ತಾನೆ. ಜೋಗಿ ವೇಷ ಧರಿಸಿಕೊಂಡು ತಂಬೂರಿ ಹಿಡಿದುಕೊಂಡು ಭಿಕ್ಷೆಗೆ ರಾಕ್ಷಸರ ನೆಲೆಗೆ ಹೋಗುತ್ತಾನೆ. ಅಲ್ಲಿ ಮಲಿಯಮ್ಮ ಮತ್ತು ನುಂಕವ್ವ ಎಂಬ ಸೇವಕಿಯರು ಇರುತ್ತಾರೆ. ಅವರಲ್ಲಿ ಭೈರವ ಭಿಕ್ಷೆ ಬೇಡುತ್ತಾನೆ. ನಮಗೆ ರಸವೊಂದೇ ಇರುವುದು ಇಲ್ಲಿ ಆಹಾರ ಸಿಗುವುದಿಲ್ಲ. ವಿಷವೊಂದೇ

ನಮಗೆ ಆಹಾರವೆಂದಾಗ, ಭೈರವ ಆ ವಿಷವೇ ಅಮೃತವೆಂದು ಕುಡಿಯಿತೇನೆಂದು ಬೇಡುತ್ತಾನೆ. ಇದು ವಿಷವಲ್ಲ. ಗಿಡಮೂಲಿಕೆಗಳ ರಸ. ಇದು ಅವರಿಗೆ ಆಹಾರ ಇದ್ದಂತೆ. ಭೈರವ ಹೀಗೆ ಅವರಲ್ಲಿದ್ದ ಗಿಡಮೂಲಿಕೆಗಳ ರಸವನ್ನು ಖಾಲಿ ಮಾಡುತ್ತಾನೆ. ಮುಂದೆ ಘೋರವಾದ ರೂಪವನ್ನು ತಾಳಿ ರಾಕ್ಷಸರನ್ನು ಸಂಹಾರ ಮಾಡಲು ಮುಂದಾಗುತ್ತಾನೆ. ಬೇಡರಾದ ಕಾಟಯ್ಯ, ಬೋಸಯ್ಯನವರ ನಾಯಿಗಳ ಸಹಾಯದಿಂದ ರಾಕ್ಷಸರನ್ನು ಸಂಹಾರ ಮಾಡುತ್ತಾನೆ. ಇದನ್ನು ಕಂಡು ನುಂಕವ್ವ ಮಲಿಯವ್ವರು ತಮ್ಮನ್ನು ಸಹ ಬಿಡುವುದಿಲ್ಲವೆಂದು ಬೆಟ್ಟದಿಂದ ಕೆಳಗಿಳಿಯುತ್ತಾರೆ. ಆಗ ಭೈರವನು ಇವರನ್ನು ಕಂಡು ಅವರ ಜುಟ್ಟುಗಳನ್ನು ಹಿಡಿದು ಮೇಲಕ್ಕೆತ್ತಿ ನಿಮ್ಮಿಂದ ನನಗೆ ಉಪಕಾರವಾಯಿತು. ತಮ್ಮಿಂದೇನಾದರೂ ಉಪಕಾರ ಬೇಕೆ ಎಂದಾಗ, ನುಂಕವ್ವ ಮತ್ತು ಮಲಿಯವ್ವ ಇವರೀರ್ವರು ತಮ್ಮ ಕ್ಷೇತ್ರಕ್ಕೆ ನಿಮ್ಮ ಹೆಸರೊಡನೆ ಸೇರಿಸಿ ಇಡಬೇಕೆಂದು ಕೇಳಿಕೊಂಡಾಗ ಈ ಕ್ಷೇತ್ರಕ್ಕೆ ನುಂಕೆ-ಮಲೆ-ಭೈರವ ಎಂಬ ಹೆಸರಿಡಲಾಯಿತು. ಇಂದಿಗೂ ಈತನ ದೇವಸ್ಥಾನದೊಳಗೆ ನುಂಕವ್ವ-ಮಲಿಯವ್ವ ಇವರ ವಿಗ್ರಹಗಳು ಇವೆ.

ಹೀಗೆ ಭೈರವನು ದೈತ್ಯರನ್ನೆಲ್ಲಾ ಸಂಹರಿಸಿ ಪೂರ್ವದಿಕ್ಕಿನೆಡೆಗೆ ಹೋಗಲು ಪ್ರಯತ್ನಿಸುತ್ತಾನೆ. ಆಗ ಕರ್ಪೂರದಮ್ಮ ಇವನಿಗೆ ಏನು ಹೇಳಿದರೂ ಕೇಳುವುದಿಲ್ಲವೆಂದು ತಿಳಿದು ಕೆಳಗಡೆ ಝರಿಯಲ್ಲಿ ಬೆತ್ತಲೆಯಾಗಿ ಸ್ನಾನ ಮಾಡುತ್ತಾಳೆ. ಇದನ್ನು ಗಮನಿಸಿದ ಭೈರವನು ಹಿಂದಕ್ಕೆ ತಿರುಗುತ್ತಾನೆ. ಆಗ ಕರ್ಪೂರದಮ್ಮ ನಿನ್ನ ಅವತಾರಗಳನ್ನು ಇಲ್ಲಿಗೆ ಮುಕ್ತಾಯ ಮಾಡಿ ಇಲ್ಲಿಯೇ ನೆಲೆನಿಲ್ಲಬೇಕೆಂದು ಕೇಳಿಕೊಳ್ಳುತ್ತಾಳೆ. ಆದ್ದರಿಂದ ಭೈರವ ಇಲ್ಲಿಯೇ ಐಕ್ಯನಾಗುತ್ತಾನೆ. ಈತನನ್ನು ನುಂಕಪ್ಪ, ಕಾಲಭೈರವ, ನುಂಕೆಮಲೆ ಸಿದ್ದೇಶ, ಜೋಗಿ ಮುಂತಾದ ಹೆಸರುಗಳಿಂದ ಕರೆಯುತ್ತಾರೆ.

**ಮಲಿಯಮ್ಮ**

ಮಲಿಯಮ್ಮನ ಮೂರ್ತಿ ನುಂಕೇಮಲೆ ಪ್ರದೇಶದಲ್ಲಿದೆ. ಇದು ಏಕಶಿಲಾ ಮೂರ್ತಿಯಾಗಿದೆ. ಇದರ ತಲೆ ಮಾತ್ರ ಭೂಮಿಯ ಹೊರಗಡೆ ಕಾಣುತ್ತದೆ. ಉಳಿದ ಭಾಗ ಭೂಮಿಯೊಳಗೆ ಹೂತಿದೆ. ಭೈರವನು ರಾಕ್ಷಸರನ್ನೆಲ್ಲಾ ಸಂಹಾರ ಮಾಡಿದ ನಂತರ ತಮಗೂ ಉಳಿಗಾಲವಿಲ್ಲವೆಂದು ಭೂಮಾರ್ಗವಾಗಿ ನುಂಕವ್ವ, ಮಲಿಯವ್ವರು ಇಳಿದು ಹೋಗುವ ಸಂದರ್ಭದಲ್ಲಿ ಭೈರವನು ಅವರ ಕೂದಲನ್ನು ಹಿಡಿದು ಮೇಲಕ್ಕೆತ್ತಿದನು ಎಂದು ಇದರ ಸುತ್ತ ಐತಿಹ್ಯವಿದೆ. ಇಲ್ಲಿ ರಾಕ್ಷಸರು ಕಾಡಿನ ಆ ನೆಲದ ವಾರಸುದಾರರಾಗಿ ಕಂಡುಬರುತ್ತಾರೆ. ನುಂಕವ್ವ-ಮಲಿಯವ್ವ ಕೂಡ ಇಲ್ಲಿ ತಳಸಮುದಾಯದ ಕಾಡಿನ ಸಂಸ್ಕೃತಿಗೆ ಸೇರಿದವರು. ಭೈರವನ ಮತ್ತು ಕಾಡಿನ ವಾರಸುದಾರರ ಮಧ್ಯೆ ಇಲ್ಲಿ ಸಂಘರ್ಷ ನಡೆಯುತ್ತದೆ. ಭೈರವನು ರಾಕ್ಷಸರು ತನ್ನ ನೆಲೆಗೆ ತೆರಳಿದಾಗ ಅವರು ಪ್ರತಿರೋಧ ಒಡ್ಡುತ್ತಾನೆ. ತನ್ನ ನೆಲ ಸಂಸ್ಕೃತಿಯನ್ನು ಭೈರವನಿಗೆ ಬಿಟ್ಟುಕೊಡಲು ವಿರೋಧ ಮಾಡುತ್ತಾರೆ. ಭೈರವನು ಅದೇ ಕಾಡಿನ ಜನರೊಂದಿಗೆ ಯುದ್ಧ ಮಾಡಿದಾಗ

ಮೂರ್ಛೆ ತಪ್ಪುತ್ತಾನೆ. ನಂತರ ಜೋಗಿ ವೇಷ ಹಾಕಿಕೊಂಡು ಅವರು ಸಂಗ್ರಹಿಸಿರುವ ಆಹಾರವನ್ನು ನಾಶ ಮಾಡುತ್ತಾನೆ. ಅವರನ್ನು ಸೋಲಿಸಿ ಆ ಪ್ರದೇಶವನ್ನು ವಶಪಡಿಸಿಕೊಳ್ಳಲು ಮತ್ತೆ ಅದೇ ಕಾಡಿನ ಜನರೊಂದಿಗೆ ಸ್ನೇಹ ಬೆಳಸಿ, ಕಾಟಯ್ಯ ಮತ್ತು ಬೋಸಯ್ಯನ ನಾಯಿಗಳ ಸಹಾಯದಿಂದ ರಾಕ್ಷಸರನ್ನು ಸಂಹಾರ ಮಾಡಿದನೆಂದು ಐತಿಹ್ಯ ಹೇಳುತ್ತದೆ.

ಇಲ್ಲಿ ಭೈರವ ಕಾಡಿನ ಸಂಸ್ಕೃತಿಯನ್ನು, ತಳ ಮೂಲದ ಸಂಸ್ಕೃತಿಯನ್ನು ಕೊನೆಗಾಣಿಸುವ ವ್ಯಕ್ತಿಯಾಗಿ ಪ್ರತಿನಿಧಿಸುತ್ತಾನೆ. ನುಂಕವ್ವ-ಮಲಿಯವ್ವ, ಭೈರವನು ಭಿಕ್ಷಗೆಂದು ಬಂದಾಗ ಶೇಖರಿಸಿದ ಗಿಡಮೂಲಿಕೆಗಳ ರಸವನ್ನು ಆಹಾರವಾಗಿ ಕೊಡುತ್ತಾರೆ. ಭೈರವನು ದೋಣಿಯಲ್ಲಿದ್ದ ರಸವನ್ನು ಖಾಲಿ ಮಾಡುತ್ತಾನೆ. ಈ ವಿಷಯ ತಮ್ಮವರಿಗೆ ತಿಳಿದರೆ ನಮ್ಮನ್ನು ಸುಮ್ಮನೆ ಬಿಡುವುದಿಲ್ಲವೆಂದು, ನುಂಕವ್ವ-ಮಲಿಯವ್ವ ಬೆಟ್ಟದಿಂದ ಇಳಿದು ತಮ್ಮ ಪ್ರಾಣವನ್ನು ತ್ಯಾಗ ಮಾಡಿ ಆತ್ಮಾಹುತಿಯಾಗುತ್ತಾರೆ.

**ರಸದೋಣಿ**

ರಸದೋಣಿ ನುಂಕೆಮಲೆ ಕ್ಷೇತ್ರದ ಮೇಲುಗಿರಿಯಲ್ಲಿದೆ. ಇದನ್ನು ರಸದೋಣಿ ಎಂದು ಕರೆಯುತ್ತಾರೆ. ಹಿಂದಿನ ಕಾಲದಲ್ಲಿದ್ದ ರಸಾಸಿದ್ಧರೆಂಬ ರಾಕ್ಷಸರು ಈ ದೋಣಿಯಲ್ಲಿ ವಿಷವನ್ನು ಸಂಗ್ರಹಿಸುತ್ತಿದ್ದರಂತೆ. ಇವರಿಗೆ ವಿಷವೇ ಅಮೃತವಿದ್ದಂತೆ ಅಥವಾ ಆಹಾರವಿದ್ದಂತೆ. ಈ ರಸದೋಣಿಯಲ್ಲಿ ಯಾವಾಗಲೂ ಸಹ ಏಳು ಕೊಪ್ಪರಿಗೆ ವಿಷವನ್ನು ಸಂಗ್ರಹಿಸುತ್ತಿದ್ದರು. ಇದರಲ್ಲಿ ಎಷ್ಟು ವಿಷವಿರುತ್ತದೆಯೋ ಅದು ಅವರಿಗೆ ಅಷ್ಟು ರಕ್ಷಣೆ ನೀಡುತ್ತಿದ್ದಿತಂತೆ. ಬಹುಶಃ ಇದು ವಿಷದ ದೋಣಿ ಅಲ್ಲವೆಂದು ತಿಳಿಯಬಹುದು. ಗಿಡಮೂಲಿಕೆಗಳಿಂದ ತಯಾರಾದ ರಸವನ್ನು ಈ ದೋಣಿಯಲ್ಲಿ ಹಾಕಿ ಶೇಖರಣೆ ಮಾಡುತ್ತಿದ್ದರು. ಈ ಪ್ರದೇಶ ಗಿಡಮೂಲಿಕೆಗಳಿಂದ ತುಂಬಿತ್ತು ಎಂದು ತಿಳಿಯುತ್ತದೆ. ಗಿಡಮೂಲಿಕೆಗಳಿಂದ ತಯಾರಾದ ರಸಾಯನ ಇವರಿಗೆ ಆಹಾರವಿದ್ದಿರಬಹುದು. ಇದನ್ನು ವಿಷವೆಂದು ಆರೋಪಿಸಿರಬಹುದು. ಇಲ್ಲಿ ರಸಾಸಿದ್ಧರು ಮತ್ತು ರಕ್ಕಸರಿಗೆ ಬೆಟ್ಟ ಗುಡ್ಡಗಳಲ್ಲಿ ದೊರೆಯುವ ಗಿಡಮೂಲಿಕೆಗಳನ್ನು ತಂದು ಭಟ್ಟಿ ಇಳಿಸುವುದರ ಮೂಲಕ ರಸವನ್ನು ಸಂಗ್ರಹಿಸುವುದು ಮುಖ್ಯ ಕೆಲಸವಾಗಿತ್ತು. ಇದಕ್ಕೆ ಕಾವಲುಗಾರರಾಗಿ ರಸಾಸಿದ್ಧನ ತಂಗಿಯರೆಂದು ಹೇಳುವ ನುಂಕವ್ವ-ಮಲಿಯವ್ವ ಎಂಬುವವರು ಇರುತ್ತಿದ್ದರು. ಈ ರಸದೋಣಿ ಆಳವಿದೆ. ಈಗ ಅದರಲ್ಲಿ ನೀರು ತುಂಬಿರುತ್ತದೆ. ಈ ರಸವನ್ನು ಕಾವಲು ಕಾಯುತ್ತಿದ್ದ ಸಂದರ್ಭದಲ್ಲಿ ರಾಕ್ಷಸರನ್ನು ಸಂಹಾರ ಮಾಡಲೆಂದು ಒಮ್ಮೆ ಕಾಲ ಭೈರವ ತನ್ನ ಮಹಿಮೆಯಿಂದ ವಿಷವನ್ನೆಲ್ಲ ಖಾಲಿ ಮಾಡುತ್ತಿರುತ್ತಾನೆ. ಬಡ ಜೋಗಿಯ ವೇಷವನ್ನು ಧರಿಸಿ ಬರುತ್ತಾನೆ. ಆಹಾರವನ್ನು ಕೇಳಿದಾಗ, ನಮಗೆ ಆಹಾರವಿಲ್ಲ, ಈ ವಿಷವೇ ಆಹಾರವೆಂದು ಹೇಳಿದಾಗ ಆ ವಿಷವನ್ನು ಖಾಲಿ ಮಾಡುತ್ತಾನೆಂದು ಐತಿಹ್ಯವಿದೆ.

**ನಗಾರಿ ಬಂಡೆ**

ನಗಾರಿ ಬಂಡೆ ನುಂಕೇಮಲೆ ಬೆಟ್ಟದ ಹೊರ ವಲಯದಲ್ಲಿದೆ. ಇದು ಬೃಹತ್ತಾದ ಬಂಡೆ. ಇದು ರಾಕ್ಷಸರಿಗೆ ಕಾವಲು ಬಂಡೆಯಾಗಿದ್ದು, ಇದರ ಮೇಲೆ ರಾಕ್ಷಸರು ಕುಳಿತು ಶತ್ರುಗಳ

ಬರುವಿಕೆಯನ್ನು ಕಂಡುಹಿಡಿಯುತ್ತಿದ್ದರಂತೆ. ತಮ್ಮ ಬೆಟ್ಟಕ್ಕೇನಾದರೂ ಶತ್ರುಗಳು ಪ್ರವೇಶ ಮಾಡಲು ಪ್ರಯತ್ನಿಸಿದರೆ ಆ ನಗಾರಿ ಬಂಡೆಯನ್ನು ಕಾವಲು ಕಾಯುವವರು ಕೋಲುಗಳಿಂದ ಬಾರಿಸುತ್ತಿದ್ದರಂತೆ. ಆಗ ಅದರ ಶಬ್ದವು ಮೇಲುಗಿರಿಯಲ್ಲಿ ವಾಸ ಮಾಡುತ್ತಿರುವ ರಾಕ್ಷಸರಿಗೆ ಕೇಳಿಸುತ್ತಿದ್ದಿತಂತೆ. ಅವರು ಜಾಗ್ರತರಾಗಿ ಶತ್ರುಗಳನ್ನು ಹಿಮ್ಮೆಟ್ಟಿಸುತ್ತಿದ್ದರಂತೆ. ಇದರ ಕುರುಹಾಗಿ ಇಂದಿಗೂ ಸಹ ನುಂಕೇಮಲೆ ಬೆಟ್ಟದ ಪಶ್ಚಿಮ ದಿಕ್ಕಿನಲ್ಲಿದೆ. ಈ ನಗಾರಿ ಬಂಡೆ ಅಂದಿನ ಕಾಲದಲ್ಲಿ ಅವರಿಗೆ ಹಲಗೆ(ತಪ್ಪಡಿ) ರೂಪದಂತಿದೆ. ಈ ಬಂಡೆಗಳು ಬಿಸಿಲಿಗೆ ಕಾಯ್ದು ಸಂಜೆಯ ನಂತರ ಯೂವುದಾದರೂ ವಸ್ತುವಿನಿಂದ ಬಾರಿಸಿದರೆ ಶಬ್ದ ಹೊರ ಹೊಮ್ಮುವುದನ್ನು ನೋಡಬಹುದು. ರಾಕ್ಷಸರು ಕೂಡ ರಕ್ಷಣೆಯನ್ನು ಹೊಂದಿದ್ದರೆಂದು ಈ ಐತಿಹ್ಯದಿಂದ ತಿಳಿದುಬರುತ್ತದೆ.

**ಪಗಡೆಯಾಟದ ಗುರುತು**

ನಗಾರಿ ಬಂಡೆಯ ಹಿಂಭಾಗಕ್ಕೆ ಪಗಡೆಯಾಟ ಆಡಿದ ಗುರುತುಗಳು ಕಂಡುಬರುತ್ತವೆ. ಸಿದ್ಧನಾಥ ಬಂಡೆ ಎಂಬಲ್ಲಿ ಭೈರವನಿಗೂ ಮತ್ತು ರಾಕ್ಷಸರಿಗೂ ಯುದ್ಧ ನಡೆಯುತ್ತದೆ. ಆಗ ಪಶ್ಚಿಮ ಕಡೆಯಿಂದ ಕರ್ಪೂರದಮ್ಮ ಬೇಡರ ಕಾಟಯ್ಯ ಮತ್ತು ಬೋಸಯ್ಯ ಬರುತ್ತಾರೆ. ತಮ್ಮ ದಣಿವನ್ನು ನೀಗಿಸಲು ಕರ್ಪೂರದಮ್ಮ ಮತ್ತು ಕಾಟಣ್ಣ ಸೇರಿ ಪಗಡೆಯಾಟ ಆಡುತ್ತಾರೆ. ಅದರ ಕುರುಹಾಗಿ ಅಲ್ಲಿ ಪಗಡೆಯಾಟ ಆಡಿದ ಗುರುತುಗಳನ್ನು ಇಲ್ಲಿ ನೋಡಬಹುದು. ಇದರ ಪಕ್ಕದಲ್ಲಿ ಕಾಟಣ್ಣನು ನೂರಾವೊಂದು ನಾಯಿಗಳಿಗೆ ಅನ್ನ ಹಾಕಿ ತಾವು ಸಹ ಊಟ ಮಾಡಿ ಪಗಡೆಯಾಟ ಆಡಿದರೆಂಬ ಐತಿಹ್ಯವಿದೆ.

**ರಾಕ್ಷಸ ಕಲ್ಲುಗಳಿಗೆ ಸಂಬಂಧಿಸಿದ ಐತಿಹ್ಯ**

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಕುಮತಿ ಪ್ರದೇಶದಲ್ಲಿ ಎರಡು ರಾಕ್ಷಸರ ಕಲ್ಲುಗಳಿವೆ. ಇವು ಮನುಷ್ಯನಾಕಾರದಲ್ಲಿವೆ. ಕುಮತಿ ಪ್ರದೇಶ ನುಂಕೇಮಲೆ ಭೈರವನ ವಾಸದ ನೆಲೆಯಾಗಿತ್ತು. ಒಮ್ಮೆ ನುಂಕಪ್ಪನಿಗೆ ಮತ್ತು ರಾಕ್ಷಸರಿಗೆ ಯುದ್ಧವಾಗುತ್ತದೆ. ರಾಕ್ಷಸರು ಸೋತು ತಪ್ಪಿಸಿಕೊಂಡು ಓಡುವಾಗ ನುಂಕಪ್ಪನು ಬಾಣಗಳನ್ನು ಬಿಟ್ಟನಂತೆ. ಅವು ರಾಕ್ಷಸರ ಕಾಲುಗಳಿಗೆ ಬಿದ್ದು, ಅವರು ಅಲ್ಲಿಯೇ ಕಲ್ಲುಗಳಾದರೆಂದು ಐತಿಹ್ಯವಿದೆ. ಕುಮುತಿ ಪ್ರದೇಶದಿಂದ ನುಂಕಪ್ಪನ ಬೆಟ್ಟ(ಮೊಳಕಾಲ್ಮೂರು ತಾಲ್ಲೂಕು)ದವರೆಗೆ ರಾಕ್ಷಸರ ಕಲ್ಲುಗಳು ದಾರಿಯುದ್ದಕ್ಕೂ ಅಲ್ಲಲ್ಲಿ ದೊರೆಯುತ್ತವೆ. ರಾಕ್ಷಸರನ್ನು ಸಂಹಾರ ಮಾಡುತ್ತಾ ಹೋದನೆಂದು ಐತಿಹ್ಯದಿಂದ ಗುರುತಿಸಲಾಗಿದೆ. ಈ ಕಲ್ಲುಗಳು ಮನುಷ್ಯನನ್ನು ಹೋಲುವಂತಿವೆ. ಇವು ಹಳದಿ ಆಕಾರಕ್ಕೆ ತಿರುಗಿವೆ.

ನುಂಕೇಮಲೆ ಭೈರವನಿಗೆ ಸಂಬಂಧಿಸಿದಂತೆ ಕಂಪಳ ದೇವರಹಟ್ಟಿ, ಕುಮತಿಯ ಸುತ್ತಮುತ್ತಲ ಪ್ರದೇಶದಲ್ಲಿ ಮಾನವಕಾರದ ಏಕಶಿಲಾ ಕೃತಿಗಳಿವೆ. ಅವು ಅರಿಶಿಣ ಬಣ್ಣಕ್ಕೆ ತಿರುಗಿವೆ. ಇಲ್ಲಿಯ ಸ್ಥಳೀಯರು ಇವುಗಳನ್ನು ರಾಕ್ಷಸರ ಕಲ್ಲು, ರಕ್ಕಸಗಲ್ಲು, ರಾಕ್ಷಸಿ ಕಲ್ಲುಗಳೆಂದು ಕರೆಯುತ್ತಾರೆ. ಈ ಪ್ರದೇಶದ ಜನರು ಪ್ರಮುಖ ಹಬ್ಬ-ಹರಿದಿನಗಳಂದು ಮೊದಲು ಎಡೆ ಇಟ್ಟು ಪೂಜಿಸುವ

ಸಂಪ್ರದಾಯವನ್ನು ಉಳಿಸಿಕೊಂಡು ಬಂದಿದ್ದಾರೆ. ಭೈರವನು ಬೇಟೆಗಾಗಿ ಬಂದ ಸಂದರ್ಭದಲ್ಲಿ ರಕ್ಕಸರು ಅಡ್ಡಿ ಮಾಡಿದ್ದರಿಂದ ಅವರನ್ನು ಕಲ್ಲುಗಳಾಗುವಂತೆ, ಆ ದೇವತಾ ಪುರುಷನು ಶಾಪ ಕೊಟ್ಟಿದ್ದರಿಂದ ಅವು ಕಲ್ಲುಗಳಾಗಿವೆ ಎಂದು ಸ್ಥಳೀಯರು ಹೇಳುತ್ತಾರೆ. ಭೈರವನು ಬಾಣ ಪ್ರಯೋಗ ಮಾಡಿ ಸಂಹಾರ ಮಾಡಿದನೆಂದು ಇನ್ನು ಕೆಲವರು ಹೇಳುತ್ತಾರೆ. ಇವು ಜನಪದರಲ್ಲಿ ರಾಕ್ಷಸಕಲ್ಲು ಎಂದು ಹೆಸರು ಪಡೆದುಕೊಂಡು ಅಸ್ತಿತ್ವದಲ್ಲಿವೆ ಎಂಬುದು ಜನಪದರ ನಂಬಿಕೆ.

ಕೂಡ್ಲಿಗಿ ತಾಲ್ಲೂಕಿನ ಕಾತ್ರಿಕೇನಹಟ್ಟಿಯಲ್ಲಿ ದೊರೆತ ಬಯಲಾಟದ ಹಸ್ತಪ್ರತಿ ಒಂದರಲ್ಲಿ ನುಂಕೇಮಲೆ ಸಿದ್ದೇಶ್ವರ ಎಂಬ ಬಯಲಾಟ ಕೃತಿಯಲ್ಲಿ ಇವುಗಳ ನಿರ್ಮಾಣದ ಬಗ್ಗೆ ಉಲ್ಲೇಖವಿದೆ. ಭಲಲಲ... ಆ ಹೋ ಅಕ್ಕಯ್ಯ ಚೆಂದದಿಂದ ಹಿಂದಕ್ಕೆ ರಕ್ಕಸರೊಡಗೂಡಿ ಬರುವಾಗ ಸಂಧಿಸಿದ ದುರ್ಘಟನೆ ಏನೆಂದರೆ ರಕ್ಕಸರನ್ನು ಕುಮುತಿ ರೇವಿನಲ್ಲಿಯೇ ಕಲ್ಲಾಗಿ ಬೀಳುವಂತೆ ಬಲ್ಲಿದ ಶಾಪವಂ ಕೊಟ್ಟು ಬಂದೆನು. ಅಲ್ಲಿಂದ ಬರಲು ತಡವುಂಟಾಯಿತಮ್ಮ... ಇತ್ಯಾದಿ ಮಾತುಗಳು ಕಂಡು ಬರುತ್ತವೆ.

ನುಂಕೇಮಲೆ ಸಿದ್ದೇಶ್ವರ ಮತ್ತು ಮಲ್ಲಿಕಾರ್ಜುನ ಮೊದಲಾದ ದೇವಾಲಯಗಳನ್ನು ಕದಂಬರ ರಾಜರು ನಿರ್ಮಿಸಿದರ ಬಗ್ಗೆ ಚರಿತ್ರೆಯ ಕೃತಿಗಳಿಂದ ತಿಳಿದುಬರುತ್ತದೆ. ಪ್ರಸ್ತುತ ಭೈರವನ ಶಾಪದಿಂದಾಗಿ ಅಥವಾ ಬಾಣ ಪ್ರಯೋಗದಿಂದಾಗಿ ಅವು ನಿರ್ಮಾಣವಾಗಿಲ್ಲ. ನುಂಕಪ್ಪ ಹಿಂದೆ ಪ್ರಮುಖ ವ್ಯಕ್ತಿಯಾಗಿರಬೇಕು. ಬೇಟೆಗಾಗಿ ಬಂದಿರುವ ಸಂದರ್ಭದಲ್ಲಿ ಅಲ್ಲಿರುವ ಜನರು ಹೊಸ ಮನುಷ್ಯನೊಡನೆ ಹೋರಾಟಕ್ಕೆ ಇಳಿದಿರಬೇಕು. ನುಂಕಪ್ಪನು ಮೂರ್ಛೆ ಹೋದಾಗ ಬೇಡರ ಕಾಟಯ್ಯ ಮತ್ತು ಬೋಸಯ್ಯನ ಸಹಾಯದಿಂದ ಅವರನ್ನು ಸಂಹಾರ ಮಾಡುತ್ತಾನೆಂದು ಐತಿಹ್ಯವಿದೆ. ಆದಿಮ ಸಮುದಾಯಗಳಲ್ಲಿ ತಮ್ಮ ಜನರನ್ನು ಹೊರತುಪಡಿಸಿ ಹೊಸ ಮನುಷ್ಯರು ತಾವಿದ್ದ ಪ್ರದೇಶಕ್ಕೆ ಬಂದರೆ ಸಹಜವಾಗಿ ಯುದ್ಧ ಮಾಡುವುದು ಅನಿವಾರ್ಯವಾಗಿತ್ತು. ಹೀಗೆ ಎಷ್ಟು ಜನ ಸತ್ತರೋ ಅವರೆಲ್ಲರ ಸ್ಮರಣೆಗಾಗಿ ಮಾನವಕಾರದ ಕಲ್ಲಿನ ಶಿಲ್ಪಗಳನ್ನು ನಿಲ್ಲಿಸಿರಬಹುದು. ಅವು ನೋಡಲು ವಿಚಿತ್ರವಾಗಿರುವುದರಿಂದ ಜನಪದರು ರಾಕ್ಷಸರೆಂದು ಆರೋಪಿಸಿರಬಹುದು. ಈ ಪ್ರದೇಶದ ಸುತ್ತಲಿನ ಜನರಿಗೆ ನುಂಕೆಮಲೆ ಸಿದ್ದಪ್ಪ ಪ್ರಮುಖ ದೈವವಾಗಿದ್ದಾನೆ. ಈ ಪ್ರದೇಶದಲ್ಲಿ ನುಂಕಪ್ಪನ ಭಕ್ತರಾದ ಅಥವಾ ಗೆಳೆಯರಾದ ಕಾಟಯ್ಯ, ಬೋಸಯ್ಯರು ಹೊಸಗುಡ್ಡ ಪ್ರದೇಶದಲ್ಲಿ ಆಳ್ವಿಕೆ ನಡೆಸುವುದರ ಮೂಲಕ ಭೈರವನ ಕೃಪಗೆ ಪಾತ್ರರಾಗಿರುವುದನ್ನು ನುಂಕೆಮಲೆ ಸಿದ್ದೇಶ್ವರ ಕಥೆಯ ಮೂಲಕ ತಿಳಿದುಬರುತ್ತದೆ. ಇವರ ಸಮಾಧಿಗಳು ಹೊಸಗುಡ್ಡದ ಸಮೀಪದಲ್ಲಿವೆ. ಕಾಟಯ್ಯ ಸಂತತಿಯವರಾದ(ರಾಮದುರ್ಗ) ಕಾಟೆಗೊಂಚಿಕಾರು ನುಂಕೆಮಲೆ ಬೆಟ್ಟದಲ್ಲಿ ಅವರು ಹೊಂದಿರುವ ಹಕ್ಕುದಾರಿಕೆ ಹಿನ್ನೆಲೆಯಲ್ಲಿ ಕಾಣಬಹುದು. ರಾಮದುರ್ಗದ 'ಕಾಟೆಗೊಂಚಿಕಾರು' ವಂಶಸ್ಥರು ನುಂಕೆಮಲೆ ಭೈರವನ ಕ್ಷೇತ್ರದಲ್ಲಿ ಆರಾಧಕರಾಗಿ ಅಲ್ಲಿ ಜರುಗುವ ಪ್ರತಿಯೊಂದು ಹಬ್ಬ, ಆಚರಣೆ, ಜಾತ್ರೆ ಮೊದಲಾದ ಧಾರ್ಮಿಕ

ಕಾರ್ಯಗಳಿಗೆ ಮೀಸಲು, ಕಾಣಿಕೆ, ಹರಕೆ ತೀರಿಸುವುದರ ಮೂಲಕ ಮುಂದುವರೆಸಿಕೊಂಡು ಬಂದಿದ್ದಾರೆ.

**ಧರ್ಮಪುರದ ಕೆರೆಯ ಐತಿಹ್ಯ**

ಧರ್ಮಪುರದ ಕೆರೆಯು ಹಿರಿಯೂರು ತಾಲ್ಲೂಕಿನಲ್ಲಿ ಕಂಡು ಬರುತ್ತದೆ. ಇದು ಧರ್ಮಪುರದ ಹೊರ ವಲಯದಲ್ಲಿದೆ. ಇಲ್ಲಿನ ಬೃಹತ್ತಾದ ಕೆರೆಯು ಸಾವಿರಾರು ಎಕರೆ ಜಮೀನುಗಳಿಗೆ ನೀರು ಒದಗಿಸುತ್ತದೆ. ಆದರೆ ಬರಗಾಲ, ಅನಾವೃಷ್ಟಿ ಕಾರಣದಿಂದ ಇಂದು ನೀರಿಲ್ಲದೆ ಬತ್ತಿ ಹೋಗಿದೆ. ಇದರಿಂದ ಪ್ರಾಣಿಸಂಕುಲ, ಸಸ್ಯಸಂಕುಲ ತೀರ ಸಂಕಷ್ಟವನ್ನು ಅನುಭವಿಸುವಂತಾಗಿದೆ. ಹಿಂದೆ ಈ ಕೆರೆಯು ಸದಾಕಾಲ ನೀರಿನಿಂದ ತುಂಬಿರುತ್ತಿತ್ತು. ಇದರಿಂದ ಧರ್ಮಪುರದ ಸುತ್ತಮುತ್ತಲಿನ ಹಳ್ಳಿಯ ಜನರು ಈ ಕೆರೆಯ ನೀರನ್ನು ಬಳಸಿಕೊಂಡು ಸಮೃದ್ಧವಾಗಿ ಬೆಳೆಗಳನ್ನು ಬೆಳೆದು ನೆಮ್ಮದಿಯಿಂದ ಜೀವನ ಸಾಗಿಸುತ್ತಿದ್ದರು. ಇಂತಹ ಪ್ರಾಕೃತಿಕ ಸಮೃದ್ಧಿಯಿಂದ ಕೂಡಿದ ಗ್ರಾಮಕ್ಕೆ ಇತಿಹಾಸ, ಪುರಾಣ, ಐತಿಹ್ಯಗಳ ಹಿನ್ನೆಲೆಯಿದೆ.

ಪಾಂಡವರು ಹಿಂದೆ ವನವಾಸ ಕೈಕೊಂಡಾಗ ಕೆಲವು ದಿನಗಳ ಕಾಲ ಈ ಪ್ರದೇಶದಲ್ಲಿ ತಂಗಿದ್ದರೆಂಬುದರ ಬಗ್ಗೆ ಪುರಾಣ ಮೂಲದ ಐತಿಹ್ಯವನ್ನು ಇಲ್ಲಿ ಕಾಣಬಹುದು. ಪಾಂಡವರು ವನವಾಸಕ್ಕೆ ಬಂದಾಗ ನೀರು ಕುಡಿಯಲು ಒಬ್ಬೊಬ್ಬರಾಗಿ ಈ ಕೆರೆಗೆ ಹೋದರಂತೆ. ಹೀಗೆ ಹೋದವರು ಹಿಂದಿರುಗಲೇ ಇಲ್ಲವಂತೆ, ಕೊನೆಯದಾಗಿ ಧರ್ಮರಾಯ ಯೋಚಿಸುತ್ತಾ ನೀರು ಕುಡಿಯಲು ಹೋದವರು ಇನ್ನೂ ಬರಲೇ ಇಲ್ಲವೆಂದು ತಾನು ಕೆರೆಯ ಬಳಿ ಹೋದನು. ನೀರು ಕುಡಿಯಲು ಹೋದವರೆಲ್ಲ ಮೂರ್ಛೆ ಹೋಗಿ ಬಿದ್ದಿದ್ದರು. ಈ ಕೆರೆಯಲ್ಲಿ ಒಬ್ಬ ಯಕ್ಷ ಇದ್ದನಂತೆ. ಆತನನ್ನು ವಿಚಾರಿಸಲು ಇಲ್ಲಿಗೆ ಬಂದವರಿಗೆಲ್ಲಾ ಒಂದೊಂದು ಪ್ರಶ್ನೆ ಕೇಳುತ್ತಾನೆ. ನಾನು ಅವರು ಕೇಳಿದ ಪ್ರಶ್ನೆಗಳಿಗೆ ಉತ್ತರಿಸಲು ವಿಫಲರಾದರು ಎಂದು ಹೇಳಿದನು. ಹಾಗೆಯೇ ಧರ್ಮರಾಯನಿಗೂ ಸಹ ಯಕ್ಷನು ಪ್ರಶ್ನೆ ಹಾಕುತ್ತಾ ಈ ಪ್ರಶ್ನೆಗೆ ಉತ್ತರಿಸಿದರೆ ಮೂರ್ಛೆಗೊಂಡವರು ಎಚ್ಚರವಾಗುತ್ತಾರೆ ಎಂದು ಪ್ರಶ್ನೆ ಹಾಕಿದ. ತದನಂತರ ಧರ್ಮರಾಯನು ಯಕ್ಷನ ಪ್ರಶ್ನೆಗೆ ಉತ್ತರಿಸಿದನಂತೆ. ಇದನ್ನು ಕೇಳಿದ ಮೂರ್ಛೆಗೊಂಡವರು ಎಚ್ಚೆತ್ತುಕೊಂಡರಂತೆ. ಇದರಿಂದಾಗಿ ಈ ಕೆರೆಗೆ "ಯಕ್ಷ ಸರೋವರ" ಎಂಬ ಹೆಸರು ಬಂದಿತಂತೆ. ಈ ಕೆರೆಗೆ ಪ್ರಸ್ತುತ ಯಕ್ಷ ಸರೋವರವೆಂದು ಕರೆಯಲಾಗುತ್ತಿದ್ದು, ಹೀಗೆ ಧರ್ಮಪುರದ ಕೆರೆಗೆ ಪಾಂಡವರ ಹೆಸರು ಅಂಟಿಕೊಂಡಿದೆ.

**ಇನ್ನೊಂದು ಐತಿಹ್ಯ ಹೀಗಿದೆ:** ಧರ್ಮಪುರದ ಕೆರೆಯಲ್ಲಿ ಕಪ್ಪೆಯ ವೈಶಿಷ್ಟ್ಯತೆಗೆ ಪಾಂಡವರು ವನವಾಸದ ಸಂದರ್ಭದಲ್ಲಿ ಕೆಲಕಾಲ ತಂಗಿದ್ದರೆಂದು ಈ ಹಿಂದೆಯೇ ತಿಳಿಯಲಾಗಿದೆ. ವನವಾಸಕ್ಕೆ ಬಂದ ಪಾಂಡವರಲ್ಲಿ ಭೀಮನಿಗೆ ಬಾಯಾರಿಕೆಯಾದಾಗ ಅವಸರವಾಗಿ ಕೆರೆಯ ನೀರನ್ನು ಕುಡಿಯಲು ಬೊಗಸೆಯಲ್ಲಿ ಕೆರೆಯ ನೀರನ್ನು ತೆಗೆದುಕೊಂಡನಂತೆ. ಅವನ ಬೊಗಸೆಯಲ್ಲಿ

ಕಪ್ಪೆಯೊಂದು ಬಂದಿತು. ಆಗ ಭೀಮನು ಅತೃಪ್ತಿಯಿಂದ ಕೈಯಲ್ಲಿದ್ದ ಕಪ್ಪೆಯನ್ನು ತೆಗೆದು ಏರಿಯಾ ಮೇಲೆ ಎಸೆದು, ಈ ಕೆರೆಯಲ್ಲಿ ಕಪ್ಪೆಗಳು ವಾಸಿಸಬಾರದೆಂದು ಶಾಪವಿತ್ತನಂತೆ, ಅಂದಿನಿಂದ ಇಂದಿನವರೆಗೂ ಕಪ್ಪೆಗಳು ಇಲ್ಲಿ ಇರುವುದಿಲ್ಲ. ಕೆರೆಯ ಹಿಂಭಾಗದಲ್ಲಿ, ಕೋಡಿಯ ಕೆಳಭಾಗದಲ್ಲಿ ಮಾತ್ರ ಕಪ್ಪೆಗಳು ಕಂಡುಬರುತ್ತವೆ. ಆದರೆ ಕೆರೆಯ ಅಂಗಳದಲ್ಲಿ ಇಂದಿಗೂ ಕಪ್ಪೆಗಳು ಕಂಡುಬರುವುದಿಲ್ಲ. ಬಹುಶಃ ಕಪ್ಪೆಗಳಿಗೆ ಈ ನೀರಿನ ಗುಣಗಳು, ಮಣ್ಣಿನ ಗುಣಗಳು ವಾಸಿಸಲಿಕ್ಕೆ ಅನುಕೂಲಕರವಾಗಿಲ್ಲದಿರಬಹುದು. ಹಾಗಾಗಿ ಕಪ್ಪೆಗಳು ಕೆರೆಯ ಅಂಗಳದಲ್ಲಿ ಕಂಡು ಬರುವುದಿಲ್ಲ. ಕಪ್ಪೆಗಳು ವಾಸಿಸಲು ಭೌಗೋಳಿಕ ಪರಿಸರವೂ ಕೂಡ ಕಾರಣವಾಗುತ್ತದೆ. ಹಾಗಾಗಿ ಈ ಸ್ಥಳ ಮಹಿಮೆಯ ಕಾರಣವೆನ್ನಬಹುದು.

**ನೀರಗಂಟಿ ಸವಣಪ್ಪನ(ಸವಣಪ್ಪ) ಐತಿಹ್ಯ**

ನೀರಗಂಟೆ ಶ್ರಮಣಪ್ಪ ಹಿರಿಯೂರು ತಾಲ್ಲೂಕಿನ ಧರ್ಮಪುರದವನು. ಹಿಂದೆ ಊರನ್ನು ನೋಡಿಕೊಳ್ಳಲು ತಳವಾರನನ್ನು ನೇಮಿಸುವ ಪದ್ಧತಿಯಿತ್ತು. ಹಾಗೆಯೇ ಕೆರೆಯನ್ನು ನೋಡಿಕೊಳ್ಳಲು ಒಬ್ಬ ನೀರಗಂಟಿಯನ್ನು ಊರಿನ ಹಿರಿಯರು ನೇಮಿಸುತ್ತಿದ್ದರು. ಅದರಂತೆ ಧರ್ಮಪುರದ ಕೆರೆಯನ್ನು ನೋಡಿಕೊಳ್ಳುವ ಜವಾಬ್ದಾರಿಯನ್ನು ಶ್ರವಣಪ್ಪನಿಗೆ ವಹಿಸಿದರು. ಈತನಿಗೆ ಸವಣಪ್ಪ, ಶ್ರವಣಪ್ಪ, ಶ್ರವಣಕುಮಾರ ಎಂಬ ಹೆಸರುಗಳುಂಟು. ಈ ಸವಣಪ್ಪ ತಳಸಮುದಾಯಕ್ಕೆ ಸೇರಿದವನೆಂದು ಇಲ್ಲಿನ ಸ್ಥಳೀಯರು ಹೇಳುತ್ತಾರೆ. ಆದರೆ ಇದು ವಿವಾದದಿಂದ ಕೂಡಿದೆ. ಈ ನೀರಗಂಟಿ ಶ್ರವಣಪ್ಪ ಯಾವ ವರ್ಗಕ್ಕೆ ಸೇರಿದವನು ಎನ್ನುವ ಗೊಂದಲವಿದೆ. ಈತನ ಹೆಸರು, ವಿಗ್ರಹವನ್ನು ಅವಲೋಕಿಸಿದರೆ ಜೈನನೆಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಹೀಗೆ ಗೊಂದಲಗಳಿದ್ದರೂ ಈತ ಕೆರೆಯನ್ನು ಕಾಯುವ ಕಾವಲುಗಾರನಾಗಿದ್ದ ಎಂಬುದು ಮಾತ್ರ ಸತ್ಯದ ಸಂಗತಿಯಾಗಿದೆ. ಕೆರೆಯ ಉಸ್ತುವಾರಿಯನ್ನು ನೋಡಿಕೊಳ್ಳಬೇಕಾಗಿತ್ತು. ಕೆರೆಯಿಂದ ಸಮಾನ ನೀರು ಹಂಚಿಕೆ, ತೂಬುಗಳ ಪರಿಶೀಲನೆ, ಕೋಡಿಗಳ ಭದ್ರತೆ, ಈ ರೀತಿಯ ಜವಾಬ್ದಾರಿಗಳನ್ನು ಸವಣಪ್ಪ ನೋಡಿಕೊಳ್ಳುವುದಾಗಿತ್ತು. ಒಮ್ಮೆ ಮುಂಗಾರು ಕಾಲದಲ್ಲಿ ಮಳೆಯು ಧಾರಾಕಾರವಾಗಿ ಸುರಿಯುತ್ತಿತ್ತು. ಹೀಗೆ ಸುರಿದ ಮಳೆಯಿಂದಾಗಿ ಧರ್ಮಪುರದ ಕೆರೆಯು ತುಂಬಿ ಬೋರ್ಗರೆಯುತ್ತಿತ್ತು ಮತ್ತು ಕೆರೆಯ ನೀರು ಕೋಡಿಯ ಮೂಲಕ ಹೋಗುವಂತಹ ಪರಿಸ್ಥಿತಿ ಕಂಡುಬಂದಿತು.

ಧಾರಾಕಾರವಾದ ಮಳೆಯಿಂದ ಕೆರೆಯು ತುಂಬಿದಾಗ ಗಂಗಾದೇವಿ ನೀರಗಂಟಿಯನ್ನು ತಾನು ಕೋಡಿಯಿಂದ ಹೊರಗೆ ಹೋಗುತ್ತೇನೆಂದು ಕೇಳುತ್ತಾಳೆ. ಸವಣಪ್ಪ ಇಲ್ಲ ತಾಯಿ ಇಲ್ಲಿಂದ ಹೋಗಬೇಡ, ನೀನು ಇಲ್ಲಿಂದ ಹೊರಗಡೆ ಹೋದರೆ ಈ ಊರಿನ ಫಲವತ್ತತೆ ಹೋದಂತೆ ಎಂದು ಹೇಳುತ್ತಾನೆ. ಆದರೂ ಗಂಗಾದೇವಿ ತಾನು ಹೋಗಲೇಬೇಕು. ಒಪ್ಪಿಗೆಯನ್ನು ನೀಡು ಎಂದು ಕೇಳುತ್ತಾಳೆ.

ಈ ಊರಿನ ಗೌಡ, ಶಾನುಭೋಗರಿಗೆ ಈ ಸುದ್ದಿ ತಿಳಿಸಿ ಬರುವವರೆಗೂ ಕೆರೆಯಿಂದ ಹೊರಗೆ ಹೋಗಬಾರದು ಎಂದು ವಚನ ಪಡೆದು ರಾತ್ರಿ ಮಳೆಯಲ್ಲಿ ನೆನೆಯುತ್ತ ಊರಿನ ಗೌಡ, ಶಾನುಭೋಗರಿಗೆ ತಿಳಿಸುತ್ತಾನೆ. ಇತ್ತ ಗಂಗಾದೇವಿ ಕೆರೆಯಲ್ಲಿ ಶ್ರವಣಪ್ಪನ ಬರುವಿಕೆಗಾಗಿ ಕಾಯುತ್ತಾ ಕುಳಿತಿರುತ್ತಾಳೆ. ಊರಿನಲ್ಲಿ ಶಾನುಭೋಗ, ಗೌಡರು ಇವನ ಕೋರಿಕೆಯನ್ನು ಚರ್ಚೆಯ ಮೂಲಕ ಮಾತನಾಡುತ್ತಾ ಹಾಗೆಯೇ ಬಿಟ್ಟರೆ ಊರಿನ ಹುಲುಸು ಹೋಗುತ್ತದೆ ಎಂದು ಯೋಚಿಸಿದರು. ಈ ಊರಿನ ಹುಲುಸು ಹೊರಗಡೆ ಹೋದರೆ ನಾಳೆ ಮಳೆ, ಬೆಳೆ, ಹೇಗೆ ಎಂದು ತಿಳಿದು ಅವರೆಲ್ಲರೂ ಸೇರಿಕೊಂಡು ಒಳಸಂಚು ಮಾಡುತ್ತಾರೆ. ನೀರಗಂಟಿ ಶ್ರವಣಪ್ಪ, ಗಂಗಾದೇವಿಯಿಂದ ವಚನ ಪಡೆದು ಬಂದಿದ್ದಾನೆ. ವಚನ ಪಡೆದಿದ್ದರಿಂದ ಆತನನ್ನು ನಾವುಗಳು ಇಲ್ಲಿ ಸಾಯಿಸಿದರೆ ಆತ ಹೋಗಿ ಗಂಗಾದೇವಿಗೆ ಹೇಳುವುದಿಲ್ಲ ಎಂದು ಅವನ ಕೊಲೆಯ ಸಂಚನ್ನು ರೂಪಿಸುತ್ತಾರೆ. ಶ್ರವಣಪ್ಪ ಬಂದು ತನಗೆ ಅಪ್ಪಣೆ ನೀಡುತ್ತಾನೆಂದು ಆ ದೇವಿ ಅಲ್ಲಿಯೇ ಕಾದಿರುತ್ತಾಳೆ. ಹೊರಗೆ ಹೋಗುವುದಿಲ್ಲ ಎಂದೂ ತೀರ್ಮಾನಿಸುತ್ತಾರೆ.

ಹೀಗಿರುವಾಗ ಶ್ರವಣಪ್ಪನಿಗೆ ಊರಿನ ಗೌಡರು ಹೀಗೆ ಹೇಳುತ್ತಾರೆ. ನೀನು ಕೆರೆಯ ಕೋಡಿ ಬಳಿ ಹೋಗುತ್ತಿರು ನಾವು ಬರುತ್ತೇವೆ ಹಿಂದೆ ಎಂದು ಹೇಳಿ ಕಳಿಸುತ್ತಾರೆ. ಮಧ್ಯರಾತ್ರಿ ಕತ್ತಲಿನಲ್ಲಿ ಮಳೆಯಲ್ಲಿ ನೆನೆಯುತ್ತಾ ಮುಂದೆ ಹೋಗುತ್ತಿರುತ್ತಾನೆ. ಹಿಂದಿನಿಂದ ಹಿರಿಯರು ಬಂದು ಆತನನ್ನು ಕೊಲೆ ಮಾಡುತ್ತಾರೆ. ಆತ ನೆಲಕ್ಕೆ ಉರುಳುತ್ತಾನೆ. ರುಂಡ ಮುಂಡದಿಂದ ಬೇರೆಯಾಗುತ್ತದೆ. ಇತ್ತ ಶ್ರವಣಪ್ಪನ ಬರುವಿಕೆಯನ್ನು ಎದುರು ನೋಡುತ್ತಾ ನಿಂತಿದ್ದ ಗಂಗಾದೇವಿ ಆತ ಬರಲಿಲ್ಲವೆಂದು ಶ್ರವಣ, ಶ್ರವಣ ಎಂದು ಜೋರಾಗಿ ಕೂಗುತ್ತಾ ಕೋಡಿಯ ಮೂಲಕ ಹರಿದು ಹೋಗುತ್ತಾಳೆ. ಈ ಕೂಗು ಶ್ರವಣಗೆರೆಯ ಬಯಲಿನಲ್ಲಿ ಪ್ರತಿಧ್ವನಿ ಬರುತ್ತಿದ್ದಂತೆ ಆ ಗ್ರಾಮದ ಜನತೆ ಭಯ ಭೀತರಾಗಿ ಶ್ರವಣನ ವಿಗ್ರಹವನ್ನು ನಿರ್ಮಿಸಿ ಧರ್ಮಪುರದ ಕೆರೆಯ ಕೋಡಿಯ (ಬಲಭಾಗದ) ಬಳಿ ನಿಲ್ಲಿಸಿರುತ್ತಾರೆ. ಪ್ರಸ್ತುತ ಸಂದರ್ಭದಲ್ಲಿ ಕೂಡ ಈ ವಿಗ್ರಹವನ್ನು ಕೆರೆಯ ಕೋಡಿ ಬಳಿ ಕಾಣಬಹುದು.

**ಶ್ರವಣಪ್ಪ(ಶ್ರವಣಕುಮಾರ)**

ಹಿರಿಯೂರು ತಾಲ್ಲೂಕಿನ ಧರ್ಮಪುರದ ಕೆರೆಯ ಕೋಡಿಯ ಬಳಿ ಐದು ಅಡಿ ಏಕಶಿಲಾ ವಿಗ್ರಹವಿದೆ. ಕಪ್ಪು ಗ್ರಾನೈಟ್ ಕಲ್ಲಿನಲ್ಲಿ ಕೆತ್ತಿ ನಿಲ್ಲಿಸಿದ್ದಾರೆ. ಕಿರೀಟ ಧಾರಿಯಾಗಿದ್ದು, ಕಿವಿ ಓಲೆ, ಕೊರಳ ಹಾರವಿದೆ. ಎರಡು ಕೈಗಳು ಭಗ್ನಗೊಂಡಿವೆ. ಈ ಮೂರ್ತಿಯನ್ನು ಸ್ಥಳೀಯರು ಶ್ರವಣಕುಮಾರನ ಶಿಲ್ಪವೆಂದು ಕರೆದಿದ್ದಾರೆ. ಈ ಊರಿನ ಜನತೆ ಇಂದಿಗೂ ಶ್ರವಣಪ್ಪ(ಶ್ರವಣಕುಮಾರ)ನನ್ನು ಕುರಿತು ಮಕ್ಕಳನ್ನು (ಫಲ ನೀಡುವ) ನೀಡುವ ದೇವರು ಎನ್ನುತ್ತಾರೆ. ಈತನನ್ನು ಪುರುಷತ್ವದ ಸಂಕೇತವೆಂದು ನಂಬಿದ್ದಾರೆ. ಈತ ಊರನ್ನು ಉಳಿಸಿದವನು ಎನ್ನುವ ಅಭಿಮಾನ ಇರುವುದರಿಂದ ಮತ್ತು ಊರಿನ ಹುಲುಸನ್ನು, ಸತ್ವವನ್ನು ಉಳಿಸಿದಂತವನು

ಎನ್ನುವ ಕಾರಣಕ್ಕಾಗಿ ಮಕ್ಕಳಾಗದವರು, ಮುಸ್ಸಂಜೆ ಸಮಯದಲ್ಲಿ ಹೋಗಿ ಪೂಜೆ ಮಾಡಿ ನಗ್ನ ರೂಪದಲ್ಲಿ ಆತನನ್ನು ತಬ್ಬಿಕೊಂಡರೆ ಮಕ್ಕಳಾಗುತ್ತವೆ ಎಂಬ ನಂಬಿಕೆಯೂ ಇದೆ. ಈ ಊರಿನಲ್ಲಿ ಮಕ್ಕಳಾಗದಿದ್ದವರು ಈ ರೀತಿ ಮಾಡಿರುವುದರಿಂದ ತಮಗೆ ಮಕ್ಕಳಾಗಿದ್ದಾರೆಂದು ಇಲ್ಲಿನ ಸ್ಥಳೀಯರು ಹೇಳುತ್ತಾರೆ. ಈ ಮೇಲಿನ ಐತಿಹ್ಯವನ್ನು ಗಮನಿಸಿದಾಗ ಮಕ್ಕಳಾಗಿದಿದ್ದ ಮಹಿಳೆಯರು ತಮ್ಮ ನಿಷ್ಠೆಯಿಂದ, ಕುತೂಹಲದಿಂದ, ರಾತ್ರಿ ಸಮಯದಲ್ಲಿ ಈ ಮೂರ್ತಿಯನ್ನು ತಬ್ಬಿಕೊಳ್ಳುವುದರಿಂದ ಅವರಲ್ಲಿ ಅಂಡಾಣ ಫಲಿತಗೊಂಡು ಮಕ್ಕಳಾಗುವ ಸಂಭವ ಇರಬಹುದು. ಒಟ್ಟಿನಲ್ಲಿ ಆ ಪರಿಸರ, ಸ್ಥಳ, ನಂಬಿಕೆ ಹೀಗೆ ಎಲ್ಲವನ್ನು ಇಲ್ಲಿನ ಜನರು ಮೈಗೂಡಿಸಿಕೊಂಡಿದ್ದಾರೆ ಎಂದೇ ಹೇಳಬಹುದು.

ಗ್ರಾಮಗಳಲ್ಲಿ ಕೆರೆಗೆ ಸಂಬಂಧಿಸಿದ ಐತಿಹ್ಯಗಳು ಹಲವು ಆಯಾಮಗಳನ್ನು ಹೊಂದಿಕೊಂಡಿರುತ್ತವೆ. ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ ಗ್ರಾಮಗಳು ವೈವಿಧ್ಯತೆಯೆಂಬಂತೆ ಕಂಡುಬರುತ್ತವೆ. ಕೃಷಿಕವರ್ಗ, ಪಶುಪಾಲಕ ವರ್ಗ ಮತ್ತು ಶ್ರಮಿಕ ವರ್ಗಗಳು ಕೆರೆಯೊಂದಿಗೆ ತಮ್ಮ ಬದುಕಿನ ಸಹ ಸಂಬಂಧವನ್ನು ಹೊಂದಿರುತ್ತವೆ. ಈ ದೃಷ್ಟಿಯಿಂದ ಜನಪದರಲ್ಲಿ ವೈವಿಧ್ಯಮಯವಾದ ಆಚರಣೆಗಳು, ಸಂಪ್ರದಾಯಗಳು ಅಥವಾ ನಂಬಿಕೆಗಳು ಕೆರೆಗಳ ಬಗೆಗೆ ಸೃಷ್ಟಿಯಾಗಿರುವುದನ್ನು ಕಾಣಬಹುದು.

ಜನಪದ ಸಮಾಜದಲ್ಲಿ ಬಹುತೇಕವಾಗಿ ಕೆರೆಗಳಿಗಾಗಲಿ, ಕೋಟೆಗಾಗಲಿ ಮಹಿಳೆಯರನ್ನು ಬಲಿ ಕೊಡುವ ಸಂಪ್ರದಾಯ ಕಂಡುಬರುತ್ತದೆ. ಆದರೆ ಧರ್ಮಪುರ ಕೆರೆ ಐತಿಹ್ಯದಲ್ಲಿ ಕಾಣುವಂತೆ ಪುರುಷ ಬಲಿಯಾಗಿರುವುದು ಅಚ್ಚರಿಯನ್ನುಂಟು ಮಾಡುತ್ತದೆ. ಈ ವ್ಯಕ್ತಿಯು ದಲಿತ ಸಮುದಾಯಕ್ಕೆ ಸೇರಿದವನು ಅಥವಾ ಜೈನಮತಕ್ಕೆ ಸೇರಿದವನು ಎಂಬ ಗೊಂದಲಗಳಿವೆ. ಆದರೂ ಈತ ತಳಸಮುದಾಯವನ್ನು ಪ್ರತಿನಿಧಿಸುವನೆಂದು ಅಂತಿಮವಾಗಿ ಹೇಳಬೇಕಾಗುತ್ತದೆ. ಆಯಗಾರರಲ್ಲಿ 'ನೀರಗಂಟಿಗಳು' ಒಬ್ಬರು. ಕೆರೆಯ ಉಸ್ತುವಾರಿಕೆಯನ್ನು ನೋಡಿಕೊಳ್ಳುವ ನೀರಗಂಟಿ ಕೆಲಸದಲ್ಲಿ ತೊಡಗಿರುವವನು ಸವಣನೆಂಬ ತಳಸಮುದಾಯದ ವ್ಯಕ್ತಿ. ಈತನನ್ನು ಬಲಿದಾನದ ಮೌಢ್ಯಾಚಾರಣೆಯಿಂದ ಬಲಿ ಮಾಡಲಾಗುತ್ತದೆ. ಈ ಒಂದು ಕೃತ್ಯವು ಅಂದಿನ ಸಾಮಾಜಿಕ ಸ್ಥಿತಿಗತಿ ತಿಳಿಸುವುದರೊಂದಿಗೆ ವರ್ತಮಾನದಲ್ಲಿ ದಲಿತರ ಮೇಲೆ ನಡೆಯುತ್ತಿರುವಂತಹ ಶೋಷಣೆಯ ನೆಲೆಗಳನ್ನು ಪರಂಪರೆಯ ಹಿನ್ನೆಲೆಯಿಂದ ಸೂಕ್ಷ್ಮವಾಗಿ ಅರಿಯಬಹುದು. ಜಮೀನ್ದಾರಿಕೆ, ಗೌಡಾಳ್ವಿಕೆಗೆ ಒಳಗಾದ ಗ್ರಾಮಗಳು ಸಾಮಾಜಿಕ ಏಣಿಶ್ರೇಣಿಕೃತ ವ್ಯವಸ್ಥೆಯಿಂದ ಕೂಡಿದ್ದು ಅಸಮಾನತೆಯನ್ನು ಪೋಷಣೆ ಮಾಡಿಕೊಡು ಬರುತ್ತಿರುತ್ತವೆ. ಹೀಗಿರುವಾಗ ತಳಸಮುದಾಯದ ವ್ಯಕ್ತಿ ಸವಣನೂ ಗೌಡಾಳಿಕೆಯಿಂದ ಬೇರ್ಪಟ್ಟನವಲ್ಲ. ಬದಲಾಗಿ ಅಧೀನನಾದವನು. ಪಾರಮಾರ್ಥಿಕವಾಗಿ, ನಿಸ್ವಾರ್ಥಪರವಾಗಿ, ಗ್ರಾಮದ ಏಳ್ಗೆಯ ಕನಸು ಕಾಣುವ ಸವಣನಂತಹ ಅಮಾಯಕರನ್ನು ಜಮೀನ್ದಾರಿಗಳು ಲಾಭವಾಗಿ ಮಾಡಿಕೊಳ್ಳುತ್ತಾರೆ.

ಗ್ರಾಮಕ್ಕಾಗಿ ಬಲಿದಾನಗೊಂಡ ಬಲಿ ಮಾಡಿದ ಇವನಂತಹ ವ್ಯಕ್ತಿಗಳನ್ನು ವೈಭವೀಕರಿಸಿ ಇದರ ಹಿಂದಿರುವ ವಾಸ್ತವ ಸತ್ಯವನ್ನು ಜಮೀನ್ದಾರರು ಮರೆಮಾಚಿಸಿಕೊಂಡು ಬಂದಿದ್ದಾರೆ.

ಧರ್ಮಪುರ - ಈ ಭಾಗವು ನೊಳಂಬರು, ಹೊಯ್ಸಳರು ಆಳರಸರ ಆಳ್ವಿಕೆಗೆ ಒಳಪಟ್ಟಿತ್ತು. ಹೊಯ್ಸಳರು ಸಮನ್ವಯಿಗಳಾಗಿದ್ದರಿಂದ ಜೈನ, ಶೈವ ಮತ್ತು ವೈಷ್ಣವ ಈ ಎಲ್ಲಾ ಮತಗಳಿಗೂ ಕೂಡ ಮಾನ್ಯತೆಯನ್ನು ಕೊಟ್ಟಿದ್ದರು. ಹಾಗಾಗಿ ಧರ್ಮಪುರ ಜೈನ ಕೇಂದ್ರವಾಗಿತ್ತು ಎನ್ನುವುದಕ್ಕೆ ಇಲ್ಲಿ ಕಂಡುಬರುವ ಶಾಸನಗಳು, ದೇವಾಲಯಗಳು ಸಾಕ್ಷಿಯಾಗಿವೆ. ಜೊತೆಗೆ ಈಗಲೂ ಕೂಡ ಜೈನ ಧರ್ಮದ ನಾಮಪದಗಳನ್ನು ಜನಪದರಲ್ಲಿ ಕಾಣಬಹುದು. 'ಸವಣಪ್ಪ, ಶ್ರವಣಕುಮಾರ, ಶ್ರವಣಗೆರೆ' ಈ ವ್ಯಕ್ತಿ, ಸ್ಥಳನಾಮಗಳು ಕಂಡುಬರುತ್ತವೆ. ಆದ್ದರಿಂದ(ಶ್ರವಣ) ಜೈನಧರ್ಮದವ ನಾಗಿರಬೇಕು ಎಂತಲೂ ಹೇಳಬಹುದು. ನಂತರ ತಲೆಯೆತ್ತಿದ ಶೈವ ಧರ್ಮದೊಡನೆ ಉಂಟಾದ ಸಂಘರ್ಷದಿಂದ ಜೈನ ಸನ್ಯಾಸಿಯಾದ ಸವಣನನ್ನು ಹತ್ಯೆ ಮಾಡಲಾಗಿದೆ.

**ದೊಡ್ಡಉಳ್ಳಾರ್ತಿ ಗೌರಮ್ಮ**

ದೊಡ್ಡಉಳ್ಳಾರ್ತಿ ತಾಲೂಕು ಕೇಂದ್ರವಾದ ಚಳ್ಳಕೆರೆಯಿಂದ ೧೫ ಕಿ.ಮೀ. ದೂರದಲ್ಲಿದ್ದು, ತಳಕು ಹೋಬಳಿಗೆ ಸೇರಿದೆ. ಈ ಗ್ರಾಮದಲ್ಲಿ ನೆಲೆಸಿರುವ ಗೌರಿಯ ಬಗೆಗಿನ ಐತಿಹ್ಯವಿದೆ. ಹಿಂದೆ ಹಿರಿಯೂರು ತಾಲ್ಲೂಕಿನ 'ತವಂದಿ' ಗ್ರಾಮದಲ್ಲಿ ಮಸಾಲೆ ವ್ಯಾಪಾರಿಗಳಿದ್ದರು. ಇವರು ಈ ಪರಿಸರದಲ್ಲಿ ಮಸಾಲೆ ಮತ್ತು ಕಿರಾಣಿ ಸಾಮಾನುಗಳನ್ನು ಎತ್ತಿನಗಾಡಿಯ ಮೂಲಕ ವ್ಯಾಪಾರ ಮಾಡುತ್ತಿದ್ದರು. ವ್ಯಾಪಾರಿಗಳು ಉಳ್ಳಾರ್ತಿ ಕಡೆ ಪ್ರಯಾಣ ಬೆಳೆಸಿದರು. 'ಗೌರಿಯು' ತಾನು ಸಹ ಬರುವುದಾಗಿ ವ್ಯಾಪಾರಿಗಳಿಗೆ ಹೇಳಿದಳು. ವ್ಯಾಪಾರಿಗಳು 'ಗೌರಿ'ಯ ಮಾತಿಗೆ ಒಪ್ಪಿ ಎತ್ತಿನಗಾಡಿಯಲ್ಲಿ ಕೂರಿಸಿಕೊಂಡರು. ಹೀಗೆ ಸುತ್ತಮುತ್ತಲಿನ ಹಳ್ಳಿಗಳಲ್ಲಿ ವ್ಯಾಪಾರ ಮಾಡುತ್ತ ಸಂಜೆಯ ವೇಳೆಗೆ ಉಳ್ಳಾರ್ತಿ ತಲುಪಿದರು. ಅಂದು ರಾತ್ರಿ ಉಳ್ಳಾರ್ತಿಯಲ್ಲಿ ತಂಗುವ ಏರ್ಪಾಟು ಮಾಡಿದರು. ಅಲ್ಲಿಯೆ ಬಂಡೆಯೊಂದರ ಮೇಲೆ(ಶಾನುಭೋಗರ ಬಂಡೆ) ಮಲಗಲು ಸಿದ್ಧತೆ ಮಾಡಿಕೊಂಡರು. ವ್ಯಾಪಾರಿಗಳು ಆ ದಿನದಲ್ಲಿ ನಡೆದ ವ್ಯಾಪಾರದ ಲೆಕ್ಕಾಚಾರದ ಬಗ್ಗೆ ಮಾತನಾಡುತ್ತ ಸಮಯ ಮೀರಿದ್ದರಿಂದ ನಿದ್ರೆಗೆ ಜಾರಿದರು. ಇವರು ಮಲಗಿದ ನಂತರ ಗೌರಿ ಆ ಸ್ಥಳದಿಂದ ಹೊರಟು ಅಲ್ಲಿಯೇ ಸಮೀಪ ನಾಗಪ್ಪ ಎಂಬುವವರ ಕಣದಲ್ಲಿ ರಾಗಿ ರಾಶಿಯ ಮೇಲೆ ಮಲಗಿದಳು. ನಾಗಪ್ಪ ಎದ್ದು ನೋಡುತ್ತಾನೆ. ರಾಶಿ ಕಡೆ ಬಳೆ, ಗೆಜ್ಜೆ, ಶಬ್ದ ಕೇಳಿಸಿತು. ಯಾರಾದರೂ ಹೆಣ್ಣು ಮಗಳು ಬಂದಿರಬಹುದೇ ಅಥವಾ ದೆವ್ವ ಇರಬಹುದೆ ಹೀಗೆ ಯೋಚಿಸಿದನು. ಒಂದು ಅರಿಯದೆ ಗಡಗಡನೆ ನಡುಗಿದನು. ರಾಗಿಯ ರಾಶಿಯಿಂದ ನಾನು ಬರುತ್ತೇನೆ ನಿಮ್ಮ ಮನೆಗೆ ಎಂದು ಹೀಗೆ ಪದೇ ಪದೇ ಹೇಳುತ್ತಿದ್ದಳು. ಇಂಥ ಆಕಸ್ಮಿಕ ಘಟನೆಯಿಂದ ನಾಗಪ್ಪನು ಹೆದರಿದನು. ನಿದ್ದೆ ಬಾರದೆ ನಸುಕಿನ ಜಾವದಲ್ಲಿ ಮನೆಗೆ ಬಂದನು. ಮಗ ಬೇಗನೆ ಬಂದಿರುವುದಕ್ಕೆ, ರಾಶಿ ಬಿಟ್ಟು ಯಾಕೆ ಬಂದೆ ಎಂದು ತಾಯಿ ಪ್ರಶ್ನೆ ಮಾಡುತ್ತಾಳೆ. ಕಣದಲ್ಲಿ ನಡೆದ ಸಂಗತಿಯನ್ನು ತಾಯಿಗೆ ತಿಳಿಸುತ್ತಾನೆ. ಇವನ್ನೆಲ್ಲ

ಕೇಳಿದ ನಂಜಮ್ಮನಿಗೆ ಬಹಳ ಆಶ್ಚರ್ಯವು ಆತಂಕವು ಉಂಟಾಯಿತು. ಈ ರೀತಿಯ ಘಟನೆ ನಡೆಯಲು ಕಾರಣವೇನು ಶಿವ, ಶಿವ ಎಂದು ಚಿಂತಿಸಿದಳು. ನಾಗಪ್ಪನು ಪ್ರತಿದಿನದಂತೆಯೇ ಊಟ ಪೂರೈಸಿಕೊಂಡು ಕಣದ ಕಾವಲು ಕಾಯಲು ಮಾರನೆಯ ದಿನ ಒಂದು ಮಂಚದ ಮೇಲೆ ಕುಳಿತನು. ನಾಗಪ್ಪನು ನಿದ್ದೆ ಮಾಡದೆ, ಹಿಂದಿನ ದಿನದ ಘಟನೆಯನ್ನು ಮೆಲಕು ಹಾಕುತ್ತ ಕುಳಿತನು. ಸ್ವಲ್ಪ ಹೊತ್ತಿನಲ್ಲಿ ಬಳೆ, ಗೆಜ್ಜೆಗಳ ನಾದ ನಾಗಪ್ಪನಿಗೆ ಕೇಳಿಸಿತು. ನಾಗಪ್ಪ ಧೈರ್ಯ ಮಾಡಿ ಯಾರು ಶಬ್ದ ಮಾಡುತ್ತಿರುವುದು ಎಂದು ಕೇಳಿಬಿಟ್ಟನು.

ನೀನು ಮನೆಗೆ ಬರುತ್ತೇನೆ ಎಂದಿರುವೆ, ತಾಯಿ ಯಾರೂ ನೀನು, ಯಾವ ಕಾರಣಕ್ಕಾಗಿ ಮನೆಗೆ ಬರುವೆ ಎಂದು ಪ್ರಶ್ನಿಸಿದನು. ನನ್ನ ಆಗಮನವು ಮನೆಗೆ ಮಾತ್ರ ಅಲ್ಲ, ಊರಿಗೆ ಸಹ ಒಳ್ಳೆಯದ್ದು ಮಾಡುತ್ತೇನೆ ಎಂದು ಹೇಳಿದಳು. ಗೌರಿದೇವಿಯು ಪರಮೇಶ್ವರನ ಹೆಂಡತಿ ಪಾರ್ವತಿಯು ನನ್ನಿಂದ ನಿಮ್ಮ ಗ್ರಾಮಕ್ಕೂ ಕಲ್ಯಾಣವಾಗುವುದೋ ಕಂಟಕವಾಗುವುದೋ ಯೋಚಿಸು ಎಂದು ನಾಗಪ್ಪನಿಗೆ ಕೇಳಿಸಿತು. ನಾಗಪ್ಪನು ನೀನು ಬಂದೆ ಎಂದು ನಮಗೆ ತಿಳಿಯುವುದು ಹೇಗೆ ತಿಳಿಯಬೇಕು ಎಂದಾಗ, ಗೌರಿಯು ಮನೆಯ ತುಂಬಾ ಮಲ್ಲಿಗೆ ಹೂಗಳ ಸುವಾಸನೆ ತುಂಬಿಕೊಳ್ಳುತ್ತದೆ. ನೀವು ನೋಡಿದಾಗ ಮನೆ ತುಂಬಾ ಮಲ್ಲಿಗೆ ಹೂಗಳು ಹರಡುತ್ತವೆ. ಇದು ಮನೆಗೆ ಬಂದಿರುವ ಕುರುಹು ಎಂದೂ ಹೇಳಿದಳು. ಮನೆಗೆ ಬಂದು ನಾಗಪ್ಪ ತನ್ನ ತಾಯಿಗೆ ಎಲ್ಲಾ ವಿಚಾರವನ್ನು ತಿಳಿಸಿದನು.

ನಾಗಪ್ಪನ ತಾಯಿ ನಂಜಮ್ಮನು ಬಹಳ ಶ್ರದ್ಧಾ ಭಕ್ತಿಗಳಿಂದ ಮನೆಯನ್ನು ಶುಚಿ ಮಾಡಿದಳು. ವಾಡೆಯ ತುಂಬಾ ರಾಗಿಯನ್ನು ತುಂಬಿಸಿ, ರಾಗಿಯ ಮೇಲೆ ನಿಂಬೆಹಣ್ಣನ್ನು ಇಡಿಸಿ ಎರಡು ಕಡೆಗಳಲ್ಲಿ ಸಾಲುದೀಪಗಳನ್ನು ಹಚ್ಚಿಸಿ ಇಟ್ಟರು. ಮನೆ ಮಂದಿ, ಊರಿನ ಜನರು ಗೌರಿಯ ಆಗಮನವನ್ನು ಕಾಯುತ್ತ ಇದ್ದರು. ಗೌರಿ ದೇವಿಯು ಬಂದು ಭಕ್ತರ ಮನೆಗೆ ಸೇರಿದ ಕುರುಹಾಗಿ ಮಲ್ಲಿಗೆ ಹೂಗಳು ಹರಡಿದ್ದವು. ಹೂಗಳ ಸುವಾಸನೆಯು ಆ ಪ್ರದೇಶವನ್ನೆಲ್ಲಾ ಹರಡಿತು. ಗ್ರಾಮದ ಜನರೊಂದಿಗೆ ಸೇರಿ ಗೌರಿಗೆ ಭಕ್ತಿಯಿಂದ ಆರತಿ ಮತ್ತು ನೈವೇದ್ಯಗಳನ್ನು ಅರ್ಪಿಸಿದರು. ಅವರ ಶ್ರದ್ಧಾಭಕ್ತಿಗಳಿಗೆ ಸಂತುಷ್ಟಳಾದ ಗೌರಿಯು ನಾಗಪ್ಪರ ಮನೆಯಲ್ಲಿಯೇ ನೆಲೆಯಾಗಿ ನಿಂತಳು. ಅಂದಿನಿಂದ ಗೌರಿದೇವಿಯನ್ನು ಪ್ರತಿವರ್ಷವು ಕಾರ್ತಿಕ ಶುದ್ಧ ಪೌರ್ಣಿಮೆ ಸಂದರ್ಭದಲ್ಲಿ ಗೌರಿಯನ್ನು ಕರೆತಂದು ಪೂಜಿಸುವ ಆರಾಧಿಸುವ ಕಾರ್ಯಕ್ರಮ ಮುಂದುವರೆಯುತ್ತ ಬಂದಿದೆ. ಗೌರಿದೇವಿಯು ಬರುವಾಗ ಮುತ್ತೈದೆಯರು ಆರತಿಯನ್ನು ಹಿಡಿದು ಸ್ವಾಗತಿಸುವುದು, ದಿಂಡುರುಳು ಉರುಳುವುದು ಕಂಡುಬರುತ್ತದೆ. ಈ ಉರುಳು ಸೇವೆ ಮತ್ತು ಆರತಿಗಳ ಸಂಗಮವಾಗಿ ಉರುಳಾರತಿ ಎಂಬ ಹೆಸರು ಬಂದಿದ್ದು ಉರುಳಾರತಿ>ಉಳ್ಳಾರ್ತಿ ಆ ಹೆಸರು ಶಾಶ್ವತವಾಗಿ ನಿಂತಿದೆ.

ಉಳ್ಳಾರ್ತಿಯಲ್ಲಿ 'ಗೌರಿ'ಯು ಬಂದು ನೆಲೆಯಾಗಿ ನಾಗಪ್ಪನವರ ಮನೆಯಿದ್ದ ಸ್ಥಳದಲ್ಲಿ ಗೌರಿ ದೇವಸ್ಥಾನ ನಿರ್ಮಾಣಗೊಂಡಿದೆ. ಭಕ್ತರ ಸಂಖ್ಯೆ ಬೆಳೆದಂತೆಲ್ಲಾ ಈ ದೇವಾಲಯವು

ವಿಶಾಲವಾಗಿ ನಿರ್ಮಾಣವಾಗಿದೆ. ಇಲ್ಲಿ ಸಮುದಾಯ ಭೇದವಿಲ್ಲದೆ ತಾರತಮ್ಯವಿಲ್ಲದೆ ಎಲ್ಲರಿಂದ ಪೂಜೆಗೊಂಡು ಸೇವೆ ಮಾಡಿಸಿಕೊಂಡು ಜನತೆಯನ್ನು ಪುನಿತಗೊಳಿಸಿದ್ದಾರೆ. ಈ ಗೌರಿಯು ಬಂದು ಮನೆಯ ಅಥವಾ ಒಂದು ಊರಿನ ದೇವತೆಯಾಗದೆ ಸುತ್ತಮುತ್ತಲಿನ ಗ್ರಾಮಗಳಿಂದ ಬಂದು ಗೌರಮ್ಮನ ಜಾತ್ರೆಯಲ್ಲಿ ಪಾಲ್ಗೊಳ್ಳುತ್ತಾರೆ.

ಇನ್ನೊಂದು ಐತಿಹ್ಯ ಪ್ರಕಾರ, ಈ ಗ್ರಾಮದ ಜಂಗಮರ ಅಥವಾ ಗ್ರಾಮದ ಬಂಡೆ ಕಪಿಲೆಯ ಯಜಮಾನರ ಮನೆಯೊಳಗಿನ ರಾಗಿ ಕಣಜದಲ್ಲಿ ಗೌರಿ ದೇವಿಯ ಬೆಳ್ಳಿಯ ಮೂರ್ತಿ ಸಿಕ್ಕಿತು. ಕಪಿಲೆಯ ಯಜಮಾನ ನಾಗಪ್ಪನಿಗೆ ಗೌರಿದೇವಿ ಕನಸಿನಲ್ಲಿ ಬಂದು ನನಗೆ ಗರ್ಭಗುಡಿ ನಿರ್ಮಿಸಿ ಪೂಜೆ ಸಲ್ಲಿಸಿದರೆ ಗ್ರಾಮಕ್ಕೆ ಒಳ್ಳೆಯದಾಗುವುದು ಎಂದು ನುಡಿದಳಂತೆ. ದೇವಿಯ ಆಜ್ಞೆಯಂತೆ ಗುಡಿ ನಿರ್ಮಿಸಿ ಅಂದಿನಿಂದ ಜಾತ್ರೆ ನಡೆಸಲಾಗುತ್ತದೆ.

**ಹರಕೆ**

'ಗೌರಿ' ಜಾತ್ರೆ ಪ್ರತಿವರ್ಷ ನವೆಂಬರ್ ತಿಂಗಳಲ್ಲಿ ನಡೆಯುತ್ತದೆ. ಗೌರಿ ಜಾತ್ರೆ ಹೆಣ್ಣು ಮಕ್ಕಳ ಹಬ್ಬ. ಈಕೆಗೆ ಯುವತಿಯರು ಕಂಕಣ ಬಲ ಕೂಡಿ ಬರಲೆಂದು ದಿಂಡುರುಳು ಮತ್ತು ಆರತಿ ಹಿಡಿಯುವ ಮೂಲಕ ಹರಕೆ ಅರ್ಪಿಸುತ್ತಾರೆ. ಮಕ್ಕಳು ಆಗದಿದ್ದವರು ಕೂಡ ಮಕ್ಕಳ ಫಲ ಲಭಿಸಲಿ ಎಂದು ಹೂವಿನ ತೊಟ್ಟಿಲು ಹರಕೆ ತೀರಿಸುತ್ತಾರೆ. ಇಲ್ಲಿ ಯಾವುದೇ ಪ್ರಾಣಿಗಳನ್ನು ಬಲಿ ಕೊಡುವುದಿಲ್ಲ.

**ಬೇಡರ ಕಣ್ಣಪ್ಪನಿಗೆ ಸಂಬಂಧಿಸಿದ ಐತಿಹ್ಯ**

ಬೇಡರ ಕಣ್ಣಪ್ಪನು ದುರ್ಗದ ಎತ್ತರವಾದ ಬಂಡೆಗಳ ಮೇಲೆ ಪ್ರತಿದಿನ ತಪಸ್ಸು ಮಾಡುತ್ತಿದ್ದನಂತೆ. ಒಮ್ಮೆ ರಸಸಿದ್ಧರನ್ನು ಭೇಟಿ ಮಾಡಿ ಅವರಿಂದ ಉಪದೇಶ ಪಡೆದು ಈಶ್ವರನ ಪೂಜೆ ಮಾಡಿ ಅವನನ್ನು ಪ್ರತ್ಯಕ್ಷ ಮಾಡಿಕೊಂಡನೆಂದು, ನಿನ್ನ ಇಷ್ಟಾರ್ಥವೆಂದು ಈಶ್ವರ ಕೇಳಿದನು. ನಮ್ಮ ಸಮುದಾಯದವರು ರಾಜ್ಯಭಾರ ಮಾಡುವಂತೆ ಅನುಗ್ರಹಿಸಬೇಕು ಎಂದು ಕೇಳಿ ಬೇಡರ ಕಣ್ಣಪ್ಪ ವರ ಪಡೆದುಕೊಂಡನೆಂದು, ಅದರಂತೆ ಅವರ ಸಮುದಾಯದವರು ರಾಜ್ಯಭಾರ ಮಾಡಲು ಶಕ್ತಿ ಬಂದಿತೆಂದು ಹೇಳುತ್ತಾರೆ. ಇದರಿಂದ ಇದು ದುರ್ಗದ ಪಾಳೆಯಗಾರರು ಬೇಡರಿದ್ದು, ಹೀಗೆ ಆಳುವ ಶಕ್ತಿ ಪಡೆದರೆಂದು ಹೇಳುವ ಐತಿಹ್ಯವಾಗಿದೆ.

**ಬರಗೇರಮ್ಮ-ತಿಪ್ಪನಘಟ್ಟಮ್ಮ (ಅಕ್ಕತಂಗಿಯರು)**

ಬರಗೇರಮ್ಮ ಮತ್ತು ತಿಪ್ಪನಘಟ್ಟಮ್ಮ ಇವರು ಅಕ್ಕತಂಗಿಯರು. ಚಿತ್ರದುರ್ಗ ನಗರದಲ್ಲಿ ಒಂದೆ ನೆಲೆಸಿದ್ದರು. ಬರಗೇರಮ್ಮ ಮಕ್ಕಳಿಲ್ಲದ ಬಂಜೆ. ತಂಗಿ ತಿಪ್ಪನಘಟ್ಟಮ್ಮನಿಗೆ ಏಳು ಜನ ಮಕ್ಕಳು. ಒಮ್ಮೆ ತಂಗಿಯ ಮಕ್ಕಳನ್ನು ನೋಡುವ ಅಪೇಕ್ಷೆಯಿಂದ ತಿಂಡಿ-ತಿನಿಸುಗಳನ್ನು ತೆಗೆದುಕೊಂಡು ಅಕ್ಕ ತಂಗಿಯ ಮನೆಗೆ ಬರುತ್ತಾಳೆ. ಆದರೆ ತಂಗಿ ಬಂಜೆಯ ಕಣ್ಣು ಮಕ್ಕಳ ಮೇಲೆ ಬೀಳದಿರಲಿ ಎಂಬ ಅಲ್ಪ ಬುದ್ಧಿಯಿಂದ, ತನ್ನ ಮಕ್ಕಳನ್ನು ಜಲ್ಲೆಯೊಂದರಲ್ಲಿ

ಅಡಗಿಸಿಡುತ್ತಾಳೆ. ಮಕ್ಕಳು ಮನೆಯಲ್ಲಿಲ್ಲವೆಂದು ಹೊರಗೆ ಎಲ್ಲೋ ಆಡಲು ಹೋಗಿವೆಯೆಂದು ಸುಳ್ಳು ಹೇಳುತ್ತಾಳೆ. ಬರಗೇರಮ್ಮನ ದಿವ್ಯ ದೃಷ್ಟಿಗೆ ನಿಜಾಂಶ ಹೊಳೆಯುತ್ತದೆ. ಆಕೆ ಕೋಪದಿಂದ ನಿನ್ನ ಮಕ್ಕಳು ಇದ್ದಲ್ಲೆ ಕಲ್ಲಾಗಲೀ ಎಂದು ಶಾಪ ಹಾಕಿ, ಇನ್ನೆಂದು ನಿನ್ನ ಮುಖದರ್ಶನ ಮಾಡಲಾರೆ ಎಂದು ಪ್ರತಿಜ್ಞೆ ಮಾಡಿ ಮುನಿಸಿಕೊಂಡು ಹೊರಟು ಹೋಗುತ್ತಾಳೆ. ಆಗ ಅಕ್ಕ ಶಾಪ ಹಾಕಿದಂತೆ ತನ್ನೆಲ್ಲ ಮಕ್ಕಳು ಇದ್ದಲ್ಲೇ ಕಲ್ಲಾಗಿಬಿಟ್ಟವು. ಆಗ ತಂಗಿ ತಿಪ್ಪನಘಟ್ಟಮ್ಮನಿಗೆ ತಪ್ಪಿನ ಅರಿವಾಗಿ ಕ್ಷಮೆಯಾಚಿಸುತ್ತಾಳೆ ಹಾಗೂ ದುಃಖಿಸುತ್ತಾಳೆ. ಬರಗೇರಮ್ಮನಿಗೂ ಸಹ ಕೋಪದ ಅಬ್ಬರದಲ್ಲಿ ಘಟಿಸಿದ ಆಚಾತುರ್ಯದ ಬಗ್ಗೆ ಪಶ್ಚಾತ್ತಾಪ ಪಟ್ಟು ಆಕೆ ತಂಗಿಯನ್ನು ಸಮಾಧಾನಪಡಿಸಿ ವರ್ಷಕ್ಕೊಮ್ಮೆ ಭೇಟಿಯಾಗೋಣವೆಂದು ವಚನವಿತ್ತಳು. ಈ ವಚನದ ಪರಿಪಾಲನೆಗಾಗಿ ಶತ ಶತಮಾನಗಳಿಂದಲೂ ಅಕ್ಕ-ತಂಗಿಯರ ಬೇಟಿಯೂ ನಡೆಯುತ್ತಾ ಬಂದಿದೆ. ಈಗಲೂ ತಿಪ್ಪನಘಟ್ಟಮ್ಮನ ದೇವಸ್ಥಾನದ ಮುಂದೆ ಕಲ್ಲುಗಳ ರಾಶಿಯನ್ನ ನೋಡಬಹುದು.

**ಹಿಡಂಬ ಮತ್ತು ಸಿದ್ದಾಪುರ ಗ್ರಾಮ**

ಹಿಡಂಬ ಎಂಬ ರಾಕ್ಷಸ ಬೆಟ್ಟದ ಮೇಲಿರುವ ದೊಡ್ಡ ಬಂಡೆಯ ಮೇಲೆ ವಾಸಿಸುತ್ತಿದ್ದನು. ಇವನು ಒಮ್ಮೆ ಸಿದ್ಧಾಪುರ ಎಂಬ ಗ್ರಾಮಕ್ಕೆ ಹೋಗಿ ಪ್ರತಿದಿನ ನನಗೆ ಈ ಗ್ರಾಮದಲ್ಲಿ ಒಂದೊಂದು ಮನೆಯಿಂದ ನಾನಿರುವ ಸ್ಥಳಕ್ಕೆ ಊಟ ಕಳುಹಿಸಬೇಕೆಂದು, ಒಂದು ವೇಳೆ ಮಾತಿಗೆ ತಪ್ಪಿದರೆ ಈ ಊರನ್ನೇ ನಾಶ ಮಾಡುವೆನು ಎಂದು ಹೇಳಿ ಹೋದನು. ಅದರಂತೆ ಒಂದೊಂದು ಮನೆಯವರು ಒಂದೊಂದು ದಿನ ಊಟ ಕಳುಹಿಸುತ್ತಿದ್ದರು. ಸ್ವಲ್ಪ ದಿನಗಳ ನಂತರ ಪಾಂಡವರು ವಿರಾಟ ನಗರದಿಂದ ವನವಾಸಕ್ಕೆಂದು ಚಂದ್ರವಳ್ಳಿಗೆ ಬಂದಿದ್ದರು. ಮಾರನೆಯ ದಿನ ಕುಂತಿ ಭಿಕ್ಷೆಗೆ ಸಿದ್ದಾಪುರ ಗ್ರಾಮಕ್ಕೆ ಹೋದಾಗ ಒಬ್ಬ ಬ್ರಾಹ್ಮಣರ ಮನೆಯಲ್ಲಿ ದುಃಖದಿಂದ ಗಂಡ-ಹೆಂಡತಿ ಅಳುತ್ತಿದ್ದರು. ಕುಂತಿ ಭಿಕ್ಷೆಯನ್ನು ಕೇಳಿದಾಗ ನಮ್ಮದೇ ನಮಗಾಗಿದೆ, ನಿನಗೆ ಭಿಕ್ಷೆ ಎಲ್ಲಿಂದ ಕೊಡಲಿ ಎಂದರು. ಕುಂತಿ ಅವರನ್ನು ವಿಚಾರಿಸಿದಾಗ ನೋಡಮ್ಮ ನಾವು ಬಡ ಬ್ರಾಹ್ಮಣರು ನಮಗೆ ಇರುವುದೆ ಒಬ್ಬನೇ ಮಗ. ದುರ್ಗದ ಬೆಟ್ಟದಲ್ಲಿ ಹಿಡಂಬ ಎಂಬ ರಾಕ್ಷಸ ಇರುವನು. ಅವನಿಗೆ ಊಟ ತೆಗೆದುಕೊಂಡು ಹೋಗಲು ನಮಗೆ ಇವತ್ತು ಸರತಿ ಬಂದಿದೆ. ಎಂದು ಅಳಲು ತೊಡಗಿದಾಗ ಕುಂತಿ ಅವರನ್ನು ಸಮಾಧಾನ ಮಾಡಿ ನಮ್ಮ ಮಗನನ್ನು ಕಳುಹಿಸುವೆನು. ನೀವು ಎಲ್ಲಾ ಸಿದ್ಧತೆ ಮಾಡಿರಿ ಎಂದು ಹೇಳುವಳು. ಆಗ ಬ್ರಾಹ್ಮಣರು ನಮಗೋಸ್ಕರ ನಿಮ್ಮ ಮಗನನ್ನು ಏಕೆ ಆಹುತಿ ಕೊಡುತ್ತೀಯ ಎಂದಾಗ, ಕುಂತಿ ತಡಮಾಡದೆ ಮಕ್ಕಳೆದುರು, ನಡೆದ ವಿಷಯವನ್ನು ತಿಳಿಸಿದಳು. ಆಗ ಭೀಮ ಹಸಿವನ್ನು ತಾಳಲಾರದೆ ಅಮ್ಮ ನಾನು ಹೋಗುತ್ತೇನೆ. ನನ್ನನ್ನು ಕಳುಹಿಸಿಕೊಡು ಎಂದನು. ಭೀಮ ಸಿದ್ದಾಪುರಕ್ಕೆ ಊಟವನ್ನು ಗಾಡಿಗೆ ಹೇರಿಕೊಂಡು ಹೋಗುವಾಗ ಅರ್ಧ ದಾರಿಯಲ್ಲಿ ಒಂದು ಬಂಡೆಗೆ ಅನ್ನವನ್ನು ಸುರುವಿಕೊಂಡು ಊಟ ಮಾಡಿ, ಖಾಲಿ ಗಾಡಿಯನ್ನು ಹೊಡೆದುಕೊಂಡು ದುರ್ಗದ ಬೆಟ್ಟಕ್ಕೆ ಹಿಡಂಬನ ಹತ್ತಿರ ಬಂದು ನಿಲ್ಲುವನು. ಹಿಡಂಬನು ಖಾಲಿ ಗಾಡಿಯನ್ನು

ನೋಡಿ ಆರ್ಭಟದಿಂದ ಘರ್ಜಿಸಿ ಭೀಮನೊಡನೆ ಯುದ್ಧವನ್ನು ಮಾಡಿ ಅಲ್ಲಿಯೇ ಸಂಹಾರವಾದನು. ಭೀಮನ ಬಲವಾದ ಕೈಗಳ ಗುದ್ದುಗಳಿಗೆ ಹಿಡಂಬನ ಹಲ್ಲುಗಳು ಏಕನಾಥೇಶ್ವರಿ ಗುಡಿಯೊಳಗೆ ಬಂದು ಬಿದ್ದವು. ಆಗ ಸಿದ್ದಾಪುರ ಗ್ರಾಮದವರು ಸುಖ ಸಂಸಾರದಿಂದ ಜೀವನ ನಡೆಸಿದರು.

**ರಾಮಾಯಣಕ್ಕೆ ಸಂಬಂಧಿಸಿದ ಐತಿಹ್ಯ**

ತ್ರೇತಾಯುಗದಲ್ಲಿ ಲಂಕಾಪಟ್ಟಣದಲ್ಲಿ ರಾಜ್ಯಭಾರ ಮಾಡಿಕೊಂಡಿದ್ದ ರಾವಣಾಸುರನು ಈಶ್ವರನನ್ನು ಕಾಣಬೇಕೆಂದು ಒಮ್ಮೆ ಕೈಲಾಸಕ್ಕೆ ಬಂದನು. ಈಶ್ವರನ ಅರಮನೆಯ ಬಾಗಿಲಲ್ಲಿ ಕಾವಲಿದ್ದ ನಂದಿ ರಾವಣನನ್ನು ನಿಲ್ಲಿಸಿ ಸಮಯ ನೋಡಿ ಹೇಳುತ್ತೇನೆ ಎಂದನು. ಆ ಮಾತಿಗೆ ರಾವಣನಿಗೆ ಕೋಪ ಬಂದು ನೀನು ನನ್ನನ್ನು ತಡೆಯುತ್ತೀಯ? ಎಂದು ಎಡಗೈಯಿಂದ ಅವನನ್ನು ನೂಕಿದನು. ಆಗ ನಂದಿಗೆ ಕೋಪ ಬಂದು ಕೊಡುಗ ರೂಪದಲ್ಲಿ ಬಂದು ನಿನ್ನ ಸಂಹಾರ ಮಾಡುತ್ತೇನೆ ಎಂದು ಶಾಪ ಕೊಟ್ಟು, ರಾವಣನು ನಿಂತಿದ್ದ ಶಿಖರ ಮುರಿದು ಬೀಳುವ ಹಾಗೆ ತನ್ನ ಕೊಂಬಿನಿಂದ ಚಿಮ್ಮಿಬಿಟ್ಟನು. ಹಾಗೆ ಚಿಮ್ಮಿದ್ದರಿಂದ ಈ ಸ್ಥಳ ಚಿನ್ಮೂಲಗಿರಿ ಎಂದು ಹೆಸರಾಯಿತು. ಮುಂದೆ ಕಪಿ ಸೈನ್ಯದೊಂದಿಗೆ ರಾಮನು ಲಂಕೆಯ ಮೇಲೆ ದಾಳಿ ಮಾಡಲು ಬಂದನು. ಆಗ ಸಮುದ್ರಕ್ಕೆ ಸೇತುವೆ ಕಟ್ಟಲು ಕಪಿಗಳಿಂದ ಪರ್ವತಗಳನ್ನು ತರಿಸುವಾಗ ಕಪಿಗಳು ಚಿನ್ಮೂಲಗಿರಿಯನ್ನು ತೆಗೆದುಕೊಂಡು ಹೋಗಲು ಬಂದಾಗ ಅಲ್ಲಿ ರಸಸಿದ್ಧರು ತಪಸ್ಸು ಮಾಡುತ್ತಿದ್ದರಿಂದ ಅದನ್ನು ನೋಡಿ ತೆಗೆದುಕೊಂಡು ಹೋದರೆ ಶ್ರೀರಾಮದೇವರಿಗೆ ಕೋಪ ಬಂದಿತೆಂದು ಆ ಪರ್ವತವನ್ನು ಮುಟ್ಟದೆ ಅದಕ್ಕಿಂತ ಕಡಿಮೆ ಮಟ್ಟದ ಪರ್ವತಗಳನ್ನು ತೆಗೆದುಕೊಂಡು ಹೋಗಿ, ಅಲ್ಲಿಯ ಸುದ್ದಿಯನ್ನು ರಾಮನಿಗೆ ಹೇಳಿದರು. ಆಗ ರಾಮನು 'ಬಿಟ್ಟು ಬಂದಿದ್ದು ಒಳ್ಳೆಯದಾಯಿತು' ಎಂದನು. ಹೀಗೆ ಪೌರಾಣಿಕ ಘಟನೆಗಳು ನಡೆದ ಸ್ಥಳ ಎನ್ನುವುದರಿಂದಲೇ ಈ ಒಂದು ಸ್ಥಳದ ಮಹಿಮೆ ಪರಿಗಣಿತವಾಗುತ್ತಿದ್ದ ಕಾಲದಲ್ಲಿ ಈ ಮೇಲಿನ ರೀತಿಯ ಐತಿಹ್ಯಗಳು ಹುಟ್ಟಿಕೊಂಡು ಬಂದಿವೆ ಎನ್ನುವುದು ಸ್ಪಷ್ಟವಾಗಿ ಕಾಣುತ್ತದೆ.

**ಬರಗೇರೆ**

ದಾವಣಗೆರೆಗೆ ಹೋಗುವ ರಸ್ತೆಗೆ ದಕ್ಷಿಣಕ್ಕೆ ಎತ್ತರವಾದ ಒಡ್ಡನ್ನು ಹೊಂದಿರುವ ಕೆರೆಯೇ ಬರಗೇರೆ. ಒಂದು ಕಾಲಕ್ಕೆ ಇದರಲ್ಲಿ ಜಲ ಸಮೃದ್ಧಿ ಇದ್ದಿತೆಂದು ತಿಳಿದುಬರುತ್ತದೆ. ಆದರೆ ದೊಡ್ಡದಾದ ಈ ಕೆರೆ ಈಗ ನೀರಿಲ್ಲದೆ ಬರಿಗೆರೆ ಆಗಿದೆ. ಅದರ ಒಳಪ್ರದೇಶದಲ್ಲಿ ಮನೆಗಳು ತಲೆಎತ್ತಿವೆ. ಈ ಕೆರೆಯನ್ನು ಕಟ್ಟಿಸಿದವನು ಹಿಂದೆ ಕೂಲಿಕಾರರಿಗೆ ಕೂಲಿಯನ್ನು ಕೊಡದೆ ಸತಾಯಿಸಿದವನಂತೆ. ಆಗ ಕೂಲಿ ಕಾರ್ಮಿಕರು ಈ ಕೆರೆ ನೀರಿಲ್ಲದೆ ಬರಿಗೆರೆಯಾಗಲಿ ಎಂದು ಶಾಪ ಕೊಟ್ಟರಂತೆ. ಹಾಗಾಗಿ ಇದು ಬರಿಗೆರೆಯಾಗಿದೆ. ಇನ್ನೊಂದು ಐತಿಹ್ಯ ಹೀಗಿದೆ; ಗ್ರಾಮದೇವತೆಯಾದ ಬರಗೇರಮ್ಮ ಪೂಜೆ ಕಾರ್ಯಗಳಿಗಾಗಿ ಪಾಳೆಗಾರರ ಕಾಲದಲ್ಲಿ ಈ ಕೆರೆಯನ್ನು ನಿರ್ಮಿಸಿದ್ದಳು ಎಂದು ತಿಳಿದುಬರುತ್ತದೆ.

**ಕೊನೆಟಿಪ್ಪಣಿಗಳು**

೧. ಪುಟ್ಟಣ್ಣ ಎಂ.ಎಸ್., **ಚಿತ್ರದುರ್ಗ ಪಾಳೆಯಗಾರರು,** ಪು. ೩.

೨. ಲಕ್ಷ್ಮಣ್ ತೆಲಗಾವಿ, **ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು,** ಪು. ೭.

೩. ಅದೇ., ಪುಟ ೭.

೪. ಗಿರಿಜಾ ಟಿ., **ಚಿತ್ರದುರ್ಗ ಜಿಲ್ಲಾದರ್ಶಿನಿ,** ಪು. ೧೦.

೫. ಸೋಮಶೇಖರ್ ಎಸ್.ವೈ., **ಜಟ್ಟಂಗಿ ರಾಮೇಶ್ವರ,** ಪು. ೮.

೬. ಅನ್ನಪೂರ್ಣಮ್ಮ ಸಿ.ಬಿ., **ಮ್ಯಾಸಬೇಡರ ಸಾಂಸ್ಕೃತಿಕ ನಾಯಕಿಯರು ಒಂದು ಅಧ್ಯಯನ,** ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಪು. ೧೬೯.

೭. ರೇಖಾ ಎಸ್.ಟಿ., **ಪಂಚಾಗಣಾಧೀಶ್ವರರು,** ಪುಟ ೮೬.



ಅಧ್ಯಾಯ : ಐದು

# ಪಶುಪಾಲಕರಿಗೆ ಸಂಬಂಧಿಸಿದ ಐತಿಹ್ಯಗಳು

೫.೧. ಬೇಡ ಸಮುದಾಯಕ್ಕೆ ಸಂಬಂಧಿಸಿದ ಐತಿಹ್ಯಗಳು

೫.೨. ಗೊಲ್ಲ ಸಮುದಾಯಕ್ಕೆ ಸಂಬಂಧಿಸಿದ ಐತಿಹ್ಯಗಳು

# ಅಧ್ಯಾಯ : ಐದು

# ಪಶುಪಾಲಕರಿಗೆ ಸಂಬಂಧಿಸಿದ ಐತಿಹ್ಯಗಳು

ಪಶುಪಾಲಕ ನೆಲೆಯಾಗಿರುವ ಚಿತ್ರದುರ್ಗ ಪರಿಸರಕ್ಕೆ ತನ್ನದೇ ಆದ ಸಾಂಸ್ಕೃತಿಕ ಹಿನ್ನೆಲೆಯೆಂಬುದಿದೆ. ಅನಾದಿಯಿಂದಲೂ ಪಶುಪಾಲನೆಯನ್ನು ಕಾಪಾಡಿಕೊಂಡು ಬರುತ್ತಿರುವ ಗೊಲ್ಲ, ಬೇಡ ಸಮುದಾಯಗಳು ಈ ಭಾಗದಲ್ಲಿ ಪ್ರಧಾನವಾಗಿ ಕಂಡುಬರುತ್ತವೆ. ದನ, ಕುರಿ, ಆಡುಗಳ ಪೋಷಣೆಗಾಗಿ ಹುಲ್ಲು ನೀರು ಅರಸುತ್ತ ಸದಾ ವಲಸಿಗರಾಗಿಯೇ ಕಂಡುಬರುತ್ತಾರೆ. ಆದರೆ ಪಶುಪಾಲನೆಯೆಂಬುದು ಉದ್ಯಮವಾಗಿರದೇ ಸಂಸ್ಕೃತಿ ಮತ್ತು ಜೀವನಕ್ಕೆ ಹತ್ತಿರವಾದದ್ದು. ಪಶುಪಾಲನೆಯನ್ನು ತಮ್ಮ ಕುಲಕಸುಬಾಗಿ ಮಾಡಿಕೊಂಡು, ಬದುಕಿನುದ್ದಕ್ಕೂ ಪಶುಪಾಲನೆಯ ಸಂದರ್ಭದಲ್ಲಿ ಜರುಗಿದ ಘಟನೆಗಳು, ಅವಘಡಗಳು, ಅಪಘಾತಗಳನ್ನು ಕಥನಗಳಲ್ಲಿ ಕ್ರೋಢೀಕರಿಸಿ ಜೋಪಾನವಾಗಿಟ್ಟುಕೊಂಡಿದ್ದಾರೆ(ಎಂತಹ ದುಃಖಮಯ ಸನ್ನಿವೇಶಗಳು ಎದುರಾದರೂ ಕೂಡ ಪಶುಪಾಲನೆಯನ್ನು ಈಗಲೂ ಮುಂದುವರೆಸಿಕೊಂಡು ಹೋಗುತ್ತಿದ್ದಾರೆ). ಜೊತೆಗೆ ಅವರ ಸಾಂಸ್ಕೃತಿಕ ಬದುಕೊಂದು ವರ್ಣಮಯ, ಸಾಹಸಗಾಥೆಯಾಗಿದ್ದು, ಬಹು ವಿಸ್ತಾರತೆಯನ್ನು ಪಡೆದುಕೊಂಡಿದೆ.

ಪಶುಪಾಲಕರ ನಂಬಿಕೆ, ಆಚರಣೆ ಮತ್ತು ಸಂಪ್ರದಾಯಗಳು ಧರ್ಮಕ್ಕಿಂತ ಪ್ರಕೃತಿಗೆ ಹೆಚ್ಚು ಹತ್ತಿರವಾಗಿರುತ್ತವೆ. ಅಡವಿ ವಾಸಿಗಳಾದ ಇವರು ಪ್ರಕೃತಿಯಲ್ಲಿ ಜರುಗುವಂತಹ ಸನ್ನಿವೇಶಗಳನ್ನು ಬಹಳ ಹತ್ತಿರದಿಂದಲೇ ಕಾಣುತ್ತ ಅನುಭವವನ್ನು ಪಡೆದಿರುತ್ತಾರೆ. ಹಾಗಾಗಿ ಅವರಲ್ಲಿ ಏನಾದರೂ ಆಚರಣೆಗಳು ಇದ್ದರೆ ಅವು ಹೆಚ್ಚಾಗಿ ವೈಜ್ಞಾನಿಕ ಸತ್ಯದಿಂದ ಕೂಡಿರುತ್ತವೆ. ಅದರಿಂದಲೇ ವರ್ತಮಾನ ಪರಿಸ್ಥಿತಿಗೆ ತೀರ ವಾಸ್ತವ ಎನಿಸುತ್ತವೆ.

ಪಶುಪಾಲಕರು ಪ್ರಕೃತಿ ಆರಾಧಕರು ಮತ್ತು ಭೌತಿಕ ಜಗತ್ತಿಗೆ ಹೆಚ್ಚು ಮಹತ್ವವನ್ನು ಕೊಡುತ್ತಾರೆ. ತಮ್ಮ ಸಮುದಾಯದ ಮೂಲ ಪುರುಷರನ್ನೇ ಆರಾಧ್ಯ ದೈವವನ್ನಾಗಿ ಕಾಣುತ್ತಾರೆ (ಸಮುದಾಯಕ್ಕಾಗಿ ಶ್ರಮಿಸಿದ ಅಥವಾ ಹೋರಾಡಿದಂತಹ ವ್ಯಕ್ತಿಗಳು ದೈವತ್ವಕ್ಕೇರಿದವರು). ಸಮುದಾಯದಲ್ಲಿ ನೈತಿಕವಾಗಿ ಬದುಕಿದ ಮತ್ತು ಪ್ರಾಮಾಣಿಕತೆ, ಶೀಲ, ಪಾವಿತ್ರ್ಯತೆ ಕಾಪಾಡಿಕೊಂಡು ಇತರರಿಗೆ ಮಾದರಿಯಾಗಿದ್ದ ವ್ಯಕ್ತಿ 'ಸಾಂಸ್ಕೃತಿಕ ವೀರ'ನೆಂಬಂತೆ ಕಂಡುಬರುತ್ತಾನೆ. ಈ ಇಂತಹ ವ್ಯಕ್ತಿಗಳನ್ನು ಪಶುಪಾಲಕರು ಕುಲದೇವರಾಗಿ ಮಾಡಿಕೊಂಡಿದ್ದಾರೆ.

ಇವರು ತಮ್ಮ ಜೀವನವನ್ನೇ ಗೋವುಗಳ ಒಡನಾಟದಲ್ಲಿ ಕಳೆದ ಕಾಯಕ ಜೀವಿಗಳು. ಪಶುಪಾಲನೆಯಲ್ಲಿ ಸರ್ವಸುಖಗಳನ್ನು ಕಂಡವರು. ತಾವು ನಂಬಿಕೊಂಡಿರುವ ಮೌಲ್ಯಗಳಿಗೆ ತಮ್ಮ ಸಮುದಾಯಗಳ ಸಂಸ್ಕೃತಿಗೆ ಎಂದೂ ಧಕ್ಕೆ ಬಾರದಂತೆ ನಡೆದುಕೊಂಡವರು. ತಮ್ಮ ಕುಲ, ಶೀಲಗಳಿಗೆ ಭಂಗ ಒದಗಿದಾಗ ಸಮುದಾಯದಿಂದ ಬಹಿಷ್ಕಾರಕ್ಕೆ ಒಳಗಾಗಿ ಬದುಕನ್ನು ತೃಣವೆಂದು ತಿಳಿದು ಜೀವ ಬಿಟ್ಟವರು. ಒಂದಲ್ಲ ಒಂದು ಕಾರಣದಿಂದ ಹೋರಾಡಿ ವೀರಮರಣವನ್ನಪ್ಪಿದ್ದಾರೆ. ಈ ಸಂಗತಿಯು ಪುರಾಣ, ಐತಿಹ್ಯ ಮತ್ತು ಲಭ್ಯವಿರುವ ಮಾಸ್ತಿಕಲ್ಲು ಮತ್ತು ವೀರಗಲ್ಲುಗಳಿಂದ ತಿಳಿದುಬರುತ್ತವೆ.

ಪಶುಪಾಲಕರು ತಮ್ಮ ಪಶುಗಳ ರಕ್ಷಣೆ, ಸಮುದಾಯದ ರಕ್ಷಣೆಗಾಗಿ ತಮ್ಮ ಜೀವನವನ್ನು ತ್ಯಾಗ ಮಾಡಿದ್ದಾರೆ. ಹಲವಾರು ದಾಳಿಗಳನ್ನು ಎದುರಿಸಿ ಹಾಗೂ ಕಾಡುಪ್ರಾಣಿಗಳೊಂದಿಗೆ ಸೆಣಸಾಡಿ ವೀರಮರಣವನ್ನಪ್ಪಿ, ದೈವತ್ವಕ್ಕೇರಿದ್ದಾರೆ. ಈ ಪರಿಸರದಲ್ಲಿ ಬಹುಪಾಲು ಸಾಂಸ್ಕೃತಿಕ ವೀರರು ಜನಪದರಲ್ಲಿ ಗುರುತಿಸಲ್ಪಡುವರು. ಇವರ ಬಗೆಗೆ ಶಿಷ್ಟ ಇತಿಹಾಸದಲ್ಲಾಗಲಿ, ಶಾಸನಗಳಾಗಲಿ, ಲಿಖಿತ ಆಧಾರಗಳಾಗಲಿ ಲಭಿಸುವುದಿಲ್ಲ. ಈ ವೀರರ ಬಗೆಗೆ ಜನಪದರಲ್ಲಿ ಪುರಾಣ-ಐತಿಹ್ಯ, ಕಥೆ, ಕಾವ್ಯ, ಕೋಲಾಟ ಪದಗಳು ಹುಟ್ಟಿಕೊಂಡಿವೆ. ಯಾವುದೋ ಒಂದು ಕಾರಣಕ್ಕಾಗಿ, ಸಮುದಾಯದ ರಕ್ಷಣೆ ಪಶು-ಸಂಪತ್ತಿನ ರಕ್ಷಣೆ, ಸ್ತ್ರೀಯರ ಮಾನ ರಕ್ಷಣೆಗಾಗಿ ಹೋರಾಡಿ ಮಡಿದ ವೀರರನ್ನು ಜನಪದರು ಆರಾಧಿಸಿಕೊಂಡು ಬಂದಿದ್ದಾರೆ. ಗೋರಕ್ಷಣೆಗಾಗಿ ಹೋರಾಡಿದ ವೀರರ ಚರಿತ್ರೆಯನ್ನು ಮೌಖಿಕ ಸಾಹಿತ್ಯ ತಿಳಿಸುತ್ತದೆ.

### ೫.೧. ಬೇಡ ಸಮುದಾಯಕ್ಕೆ ಸಂಬಂಧಿಸಿದ ಐತಿಹ್ಯಗಳು

### ಒಂಟಿಕೊಂಬು ಬುಲ್ಲಾವು, ಪಂಪಾದ್ರಿ ಬಸವರಿಗೆ ಸಂಬಂಧಿಸಿದ ಐತಿಹ್ಯ

ಒಮ್ಮೆ ಬ್ರಹ್ಮ, ವಿಷ್ಣು, ಮಹೇಶ್ವರರು ಲೋಕ ಸಂಚಾರ ಮಾಡುತ್ತಾ ಬರುತ್ತಿದ್ದರು. ಆಗ ಭೂಮಿಯ ಮೇಲೆ ದಟ್ಟ ಅರಣ್ಯವೇ ಇದ್ದಿತ್ತು. ಆ ಅರಣ್ಯಕ್ಕೆ ಮನಸೋತು ಅಡವಿ ಸೂರಮ್ಮನಹಳ್ಳಿ ಮತ್ತು ಮುತ್ತಿಗಾರಹಳ್ಳಿ ನಡುವೆ ಕಂಡುಬರುವ 'ತುಗ್ಗಿಲು ರಾಯಲು ಬಂಡೆ' ಸಮೀಪ ಚಿಂತಗುಟ್ಲ ಹಳ್ಳದಲ್ಲಿ ಇಳಿದರು. ಈ ಹಳ್ಳದಲ್ಲಿ ಮೂರು ಚಿಲುಮೆಗಳನ್ನು ತೋಡಿದರು. ಮೂರು ಜನರು ಮುಖ ಮರ್ಜನ ಮಾಡಿ ಶಿವಪೂಜೆಯನ್ನು ಮುಗಿಸುತ್ತಾರೆ. ತರುವಾಯ ಬ್ರಹ್ಮ, ವಿಷ್ಣು ಇಬ್ಬರು ನಾಮಧರಿಸುವಾಗ ಅದರ ಶುದ್ಧಿಗೆ ಗೋವಿನ ಮೂತ್ರ ಬೇಕಾಯಿತು. ಆಗ ಬ್ರಹ್ಮ ಒಂದು ಒಂಟಿಕೊಂಬು ಬುಲ್ಲಾವು ಮತ್ತು ಪಂಪಾದ್ರಿ ಬಸವನನ್ನು ಸೃಷ್ಟಿಸಿ ಗೋಮೂತ್ರ ತೆಗೆದು ಬ್ರಹ್ಮ, ವಿಷ್ಣು ನಾಮವನ್ನು ಮತ್ತು ಮಹೇಶ್ವರ ವಿಭೂತಿಯನ್ನು ಧರಿಸುವಾಗ, ವಿಭೂತಿ ತುಣುಕೊಂದು, ಹೀಗೆ ಮಹೇಶ್ವರನು ಹಣೆಯ ಮೇಲೆ ನಾಮ ಧರಿಸುವಾಗ ಅದು ಚಿಲುಮೆಗೆ ಜಾರಿ ಬಿದ್ದಿತು. ಆಗ ಅದನ್ನು ಬ್ರಹ್ಮನು ಮುಚ್ಚಿ ಹೋದನೆಂದು, ನಂತರ ಒಂಟಿಕೊಂಬು ಬುಲ್ಲಾವು ಮತ್ತು ಪಂಪಾದ್ರಿ ಬಸವ ಚಿಲುಮೆ ಕಡೆ ನೀರು ಕುಡಿಯಲು

ಬಂದವು. ಬುಲ್ಲಾವುನ ಕಾಲಿನ ಗೊರಸಿಗೆ ವಿಭೂತಿಯ ತುಣಕೊಂದು ಸೇರಿಕೊಳ್ಳುತ್ತದೆ. ಹೀಗೆ ಪ್ರತಿದಿನ ಈ ಹಸುಗಳು ಕಾಡಿನಲ್ಲಿ ಮೇಯ್ದು ಆ ಚಿಲುಮೆಗಳಲ್ಲಿ ನೀರು ಕುಡಿದು ಕಾಡಿನಲ್ಲಿ ವಾಸವಾಗಿರುತ್ತವೆ. ದಿನಗಳು ಕಳೆದಂತೆ ಚಿಟ್ಟ ಗೊರಸಿನ ಮಧ್ಯೆ ಹುಣ್ಣಾಗುತ್ತದೆ. ಹೀಗೆ ಕಾಲ ಕಳೆದ ಒಂಬತ್ತು ತಿಂಗಳು ತುಂಬಿ ಒಂಟಿಕೊಂಬು ಬುಲ್ಲಾವುನ ಚಿಟ್ಟಗೊರಸಿನಲ್ಲಿ ಹುಟ್ಟಿದ ಹುಣ್ಣು ಒಡೆದು ಆ ರಕ್ತವು ಹಳ್ಳವಾಗಿ ಹರಿಯುತ್ತದೆ. ಆ ರಕ್ತದಲ್ಲಿ ಶಿಶು ಜನನವಾಗುತ್ತದೆ. ಈ ಶಿಶು ಅಡವಿಯಲ್ಲಿ ರೋಧನ ಮಾಡುತ್ತದೆ. ಅದೇ ಸಮಯದಲ್ಲಿ ಶಿವ-ಪಾರ್ವತಿಯರು ಮಗು ಆಳುವುದನ್ನು ಕೇಳಿಸಿಕೊಂಡು ಸಮೀಪ ಬಂದು ಪಾರ್ವತಿ ಶಿಶುವಿನ ಹೊಕ್ಕಳುರಿ ಕೊಯ್ದು ಅಲ್ಲಿಯೇ ಹಳ್ಳದ ದಡದಲ್ಲಿ ಒಂದು ಗಿಡದ ಕೆಳಗೆ ಮಲಗಿಸಿ ಮುಂದೆ ನಡೆದರು. ಆ ಮರದಲ್ಲಿ ಜೇನೊಂದು ಕಟ್ಟಿತ್ತು. ಆ ಜೇನುಗೂಡಿನಿಂದ ಜೇನುತೊಟ್ಟು ಹನಿ ಹನಿಯಾಗಿ ಬಾಯಿಗೆ ಬಿದ್ದು, ಮಗು ಚೇತರಿಸಿಕೊಂಡಿತು.

ಹೀಗೆ ಕೆಲವು ದಿನಗಳು ಕಳೆದ ನಂತರ ಅಡವಿಯಲ್ಲಿ ಮಂದರಾಜನ ಕಡೆಯವರಾದ ಚೆಂಚರು ಗೆಡ್ಡೆ, ಗೆಣಸು, ಫಲಾಹಾರ ಮಾಡಿಕೊಂಡು ಈ ಹಳ್ಳದ ಸಮೀಪ ಬರುವಾಗ ಈ ಮಗು ಜೋರಾಗಿ ಆಳುತ್ತಿತ್ತು. ಆ ಮಗುವನ್ನು ಎತ್ತಿಕೊಂಡು ಮುದ್ದಾಡಿದರು. ಅವನಿಗೆ ಗಿಡದ ಬುಡದಲ್ಲಿ ಇದ್ದಿದ್ದರಿಂದ ಚಟ್ಲುಮಲ್ಲಿರಾಜು ಅಂತ ನಾಮಕರಣ ಮಾಡಿದರು. ಹೀಗೆ ಪ್ರತಿದಿನ ಫಲಹಾರ ಕೊಡುತ್ತಾ ರಕ್ಷಣೆ ಮಾಡುತ್ತಿದ್ದರು. ಕಾಲಗತಿಸಿದ ನಂತರ ಅವನಿಗೆ ಅಡವಿ ಚೆಂಚರು ಚೆಂಚು ಶಿಕನಾಯಕ ಎಂದು ಮರುನಾಮಕರಣ ಮಾಡಿದರು. ಇವನು ದಿನೇ ದಿನೇ ಬೆಳೆಯತ್ತ ದೊಡ್ಡವನಾದ ಮೇಲೆ ಒಂಟಿಕೊಂಬು ಬುಲ್ಲಾವು ಮತ್ತು ಪಂಪಾದ್ರಿ ಬಸವನನ್ನು ಅಡವಿಯಲ್ಲಿ ಪಾಲನೆ ಮಾಡುತ್ತ ಕಾಲ ಕಳೆದನು. ನಂತರ ಈ ದನಕರುಗಳ ಸಂತತಿ ಬೆಳೆಯಿತು. ಈ ಒಂಟಿಕೊಂಬು ಬುಲ್ಲಾವು ಪಂಪಾದ್ರಿ ಬಸವನ ಮುಂದಿನ ಪೀಳಿಗೆಯೇ ಶ್ರೀಶೈಲ ಮಲ್ಲಯ್ಯ ಅಥವಾ ಮುತ್ತಿಗಾರರ ಎತ್ತುಗಳೆಂದು ಪ್ರಸ್ತುತ ಇವುಗಳನ್ನು ಕರೆಯುತ್ತಾರೆ. ಈ ಎತ್ತುಗಳನ್ನು(ದನಕರುಗಳು) ಆರಂಭದ ಅಡವಿಯಲ್ಲಿ ಅದೇ ಪ್ರದೇಶದಲ್ಲಿ ಇಂದಿಗೂ ನೆಲೆ ನಿಂತಿರುವುದನ್ನು ಕಾಣಬಹುದು. ಪ್ರಸ್ತುತ ಶ್ರೀ ಶೈಲ ಅಥವಾ ಮುತ್ತಿಗಾರರ ಎತ್ತುಗಳನ್ನು ಒಂಟಿಕೊಂಬು ಬುಲ್ಲಾವು, ಪಂಪಾದ್ರಿ ಬಸವನ ಮುಂದಿನ ಪೀಳಿಗೆಯ ಎತ್ತುಗಳೆಂದು ಜನಪದರು ಇವುಗಳನ್ನು ತೋರಿಸುತ್ತಾರೆ. ಈ ಎತ್ತುಗಳು ಮುತ್ತಿಗಾರರ ಅಡವಿಯಲ್ಲಿವೆ. ಇವುಗಳನ್ನು ಕಾಡಿನ ಮಧ್ಯೆ ಗೂಡುಕಟ್ಟಿ ಸಂರಕ್ಷಿಸಿದ್ದಾರೆ. ಇವುಗಳನ್ನು ಪಾಲನೆ ಮಾಡಲು ಕಿಲಾರಿಗಳನ್ನು ವಂಶಪರಂಪರೆಯಾಗಿ ನೇಮಕ ಮಾಡಿದ್ದಾರೆ. ಹಿಂದೆ ಶಿವನು ಈ ಎತ್ತುಗಳಿಗೆ ಗೂಡುಕಟ್ಟಿ, ಈ ಗೂಡಿನೊಳಗೆ 'ಒಡಪು'(ಬೆರಗು) ಹಾಕಿ ಹೋದನೆಂದು ನಂಬಿಕೆ ಇವರಲ್ಲಿದೆ. ಆ ಒಡಪುವಿನ ಕುರುಹಾಗಿ ಈ ಗೂಡಿನ ಮಧ್ಯೆ ಒಡಪನ್ನು ಹಾಕುತ್ತ, ಪೂಜಿಸುತ್ತ ಇಂದಿಗೂ ಉಳಿಸಿಕೊಂಡು ಬಂದಿದ್ದಾರೆ.

**ಮಂದರಾಜನಿಗೆ ಸಂಬಂಧಿಸಿದ ಐತಿಹ್ಯಗಳು**

ಮಂದರಾಜನು ಮೂಗನಾಯಕನ ನಂತರ ಪ್ರಮುಖ ಪಶುಪಾಲಕನಾಗಿದ್ದವನು. ಇವನು ಬೇಡ ಸಮುದಾಯಕ್ಕೆ ಸೇರಿದ್ದು, ಮಂದಲಾರು ಬೆಡಗಿನ ಮೂಲ ಪುರುಷನಾಗಿ ಗುರುತಿಸಿಕೊಳ್ಳುತ್ತಾನೆ. ಮಂದರಾಜನ ಹೆಸರು ಬರಲು ಐತಿಹ್ಯ ಹೀಗಿದೆ; ಇವನ ತಂದೆ ತಾಯಿಗಳು ಶ್ರೀಶೈಲ ಪರ್ವತ ಪ್ರದೇಶದಲ್ಲಿ ಪಶುಪಾಲನೆ ಕೈಗೊಂಡು ಕಾಡಿನ ಮಧ್ಯೆ ಗೂಡು(ಹಟ್ಟಿ) ಕಟ್ಟಿಕೊಂಡು ನೆಲೆಸಿದ್ದರಂತೆ. ಹೀಗೆ ನೆಲೆಸಿರಬೇಕಾದರೆ ಪಶುಗಳ ಮಂದೆ ಬಳಿ ಒಂದು ಗಂಡು ಮಗು ಜನಿಸಿತು. ಪಶುಮಂದೆಯ ಬಳಿ ಜನಿಸಿದ ಮಗುವಿಗೆ ಮಂದರಾಜು ಎಂದು ಕರೆದರು. ಮಂದ ಎಂಬುದು ತೆಲುಗು ಪದ. ಇದು ಕನ್ನಡದಲ್ಲಿ ಮಂದೆ ಆಗುತ್ತದೆ. ಮಂದೆ ಅಂದರೆ ದನಗಳನ್ನು ಒಂದು ಕಡೆ ತರಬುವ ಸ್ಥಳ ಅಥವಾ ತಂಗುವ ಸ್ಥಳ ಎಂಬ ಅರ್ಥವಿದೆ. ಇದಕ್ಕೆ ಗೂಡು, ಹಟ್ಟಿ, ದೊಡ್ಡಿ ಎಂಬ ಇನ್ನಿತರೆ ಅರ್ಥಗಳಿವೆ. ಹೀಗೆ ಪಶು ಮಂದೆಯ ಬಳಿ ಜನಿಸಿದ ಗಂಡು ಮಗುವಿಗೆ ಸಹಜವಾಗಿ ಮಂದರಾಜ ಎಂಬ ಹೆಸರು ರೂಢಿಯಾಗಿ ಬಂದಿರಬಹುದು. ರಾಜ ಎಂಬುದು ವಿಶೇಷವಾಗಿ ಸೇರಿಕೊಂಡಿದೆ. ಇಡೀ ಪಶುಮಂದೆಗೆ ಒಡೆಯ ರಾಜ, ಅಧಿಪತಿ, ಭೂಪಾಲ ಎಂಬರ್ಥದಲ್ಲಿ ಕರೆದಿರಬಹುದು. ಮಂದರಾಜನಿಗೆ, ಮಂದಭೂಪಾಲ, ಮಂದಲ ಮಹಾದೇವ ಎಂಬ ಹೆಸರುಗಳುಂಟು. ಇವನನ್ನು 'ಕಾಡುಬೇಡ ವರಪುತ್ರ' ಎಂಬುದಾಗಿ ಕರೆಯಲಾಗುತ್ತದೆ. ಇವನು ದೊಡ್ಡವನಾದ ಮೇಲೆ ಪಶುಪಾಲನೆಯನ್ನು ಕೈಗೊಳ್ಳುತ್ತಾನೆ. ಇವನು ಪಶುಸಂಪತ್ತನಲ್ಲಿ ಆಗರ್ಭ ಶ್ರೀಮಂತನಾಗುತ್ತಾನಂತೆ. ನಂತರ ಪ್ರಮೀಳೆಯನ್ನು ಮದುವೆ ಮಾಡುತ್ತಾರೆ. ಇವರಿಗೆ ಐದು ಜನ ಮಕ್ಕಳಾಗುತ್ತಾರೆ. ಕನಕ ಧರ್ಮರಾಜ, ಕಲ್ಲಿಮರಾಜು, ಕಾಟಮರಾಜು, ಬೋಡಿದಾಸರಿ ಮತ್ತು ದಾನಸಾಲಮ್ಮ ಎಂಬ ಐದು ಜನ ಮಕ್ಕಳಿಗೆ ಪ್ರಮೀಳೆ ಜನ್ಮ ನೀಡುತ್ತಾಳೆ. ಮುಂದೆ ಇವರು ಸಹ ಬೇಟೆ ಮತ್ತು ಪಶುಪಾಲನೆಯನ್ನು ಕೈಗೊಳ್ಳುತ್ತಾರೆ. ಮಂದರಾಜನ ಸಂತತಿಗೆ 'ಮಂದಲಾರು' ಎಂಬ ಬೆಡಗು ಹುಟ್ಟಿಕೊಂಡಿತು. ಮಂದಲಾರು ಬೆಡಗು ಬೇಡನಾಯಕರಲ್ಲಿ ಪ್ರಧಾನವಾಗಿ ಕಂಡುಬರುವ ಉಪ ಬೆಡಗಾಗಿದೆ. ಇಂದಿಗೂ ಈ ಬೆಡಗನ್ನು ಕಾಣಬಹುದು. ಈ ಬೆಡಗನ್ನು ಕುರಿತು ಜನಪದ ಗಾದೆ ಈ ರೀತಿ ಇದೆ. 'ಅಂದರಕಿ ಅಂದವಾಡು ಮಂದವಾಡು' ಎಂಬ ಉಕ್ತಿ ಜನಪದರಲ್ಲಿ ಬಳಕೆಯಲ್ಲಿ ಇದೆ. ಮಂದಲಾರು ಎಂಬ ಬೆಡಗು ಪಶುಪಾಲನೆ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿರುವಂಥದ್ದು. ಇದು ಪಶುಪಾಲನೆಯನ್ನು ಸೂಚಿಸುತ್ತದೆ.

**ಶುಕ್ಲ ಮಲ್ಲಿನಾಯಕ(ಸಂಚು ಶಿಖಾನಾಯಕ)ನಿಗೆ ಸಂಬಂಧಿಸಿದ ಐತಿಹ್ಯ**

ಶುಕ್ಲ ಮಲ್ಲಿನಾಯಕ ಬೇಡರ ಆರಂಭದ ಪಶುಪಾಲಕ. ಈತನು 'ಎನುಮಲಾರು' ಬೆಡಗಿನ ಮೂಲ ಪುರುಷನಾಗಿ ಕಂಡು ಬರುವನು. ಈತನಿಗೆ ಶುಕ್ಲ ಮಲ್ಲಿನಾಯಕ, ಸಂಚು ಶಿಖಾನಾಯಕ, ಶುಕ್ಲ ಮಲ್ಲಯ್ಯ, ಶುಕ್ಲಮಲ್ಲನಾಯಕಡು, ಶ್ರೀಶೈಲಮಲ್ಲಯ್ಯ ಎಂಬ ಹೆಸರುಗಳಿಂದ

ಕರೆಯುತ್ತಾರೆ. ಈತನಿಗೆ ಸಂಬಂಧಿಸಿದ ಐತಿಹ್ಯ ಹೀಗಿದೆ. ಕೈಲಾಸದಿಂದ ಶಿವನು ಬರುತ್ತಿರುವಾಗ ಕೃಷ್ಣಾ-ಗೋದಾವರಿ ನದಿ ಬಯಲಿನ ಪ್ರಕೃತಿಗೆ ಮನಸೋತು ಶ್ರೀ ಶೈಲ ಪರ್ವತ ಪ್ರದೇಶದಲ್ಲಿ ಇಳಿದನು. ಇಲ್ಲಿ ಹಳ್ಳವೊಂದರಲ್ಲಿ ಮೂರು ಚಿಲುಮೆಗಳನ್ನು ತೋಡಿ ಗಂಗೆಯನ್ನು ಬರಮಾಡಿಕೊಂಡು ಮುಖ ತೊಳೆದು, ಮರಳಿನ ಲಿಂಗಮಾಡಿ, ಶಿವಪೂಜೆಯನ್ನು ಮುಗಿಸಿ ನಂತರ ವಿಭೂತಿಯನ್ನು ಹಣೆಯ ಮೇಲೆ ಧರಿಸುವಾಗ ಅದರ ಶುದ್ಧಿಗೆ ಗೋಮೂತ್ರ ಬೇಕಾಯಿತು. ಆಗ ಶಿವನು ಒಂಟಿಕೊಂಬು ಬುಲ್ಲಾವು ಪಂಪಾದ್ರಿ ವೃಷಭನನ್ನು ಸೃಷ್ಟಿಸಿ ಅವುಗಳಿಂದ ಗೋಮೂತ್ರದ ಹನಿಯನ್ನು ತೆಗೆದು ಶುದ್ದಿ ಮಾಡಿಕೊಂಡು ಹಣೆಗೆ ವಿಭೂತಿ ಧರಿಸಿದನು. ಹೀಗೆ ವಿಭೂತಿ ಧರಿಸುವಾಗ ವಿಭೂತಿ ಕಣವೊಂದು ಚಿಲುಮೆ ಬಳಿ ಬಿದ್ದಿತು. ಅದನ್ನು ಮರಳು ಮುಚ್ಚಿ ಮುಂದೆ ಹೋದನು. ಕಾಡಿನಲ್ಲಿ ಬುಲ್ಲಾವು ಮತ್ತು ಪಂಪಾದ್ರಿ ವೃಷಭ(ಬಸವ) ಮೇಯುತ್ತಾ ನೀರು ಕುಡಿಯಲು ಹಳ್ಳಕ್ಕೆ ಬಂದವು. ಚಿಲುಮೆಯಲ್ಲಿ ನೀರು ಕುಡಿಯುವಾಗ, ಬುಲ್ಲಾವುನ ಕಾಲಿನ ಬೆಟ್ಟಗೊರಸಿನಲ್ಲಿ ವಿಭೂತಿ ಕಣವೊಂದು ಸೇರಿಕೊಂಡಿತು. ಹೀಗೆ ಪ್ರತಿದಿನ ಈ ಎರಡು ಹಸುಗಳು ಕಾಡಿನಲ್ಲಿ ಮೇಯುತ್ತಾ ಚಿಲುಮೆಯಲ್ಲಿ ನೀರು ಕುಡಿಯುತ್ತ ಕಾಲ ಕಳೆದವು. ದಿನಗಳು ಕಳೆದಂತೆ ಬುಲ್ಲಾವು ಚಿಟ್ಟಗೊರಸಿನಲ್ಲಿ ಹುಣ್ಣು ದಿನೇ ದಿನೇ ದೊಡ್ಡದಾಗುತ್ತದೆ. ಹೀಗೆ ದೊಡ್ಡದಾಗಿ ಒಂಬತ್ತು ತಿಂಗಳ ನಂತರ ಆ ಹುಣ್ಣು ಒಡೆದು ರಕ್ತವಾಗಿ ಹರಿಯುತ್ತದೆ. ಆ ರಕ್ತದಲ್ಲಿ ಗಂಡು ಶಿಶು ಜನನವಾಗುತ್ತದೆ. ಶಿಶು ಅಡವಿಯಲ್ಲಿ ಬಹಳ ರೋಧನ ಮಾಡುತ್ತದೆ. ಆಕ್ರಂದನ ಮುಗಿಲು ಮುಟ್ಟುತ್ತದೆ. ಅದೇ ಸಮಯಕ್ಕೆ ಶಿವ-ಪಾರ್ವತಿಯರು ನಂದಿವಾಹನವನ್ನೇರಿ ಬರುತ್ತಿದ್ದರು. ಶಿಶು ಅಳುವುದನ್ನು ಕೇಳಿಸಿಕೊಂಡು, ನಂದಿವಾಹನವನ್ನು ಶಿಶುವಿನ ಬಳಿ ಇಳಿಸುತ್ತಾರೆ. ಪಾರ್ವತಿ ಶಿಶುವನ್ನು ಎತ್ತುಕೊಂಡು ಆ ಚಿಲುಮೆಯಲ್ಲಿ ಸ್ನಾನ ಮಾಡಿಸಿ, ಹಾಲು ಉಣಿಸಿ ಹೊಕ್ಕಳುರಿಯನ್ನು ಕುಯ್ದು, ಅಲ್ಲಿಯೇ ಹಳ್ಳದ ದಡದಲ್ಲಿ ಗಿಡದ ಕೆಳಗೆ ಎಲೆಗಳನ್ನು ಹಾಸಿ ಅದರ ಮೇಲೆ ಮಲಗಿಸುತ್ತಾಳೆ. ಆ ಶಿಶು ಶುಕ್ಲ ಪಕ್ಷದ ಹುಣ್ಣಿಮೆ ದಿನದಂದು ಜನಿಸಿದ್ದರಿಂದ, ರಕ್ತದ ಮಲೀನದಿಂದ ಜನಿಸಿದವನಿಗೆ ಶುಕ್ಲಮಲ್ಲಿ ಎಂದು ನಾಮಕರಣ ಇಟ್ಟು, ಆ ಗಿಡಕ್ಕೆ ಜೇನುಕಟ್ಟಿ ಮುಂದೆ ಹೋದರು. ಜೇನಿನಿಂದ ಒಂದೊಂದೆ ತೊಟ್ಟು ಆ ಮಗುವಿನ ಬಾಯಿಗೆ ಬೀಳುತ್ತಿತ್ತು. ಅಡವಿಯಲ್ಲಿ ಮಂದ ಭೂಪಾಲನ ಮಕ್ಕಳು, ಚೆಂಚರು ಬೇಟೆ ಮತ್ತು ಫಲಾಹಾರವನ್ನು  ಹುಡುಕುತ್ತ ಬರುತ್ತಿದ್ದರು. ಹೀಗೆ ಬರುವಾಗ ಮಗುವಿನ ರೋಧನ ಕೇಳಿಸಿ ಹತ್ತಿರ ಬಂದರು. ಈ ಮಗುವನ್ನು ನೋಡಿ ಎತ್ತಿ ಮುದ್ದಾಡಿದರು. ಗಿಡದ ಕೆಳಗೆ ಮಗು ಇದ್ದುದರಿಂದ 'ಚೆಟ್ಲಪ್ಪ ರಾಜ' ಅಂತ ಕರೆದರು. ಚೆಟ್ಲಪ್ಪರಾಜ ಎನ್ನುವುದು ತೆಲುಗುಪದ. ಇದರ ಕನ್ನಡಪದ ಗಿಡಗಳ ರಾಜ ಎಂದಾಗುತ್ತದೆ. ನಂತರ ಅಡವಿ ಚೆಂಚರು ಚೆಂಚು ಶಿಖಾನಾಯಕನೆಂದು ಮರುನಾಮಕರಣ ಮಾಡಿದರು. ಈ ಮಗುವಿಗೆ ಅಡವಿಯಲ್ಲಿ ದಿನಾಲು ಫಲಾಹಾರ ಕೊಡುತ್ತ ರಕ್ಷಣೆ ಮಾಡಿದರು. ಕಾಲಗತಿಸಿದ

ನಂತರ ಆ ಮಗು ಬೆಳೆಯುತ್ತ ದೊಡ್ಡವನಾಗುತ್ತಾನೆ. ಆಗ ಒಂಟಿಕೊಂಬು ಬುಲ್ಲಾವು, ಪಂಪಾದ್ರಿ ಬಸವನನ್ನು ಈ ಅಡವಿಯಲ್ಲಿ ಪಾಲನೆ ಮಾಡುತ್ತಾನೆ. ಇವುಗಳ ಸಂತತಿ ವೃದ್ಧಿಯಾಗುತ್ತದೆ.

ಶುಕ್ಲಮಲ್ಲಿನಾಯಕನು ಪ್ರಾಯಕ್ಕೆ ಬಂದಾಗ ಅಡವಿ ಚೆಂಚರ ಮಂದಗಿರಿಯ ಮಂದಭೂಪಾಲನ ಮಗಳಾದ ದಾನಸಾಲಮ್ಮಳನ್ನು ನಿಶ್ಚಯಿಸಿ ವಿವಾಹ ಮಾಡುತ್ತಾರೆ. ದಾನಸಾಲಮ್ಮಳಿಗೆ ತನ್ನ ತಂದೆ ಉಡುಗೊರೆಯಾಗಿ ಪಶುಸಂಪತ್ತನ್ನು ನೀಡಿದನಂತೆ. ನಂತರ ಶಿವನು ಶುಕ್ಲಮಲ್ಲಿ ನಾಯಕನಿಗೆ ಏಳುನೂರು ಬೂದೆತ್ತುಗಳನ್ನು, ಏಳು ನೂರು ಸಲಗೆತ್ತುಗಳನ್ನು ಹಾಗೂ ತ್ರಿಶೂಲವನ್ನು ನೀಡಿದನು. ಈ ಎತ್ತುಗಳಿಗೆ ಗೂಡನ್ನು ಕಟ್ಟಿ, ಗೂಡಿನಮಧ್ಯೆ ಶಿವನು 'ಒಡಪು'(ಬೆರಗು) ಹಾಕಿ ಪ್ರತಿದಿನ ಶಿವಪೂಜೆ ಕೈಗೊಳ್ಳು ಎಂದು ಆಶೀರ್ವಾದ ಮಾಡಿ ಹೊರಟು ಹೋದನಂತೆ. ಅಂದಿನಿಂದ ಇವರು ಶ್ರೀಶೈಲ ಪ್ರದೇಶದಲ್ಲಿ ಶಿವನ ಆಶೀರ್ವಾದದಿಂದ ಪಶುಪಾಲನೆ ಮಾಡುತ್ತ ನೆಲೆನಿಂತರಂತೆ. ಶಿವನ ಒಡಪು ಎಂದು ಅಂದಿನಿಂದ ಇಂದಿನವರೆಗೆ ಬೇಡ ಸಮುದಾಯದಲ್ಲಿ ಶ್ರೀಶೈಲ ಮಲ್ಲಯ್ಯನ ಎತ್ತುಗಳ ಗೂಡಿನಲ್ಲಿ ಇಂದಿಗೂ ಉಳಿಸಿಕೊಂಡು ಬಂದಿದ್ದಾರೆ. ಇಲ್ಲಿ ಕಿಲಾರಿಗಳು ಪ್ರತಿನಿತ್ಯ ಶಿವನನ್ನು ಈ ಒಡಪುವಿನ ಮೂಲಕ ಆರಾಧಿಸುತ್ತಾರೆ. ಶಿವನನ್ನು ಪಶುಪತಿಯೆಂದು ಪೂಜಿಸುತ್ತಾರೆ. ಈ ಎತ್ತುಗಳು ಶಿವನಿಂದ ಬಂದಿವೆಯೆಂದು ಕಿಲಾರಿಗಳು ಹೇಳುತ್ತಾರೆ. ಶುಕ್ಲಮಲ್ಲನಾಯಕನಿಗೆ ಮತ್ತು ದಾನಸಾಲಮ್ಮಳಿಗೆ ಒಂದು ಹೆಣ್ಣು, ಏಳು ಜನ ಗಂಡು ಮಕ್ಕಳಾಗುತ್ತಾರೆ. ಅಕ್ಕರಾಯವ್ವ, ಭಾನುಕೋಟಿರಾಜು, ಸೂರಪ್ಪರಾಜು, ತಿಪ್ಪಂಡರಾಜು, ಕೋರ್ಲಮಲ್ಲಿರಾಜು, ಕಾಕಿಮಂಚಿರಾಜು, ಗೊರ್ಲಭೈಯಪ್ಪರಾಜು. ಇವರು ಕೂಡ ಪಶುಪಾಲನೆ ಕೈಗೊಂಡು ಮೇವು ನೀರು ಅರಸತ್ತ ಚಿತ್ರದುರ್ಗ ಪರಿಸರಕ್ಕೆ ವಲಸೆ ಬಂದರೆಂದು ಐತಿಹ್ಯವಿದೆ.

ಅತಿ ಪ್ರಾಚೀನ ಕಾಲದಲ್ಲಿ ಶ್ರೀಶೈಲ ಮಲ್ಲಿಕಾರ್ಜುನನೇ ಶುಕ್ಲಮಲ್ಲಯ್ಯನಾಗಿದ್ದು ಕ್ರಮೇಣ ಶಿಷ್ಟ ಸಂಸ್ಕೃತಿಯ ಕಾಲದಲ್ಲಿ ಪ್ರಸ್ತುತ ಶ್ರೀಶೈಲ ಮಲ್ಲಿಕಾರ್ಜುನನಾಗಿರಬೇಕು. ಇಂದಿಗೂ ಬೇಡ ಸಮುದಾಯದವರು ಶ್ರೀಶೈಲ ಮಲ್ಲಯ್ಯನನ್ನು ಎತ್ತುಗಳ ಮೂಲಕ ಆರಾಧಿಸುತ್ತ ಬಂದಿದ್ದಾರೆ.

### ಶ್ರೀಶೈಲ ಮಲ್ಲಯ್ಯ-ಮುತ್ತಿಗಾರರ ಎತ್ತುಗಳನ್ನು ನರಕದ ಕೋಟೆಗೆ ಹಾಕಿದ್ದು

ಒಮ್ಮೆ ಬೇಡಕಂಪಳ ಶ್ರೀಶೈಲದಿಂದ ವಲಸೆ ಬಂದ ಆರಂಭದಲ್ಲಿ ಬೇಡಕಂಪಳ ಜಿನಗಿ ಹಳ್ಳದ ಪೂರ್ವಕ್ಕೆ ಕಂಪಳ ಬೀಡುಬಿಟ್ಟಿತು. ಕೆಲವು ದಿನಗಳ ನಂತರ ಈ ಪಶುಸಂಕುಲವನ್ನು ನೋಡಿದ ನರಕಾಸುರನು ದುರಾಸೆಯಿಂದ ಈ ಮುತ್ತಿಗಾರ ದೇವರೆತ್ತುಗಳು ಮತ್ತು ಏಳು ಜನ ಮುತ್ತಿಗಾರರನ್ನು ನರಕದ ಕೋಟೆಗೆ ಹಾಕಿದನು. ಈ ವಿಷಯ ಕಂಪಳಕ್ಕೆ ತಿಳಿದು ಕಂಪಳ ತಬ್ಬಿಬ್ಬಾಯಿತು. ಅಕ್ಕರಾಯಮ್ಮನಿಗೆ ಈ ವಿಷಯ ತಿಳಿದು ನರಕದ ಕೋಟೆಗೆ ಹೋಗುತ್ತಾಳೆ. ನರಕದ ಕೋಟೆ ಎಂದರೆ ನುಂಕೇಮಲೆ ಪ್ರದೇಶ ಇರಬೇಕು. ಇನ್ನೊಂದು ಮಾಹಿತಿ ಪ್ರಕಾರ ನರಕದ ಕೋಟೆ ಎಂದರೆ ಆನೆಗೊಂದಿ ಎಂದು ಕರೆಯುತ್ತಾರೆ. ಒಟ್ಟಿನಲ್ಲಿ ಈ ಸ್ಥಳ ನುಂಕೇಮಲೆ

ಪ್ರದೇಶ ಆನೆಗೊಂದಿ ಅರಸರಿಗೆ ಸೇರಿದ್ದು ಇರಬಹುದು. ಅಕ್ಕರಾಯಮ್ಮ ನರಕದ ಕೋಟೆಯ ಮುಂದೆ ಹೋಗಿ ನರಕಾಸುರನ ಮಗಳಿಗೆ(ಆನೆಗೊಂದಿ ರಾಯನ ಮಗಳಿಗೆ) ಇವಳ ಮಾಟದ ಶಕ್ತಿಯಿಂದ ಅರಸನ ಮಗಳಿಗೆ ಮೈಯೆಲ್ಲಾ ಹುಣ್ಣಾಗುವಂತೆ ಮಾಡಿ ದಡಾರ ಏಳಿಸಿ ಅರಸನನ್ನು ಚಿಂತೆಗೀಡು ಮಾಡುತ್ತಾಳೆ. ತಾನು ಊರು ಮುಂದೆ ಕುಳಿತು ಒಂದು ಪುಟ್ಟಿಯಲ್ಲಿ ಮಾರಮ್ಮನ ಮೂರ್ತಿ ಇಟ್ಟುಕೊಂಡು ಶಾಸ್ತ್ರ ಹೇಳುವ ರೀತಿಯಲ್ಲಿ ಜನರನ್ನು ನಂಬಿಸುತ್ತಾಳೆ. ಒಂದು ಪುಟ್ಟಿಯಲ್ಲಿ ಮಾರಮ್ಮನ ಮೂರ್ತಿಯನ್ನಿಟ್ಟುಕೊಂಡು ಶಾಸ್ತ್ರ ಹೇಳುತ್ತಾಳೆ ಎಂದು ಜನರು ಅರಸನಿಗೆ ಸುದ್ದಿ ಮುಟ್ಟಿಸುತ್ತಾರೆ. ಅರಸ ಆಕೆಯನ್ನು ಅರಮನೆಗೆ ಕರೆಸಿಕೊಂಡು ಮಗಳ ಭವಿಷ್ಯವನ್ನು ಕೇಳುತ್ತಾನೆ. ನಿನಗೆ ಒಬ್ಬಳೇ ಮಗಳು, ಸತ್ಯವಂತರನ್ನು ಸೆರೆ ಹಿಡಿದಿದ್ದೀಯಾ ಅವರನ್ನು ಬಿಡುಗಡೆ ಮಾಡು ಎಂದು ಹೇಳುತ್ತಾಳೆ. ಈ ರೀತಿ ಮಾಡಿದರೆ ನಿನ್ನ ಮಗಳು ಗುಣಮುಖವಾಗುತ್ತಾಳೆ ಎಂದಾಗ, ಅರಸನು ನನ್ನ ಮಗಳಿಗೆ ನಾಳೆ ಬೆಳಗಾಗುವುದರೊಳಗೆ ಗುಣವಾದರೆ ಮಾತ್ರ ಬಿಡುಗಡೆ ಮಾಡುತ್ತೇನೆ. ಆಗ ಅಕ್ಕರಾಯಮ್ಮ ಮಾಟದ ತಂತ್ರದ ಮೂಲಕ ತಮ್ಮವರಿಗೆ ಎದುರಾಗಿದ್ದ ವಿಪತ್ತನ್ನು ಪರಿಹರಿಸುವಲ್ಲಿ ಅವಳ ಚಾಣಾಕ್ಷತೆಯನ್ನು ತೋರಿಸುತ್ತಾಳೆ. ಬೇವಿನಸೊಪ್ಪು ಹರಿದು ಮುತ್ತಿಗಾರರ ಬೂದಿಯಿಂದ ಮಿಶ್ರಣ ಮಾಡಿ ಮಗಳಿಗೆ ಹಚ್ಚಲು ಹೇಳುತ್ತಾರೆ. ಅದರಂತೆ ಮಾಡಿದಾಗ ಗುಣವಾಗುತ್ತದೆ. ಆಗ ಅರಸನು ಏಳು ಜನ ಮುತ್ತಿಗಾರರನ್ನು ೧೨ ಪೆಟ್ಟಿಗೆ ದೇವರಗಳನ್ನು ಬಿಡುಗಡೆ ಮಾಡುತ್ತಾನೆ. ನಂತರ ಮಗಳಿಗೆ ಗುಣವಾಗಿರುವುದರಿಂದ ಮಾರಮ್ಮನ ಹೆಸರಿನಲ್ಲಿ ಮೂರು ದಿನಗಳ ಕಾಲ ಜಾತ್ರೆ ಮಾಡುತ್ತಾನೆ. ಈ ಜಾತ್ರೆ ಇಲ್ಲಿ ಮೊದಲು ಆರಂಭವಾಗಿದ್ದು ಅದನ್ನು ಈ ಸಮುದಾಯದವರು ಮುಂದುವರಿಸಿಕೊಂಡು ಬರುತ್ತಿದ್ದಾರೆ. ಇದಕ್ಕೆ 'ಮುತ್ತಿಗಾರು ಮಾರಮ್ಮ' ಎಂದು ಹೆಸರು ಇಟ್ಟರಂತೆ. ಅಂದಿನಿಂದ ಅಕ್ಕರಾಯಮ್ಮ ಮಾರಮ್ಮ ಎಂದು ಹೆಸರು ಪಡೆದಳು. ಹೀಗೆ ಅಕ್ಕರಾಯಮ್ಮ ತನ್ನ ಮಂತ್ರವಿದ್ಯೆಯನ್ನು ಬಳಸಿಕೊಂಡು ತಮ್ಮವರನ್ನು ಆಪತ್ತನಿಂದ ಪಾರು ಮಾಡುತ್ತಾಳೆ. ಬುಡಕಟ್ಟು ಸಮುದಾಯಗಳಲ್ಲಿ ಮಾಟದಂತಹ ವಿದ್ಯೆಗಳು ಇಂದಿಗೂ ಇರುವುದನ್ನು ಕಾಣಬಹುದು. ತಮಗೆ ಕೇಡು ಬಗೆದವರಿಂದ ತಮ್ಮನ್ನು ರಕ್ಷಿಸಿಕೊಳ್ಳುವ ಸಲುವಾಗಿ ಪ್ರತಿ ಕೇಡು ಬಗೆಯಲು ಈ ಮಂತ್ರ ವಿದ್ಯೆಯನ್ನು ಬಳಸಿಕೊಳ್ಳುತ್ತಾರೆ.

**ದಾನಸಾಲಮ್ಮ ಚೆಂಚು ಶಿಖಾನಾಯಕ(ಶುಕ್ಲ ಮಲ್ಲಿನಾಯಕ)**

ಚಂದ್ರಗಿರಿ ಅರಣ್ಯದಲ್ಲಿ ಸಂಚರಿಸುತ್ತ ಗೆಡ್ಡೆ ಗೆಣಸು ಫಲಾಹಾರ ಹುಡುಕುತ್ತಾ ಕಾಲ ಕಳೆಯುತ್ತಿದ್ದರು. ಹೀಗೆ ಒಂದು ದಿನ ರಾತ್ರಿ ಮಳೆಯಾಯಿತು. ಬಿತ್ತನೆ ಮಾಡಲು ಜನರೆಲ್ಲ ಆರಂಭಿಸಿದರು. ತಾವು ಬಿತ್ತನೆ ಮಾಡೋಣವೆಂದು ದಾನಸಾಲಮ್ಮ ತನ್ನ ತವರಿಗೆ ಕುಂಬಳಕಾಯಿ ಬೀಜ ತರಲು ಗಂಡನನ್ನು ಕಳುಹಿಸುತ್ತಾಳೆ. ಶಿಖಾನಾಯಕ ಮಂದಗಿರಿಗೆ ಹೋಗುತ್ತಾ ದಾರಿಯುದ್ದಕ್ಕೂ ಕಲ್ಲಿನ ಕುಪ್ಪೆಗಳನ್ನು ಅಲ್ಲಲ್ಲಿ ಇಡುತ್ತ ಸಾಗುತ್ತಾನೆ. ಹೀಗೆ ಆರನೆಯ ಕುಪ್ಪೆ ಇಡುತ್ತಿರುವಾಗ ಶಿವ ಪ್ರತ್ಯಕ್ಷನಾಗುತ್ತಾನೆ. ಏಕೆ ಕಲ್ಲುಗಳನ್ನಿಡುತ್ತಿದ್ದೀಯಾ ಎಂದು ಕೇಳಲು

ತಾನು ಹೋಗುತ್ತಿರುವ ಉದ್ದೇಶ ತಿಳಿಸಿ ದಾರಿ ತಪ್ಪಬಹುದೆಂದು ಕಲ್ಲುಗಳನ್ನಿಡುತ್ತಿದ್ದೇನೆ. ಏಳನೇ ಗುರುತಿಗಾಗಿ ಕಲ್ಲುಗಳನ್ನಿಡಲು ಕಲ್ಲನ್ನು ಎತ್ತುವಾಗ ಅಲ್ಲಿ ಕುಂಬಳ ಬೀಜಗಳು ಸಿಗುತ್ತವೆ. ಅವನ್ನು ತೆಗೆದುಕೊಂಡು ಹೋಗಿ ತನ್ನ ಹೆಂಡತಿಗೆ ಕೊಡುತ್ತಾನೆ.

ದಾನಸಾಲಮ್ಮ ಸೂರ್ಯನ ಧ್ಯಾನ ಮಾಡುತ್ತಾ, ಆ ಸೂರ್ಯನನ್ನೆ ಮನಸ್ಸಿನಲ್ಲಿ ಭ್ರಮಿಸಿದ ದಾನಸಾಲಮ್ಮ ಕುಂಬಳ ಬೀಜವನ್ನು ನೆಡುವಾಗ ಆತನ ಅಂಶ, ಆ ಬೀಜಗಳ ಮೇಲೆ ಬೀಳಲು ಒಂದು ಬೀಜವನ್ನು ತಾನು ಸೇವಿಸಿ ಉಳಿದ ಬೀಜಗಳನ್ನು ನೆಡುತ್ತಾಳೆ. ಅದು ಬೆಳ್ಳಿಯಾಗಿ ಬೆಳೆಯಿತು. ಅರಣ್ಯವೆಲ್ಲಾ ಹರಡಿರಲು, ಬಳ್ಳಿಯ ಕೆಳಗೆ ಕಾಡುಮೃಗಗಳು ವಾಸ ಮಾಡಿರುತ್ತಿದ್ದವು. ಅದನ್ನು ನೋಡಿ ಜನರು ಕಾಮಗೇತಿ ಭೂಪಾಲನಲ್ಲಿಗೆ ಹೋಗಿ ದೂರು ಹೇಳಿದರು. ಓಡಾಡುವ ಜನರ ಕಾಲಿಗೆ ಸಿಕ್ಕಿಕೊಂಡು ಬೀಳುತ್ತಿದ್ದರು. ದೊರೆಯು ಆಜ್ಞೆಯನ್ನು ಹೊರಡಿಸಿದನು. ಏಳು ದಿನಗಳಿಗೆ ಸರಿಯಾಗಿ ಕುಂಬಳಕಾಯಿಯ ಬಳ್ಳಿಯ ಬುಡವನ್ನು ಕಿತ್ತುಹಾಕದಿದ್ದರೆ ಶಿಕ್ಷೆಗೆ ಗುರಿಪಡಿಸುತ್ತೇನೆ ಎಂದು ಡಂಗುರ ಹಾಕಿಸಿದನು. ಈ ಸುದ್ದಿ ತಿಳಿದು ಬೇಸರಗೊಂಡ ದಾನಸಾಲಮ್ಮ ಬಳ್ಳಿಯನ್ನು ಕಿತ್ತು ಹಾಕಲು ನಿರ್ಧರಿಸಿದ್ದಳು. ಈ ಕುಂಬಳಕಾಯಿ ಬಳ್ಳಿಯ ಬುಡದಲ್ಲಿ ಒಂದು ಕುಂಬಳಕಾಯಿ ಇತ್ತು. ಆ ಕುಂಬಳಕಾಯಿಯನ್ನು ಬೇಯಿಸಿ ತಿಂದರು. ಕೆಲವು ದಿನಗಳ ನಂತರ ದಾನಸಾಲಮ್ಮ ಗರ್ಭವತಿಯಾದಳು. ನವಮಾಸಗಳು ಕಳೆದ ನಂತರ ಒಂದು ಹೆಣ್ಣು ಮಗುವಿಗೆ ಜನ್ಮ ನೀಡಿದಳು. ಹುಟ್ಟಿದ ಶಿಶುವಿಗೆ ಮಾರಮ್ಮ ಎಂದು ನಾಮಕರಣ ಮಾಡಿದರು. ಹೀಗೆ ದಾನಸಾಲಮ್ಮ - ಶುಕ್ಲಮಲ್ಲಿನಾಯಕ ಅಡವಿಯಲ್ಲಿ ಕಾಲ ಕಳೆಯುತ್ತಿರಲು ಕೆಲವು ವರ್ಷಗಳ ನಂತರ ದಾನಸಾಲಮ್ಮ ಗರ್ಭವತಿಯಾಗುತ್ತಾಳೆ. ಒಟ್ಟು ಇವರಿಗೆ ಎಂಟು ಜನ ಮಕ್ಕಳಾಗುತ್ತಾರೆ. ಈ ಎಂಟು ಜನಗಳಲ್ಲಿ ಒಂದು ಹೆಣ್ಣು ಏಳು ಗಂಡು ಮಕ್ಕಳು. ಅವರ ಹೆಸರುಗಳು ಈ ರೀತಿ ಇವೆ. ಮಾರಮ್ಮ(ಪೆದ್ದಕ್ಕರಾಯಮ್ಮ), ಭಾನುಕೋಟಿ ರಾಜು, ಸೂರಪ್ಪರಾಜು, ಚೆಟ್ಲುಪುಟ್ಟಪ್ಪರಾಜು, ಕೊರ್ಲಿಮಲ್ಲಿರಾಜು, ಕಾಕುಮಂಚಿರಾಜು, ಪಾಪನ್ನರಾಜು, ಬೊಮ್ಮಂತರಾಜು. ಈ ಏಳು ಜನ ತಮ್ಮಂದಿರನ್ನು ಮಾರಮ್ಮ ಏಳು ತೊಟ್ಟಿಲುಗಳನ್ನು ಹಾಕಿ ತೂಗುತ್ತಿದ್ದಳು. ಹೀಗೆ ಒಂದು ದಿನ ದಾನಸಾಲಮ್ಮ ಶುಕ್ಲಮಲ್ಲಿನಾಯಕ ತೀರಿಕೊಂಡರು. ಈ ಏಳು ಜನ ತಮ್ಮಂದಿರನ್ನು ಮಾರಮ್ಮನೇ ಸಾಕುತ್ತಾಳೆ. ಏಳು ಜನ ತಮ್ಮಂದಿರು ಅಕ್ಕ ಮಾರಮ್ಮನನ್ನು ನಮ್ಮ ತಂದೆ-ತಾಯಿಗಳಾರು - ನಮ್ಮ ವಂಶ ಯಾವುದು? ಎಂದು ಪ್ರಶ್ನೆ ಹಾಕುತ್ತಾರೆ. ಅದಕ್ಕೆ ಮಾರಮ್ಮ ನಮ್ಮದು ಸೂರ್ಯ ಶುಕ್ಲಮಲ್ಲರಾಜು ಗೋತ್ರ ಎಂದು ಹೇಳಿದಳು. ಆಗ ತಮ್ಮಂದಿರು ನಾವು ಸೂರ್ಯವಂಶದವರೆ, ಹೀಗೆ ಸೂರ್ಯನನ್ನು ಪ್ರಾರ್ಥಿಸಿ ವರಗಳನ್ನು, ಬಿರುದುಗಳನ್ನು ಪಡೆಯುತ್ತೇವೆ ಎಂದು ಹೇಳಿ ಅಡವಿಗೆ ತೆರಳಿ ಘೋರ ತಪಸ್ಸು ಮಾಡಿದರು. ತಪ್ಪಸಿಗೆ ಹೋದ ತಮ್ಮಂದಿರು ಹಿಂತಿರುಗಿ ಬರಲಿಲ್ಲ. ಮಾರಮ್ಮ ತನ್ನ ಸೋದರ ಮಾವನಾದ ಕರಿಬೊಮ್ಮಂತರಾಜ ಬಳಿ ತೆರಳಿ ವಿಷಯವನ್ನು ತಿಳಿಸುತ್ತಾಳೆ. ಆಗ ಏಳು ದಿನಗಳವರೆಗೆ ದೀರ್ಘ ತಪಸ್ಸು ಮಾಡಿ ಸೂರ್ಯ ದೇವನಿಂದ ಬಿರುದುಗಳನ್ನು

ಪಡೆದುಕೊಂಡರು. ಭೂ ಚಕ್ರದ ಗೊಡಗು(ಛತ್ರಿ), ಕೋರಿ ನಿಶಾನಿ, ಗದ್ದುಗೆ, ಕೋಟಿ ಲಿಂಗಗಳ ಮೂಲ ಸ್ಥಾನದವರು ಎಂಬ ಬಿರುದುಗಳನ್ನು ಪಡೆದರು. ಇವುಗಳನ್ನು ಪಡೆದು ಏಳು ಜನರು ಭೂಚಕ್ರದ ಗೊಡಗಿನ(ಗೊಡಗು-ಛತ್ರಿಯಾಕಾರದಲ್ಲಿರುವುದಕ್ಕೆ ಗೊಡಗು ಎನ್ನುವರು) ನೆರಳಿನಲ್ಲಿ ನಿಂತುಕೊಂಡು ಏಳು ಚಿಲುಮೆಗಳನ್ನು ತೆಗೆಯಿಸಿ ಕೋಟಿಲಿಂಗಗಳನ್ನು ಪೂಜಿಸಿ ಶಿವಗಂಗೆ ಮಾಳಮ್ಮನಿಗೆ ಅಂಬುವಾಸೆ ಕೊಯ್ದು(ಬಲಿ) ಎದುರು ನೋಮಗಳನ್ನು ತೀರಿಸಿಕೊಂಡು ಅಲ್ಲಿಂದ ಹೊರಟು ಮಾರಮ್ಮನ ಬಳಿ ಬಂದು ಶರಣ ಮಾಡಿದರು.

ಮಾರಮ್ಮ ಒಂದು ಗ್ರಾಮವನ್ನು ನಿರ್ಮಾಣ ಮಾಡಿ ಆ ಊರಿಗೆ ವಜ್ರ, ವೈಢೂರ್ಯ ನವರತ್ನಗಳಿಂದ ಶೋಭಿಸುವ ಸಾಲು ಗೋಪುರಗಳನ್ನು ನಿರ್ಮಿಸಿ, ಕೋಟೆಯನ್ನು ಕಟ್ಟಿಸಿ, ಅದಕ್ಕೆ 'ಬಂಗಾರು ರಾಜುಕೋಟೆ' ಎಂದು ಹೆಸರಿಡುತ್ತಾಳೆ. ಆ ಊರಿಗೆ ಹಿರಿಯ ತಮ್ಮನಾದ ಭಾನುಕೋಟಿ ರಾಜನನ್ನು ದೊರೆಯನ್ನಾಗಿ ಮಾಡಿದಳು. ಈ ದೊರೆಯ ಮಗನೆ ಯರಮಂಚಿನಾಯಕ. ಇವನು ನಿಡುಗಲ್ಲಿನ ಬಳಿ ತಮ್ಮ ದನಕರುಗಳನ್ನು ಬಿಟ್ಟುಕೊಂಡು ಕೆಲವು ದಿನಗಳವರೆಗೆ ಕಾಲ ಕಳೆದನು. ನಿಡುಗಲ್ಲು ಪ್ರದೇಶದಲ್ಲಿ ಹೊಟ್ಯಾಳ ನಾಯಕನು ದೊರೆಯಾಗಿದ್ದನು. ಯರಮಂಚನಾಯಕನು ಮತ್ತು ಪರಿವಾರದವರೆಲ್ಲ ಪ್ರತಿದಿನ ಪೂಜೆ, ಸೂರ್ಯನ ಮೊಕ್ಕು(ನಮಸ್ಕಾರ) ಮಾಡದೆ ಊಟ ಮಾಡುತ್ತಿರಲಿಲ್ಲ. ಇವನ ಪೂಜೆಯನ್ನು ನೋಡಿ ಹೊಟ್ಯಾಳ ನಾಯಕನು ಸಹಿಸಲಾರದೆ ವ್ರತವನ್ನು ಕೆಡಿಸಬೇಕೆಂದು ಯೋಚಿಸಿ, ಕೋಳಿಯನ್ನು ತಂದು ಸಾರು ಮಾಡಿಸಿ ಊಟಕ್ಕೆ ಬಡಿಸಿದನು. ಆಗ ಯರಮಂಚನಾಯಕನಿಗೆ ಮತ್ತು ಹೊಟ್ಯಾಳ ನಾಯಕನಿಗೆ ಸಂಘರ್ಷಗಳು ನಡೆದು ಅವನ ಎಮ್ಮೆಗಳನ್ನು ಹೊಡೆದುಕೊಂಡು ಒಂದು ಎಮ್ಮೆಯನ್ನು ಕೊಯ್ದು ಅಡುಗೆ ಮಾಡಿದರು. ಹೊಟ್ಯಾಳ ನಾಯಕನು ಎಮ್ಮೆಯನ್ನು ಕೊಯಿಸಬಹುದೆ ಇದು ನ್ಯಾಯವೇ ಎಂದು ನೋಡಲು ಬಂದನು. ಮಡಿಕೆಯನ್ನು ತೆರೆದಾಗ ಮಾರಮ್ಮನ ಪ್ರಭಾವದಿಂದ ಮಾಂಸವೆಲ್ಲಾ ಕುಂಬಳಕಾಯಿಗಳ ಹೋಳುಗಳಾಗಿ ಕಂಡು ಬಂದವು. ಆಗ ಹೊಟ್ಯಾಳ ನಾಯಕನು ಮಾರಮ್ಮನಿಗೆ ಶರಣಾಗತನಾದನು. ಇನ್ನು ಮುಂದೆ ನಮ್ಮ ವಂಶ ಇರುವವರೆಗೂ ಎಮ್ಮೆಯ ಹಾಲಿನಿಂದ ಮೀಸಲು ತೆಗೆದು ನಿಮಗೆ ಒಪ್ಪಿಸುತ್ತೇವೆ ಮತ್ತು ಜೊತೆಗೆ ಒಂದು ಕೋಣವನ್ನು ಒಪ್ಪಿಸುತ್ತೇವೆ ಎಂದು ಭಾಷೆ ಮಾಡಿದನು. ನಂತರ ಅಲ್ಲಿಂದ ಮಲೆಸಂದ್ರಕ್ಕೆ ಬಂದರು.

**ಗೌರಸಮುದ್ರ ಮಾರಮ್ಮ**

ಗೌರಸಮುದ್ರ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿಗೆ ಸೇರಿದ ಒಂದು ಗ್ರಾಮ. ಚಳ್ಳಕೆರೆ ತಾಲೂಕು ಕೇಂದ್ರದಿಂದ ಈಶಾನ್ಯಕ್ಕೆ ಸುಮಾರು ೨೫ ಕಿ.ಮೀ. ದೂರದಲ್ಲಿದೆ. ಇದು ಆಂಧ್ರಪ್ರದೇಶದ ಗಡಿಯಂಚಿನಲ್ಲಿ ಕಂಡುಬರುವ ಗ್ರಾಮವಾಗಿದೆ. ಪ್ರಾಚೀನ ಕಾಲದಲ್ಲಿ ಗೌರಿ-ಚಂದ್ರ ಎಂದು ಕರೆಯುತ್ತಿದ್ದರೆಂದು ಪ್ರತೀತಿ ಇದೆ. ಕಾಲಕ್ರಮೇಣವಾಗಿ ಗೌರ ಚಂದ್ರ-ಗೌರಸಂದ್ರ-ಗೌರಸಮುದ್ರವಾಗಿ ಪರಿವರ್ತನೆಗೊಂಡಿದೆ. ಈ ಗ್ರಾಮದ ಬಳಿ ದೊಡ್ಡದಾದ ಕೆರೆಯಿದೆ. ಈ

ಕೆರೆಯ ಮಧ್ಯ ದೊಡ್ಡದಾದ ಗುಂಡುಯಿದ್ದು, ಈ ಗುಂಡಿನ ನೆರಳಿಗೆ ಮೂನ್ನೂರು ದನಗಳು ಮಲಗುತ್ತಿದ್ದವಂತೆ. ಪ್ರಸ್ತುತ ಈ ಗುಂಡು ಈ ಕೆರೆಯಲ್ಲಿ ಮುಳುಗಿದೆ ಎಂದು ಸ್ಥಳೀಯರು ಹೇಳುತ್ತಾರೆ. ಈ ಮಾರಮ್ಮನ ಕುರಿತು ಅಪಾರವಾದ ಜನಪದ ಸಾಹಿತ್ಯವಿದೆ. ಅವು ತಮ್ಮದೇ ಆದ ವಿಭಿನ್ನ ಜನಪದ ಆಚರಣೆ, ಸಂಪ್ರದಾಯಗಳನ್ನು ಹೊಂದಿದ್ದು ಈ ನೆಲದ ಸ್ಥಳಪುರಾಣ, ಐತಿಹ್ಯಗಳನ್ನು ಗರ್ಭೀಕರಿಸಿಕೊಂಡಿವೆ.

ಮಾರಮ್ಮನ ಮೂಲನೆಲೆ ಈ ಗ್ರಾಮದಿಂದ ಮೂರು ಕಿ.ಮೀ. ದೂರದ ತುಮ್ಮಲು ಪ್ರದೇಶ. ಈ ಗ್ರಾಮದ ಗ್ರಾಮದೇವತೆ ಮಾರಮ್ಮ. ಈ ದೇವತೆಯನ್ನು ಇಂದು ಊರಿನ ಹೆಸರನ್ನು ಸೇರಿಸಿಕೊಂಡು ಗೌರಸಮುದ್ರ ಮಾರಮ್ಮನೆಂದು ಪ್ರಸಿದ್ಧಿ ಪಡೆದಿದೆ. ಗೌರಸಮುದ್ರದ ಮಾರಮ್ಮನ ಬಗೆಗಿನ ಐತಿಹ್ಯ ಹೀಗಿದೆ. ತುಮ್ಮಲಿನಲ್ಲಿ ಮಾರಮ್ಮನೆಂದು ಪೂಜಿಸುವುದು ಹುತ್ತವನ್ನು. ಇದರ ಬಗ್ಗೆ ಜನಪದರು ಸ್ವಾರಸ್ಯಕರವಾದ ಎರಡು ರೀತಿಯ ಐತಿಹ್ಯಗಳನ್ನು ಹೇಳುವರು. ಈಕೆಯ ಮೂಲಸ್ಥಳ ಆಂಧ್ರಪ್ರದೇಶದ ಆನಂತಪುರ ಜಿಲ್ಲೆಯ ರಾಯದುರ್ಗವೆಂದು, ಅಲ್ಲಿಯ ದೊರೆಯೊಂದಿಗೆ ಯಾವುದೋ ಒಂದು ವಿಷಯಕ್ಕೆ ಕಲಹ ಉಂಟಾಗಿ ಮಾರಮ್ಮ ರಾಯದುರ್ಗದ ಅರಮನೆಯಲ್ಲಿ ಇರುವ ತನ್ನ ಆಭರಣದ ಪೆಟ್ಟಿಗೆಯನ್ನು ತೆಗೆದುಕೊಂಡು ತನ್ನ ತಮ್ಮನಾದ ಬೊಮ್ಮಯ್ಯನ ಜೊತೆ ಮಲೆಸಮುದ್ರ ಮತ್ತು ಗೌರಸಮುದ್ರದ ನಡುವಿನ 'ತುಮ್ಮಲು' ಎಂಬ ಪ್ರದೇಶಕ್ಕೆ ಬಂದರು. ತುಮ್ಮಲು ಎಂಬ ಪ್ರದೇಶ ಅಂದು ದಟ್ಟ ಅಡವಿಯಾಗಿತ್ತೆಂದು ಜನಪದರು ಹೇಳುತ್ತಾರೆ. ಇಂದಿಗೂ ಈ ಪ್ರದೇಶದಲ್ಲಿ ಮಾರಮ್ಮ ಪೌಳಿ ಬಿಟ್ಟರೆ ಯಾವ ಮನೆಗಳು ಇಲ್ಲ. ಸಂಜೆಯಾಗುತ್ತಲೇ ಇಲ್ಲಿಗೆ ಜನರು ಕೂಡ ಬರುವುದಿಲ್ಲ. ರಾಯದುರ್ಗದಿಂದ ತಂದಿದ್ದ ಪೆಟ್ಟಿಗೆಯನ್ನು ಈ ಸ್ಥಳದಲ್ಲಿ ಇಳಿಸಿ ತಮ್ಮನಾದ ಬೊಮ್ಮಯ್ಯನನ್ನು ಇಲ್ಲೆ ಇರಲು ಹೇಳಿ ಮಲೆನಾಡು ಕಡೆ ಹೊರಟಳು. ಅದೇ ಸಮಯಕ್ಕೆ ತುಮ್ಮಲಿಗೆ ಬಂದ ರಾಯದುರ್ಗದ ದೊರೆ ಬೊಮ್ಮಯ್ಯನನ್ನು ಹೊಡೆದು ಆಭರಣದ ಪೆಟ್ಟಿಗೆಯನ್ನು ತೆಗೆದುಕೊಂಡು ಹೋದನು. ಹಿಂತಿರುಗಿ ಬಂದ ಮಾರಮ್ಮನಿಗೆ ನಡೆದ ವಿಷಯವನ್ನು ತಿಳಿಸಿದನು. ತಮ್ಮನನ್ನು ಬೈದು ಮಾರಮ್ಮ ರಾಯದುರ್ಗದ ಕಡೆ ಪ್ರಯಾಣ ಬೆಳೆಸಿದಳು. ಮಾರಮ್ಮ ತನ್ನ ವೇಷವನ್ನು ಬದಲಿಸಿ ಹಣ್ಣು ಮಾರುವ ಮುದುಕಿಯ ವೇಷದಲ್ಲಿ ಅರಮನೆಗೆ ಹೋದಳು. ದೊರೆಯ ಹೆಂಡತಿಗೆ ಹಣ್ಣು ನೀಡಿ, ನಂತರ ದೊರೆಯನ್ನು ಕೊಂದು ತನ್ನ ಆಭರಣದ ಪೆಟ್ಟಿಗೆಯನ್ನು ತೆಗೆದುಕೊಂಡು ತುಮ್ಮಲಿಗೆ ಬಂದಳು. ತುಮ್ಮಲಿನಲ್ಲಿ ಇರುವ ಹುತ್ತದಲ್ಲಿ ಸೇರಿಕೊಂಡಳು. ಬಹುಶಃ ಇಲ್ಲಿ ಅಪಮಾನಕ್ಕೆ ಅಂಜಿ ಆತ್ಮಹತ್ಯೆ ಮಾಡಿಕೊಂಡಿರಬೇಕು. ರಾಯದುರ್ಗದ ದೊರೆ ಮಾರಮ್ಮನಿಗೆ ರಕ್ತಸಂಬಂಧಿಗಳಾಗಿರಬೇಕು. ಹಾಗಾಗಿ ಅರಮನೆಯನ್ನು ತ್ಯಜಿಸಿ ಕಾಡಿಗೆ ಬಂದು ಐಕ್ಯವಾಗಿರಬೇಕು.

ಇನ್ನೊಂದು ಐತಿಹ್ಯದ ಪ್ರಕಾರ 'ಮಾರಮ್ಮ ನಿಡಗಲ್ಲು ದೊರೆಯ ಒಬ್ಬಳೆ ಮಗಳು'. ಇವಳಿಗೆ ಐದು ಜನ ಅಣ್ಣಂದಿರು. ಇವಳು ಬೆಳೆದು ದೊಡ್ಡವಳಾದ ಮೇಲೆ ಕಾಮಸಮುದ್ರಕ್ಕೆ ಮದುವೆ ಮಾಡಿಕೊಟ್ಟಿದ್ದರು. ಪ್ರತಿವರ್ಷ ತವರು ಮನೆಯಿಂದ ತನ್ನ ಐದು ಜನ ಅಣ್ಣಂದಿರು

ಗೌರಿ ಹಬ್ಬಕ್ಕೆ ಹಾಲು ತುಪ್ಪ ತಂದು ಕೊಡುತ್ತಿದ್ದರಂತೆ. ಹೀಗೆ ಪ್ರತಿವರ್ಷವೂ ನಡೆಯುತ್ತಿತ್ತು. ಒಂದು ವರ್ಷ ಅಣ್ಣಂದಿರು ಕಾಡಿಗೆ ಬೇಟೆಗೆ ಹೋಗಿದ್ದಾಗ ತವರು ಮನೆಯಿಂದ ಬರುವ ಹಾಲು ತುಪ್ಪವನ್ನು ತರದಿರುವುದನ್ನು ಕಂಡು ತನ್ನ ಗಂಡನ ಮನೆಯವರು ಅಪಹಾಸ್ಯ ಮಾಡಿದರು. ಈ ಅವಮಾನವನ್ನು ಸಹಿಸದ ಮಾರಕ್ಕ ಗೌರಸಮುದ್ರದ ತುಮ್ಮಲಿಗೆ ಬಂದು ಅಲ್ಲಿರುವ ಒಂದು ಹುತ್ತದಲ್ಲಿ ಸೇರಿಕೊಂಡಳು. ಮಾರಮ್ಮನ ಗಂಡನ ಮನೆಯಲ್ಲಿ ನಡೆದ ವಿಷಯವನ್ನು ತಿಳಿದ ಅಣ್ಣಂದಿರು, ತಂಗಿಗೆ ಹಾಲು ತುಪ್ಪವನ್ನು ತೆಗೆದುಕೊಂಡು ಬರುತ್ತಿದ್ದರು. ಮಾರಮ್ಮ ತಡೆದು ನೀವು ಇನ್ನು ಮುಂದೆ ನನ್ನ ನೋಡುವುದಕ್ಕೆ ಬರಬೇಡಿ. ತವರು ಮನೆಯಿಂದ ತಂದಿರುವ ಹಾಲು ತುಪ್ಪವನ್ನು ತುಮ್ಮಲಿನ ಹುತ್ತಕ್ಕೆ ಸುರಿಯಿರಿ, ನಾನು ಅಲ್ಲಿ ಮಾರಿಯಾಗಿ ನೆಲೆಸಿರುವೆ ಎಂದು ಕೂಗಿಕೊಂಡು ಮರೆಯಾದಳಂತೆ. ಹುತ್ತದಲ್ಲಿ ಮಾರಮ್ಮ ನೆಲೆಸಿರುವುದರಿಂದ ಜನರು ಅಂದಿನಿಂದ ಹುತ್ತವನ್ನು ಪೂಜಿಸುತ್ತಾ ಬಂದಿದ್ದಾರೆ.

ಮಾರಮ್ಮ ಒಬ್ಬ ಸಾಮಾನ್ಯ ಮಹಿಳೆಯಾಗಿದ್ದು, ಕಾಲ್ಪನಿಕ ದೇವತೆಯಲ್ಲ. ಸಾಮಾನ್ಯ ಮಹಿಳೆಯಾಗಿ ನಂತರ ದೈವತ್ವಕ್ಕೇರಿದ್ದಾಳೆ ಎಂಬುದರಲ್ಲಿ ಸಂಶಯವಿಲ್ಲ. ರಾಯದುರ್ಗ ಮತ್ತು ನಿಡಗಲ್ಲು ದೊರೆಗಳಿಗೆ ಸಂಬಂಧಿಸಿದಂತೆ ಮಾರಮ್ಮನ ಜೀವನದ ಘಟನೆಗಳನ್ನು ಕುರಿತು ನಂಬಲರ್ಹವಾದ ಹಾಗೂ ಆಧಾರ ಪೂರ್ವಕವಾದಂತ ಐತಿಹ್ಯಗಳು ಸಾಕಷ್ಟು ಪ್ರಚಾರದಲ್ಲಿವೆ. ಮೊದಲನೆಯ ಐತಿಹ್ಯದ ಪ್ರಕಾರ ರಾಯದುರ್ಗದ ದೊರೆಗೆ ಮತ್ತು ಮಾರಮ್ಮನಿಗೆ ಕಲಹ ಉಂಟಾಗಿ, ಅರಮನೆಯನ್ನು ತ್ಯಜಿಸಿ, ಅಪಮಾನಕ್ಕೆ ಅಂಜಿ ಕಾಡಿಗೆ ಬಂದು ತುಮ್ಮಲಿನಲ್ಲಿ ಐಕ್ಯವಾಗಿರಬೇಕು. ಈಕೆ ರಾಯದುರ್ಗದ ದೊರೆಗಳ ಮಗಳು ಇರಬೇಕೆಂದು ಈ ಐತಿಹ್ಯದಿಂದ ಸ್ಪಷ್ಟವಾಗಿ ತಿಳಿಯುತ್ತದೆ. ರಾಯದುರ್ಗದ ಪಾಳೆಯಗಾರರು ಕೂಡ ಪಶುಪಾಲಕ ಬೇಡ ಸಮುದಾಯಕ್ಕೆ ಸೇರಿದ್ದು ಮಾರಮ್ಮ ಕೂಡ ಬೇಡ ಸಮುದಾಯದವಳೆಂದು ತಿಳಿದುಬರುತ್ತದೆ.

ಇನ್ನೊಂದು ಐತಿಹ್ಯ ಪ್ರಕಾರ ನಿಡಗಲ್ಲು ದೊರೆಯ ಮಗಳು ಎಂದಿದೆ. ಈ ನಿಡಗಲ್ಲು ದೊರೆಗಳು ಕೂಡ ಪಶುಪಾಲಕ ಬೇಡ ಸಮುದಾಯಕ್ಕೆ ಸೇರಿದವರು. ತನ್ನ ಗಂಡನ ಮನೆಯವರ ಅಪಹಾಸ್ಯಕ್ಕೆ ಗುರಿಯಾಗಿ ಮಾರಮ್ಮ ಇಲ್ಲಿ ಕೂಡ ಅಪಹಾಸ್ಯಕ್ಕೆ ಗುರಿಯಾದಳೆಂದು ಐತಿಹ್ಯ ಹೇಳುತ್ತದೆ. ಆದರೆ ಹಾಲು, ತುಪ್ಪ ತವರಿನವರು ತರಲಿಲ್ಲವೆಂದು ನೆಪ ಮಾತ್ರ ಅನಿಸುತ್ತದೆ. ಮಾರಮ್ಮನ ಸಾವಿಗೆ ನಿಜವಾದ ಕಾರಣವಲ್ಲವೆನಿಸುತ್ತದೆ. ಒಟ್ಟಿನಲ್ಲಿ ಅಪಮಾನಕ್ಕೆ ಅಂಜಿ ನಿಡಗಲ್ಲು ಪ್ರಾಂತ್ಯ ತ್ಯಜಿಸಿ ಕಾಡಿಗೆ ಬಂದು ಗಂಡನ ಮನೆಗೆ ಹಿಂತಿರುಗದೆ ಆತ್ಮಹತ್ಯೆ ಮಾಡಿಕೊಂಡಿರಬೇಕು.

ಮಾರಮ್ಮ ಪಶುಪಾಲಕರ ಸಂಸ್ಕೃತಿಗೆ ಸೇರಿದ್ದು ಈಕೆಯು ಐಕ್ಯವಾದ ನಂತರ ದೇವತೆಯಾಗಿ ಕಂಡು ಬರುತ್ತಾಳೆ. ಪಶುಪಾಲಕರ ವಲಸೆಗೂ ಮಾರಮ್ಮನ ಆರಾಧನೆಗೂ ನಿಕಟ ಸಂಬಂಧವಿದೆ. ಇದನ್ನು ಸಮರ್ಥಿಸುವಂತೆ, ಮಾರಮ್ಮನ ಜಾತ್ರೆ ನಡೆಯುವ ಸಂದರ್ಭದಲ್ಲಿ ದನಗಳು, ಕುರಿ, ಮೇಕೆಗಳನ್ನು ಈ ಗುಡಿಯ ಸುತ್ತ ಪ್ರದಕ್ಷಿಣೆ ಹಾಕಿಸುವ ಸಂಪ್ರದಾಯವಿದ್ದು, ಪಶುಪಾಲಕರ

ದೇವತೆ ಎಂಬುದನ್ನು ಮತ್ತಷ್ಟು ದೃಢಪಡಿಸುತ್ತದೆ. ಮಾರಮ್ಮ ತುಮ್ಮಲಿನಲ್ಲಿ ಹುತ್ತದ ರೂಪದಲ್ಲಿದ್ದು ಇದು ಪಶುಪಾಲಕರ ದೇವತೆ ಎಂಬುದನ್ನು ಸಮರ್ಥಿಸುತ್ತದೆ. ಬಹುಪಾಲು ಪಶುಪಾಲಕರ ದೇವತೆಗಳು ದೊರೆಯುವುದೇ ನಾಗರ ಹೆಡೆಗಳ ರೂಪದಲ್ಲಿ. ಮಾರಮ್ಮನ ಪೆಟ್ಟಿಗೆ ಕೂಡ ನಾಗರ ಹೆಡೆಯಾಗಿದೆ. ನಿಡಗಲ್ಲು ಪ್ರಾಂತ್ಯದಿಂದ ತುಮ್ಮಲಿಗೆ ವಲಸೆ ಬಂದು ನೆಲೆಸಿದ ನಂತರ ಅವಳು ಯರಮಂಚನಾಯಕನೊಂದಿಗೆ ಸೇರಿರುತ್ತಾಳೆ. ಹೊಟ್ಯಾಳ ನಾಯಕನನ್ನು ಈಕೆಯ ಮಹಿಮೆಯಿಂದ ಸೋಲಿಸುತ್ತಾಳೆ. ಯರಮಂಚಿನಾಯಕ ಮಾರಮ್ಮನ ಅಪ್ಪಣೆ ಮೇರೆಗೆ ಸುಮಾರು ಇಪ್ಪತ್ತೈದು ಅಡಿ ಎತ್ತರದ ದೀಪದ ಕಲ್ಲುಕಂಬವನ್ನು ನೆಡಿಸಿ ಸೂರ್ಯನ ಮೊಕ್ಕ(ಸೂರ್ಯ ನಮಸ್ಕಾರ) ಪಡೆದು ಪವಾಡ ಮೆರೆದು ಗೌರವಿಸಲ್ಪಟ್ಟನು. ತುಮ್ಮಲು ಬಳಿಯೇ ಯರಮಂಚಿನಾಯಕ ಕೋಟಿಲಿಂಗಗಳನ್ನು ಸ್ಥಾಪಿಸಿದನೆಂದು ಜನಪದರು ಹೇಳುತ್ತಾರೆ. ಮಾರಮ್ಮ ಬೇಡನಾಯಕರ ಹೆಣ್ಣಾಗಿದ್ದು ಆಕೆಯ ಸೋದರರಲ್ಲಿ ಬೊಮ್ಮಯ್ಯ ಕೂಡ ಒಬ್ಬನಾಗಿದ್ದಾನೆ. ಗೌರಸಮುದ್ರ ಮಾರಮ್ಮನಗುಡಿ ಪಕ್ಕದಲ್ಲಿ ಬೊಮ್ಮದೇವರ ಗುಡಿಯಿದೆ. ಈತನನ್ನು ಮಾರಮ್ಮನ ತಮ್ಮನೆಂದು ಹೇಳುತ್ತಾರೆ. ಈಕೆಯ ಸಂತತಿಯವರಿಗೆ 'ಮಾರಮ್ಮನ ಬುಟಗಲು' ಎಂಬ ಬೆಡಗು ಹುಟ್ಟಿಕೊಂಡಿದೆ.

**ಇನ್ನೊಂದು ಐತಿಹ್ಯ**

ಗೌರಸಂದ್ರ ಚಳ್ಳಕೆರೆ ತಾಲೂಕಿಗೆ ಸೇರಿದ ಒಂದು ಗ್ರಾಮ. ಈ ಗ್ರಾಮದಿಂದ ಮೂರು ಕಿ.ಮೀ. ದೂರದಲ್ಲಿ 'ತುಮ್ಮಲು' ಎಂಬ ಪ್ರದೇಶವಿದೆ. ಇಲ್ಲಿ ಹುತ್ತದಲ್ಲಿ ಮಾರಮ್ಮ ಐಕ್ಯವಾಗಿದ್ದಾಳೆ ಎಂದು ಐತಿಹ್ಯವಿದೆ. ಮಾರಮ್ಮನ ಜನನ, ಸಾಧನೆ, ತುಮ್ಮಲು ತಲುಪಿದ್ದು, ಅವರ ತಂದೆ-ತಾಯಿ, ತಮ್ಮಂದಿರನ್ನು ತಿಳಿಸುವ ಐತಿಹ್ಯ ಈ ಕೆಳಗಿನಂತಿದೆ. ಮಂದಗಿರಿ ಅಡವಿಯಲ್ಲಿ ಚೆಂಚುಬೇಡರು ಹಿಂದೆ ನೆಲೆಸಿದ್ದರು. ಇವರು ಅಡವಿಯಲ್ಲಿ ಗೆಡ್ಡೆ-ಗೆಣಸು, ಫಲಾಹಾರ ಹುಡುಕಿಕೊಂಡು ಜೀವನ ಸಾಗಿಸುತ್ತಿದ್ದರು. ಮಂದಗಿರಿ ಪರ್ವತ ಆಂಧ್ರಪ್ರದೇಶದಲ್ಲಿ ಕಂಡು ಬರಬಹುದು. ಇವರಲ್ಲಿ ಚೆಂಚು ಶಿಖಾನಾಯಕ(ಶುಕ್ಲಮಲ್ಲಿನಾಯಕ) ಎಂಬುವನು ಬುದ್ಧಿಶಾಲಿಯಾಗಿದ್ದನು. ಈತನಿಗೆ ಚೆಂಚರೆಲ್ಲ ಸೇರಿ ಮಂದಗಿರಿಯ ಮಂದಭೂಪಾಲನ ಮಗಳಾದ ದಾನಸಾಲಮ್ಮ ಎಂಬ ಕನ್ಯಾಮಣಿಯನ್ನು ನಿಶ್ಚಯಿಸಿ ಕೆಲವು ದಿನಗಳ ನಂತರ ಲಗ್ನ ಮಾಡಿದರು. ಶಿಖಾನಾಯಕ ಮತ್ತು ದಾನಸಾಲಮ್ಮ ಇಬ್ಬರು ತಂದೆ ಕೊಟ್ಟ ದನಕರುಗಳನ್ನು ಈ ಅರಣ್ಯದಲ್ಲಿ ಪಾಲನೆ ಮಾಡುತ್ತ ಕಾಲ ಕಳೆದರು. ಹೀಗೆ ದಾನಸಾಲಮ್ಮ ಗರ್ಭಿಣಿಯಾಗಿ ನವಮಾಸಗಳು ಕಳೆದ ನಂತರ ಹೆಣ್ಣು ಶಿಶುವಿಗೆ ಜನ್ಮ ನೀಡುತ್ತಾಳೆ. ಹುಟ್ಟಿದಂತಹ ಶಿಶುವಿಗೆ ಚೆಂಚು ಲಕ್ಷ್ಮಿಯೆಂದು ನಾಮಕರಣ ಮಾಡುತ್ತಾರೆ.

ಚೆಂಚುಲಕ್ಷ್ಮಿಯು ಶುಕ್ಲಪಕ್ಷ ಚಂದ್ರನಂತೆ ಬೆಳೆಯತೊಡಗಿದಳು. ಒಂದು ದಿನ ಚೆಂಚು ಲಕ್ಷ್ಮಿಯು ಬಿಲ್ಲು ಬಾಣಗಳನ್ನು ತೆಗೆದುಕೊಂಡು ಶಿಕಾರಿಯಾಡಲು ಅರಣ್ಯಕ್ಕೆ ಹೊರಟು ಹೋದಳು. ಶಿಕಾರಿಯಾಡುತ್ತ ಅಡವಿಯಲ್ಲಿ ಗೆಡ್ಡೆ-ಗೆಣಸುಗಳನ್ನು, ಹಣ್ಣುಗಳನ್ನು ತಿನ್ನುತ್ತ ಬಹು ದೂರ ಹೊರಟು ಹೋದಳು. ತಂದೆ ತಾಯಿಯರನ್ನು ಮರೆತು, ಅಡವಿಯಲ್ಲಿ ಆನಂದವಾಗಿ

ಕಾಲ ಕಳೆಯುತ್ತ ಒಂದು ಗವಿಯಲ್ಲಿ ಬಂದು ಸೇರುತ್ತಿದ್ದಳು. ಹೀಗಿರುವಾಗ ಶ್ರೀ ಕೃಷ್ಣನು ಚೆಂಚುಲಕ್ಷ್ಮಿಯನ್ನು ನೋಡಿ ಗವಿಯಲ್ಲಿ ಬಂದು ಅವಿತುಕೊಂಡಿದ್ದನು. ಸಾಯಂಕಾಲವಾಗುತ್ತಲೇ ಚೆಂಚುಲಕ್ಷ್ಮಿಯು ಗವಿಗೆ ಬಂದಾಗ ಶ್ರೀಕೃಷ್ಣನು ತನ್ನ ನಿಜರೂಪವನ್ನು ತೋರಿಸುತ್ತಾನೆ. ಹೀಗೆ ಚೆಂಚುಲಕ್ಷ್ಮಿಯನ್ನು ತಂದೆ ಹುಡುಕಿಕೊಂಡು ಬಂದು ಗವಿಯಲ್ಲಿರುವ ಮಗಳನ್ನು, ನರಸಿಂಹನ ಅವತಾರದ ಪುರುಷನನ್ನು ನೋಡಿ ಬಯಪಟ್ಟು, ಕಾಮಗೇತಿ ಭೂಪಾಲನಿಗೆ ಹೇಳಿದನು. ನರಸಿಂಹನನ್ನು ಕಾಮಗೇತಿ ಭೂಪಾಲನು ಚಿಪ್ಪುಗೊಡಲಿಗಳಿಂದ ಕತ್ತರಿಸಿ ಎಂದು ಹೇಳಿದನು. ಪರಿವಾರದವರು ರಾಜನ ಆಜ್ಞೆಯಂತೆ ಕತ್ತರಿಸಿದರು. ಭಗವಂತನಾದ ನರಸಿಂಹನು ಕಮಂಡಲ ದಲ್ಲಿರುವ ಮಂತ್ರದಿಂದ ಬಂದಿರುವ ಕಾಮಗೇತಿ ಪರಿವಾರದವರು ಕಲ್ಲಿನ ಪ್ರತಿಮೆಗಳಾದರು. ಅದನ್ನು ನೋಡಿದ ಚೆಂಚು ಶಿಖಾನಾಯಕನು ಮಗಳಿಗೆ ಕೇಳುತ್ತಾನೆ. ಚೆಂಚುಲಕ್ಷ್ಮಿಯು ಈತನು ಮನುಷ್ಯನಲ್ಲ. ಶ್ರೀಕೃಷ್ಣಪರಮಾತ್ಮನು. ಈತನಿಗೆ ನನ್ನನ್ನು ಕೊಟ್ಟು ವಿವಾಹ ಮಾಡಬೇಕು ಎಂದಳು. ಚೆಂಚು ಶಿಖಾನಾಯಕನಿಗೆ ಮೆಚ್ಚಿ ನರಸಿಂಹನು ಬಲಮುರಿ ಶಂಖ, ನಾಗಮುರಿ ಬೆತ್ತ, ರತ್ನಗಂಬಳಿ, ಮುತ್ತಿನಪೆಂಡೆ. ಕೊಳಲು, ಚಿಪ್ಪುಗೊಡಲಿ, ಉದಿ-ಪದಿಗಳನ್ನು ನೀಡಿ ಚೆಂಚು ಲಕ್ಷ್ಮಿಯೊಂದಿಗೆ ಹೊರಟು ಹೋದನು.

**ಕೊಡಗಲು ಬೊಮ್ಮನಾಯಕ(ಬೊಮ್ಮಂತರಾಜು)**

ಕೊಡಗಲು ಬೊಮ್ಮನಾಯಕ ಬೇಡ ಸಮುದಾಯಕ್ಕೆ ಸೇರಿದವನು. ಇವನು ಆರಂಭದಲ್ಲಿ ಬೇಟೆಗಾರನಾಗಿ ನಂತರ ಪಶುಪಾಲಕನಾಗಿ ಕಂಡುಬರುತ್ತಾನೆ. ಈತನ ನೆಲೆ ಮೊಳಕಾಲ್ಮೂರು ತಾಲ್ಲೂಕಿನ ಅಡವಿಸೂರಮ್ಮನಹಳ್ಳಿಯ ವ್ಯಾಪ್ತಿಯ 'ಊಟಿ(ಟ)ಕುಂಟ' ಪ್ರದೇಶ. ಆರಂಭದಲ್ಲಿ ಅರಿವಿನದೊಡ್ಡಿಯಲ್ಲಿ ಹಟ್ಟಿ ಕಟ್ಟಿಕೊಂಡು ನೆಲೆನಿಂತವನು. ನಂತರ ಅಲ್ಲಿಯೇ ಸಮೀಪದ 'ಊಟಿ(ಟ)ಕುಂಟ' ಪ್ರದೇಶಕ್ಕೆ ತೆರಳಿ ಮರಡಿಯ ಮೇಲೆ ಕೋಟೆಯನ್ನು ಕಟ್ಟಿಕೊಂಡು ಗವಿಯ ಅರಮನೆಯಲ್ಲಿ ವಾಸ ಮಾಡುತ್ತಿದ್ದನು. ತನ್ನ ಸಮುದಾಯದ ಹಿರಿಯರಾದ ಏಳು ಜನ ಮುತ್ತಿಗಾರರನ್ನು ಮತ್ತು ಹನ್ನೆರಡು ಪೆಟ್ಟಿಗೆ ದೇವರುಗಳನ್ನು ನರಕಾಸುರನು ಸೆರೆಮನೆಗೆ ಹಾಕಿರುತ್ತಾನೆ. ಈ ವಿಷಯವನ್ನು ತಿಳಿದು ಬೊಮ್ಮನಾಯಕ ಮತ್ತು ತಂಗಿ ದೇವಮ್ಮ ವೀಳ್ಯ ಪಡೆದು ನರಕಾಸುರನನ್ನು ಸೋಲಿಸಿ ಸೆರೆ ಬಿಡಿಸುವುದರ ಮೂಲಕ ಸಮುದಾಯದಲ್ಲಿ ಮುಖ್ಯವೆನಿಸಿದ್ದಾನೆ. ಬೇಡಕಂಪಳಕ್ಕೆ ಆಪತ್ತು ಬಂದಾಗ ಪರಿಹರಿಸಿ ಆ ಮೂಲಕ ಪ್ರಸಿದ್ಧಿ ಪಡೆದವನು. ಇವನು ಪಶುಪಾಲಕನಾಗಿ ಮಡಿದ ನಂತರ ಸಾಂಸ್ಕೃತಿಕವಾಗಿ, ಧಾರ್ಮಿಕ ಕ್ಷೇತ್ರದಲ್ಲಿ ಆರಾಧನೆಗೊಳ್ಳುವ ದೈವವಾಗಿರುವುದು ವಿಶೇಷ. ಈತನ ಬಗೆಗೆ ಸೃಷ್ಠಿಯಾಗಿರುವ ಐತಿಹ್ಯ ಹೀಗಿದೆ;

ನರಕಾಸುರನು ಬೇಡರ ಪಶುಸಂಪತ್ತನ್ನು ನೋಡಿ ದುರಾಸೆಯಿಂದ ಇವರ ಹನ್ನೆರಡು ಪೆಟ್ಟಿಗೆ ದೇವರಗಳನ್ನು ಮತ್ತು ಏಳು ಜನ ಮುತ್ತಿಗಾರರನ್ನು (ಅಜ್ಜಂದಿರು) ನರಕದ ಕೋಟೆಯ ಸೆರೆಮನೆಗೆ ಹಾಕಿದನು. ಈ ವಿಷಯ ಕಂಪಳಕ್ಕೆ ತಿಳಿದು ತಬ್ಬಿಬ್ಬಾದರು. ದೊರೆ ಯರಮಂಚಿ

ನಾಯಕನು ನರಕದ ಕೋಟೆಯನ್ನು ನೋಡಿ ಅಭೇದ್ಯವಾದುದರಿಂದ ಸುಲಭ ಸಾಧನೆಯಲ್ಲವೆಂದು, ಇವರನ್ನು ಬಿಡಿಸಿ ತರುವುದರಲ್ಲಿ ವಿಫಲನಾದನು. ಕಂಪಳದಲ್ಲಿ ಸಭೆ ನಡೆಸಿ ಯಾರಾದರೂ ಸೆರೆಯಿಂದ ಬಿಡಿಸಿ ತಂದವರಿಗೆ ಮೊದಲು ಹುಟ್ಟಿದ ಹೋರಿ, ಹೋತ, ಬೆಣ್ಣೆ ಮುದ್ದೆಗಳನ್ನು ಬಹುಮಾನ ಕೊಡುವುದಾಗಿ ಹೇಳಿದರು. ದೊರೆ ಹೀಗೆ ಡಂಗುರ ಹಾಕಿಸುವನು. ಈ ಸುದ್ದಿಯನ್ನು ತಿಳಿದ ಬೊಮ್ಮಯ್ಯನು ಮತ್ತು ತಂಗಿಯಾದ ದೇವಮ್ಮ ನರಕಾಸುರನ ಕೋಟೆಯಲ್ಲಿರುವ ಹನ್ನೆರಡು ಪೆಟ್ಟಿಗೆ ದೇವರುಗಳು, ಏಳು ಜನ ಮುತ್ತಿಗಾರರನ್ನು ಬಿಡಿಸಿ ತರುತ್ತೇನೆಂದು ವೀಳ್ಯ ಪಡೆಯುತ್ತಾರೆ. ತಾವಿಬ್ಬರು ಸೇರಿ ಹೇಗಾದರೂ ಹೋರಾಟ ಮಾಡಿ ಬಿಡಿಸಿಕೊಂಡು ಬರಬೇಕು ಎಂದು, ತಂಗಿ ದೇವಮ್ಮ ಬೊಮ್ಮನಿಗೆ ವೀಳ್ಯೆಯನ್ನು ಹಿಡಿ ಎಂದು ಒತ್ತಾಯ ಮಾಡುತ್ತಾಳೆ. ವೀಳ್ಯೆ ಹಿಡಿಯುವುದು ಎಂದರೆ ಬುಡಕಟ್ಟು ಸಮುದಾಯಗಳಲ್ಲಿ ಬಹುಮುಖ್ಯವಾದ ವಿಧಿ. ಒಮ್ಮೆ ವೀಳ್ಯೆಯನ್ನು ಹಿಡಿದ ಮೇಲೆ ಮಾತಿಗೆ ತಪ್ಪುವಂತಿಲ್ಲ. ಹೀಗೆ ಮೂರು ದಿನದೊಳಗಡೆ ನರಕದ ಕೋಟೆಯನ್ನು ಭೇದಿಸಿ ಪೆಟ್ಟಿಗೆಗಳನ್ನು ಹೊರತರಬೇಕು ಎಂದೂ ತೀರ್ಮಾನವಾಗುತ್ತದೆ. ದೊರೆ ಯರಮಂಚಿ ಮತ್ತು ಗಗ್ಗರಿದಾಸ ಇಬ್ಬರು ಸಹ ನರಕದ ಕೋಟೆ ಭೇದಿಸುವುದಕ್ಕೆ ಹೆದರಿದ್ದರು.

**ನರಕದ ಕೋಟೆಗೆ ಹೋಗಿದ್ದು**

ಬೊಮ್ಮಯ್ಯ ಹಾಗೂ ತಂಗಿ ದೇವಮ್ಮ ಇಬ್ಬರು ಬೇಟೆಗಾರಿಕೆಯಲ್ಲಿ ನಿಪುಣರು. ಇವರು ಆಯುಧಗಳನ್ನಿಟ್ಟುಕೊಂಡು ನರಕದ ಕೋಟೆ ತಲುಪಿದರು. ಮಧ್ಯಾಹ್ನದ ವೇಳೆಗೆ ಭಯಂಕರವಾದ ಕೆಂದೂಳು ಮಿಶ್ರಿತವಾಗಿ ಸುಂಟರಗಾಳಿ ಬೀಸತೊಡಗಿತ್ತು. ಕೋಟೆಯಲ್ಲಿದ್ದ ನರಕಾಸುರನು ಈ ಗಾಳಿಗೆ ತಬ್ಬಿಬ್ಬಾದನು. ಈ ಗಾಳಿಯಲ್ಲಿ ಬೊಮ್ಮಯ್ಯ, ದೇವಮ್ಮ ನರಕದ ಕೋಟೆಗೆ ನುಗ್ಗಿದರು. ಕೋಟೆಗೆ ನುಗ್ಗಿದ ನಂತರ ನರಕಾಸುರನಿಗೆ ಬಾಣ ಬಿಟ್ಟು ಕೆಳಕ್ಕೆ ಉರುಳಿಸಿ ಬಿಟ್ಟರು. ಈ ಇಬ್ಬರು ಸೇರಿ ನರಕಾಸುರನನ್ನು ಸಂಹಾರ ಮಾಡಿ ಹನ್ನೆರೆಡು ಪೆಟ್ಟಿಗೆ ದೇವರುಗಳನ್ನು, ಏಳು ಜನ ಮುತ್ತಿಗಾರರನ್ನು ಬಿಡಿಸಿ ತಂದು ದೊರೆ ಯರಮಂಚಿನಾಯಕನಿಗೆ ತನ್ನ ಷರತ್ತಿನಂತೆ ಒಪ್ಪಿಸಿದರು. ನರಕದ ಕೋಟೆ ಎಂದರೆ ನುಂಕೇಮಲೆ ಪ್ರದೇಶ ಇರಬೇಕು. ಜನಪದರು ನರಕಾಸುರ ಎಂದರೆ ಆನೆಗೊಂದಿ ಅರಸರು ಎಂದೇ ಹೇಳುತ್ತಾರೆ. ಈತನನ್ನು ನರಪತಿ ಎಂದೂ ಸಹ ಕರೆಯುತ್ತಾರೆ. ಬಹುಶಃ ಆನೆಗೊಂದಿ ಅರಸರು ನುಂಕೇಮಲೆ ಪ್ರದೇಶದಲ್ಲಿ ಆಳ್ವಿಕೆ ಮಾಡುತ್ತಿದ್ದಿರಬಹುದು. ಹೀಗೆ ಬೊಮ್ಮನಾಯಕನು ಒಪ್ಪಿಸಿದ ನಂತರ ದೊರೆಗಳೆ ನೀವು ಡಂಗುರ ಹೊಡೆಸಿದಂತೆ ತಾನು ಕೆಲಸ ಮುಗಿಸಿರುತ್ತೇನೆ. ನನಗೆ ಸಲ್ಲಬೇಕಾಗಿರುವ ಸುಂಕಗಳನ್ನು ಕೊಡಬೇಕೆಂದು ಕೇಳಿದನು. ಹೀಗೆ ವೀಳ್ಯ ಪಡೆದು ಬೊಮ್ಮನು ಜಯಶಾಲಿಯಾಗಿ ಎಲ್ಲರಿಂದಲೂ ಗೌರವಿಸಲ್ಪಡುತ್ತಾನೆ. ಆರಂಭದಲ್ಲಿ ಹಾಲು, ತುಪ್ಪ, ಮೊದಲು ಹುಟ್ಟಿದ ಗಂಡು ಕರುಗಳು, ಟಗರು, ಹೋತು ಇನ್ನೂ ಮುಂತಾದವುಗಳನ್ನು ಪ್ರತಿಯೊಬ್ಬರು ಖುಷಿಯಿಂದ ನೀಡಿದರು. ನಂತರ ಇವನ ತೆರಿಗೆ ಜನಸಾಮಾನ್ಯರಿಗೆ ಹೊರೆಯಾಗಿ ಪರಿಣಮಿಸಿತು. ದೊರೆ ಆಜ್ಞೆಯಂತೆ

ಬೊಮ್ಮನಿಗೆ ಎಲ್ಲಾ ರೀತಿಯ ಸವಲತ್ತುಗಳು ಕೆಲವು ದಿನಗಳು ಮಾತ್ರ ದೊರೆತವು. ನಂತರ ಇವನ ದರ್ಪ ದಬ್ಬಾಳಿಕೆಗೆ ಬೇಸತ್ತರು.

**ಕೊಡಗಲು ಬೊಮ್ಮಂತರಾಜನ ದರ್ಪಕ್ಕೆ ಬೇಸತ್ತ ಜನರು**

ಕೊಡಗಲು ಬೊಮ್ಮನಿಗೆ ಆರಂಭದಲ್ಲಿ ಷರತ್ತಿನಂತೆ ತೆರಿಗೆಯನ್ನು ಖುಷಿಯಿಂದ ಕೊಟ್ಟರು. ಡಂಗುರದ ಮಾತಿನಂತೆ ಬೊಮ್ಮನಿಗೆ ಎಲ್ಲಾ ರೀತಿಯ ಸವಲತ್ತುಗಳು ಕೆಲವು ದಿನಗಳು ಮಾತ್ರ ದೊರೆತವು. ಬರುಬರುತ್ತ ಜನ ಬೇಸತ್ತರಲ್ಲದೆ, ಮನೆಗಳಲ್ಲಿ ಬೆಣ್ಣೆ-ತುಪ್ಪ ತಿನ್ನುವಂತಿಲ್ಲ. ಗಂಡು ಹೋರಿ, ಹೋತ, ಟಗರುಗಳನ್ನು ಮಾರುವಂತಿಲ್ಲ. ಪ್ರತಿಯೊಂದಕ್ಕೂ ದೊರೆಯ ಅಪ್ಪಣೆ ಬೇಕಾಗಿತ್ತು. ಇವನ ದರ್ಪಕ್ಕೆ ಬೇಡಕಂಪಳವೇ ಬೇಸತ್ತು ಎಲ್ಲರೂ ಮಾತನಾಡಿಕೊಂಡು ತೆರಿಗೆ ಕೊಡುವುದನ್ನು ನಿಲ್ಲಿಸಬೇಕು ಎಂದರು. ಇವನ ವಿರುದ್ಧ ದೊರೆಗೆ ದೂರು ಕೊಟ್ಟರು. ಬೊಮ್ಮನಿಗೆ ಇನ್ನು ಮುಂದೆ ಮಾಮೂಲಿ ತೆರಿಗೆಯನ್ನು ಕೊಡುವುದಿಲ್ಲ. ಹಲವು ವರ್ಷಗಳಿಂದ ಕೊಟ್ಟು ಅವನತಿ ಹಾದಿಯಲ್ಲಿದ್ದೇವೆ. ಹೀಗೆ ಜನರು ನೋವಿನಿಂದ ದುಃಖವನ್ನು ತೋಡಿಕೊಂಡರು. ದೊರೆ ಇವರ ಕಷ್ಟದ ಪರಿಸ್ಥಿತಿ ನೋಡಿ ಮರುಗಿದನು. ಬೊಮ್ಮನಿಗೆ ತೆರಿಗೆ ಕೊಡುವಾಗ ಇಂತಿಷ್ಟು ವರ್ಷಗಳನ್ನು ತಿಳಿಸಬೇಕಿತ್ತು. ಹಲವು ವರ್ಷಗಳಿಂದ ಕೊಡುತ್ತ ಬಂದಿರುವ ನಾವುಗಳು ಏಳಿಗೆ ಹೊಂದಲಿಲ್ಲ. ಆದ್ದರಿಂದ ಇವನ ಪ್ರದೇಶವನ್ನು ತೊರೆದು ಬೇರೆ ಕಡೆ ಪಯಣಸಬೇಕೆಂದು ತೀರ್ಮಾನಿಸಿದರು. ಅದರಂತೆ ಒಂದು ದಿನ ರಾತ್ರಿ ಇವನಿಗೆ ಹೆದರಿ ಪಲಾಯನ ಮಾಡಿತು. ಬೊಮ್ಮನಿಗೆ ಕೊಡುತ್ತಿದ್ದ ತೆರಿಗೆಗಳನ್ನು ವಿರೋಧಿಸಿ ಎಲ್ಲರೂ ಕೂಡಿ ಒಂದೆಡೆ ಸಭೆ ಸೇರಿ ಚಿಂತನೆ ನಡೆಸಲು ಸಿದ್ಧರಾದರು. ಬೊಮ್ಮನ ಹಾವಳಿ ಬರ್ಬರ ಆಳ್ವಿಕೆ ವಿರೋಧಿಸಿ ಒಂದು ದಿನ ಇವನ ಪ್ರದೇಶ ತೊರೆದು 'ಚಿಂತಗುಟ್ಲ' ಎಂಬ ಬಯಲು ಮೈದಾನದಲ್ಲಿ ಬೇಡಕಂಪಳ ಬೀಡುಬಿಟ್ಟಿತು. ಚಿಂತಗುಟ್ಲು ಎಂದರೆ ಚಿಂತನೆ ಮಾಡುವ ಸ್ಥಳ. ಚಿಂತ-ಚಿಂತನೆ, ಗುಟ್ಲು-ಗುಟ್ಟು ರಹಸ್ಯ ಎಂಬರ್ಥಗಳಿವೆ. ಚಿಂತನೆ ಮಾಡುವುದಕ್ಕೆ ಸೇರಿರುವ ಸ್ಥಳವೇ ಈಗಿನ ಚಿಂತಗುಟ್ಲು ಪ್ರದೇಶವಾಗಿದೆ.

ಅಂದು ಬೊಮ್ಮನ ಸಾವಿನ ಕುರಿತು ಸುದೀರ್ಘ ಚರ್ಚೆಯಾಯಿತು. ಸತತ ಪ್ರಯತ್ನದಿಂದ ಅವನನ್ನು ಗತಿಕಾಣಿಸಬೇಕೆಂದು ಇಡೀ ಸಮುದಾಯವೇ ಮಾತನಾಡಿಕೊಳ್ಳುತ್ತಿತ್ತು, ಹೀಗೆ ರಾತ್ರಿಯಾಯಿತು. ಮಲಗುವ ಮೊದಲು ಇಂದು ರಾತ್ರಿ ಬೊಮ್ಮನ ದಬ್ಬಾಳಿಕೆ ಅಡಗಲಿ ಎಂದು ಕೂಗಿ ಮಲಗಿದರಂತೆ. ಹೀಗೆ ಗುಂಪಿನ ಯಜಮಾನ ಮಲಗಿರುವಾಗ ಮಧ್ಯ ರಾತ್ರಿಯ ಹೊತ್ತಿಗೆ ಆತನ ತಲೆಗೆ ಒತ್ತಿದಂತಾಯಿತು. ಎದ್ದು ಕಂಬಳಿಯನ್ನು ತೆಗೆದು ನೋಡಿದರೆ ಏನು ಇಲ್ಲದಂತಾಯಿತು. ಹೀಗೆ ಪುನಃ ಮಲಗಿದಾಗ ಭೂಮಿಯಿಂದ ಭೋರ್ಗರೆಯುತ್ತ ಶಬ್ಧ ಉಂಟಾಗಿ ತಲೆಯನ್ನು ಏನೋ ಒತ್ತುತಿದ್ದಿತು. ಎದ್ದು ನೋಡಲು 'ಕಲ್ಲುಗುಂಡು'. ಇದನ್ನು ಕಂಡು ಎಲ್ಲರೂ ಆಶ್ಚರ್ಯಗೊಂಡರು. ಇದನ್ನು ಕಂಡು ದೊರೆ ಇದು ನಮ್ಮ ಸತ್ಯಕ್ಕೆ ಮೆಚ್ಚಿ

ದೇವರು ಉದ್ಭವಿಸಿದನು ಎಂದು ಕೈ ಮುಗಿದರು. ದೇವರೆ ಆಗಿದ್ದಲ್ಲಿ, ಈ ದೇವರಲ್ಲಿ ಸತ್ಯ ಇದ್ದರೆ ಬೊಮ್ಮಂತರಾಜನು ಈ ದಿನ ರಾತ್ರಿಯೇ ಮರಣ ಹೊಂದಬೇಕು. ಅವನ ಮರಣ ಹೊಂದಿದ ಗುರುತಾಗಿ ತಾವು ಬೀಡುಬಿಟ್ಟಿದ್ದ ಈ ಸ್ಥಳದಲ್ಲಿದ್ದ ಒಣಗಿ ಹೋಗಿದ್ದ ಬೇವಿನಮರವೊಂದು ಚಿಗುರಬೇಕು. ಆಮೇಲೆ ಬೊಮ್ಮನ ಅರಮನೆ ಮುಂದೆ ಬೆಳಗಾಗುವುದರೊಳಗೆ ಹೊಗೆ ಕಾಣಿಸಬೇಕು. ಇದಲ್ಲದೆ ಈಗ ಹಚ್ಚಿರುವ ನೂರೊಂದು ದೀಪದಲ್ಲಿ ಈ ದುಷ್ಟ ಸತ್ತ ಗುರುತಾಗಿ ಒಂದು ದೀಪ ಆರಿರಬೇಕು. ಹೀಗೆ ದೇವರಿಗೆ ಹರಕೆ ಕಟ್ಟಿಕೊಂಡು ಮಲಗಿದರು. ಅದರಂತೆ ಬೊಮ್ಮನು ಅಂದು ಮಧ್ಯರಾತ್ರಿ ಮರಣ ಹೊಂದುತ್ತಾನೆ. ಮಾರನೆಯ ದಿನ ಬೆಳಿಗ್ಗೆ 'ಊಟಿಕುಂಟ' ಅರಮನೆಯ ಮುಂದೆ ಸೇವಕರು ಬೆಂಕಿಯನ್ನು ಹಾಕುತ್ತಾರೆ. ಆ ಬೆಂಕಿಯ ಹೊಗೆ ಗಗನ ಮಾರ್ಗವಾಗಿ ಹೋಗುತ್ತಿರುತ್ತದೆ. ಇಲ್ಲಿ ಚಿಂತಗುಟ್ಲು ಕಡೆ ಒಣಗಿದ ಬೇವಿನ ಮರ ಚಿಗುರುತ್ತದೆ. ಹಚ್ಚಿ ಇಟ್ಟಿದ್ದ ನೂರೊಂದು ದೀಪಗಳಲ್ಲಿ ಒಂದು ದೀಪ ಹಾರುತ್ತದೆ. ಊಟಿಕುಂಟ ಅಡವಿಯಿಂದ ಹೊಗೆಯು ಗಗನ ಮಾರ್ಗವಾಗಿ ಹೋಗುತ್ತಿದ್ದುದನ್ನು ಕಂಡು ಜನರೆಲ್ಲರು ಹರ್ಷಗೊಂಡರು. ಚಿಂತಗುಟ್ಲು ಪ್ರದೇಶದಲ್ಲಿದ್ದ ಬೇಡಕಂಪಳ ಓಡಿ ಬಂದು ಊಟಿಕುಂಟ ಸೇರಿತ್ತು. ಬೊಮ್ಮನು ಸಾಯುವ ಮುನ್ನ ಮಕ್ಕಳಿಗೆ ಹೇಳುತ್ತಾನೆ. ದೊರೆ ಯರಮಂಚಿನಾಯಕನ ಸೂರ್ಯನ ಮೊಕ್ಕುದಿಂದ(ಸೂರ್ಯನ ಪೂಜೆ, ನಮಸ್ಕಾರ) ನನಗೆ ಸಾವು ಸಂಭವಿಸಬಹುದು. ಸೂರ್ಯನ ಮೊಕ್ಕು ಇದು ಕೆಡಮೊಕ್ಕು. ಅವನ ಬಿಟ್ಟ ಯಾರು ಮುಗಿಯುವುದಿಲ್ಲ. ನಾನು ಸತ್ತ ನಂತರ ಅವನ ಅಧೀನದಲ್ಲಿ ಸಮಾಧಿ ಮಾಡಿರಿ. ಅವನೇ ತಿಥಿ ಮಾಡಬೇಕು ಎನ್ನುತ್ತ ಸ್ವಲ್ಪ ಸಮಯದ ನಂತರ ತೀರಿಕೊಂಡನು.

ಬೊಮ್ಮನ ಶವವನ್ನು, ಅವನು ಹೇಳಿದಂತೆ ಯರಮಂಚಿನಾಯಕನ 'ವಲಬು'(ಸರಹದ್ದು)ನಲ್ಲಿ ಸಮಾಧಿ ಮಾಡಬೇಕು ಎನ್ನುತ್ತಾರೆ. ಇತ್ತ ಚಿಂತಗುಟ್ಲಗೆ ಹೋದ ಕಂಪಳ ಬಂದು ನಮ್ಮ ಸರಹದ್ದಿನಲ್ಲಿ ಇವನ ಶವ ಕೂಡ ಮಣ್ಣು ಮಾಡಬಾರದು. ಇವನು ಜನರಿಗೆಲ್ಲ ಹಿಂಸೆ ಕೊಟ್ಟಿದ್ದಾನೆ. ಇಂತಹ ವ್ಯಕ್ತಿಯ ಶವವನ್ನು ಗಡಿಪಾರು ಮಾಡುವುದು ಒಳಿತು. ಹೀಗೆ ದೊರೆ ಯರಮಂಚಿನಾಯಕನು ಸೇರಿ ಏಳೂರು ಗಡಿದಾಟಿಸಿ ನನ್ನ ಸರಹದ್ದಿನಲ್ಲಿ ಅವನ ಶವವನ್ನು ಸಮಾಧಿ ಮಾಡುತ್ತಾನೆ. ಬಿ.ಜಿ. ಕೆರೆ ಸಮೀಪ 'ದಿಂಪನಗುಡ್ಡೆ'(ಗುಡ್ಡೆ) ಹಾಕುತ್ತಾರೆ. ಏಳೂರು ಗಡಿದಾಟಿಸಿ ವೇದಾವತಿ ಸಮೀಪ ಇರುವ ಬುಕ್ಕಾಂಬೂದಿ ಬಳಿ(ಚಳ್ಳಕೆರೆ ತಾಲ್ಲೂಕು) ಈತನ ಸಮಾಧಿ ಮಾಡಲಾಯಿತು. ಪ್ರಸ್ತುತ ಸಮಾಧಿ ಇದೆ. ಈತನ ಶವಕ್ಕೆ ಸಿಡಿಗೆಗಾಗಿ ಆಸಿನ ಮರದ ಕಟ್ಟಿಗೆಯನ್ನು ಕಟ್ಟಿ ತಂದಿರುತ್ತಾರೆಂದು ಜನಪದರು ಹೇಳುತ್ತಾರೆ. ಆ ಕಟ್ಟಿಗೆಗಳೇ ಇಲ್ಲಿ ಮರವಾಗಿ ಬೆಳೆದಿದ್ದವಂತೆ. ಇತ್ತೀಚೆಗೆ ಆಸಿನ ಮರಗಳು ಕಣ್ಮರೆಯಾಗಿವೆ. ಇಂದು ಒಂದು ಮರ ಮಾತ್ರ ಇದೆ. ಇದೊಂದು ಗುಪ್ತ ಸಾವು. ಶಾಪದಿಂದ, ದೈವಶಕ್ತಿಯಿಂದ ಸತ್ತಿರುವಂಥದ್ದು. ವಿರೋಧಿಗಳ ಕೆಂಗಣ್ಣಿಗೆ ಗುರಿಯಾಗಿ ಸತ್ತಿರುವುದು. ಇವನ ಸಾವಿನ ಸುತ್ತ ಹಲವಾರು ಅಂಶಗಳು ಮೌಖಿಕವಾಗಿ ಸಿಗುತ್ತವೆ. ಸೂರ್ಯ ಮೊಕ್ಕು(ಸೂರ್ಯ ನಮಸ್ಕಾರ)ದಿಂದ ಹಾಗೂ

'ಗುಂಡುಬೋರನ' ದರ್ಶನದಿಂದ ಸಾವನ್ನಪ್ಪಿದ್ದಾನೆ. ಹೀಗೆ ಈ ಸಮುದಾಯದ ಜನರು ಇವನ ದರ್ಪ, ದಬ್ಬಾಳಿಕೆಗೆ ಹೆದರಿ ಕುತಂತ್ರದಿಂದ ಸಾಯಿಸಿರಬಹುದು. ಒಟ್ಟಿನಲ್ಲಿ ಇವನ ಸಾವು ಆಕಸ್ಮಿಕ ನಿಗೂಢವೆಂದೇ ಹೇಳಬಹುದು. ಇವನು ಸತ್ತ ನಂತರ ಕಲ್ಲುಗುಂಡು ತನ್ನ ಸತ್ಯ ನಿರೂಪಿಸಿದ ಕಾರಣ ಅದಕ್ಕೆ ಮುಂದೆ ಬರುವ ಭಾನುವಾರದ ದಿನ ಏಳು ವಾಸೆ(ಬಲಿ) ಕೊಯ್ದು ಜಾತ್ರೆ ಮಾಡುವುದಾಗಿ ತೀರ್ಮಾನ ಕೈಗೊಳ್ಳುತ್ತಾರೆ. ಕಲ್ಲುಗುಂಡಿಗೆ ಗುಂಡುಬೋರ ಎಂದು ನಾಮಕರಣ ಮಾಡುತ್ತಾರೆ. ಭೂಮಿಯಿಂದ ಭೋರ್ಗರೆಯುತ್ತ ಬರುತ್ತಿರುವ ಗುಂಡುಕಲ್ಲಿಗೆ ಗುಂಡುಬೋರ ಎಂದೂ, ಚಿಂತಗುಟ್ಲ ಮಾಡಿದ ಸ್ಥಳದಲ್ಲಿ ಗುಂಡುಬೋರ ಉದ್ಭವಾಗಿರುವುದಕ್ಕೆ ಚಿಂತಗುಟ್ಲು ಬೋರ ಎಂದು ಕರೆಯುತ್ತಾರೆ. ಅದರಂತೆ ಪ್ರತಿವರ್ಷ ಇಲ್ಲಿ ಜಾತ್ರೆ ನಡೆಯುತ್ತದೆ. ಭಾನುವಾರದಂದು 'ವಾಸೆ'(ಬಲಿ) ಕೊಯ್ದು ಜಾತ್ರೆ ಆರಂಭಿಸುತ್ತಾರೆ. ಜನಪದರಲ್ಲಿ ಇಂದಿಗೂ ಈ ಗುಂಡು ಬೆಳೆಯುತ್ತದೆ ಎಂಬ ನಂಬಿಕೆ ಇವರಲ್ಲಿದೆ.

**ಸಮಾಧಿ**

ಕೊಡಗಲು ಬೊಮ್ಮನ ಸಮಾಧಿ ಪ್ರಸ್ತುತ ಬುಕ್ಕಾಂಬೂದಿಯಲ್ಲಿದೆ. ಈ ಸಮಾಧಿಯ ಕಲ್ಲುಬಂಡೆಗಳಿಂದ ಕೂಡಿದೆ. ಈ ಸಮಾಧಿಗೆ ಪ್ರತಿ ಗುರುವಾರ ಪೂಜೆ ನಡೆಯುತ್ತದೆ. ಇವನ ವಂಶಸ್ಥರು ಇವನ ಕಾಲಾನಂತರ ಬುಕ್ಕಾಂಬೂದಿಗೆ ಬಂದು ನೆಲೆಸಿದರು. ಇವರು ಬುಟುಗಲಾರು ಸಂತತಿಗೆ ಸೇರಿದವರು. ದೊರೆ ಯರಮಂಚಿನಾಯಕರ ವಂಶಸ್ಥರು ಕೂಡ ಇಲ್ಲೆ ಇದ್ದು, ಇವರು ವರ್ಷಕ್ಕೊಮ್ಮೆ ಇವನ ತಿಥಿ ಮಾಡುತ್ತಾರೆ. ಯುಗಾದಿ ಹಾಗೂ ದಸರ ಸಂದರ್ಭಗಳಲ್ಲಿ ಹಿರಿಯರ ಹಬ್ಬವೆಂದು ವಿಶೇಷವಾಗಿ ಆಚರಿಸುತ್ತಾರೆ. ಈ ಸಮಾಧಿಗೆ ಈ ಬೆಡಗಿನವರು ತಮ್ಮ ಮಕ್ಕಳಿಗೆ ಜವುಳ ತೆಗೆಸುವುದು, ಪರವು ಮಾಡುವುದು ಕಂಡುಬರುತ್ತದೆ. ಈತನ ಗುಡ್ಡೆ(ದಿಂಪನಗುಡ್ಡೆ) ಬಿ.ಜಿ.ಕೆರೆ ಬಳಿ ರಾವಲಕುಂಟೆಯ ಸಮೀಪ ಇದ್ದು. ಇಲ್ಲಿ ಕೂಡ ಯುಗಾದಿ, ದಸರ ಹಬ್ಬಗಳಲ್ಲಿ ಪೂಜೆ ಮಾಡಿ ಎಡೆಹಾಕಿ ಹೊಸ ಬಟ್ಟೆಗಳನ್ನು ಏರಿಸಿಕೊಂಡು ಬರುತ್ತಾರೆ. ಇಲ್ಲಿ ಕೂಡ ಜವುಳ ತೆಗಿಸುವುದು, ಪರವು ಮಾಡುವುದು ಇಂದಿಗೂ ಕಂಡುಬರುತ್ತದೆ. ಈತನ ಸಮಾಧಿ ಸಮೀಪ ಸೂರಮ್ಮನಹಳ್ಳಿ ಗಟ್ಟಿಮುತ್ತಿನಾಯಕ ವಂಶಸ್ಥರು ಹೋಗುವುದಿಲ್ಲ. ಅಲ್ಲಿಗೆ ಹೋದರೆ ಏನಾದರೂ ಅನಾಹುತ ಸಂಭವಿಸುವುದು ಎಂದು ಇವರ ನಂಬಿಕೆ. ಹಿಂದೆ ಇವನ ಸಮಾಧಿ ಬಳಿ ಹೋದಾಗ ಜನರಿಗೆ ಕೈಕಾಲು ದಪ್ಪವಾಗಿ ಒಂದು ವಾರ ಮಲಗಿದರಂತೆ. ನಂತರ ತಮ್ಮ ದೇವರಿಗೆ ತಪ್ಪು ಕಾಸು ಮೀಸಲು ಕಟ್ಟಿ ಕೊಂಡಾಗ ಕಡಿಮೆಯಾಯಿತೆಂದು ಈ ಬೆಡಗಿನವರು ಹೇಳುತ್ತಾರೆ. ಇದೊಂದು ನಂಬಿಕೆಯಾಗಿದ್ದು, ಈ ವ್ಯಕ್ತಿಯ ಸಮಾಧಿ ಬಳಿ ಹೋಗದಿರಲು ಹಿಂದೆ ನಿಷೇಧ ಹೇರಿರುತ್ತಾರೆ. ಹಾಗಾಗಿ ಅಂದಿನಿಂದ ಇವರು ಹತ್ತಿರ ಸಹಿತ ಸುಳಿಯುವುದಿಲ್ಲ. ಹೋದರೆ ಒಳ್ಳೆಯದು ಆಗುವುದಿಲ್ಲ ಎಂಬುದು ಇವರ ನಂಬಿಕೆ.

**ಸ್ಮಾರಕಗಳು**

ಕೊಡಗಲು ಬೊಮ್ಮನಾಯಕ ನೆಲೆಸಿದ ಪ್ರದೇಶದಲ್ಲಿ ಅವನ ಕುರುಹುಗಳನ್ನು ಇಂದಿಗೂ ಕಾಣಬಹುದು. 'ಊಟಿಕುಂಟ' ಪ್ರದೇಶದಲ್ಲಿ ಈತನು ಕಟ್ಟಿಸಿದ ಬೃಹತ್ ಕೋಟೆ, ಅರಮನೆ,

ಬಾವಿ, ಕೆರೆ, ಮನೆಗಳು, ನೆಲಮಾಳಿಗೆ ಪ್ರಮುಖವಾದವು. ಕೆರೆಗೆಯಿಂದ ಬಂದ ದನಕರು, ಟಗರು, ಹೋತುಗಳನ್ನು ತರುಬುವ ಬಂಡೆಯಿದೆ. ಬೃಹತ್ ಬಂಡೆ ಮೇಲೆ ಕೋಟೆ ಕಟ್ಟಿ ಅದರೊಳಗಿನ ನೆಲ ಅರಮನೆ(ನೆಲಮಾಳಿಗೆ) ವಾಸಕ್ಕಾಗಿ ಮಾಡಿಕೊಂಡನೆಂದು ತಿಳಿಯುತ್ತದೆ. ಕೋಟೆಯ ನಾಲ್ಕು ದಿಕ್ಕುಗಳಲ್ಲಿ ಕಾವಲುಗಾರರ ನಿವೇಶನಗಳಿವೆ. ಪ್ರಸ್ತುತ ಇಲ್ಲಿಗೆ ದನಗಾಹಿಗಳು ಮಾತ್ರ ಹೋಗುವರು. ಜನರು ಇಲ್ಲಿಗೆ ಹೋಗಲು ಇಂದಿಗೂ ಭಯಪಡುತ್ತಾರೆ. ಈ ಸ್ಥಳಕ್ಕೆ ಹೋಗಬೇಕಾದರೆ ಅಡವಿಯಿಂದಲೇ ಹೋಗಬೇಕು. ಇದು ಗ್ರಾಮಗಳಿಗೆ ದೂರವಿದ್ದು, ಅಡವಿಯ ಮಧ್ಯದಲ್ಲಿದೆ.

## ಆಚರಣೆ ಮತ್ತು ಸಂಪ್ರದಾಯ

ಬೊಮ್ಮನಾಯಕನು ಬೇಟೆಗಾರನಾಗಿ ಪಶುಪಾಲಕ ವೀರನಾಗಿ ಈತನು ಕಾಲವಾದ ನಂತರ ದೈವತ್ವಕ್ಕೆ ಏರಿದ್ದಾನೆ. ಇಂದು ಸಾಂಸ್ಕೃತಿಕ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ಆರಾಧನೆಗೊಳ್ಳುವ ದೇವರಾಗಿರುವುದು ಕಂಡುಬರುತ್ತದೆ. ಈತನ ಬೆಡಗಿನವರು ಈತನ ಹೆಸರಿನಲ್ಲಿ ಗುಡಿಕಟ್ಟಿಸಿ ದೇವರು ಮಾಡಿಕೊಂಡಿದ್ದಾರೆ. ಈ ಸಮುದಾಯದಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಆರಾಧಿಸಲ್ಪಡುತ್ತಿರುವ ವ್ಯಕ್ತಿಯಾಗಿದ್ದಾನೆ. ಈತನ ವಂಶಸ್ಥರು ಬುಕ್ಕಾಂಬೂದಿಯಲ್ಲಿ ನೆಲೆಸಿದ್ದಾರೆ. ಇವರು ಗೌರಸಮುದ್ರದ ಬೊಮ್ಮದೇವರಿಗೆ ನಡೆದುಕೊಳ್ಳುತ್ತಾರೆ. ಬೊಮ್ಮಯ್ಯನಿಗೆ ಸಂಬಂಧಿಸಿದಂತೆ ಹಬ್ಬ, ಜಾತ್ರೆ, ಪರವು ಇತ್ಯಾದಿ ಆಚರಣೆಗಳು ನಡೆಯುತ್ತವೆ. ಹೀಗೆ ತಲೆಮಾರುಗಳಿಂದ ಆಚರಣೆ ಸಂಪ್ರದಾಯಗಳನ್ನು ಉಳಿಸಿಕೊಂಡು ಬಂದಿದ್ದಾರೆ. ಈ ಸಮುದಾಯದಲ್ಲಿ ತಮ್ಮ ಮಕ್ಕಳಿಗೆ ಬೊಮ್ಮಯ್ಯ, ಬೊಮ್ಮಣ್ಣ, ಬೊಮ್ಮಕ್ಕ ಎಂದು ಈತನ ಹೆಸರಿನಲ್ಲಿ ನಾಮಕರಣ ಮಾಡುತ್ತಿರುವುದನ್ನು ಇಂದಿಗೂ ಕಾಣಬಹುದು.

## ಗುಂಡು ಬೋರೆದೇವರು

ಚಳ್ಳಕೆರೆ ತಾಲ್ಲೂಕಿನಲ್ಲಿ ಕಂಡುಬರುವ ಬೋರೆದೇವರಹಟ್ಟಿ(ಕುದಾಪುರ)ಯಲ್ಲಿ ಬೋರೆದೇವರ ಗುಡಿಯಿದೆ. ಇದು ಚಳ್ಳಕೆರೆಯಿಂದ ನಾಯಕನಹಟ್ಟಿಗೆ ಹೋಗುವ ಮಾರ್ಗಮಧ್ಯದಲ್ಲಿ ಕಂಡುಬರುತ್ತದೆ. ಈ ದೇವರು ಉದ್ಭವ ದೇವರಾಗಿರುವುದರಿಂದ ಇದನ್ನು ಚಿಂತಗುಟ್ಲ ಬೋರ, ಗುಂಡುಬೋರ, ಬೋರ ಎಂಬ ಹೆಸರುಗಳಿಂದ ಕರೆಯುತ್ತಾರೆ. ಗರ್ಭಗುಡಿಯಲ್ಲಿ ಕುದುರೆ ಮೇಲೆ ಕುಳಿತ ವೀರನೊಬ್ಬನ ವಿಗ್ರಹ, ಅದರ ಬಳಿ ಭೂಮಿಯಿಂದ ಉದ್ಭವಗೊಂಡ ಕಲ್ಲು-ಗುಂಡು ಇದೆ. ಹೀಗೆ ಉದ್ಭವಗೊಂಡ ಕಲ್ಲು-ಗುಂಡು, ಗುಂಡು-ಬೋರದೇವರಾಗಿದೆ. ಈ ದೇವರ ಹೆಸರಿನ ಪ್ರಭಾವವೇ ಬೇಡಸಮುದಾಯದಲ್ಲಿ ಬೋರಯ್ಯ, ಬೋರಮ್ಮ, ಬೋರಣ್ಣ, ಬೋರಕ್ಕ ಇತ್ಯಾದಿ ಹೆಸರುಗಳನ್ನು ಕಾಣಬಹುದು. ಈ ದೇವರಿಗೆ ಸಂಬಂಧಿಸಿದ ಐತಿಹ್ಯ ಹೀಗಿದೆ.

ಬೇಡಕಂಪಳವು ಹಿಂದೆ ಶ್ರೀಶೈಲ ಕಡೆಯಿಂದ ಮೇವು, ನೀರು ಅರಸುತ್ತ ಮಧ್ಯಕರ್ನಾಟಕದ ಕಡೆ ವಲಸೆ ಬಂದಾಗ, ಆರಂಭದಲ್ಲಿ ಮೊಳಕಾಲ್ಮೂರು ತಾಲ್ಲೂಕಿನ ಅರಿಪಿನದೊಡ್ಡಿ

(ಸೂರಮ್ಮನಹಳ್ಳಿ)ಯಲ್ಲಿ ನೆಲೆಸಿದರಂತೆ. ಈ ಪಶುಸಂಪತ್ತನ್ನು ಕಂಡು, ನರಕಾಸುರನು ಏಳುಜನ ಮುತ್ತಿಗಾರರನ್ನು ಮತ್ತು ಹನ್ನೆರೆಡು ಪೆಟ್ಟಿಗೆ ದೇವರುಗಳನ್ನು ಸೆರೆ ಹಿಡಿದು ನರಕದ ಕೋಟೆಗೆ ಹಾಕಿದನಂತೆ. ನರಕದ ಕೋಟೆ ಈಗಿರುವ ನುಂಕೆಮಲೆ ಪ್ರದೇಶ ಎನ್ನುತ್ತಾರೆ. ಕೆಲವರು ಆನೆಗೊಂದಿ ಎನ್ನುತ್ತಾರೆ. ಬಹುಶಃ ನುಂಕೆಮಲೆ ಪ್ರದೇಶವು ಆನೆಗೊಂದಿ ರಾಜರಿಗೆ ಸೇರಿದ ಆಯಕಟ್ಟಿನ ಪ್ರದೇಶವಿದ್ದಿರಬೇಕು. ಇಲ್ಲಿ ನರಕಾಸುರನು ಆಳ್ವಿಕೆ ಮಾಡುತ್ತಿದ್ದನಂತೆ. ಸೆರೆಹಿಡಿದ ಸುದ್ದಿಯನ್ನು ತಿಳಿದ ಬೇಡಕಂಪಳವು ದಿಕ್ಕು ತೋಚದೆ ತಬ್ಬಿಬ್ಬಾಯಿತು. ದೊರೆ ಯರಮಂಚನಾಯಕ ಎಲ್ಲಾ ಪ್ರಯತ್ನಗಳನ್ನು ಮಾಡಿ ಅವರನ್ನು ತರುವಲ್ಲಿ ವಿಫಲನಾಗುತ್ತಾನೆ. ಹೀಗೆ ಕಂಪಳದಲ್ಲಿ ಚರ್ಚೆ ಮಾಡಿ ದೊರೆ ಡಂಗುರ ಹಾಕಿಸುತ್ತಾನೆ. ಸೆರೆಮನೆಗೆ ಮುತ್ತಿಗೆ ಹಾಕಿದ ಮುತ್ತಿಗಾರರನ್ನು (ಹಿರಿಯರು) ಹನ್ನೆರಡು ಪೆಟ್ಟಿಗೆ ದೇವರುಗಳನ್ನು ಬೇಡಕಂಪಳದಲ್ಲಿ ಬಿಡಿಸಿ ತಂದವರಿಗೆ ಈ ಕಂಪಳದಿಂದ ಮೊದಲು ಹುಟ್ಟಿದ ಗಂಡು ಕರುಗಳು, ಟಗರು, ಹೋತ, ಬೆಣ್ಣೆ-ತುಪ್ಪ ಇತ್ಯಾದಿ ಸುಂಕವನ್ನು ಕೊಡಬೇಕೆಂದು ದೊರೆ ಆಜ್ಞೆ ಮಾಡುತ್ತಾನೆ. ಈ ಸಂಗತಿಯನ್ನು ತಿಳಿದ ಕಂಪಳದ ಕೊಡಗಲು ಬೊಮ್ಮ ಮತ್ತು ಅವನ ತಂಗಿ ದೇವಮ್ಮ ವೀಳ್ಯ ಪಡೆದರು. ಇವರಿಬ್ಬರು ಬೇಟೆಗಾರಿಕೆಯಲ್ಲಿ ನಿಪುಣರು. ಅಣ್ಣ-ತಂಗಿ ಒಂದು ದಿನ ನರಕದ ಕೋಟೆ ತಲುಪಿ, ಬಿರುಗಾಳಿಯಲ್ಲಿ ನುಗ್ಗಿ ನರಕಾಸುರನನ್ನು ಸಂಹಾರ ಮಾಡಿ ಸೆರೆಯಿಂದ ಮುತ್ತಿಗಾರರನ್ನು ಮತ್ತು ಹನ್ನೆರಡು ಪೆಟ್ಟಿಗೆ ದೇವರುಗಳನ್ನು ಬಿಡಿಸಿ ತರುತ್ತಾರೆ.

### ವಿಜಯನಗರದ ಅನುಮತಿ ಇಲ್ಲದೆ ಕಂಪಳ ನೆಲೆಸಿದ್ದು

ವಿಜಯನಗರದ ಅನುಮತಿ ಇಲ್ಲದೆ ಬೇಡರ ಕಂಪಳವು ಪಶುಪಾಲನೆ ಕೈಗೊಂಡು ನೆಲೆಸಿದರಂತೆ. ಹೀಗೆ ಒಂದು ದಿನ ವಿಜಯನಗರ ಕಡೆಯಿಂದ ಒಬ್ಬ ಭವ್ಯ ಮೂರ್ತಿ ದೇಶ ಸಂಚಾರವಾಗಿ ಕಂಪಳ ಸಮೀಪಕ್ಕೆ ಬಂದನು. ಬೇಡಕಂಪಳ ಹಾಗೂ ಸಂಪತ್ತನ್ನು ಕಂಡು ಹೊಗಳಿದನಂತೆ. ಆಗ ಕಾಟೇಮಲ್ಲನಾಯಕನು ಕುಡಿಯಲು ಮೊಸರು ಕೊಟ್ಟು ಸತ್ಕರಿಸಿದನಂತೆ. ಆಗ ಕಾಟೇಮಲ್ಲನಾಯಕನ ಪೂರ್ವಿಕರ ವೃತ್ತಾಂತವನ್ನು ವಿವರಿಸಿದನಂತೆ. ಅದಕ್ಕೆ ಸಂತೋಷಪಟ್ಟು, ಈತನಿಗೆ ಬಹುಮಾನಗಳನ್ನು ಕೊಟ್ಟು ಕಳಿಸಿದನಂತೆ. ವಿಜಯನಗರಕ್ಕೆ ಬಂದ ಭವ್ಯ ಮೂರ್ತಿ ರಾಯರ ಬಳಿ ಬಂದು ಕಾಟಮಲ್ಲನಾಯಕನು ಅವನ ಪಶುಸಂಪತ್ತು, ಕಂಪಳ, ಹೀಗೆ ಹೊಗಳಿದ್ದಕ್ಕೆ ನನಗೆ ಬಹುಮಾನಗಳನ್ನು ಕೊಟ್ಟು ಸತ್ಕರಿಸಿದನು. ಹೀಗೆ ಸಾಧು ಭವ್ಯಮೂರ್ತಿ ರಾಯರ ಬಳಿ ನಡೆದ ವೃತ್ತಾಂತವನ್ನು ತಿಳಿಸಿದನು. ಈ ಭವ್ಯ ಮೂರ್ತಿ ಮಾತು ಕೇಳಿ ಕೋಪಗೊಂಡ ರಾಯರು ತನ್ನ ಅನುಮತಿಯಿಲ್ಲದೆ ತನ್ನ ರಾಜ್ಯದಲ್ಲಿ ಕಂಪಳ ಇಟ್ಟುಕೊಂಡ ಕಾಟೇಮಲ್ಲನಾಯಕನನ್ನು ಹಿಡಿದು ತರಲಿಕ್ಕೆ ಸೈನ್ಯವನ್ನು ಕಳಿಸಿದನು. ಇವರನ್ನು ಕಂಡ ಮಲ್ಲನಾಯಕನು ಮಾತಾಡಿಸಿದಾಗ ಅನುಮತಿಯಿಲ್ಲದೆ ನೆಲೆಸಿದ್ದೀಯಾ ಆದಕಾರಣ ರಾಯರು ಯುದ್ಧಕ್ಕೆ ಕಳಿಸಿರುವುದುಂಟು. ಈ ಮಾತನ್ನು ಕೇಳಿದ ಐದು ನೂರು ಮ್ಯಾಸರು ಅಪ್ಪಣೆ ಕೊಡಿ, ಯುದ್ಧ ಮಾಡುತ್ತೇವೆ ಎಂದು ಮಲ್ಲನಾಯಕನ ಬಳಿ ಕೇಳಿದರು. ಅಪ್ಪಣೆ ಎಂದಿದ್ದೆ

ತಡ ಇವರು ಆಯುಧಗಳನ್ನು ತೆಗೆದುಕೊಂಡು ದನಕರುಗಳ ಸುತ್ತ ಅಷ್ಟದಿಕ್ಕುಗಳಲ್ಲಿ ಆಯುಧಗಳನ್ನು ಇಟ್ಟುಕೊಂಡು ನಿಂತರು. ವಿಜಯನಗರ ಸೈನಿಕರು ಬಾಣಗಳನ್ನು ಬಿಟ್ಟ ರಭಸಕ್ಕೆ ಪ್ರೇರಿತವಾದ ಬೀಜದ ಹೋರಿಗಳು ಬೆದರಿ ಓಡಿ ಬರುತ್ತಿದ್ದ ರಭಸಕ್ಕೆ ಸೈನಿಕರು ದಿಕ್ಕಾಪಾಲಾಗಿ ಓಡಿ ಹೋದರು. ವಿಜಯನಗರ ರಾಯರು ಇದರಿಂದ ಮತ್ತೊಮ್ಮೆ ಕೋಪಗೊಂಡು ಡಂಗುರು ಹಾಕಿಸಿದರು. ಈ ಸಂಸ್ಥಾನದಲ್ಲೂ, ಕುಲ ಹದಿನೆಂಟು ಸಮುದಾಯಗಳಲ್ಲಿ ಯಾರು ಕಾಟೇಮಲ್ಲ ನಾಯಕನನ್ನು ಜೀವಂತವಾಗಿ ಹಿಡಿದು ತರುತ್ತಾರೋ ಅವರಿಗೆ ಬಹುಮಾನ ನೀಡಿ ಸನ್ಮಾನ ಮಾಡುತ್ತೇವೆ. ಈ ವರ್ತಮಾನ ಕೇಳಿದ ನೃತ್ಯ ನರ್ತಕಿಯರು ಬಂದು ರಾಯರ ಎದುರು ನಿಂತು ನಮಗೆ ಅಪ್ಪಣೆ ದಯಪಾಲಿಸಿದ್ದಲ್ಲಿ ಅವನನ್ನು ತರುವುದು ನಮ್ಮ ಜವಾಬ್ದಾರಿ ಎಂದು ವೀಳ್ಯೆ ಪಡೆದರು. ಇವರು ಜಿನಗಿ ಹಳ್ಳದ ಸಮೀಪಕ್ಕೆ ಬಂದು ಕಾಟೇಮಲ್ಲನಾಯಕನ ಬಳಿ ಸಂಭಾಷಣೆ ಮಾಡಿದರು. ತಮ್ಮ ನರ್ತನ ವಿದ್ಯೆ, ಗಾನ ವಿದ್ಯೆ ಪ್ರೌಢಿಮೆಯನ್ನು ತೋರಿಸಿದರು. ಮಲ್ಲನಾಯಕನು ಅವರ ಕಡೆ ಹಿಂತಿರುಗಿ ನೋಡಲಿಲ್ಲ. ನರ್ತಕಿಯರು ಇವನ ಮೇಲೆ ಬಿದ್ದಾದರು ಮಾತನಾಡಿಸಿ ವಶಪಡಿಸಿಕೊಳ್ಳಬೇಕೆಂದು ಯೋಚಿಸಿದರು. ಅಷ್ಟರಲ್ಲಿ ಈತನು ದೇವರಿಗೆ ಕಾಸು ಮೀಸಲು ತೆಗೆದುಕೊಂಡು ದೇವರಿಗೆ ಹೊರಟಿದ್ದನು, ಹೋಗುವುದನ್ನು ತಡೆದರು. ನಮ್ಮ ದೇವರು ಒಳ್ಳೆಯದಲ್ಲ. ನಿಮ್ಮನ್ನು ನೋಡಬಾರದು ಎಂದು ಹೇಳುತ್ತಾರೆ. ನಾವು ಬಂದಿದಕ್ಕೆ ನಿನ್ನ ಕಂಪಳ ನಿನ್ನ ಹಿಂದೆ ಕರೆದುಕೊಂಡು ಹೋಗು ಅವು ಬರಲಿಲ್ಲ ಎಂದರೆ ನಮಗೆ ಕೊಡಬೇಕು ಎಂದರು. ಈತ ಒಂದು ಷರತ್ತು ವಿಧಿಸಿದನು. ಅವು ನನ್ನ ಹಿಂದೆ ಗುಡ್ಡ ಹತ್ತಿದರೆ ನೀವು ಇಲ್ಲಿಯೇ ಸೆಗಣಿ ಕಸ ಬಳದುಕೊಂಡು ಇರಬೇಕೆಂದನು. ಕಾಟೇಮಲ್ಲನಾಯಕನು ಬೆಟ್ಟ ಹತ್ತಿ ಕಂಪಳವನ್ನು ಕರೆದನು. ಈ ಧ್ವನಿ ಕೇಳಿ ಎಲ್ಲಾ ಕಂಪಳವು ಮಲ್ಲಯ್ಯನ ಕಡೆ ನಡೆದವು. ಈ ನೃತ್ಯನರ್ತಕಿಯರು ಮೂರು ದಿನದ ಪ್ರಯತ್ನ ವಿಫಲವಾಗಿ ವಿಜಯನಗರಕ್ಕೆ ಹಿಂದಿರುಗಿದರು. ರಾಯರ ಬಳಿ ಈತ ಮಾನವನಲ್ಲಾ ದೈವನಿರಬೇಕು. ಅವನು ಒಬ್ಬರಿಗೆ ವಶವಾಗೋದಿಲ್ಲ. ನಮ್ಮ ನೃತ್ಯಕ್ಕೆ ಮನಸೋತವನಲ್ಲ. ಆತನ ಮೇಲೆ ಜಯಿಸಲಿಕ್ಕೆ ಸಾಧ್ಯವಿಲ್ಲ ಎಂದರು. ಹೀಗೆ ವಿಜಯನಗರದ ರಾಯರು ಎರಡು ಬಾರಿ ಪ್ರಯತ್ನಿಸಿ ಸೋತರು. ಆದರೆ ತನ್ನ ದೈವಿಶಕ್ತಿಯಿಂದ ಕಾಟೇಮಲ್ಲಯ್ಯನು ತನ್ನ ಕಂಪಳವನ್ನು ರಕ್ಷಿಸಿದನು. ಇಲ್ಲಿ ಪವಿತ್ರ ಸತ್ಯವಾದ ಎತ್ತುಗಳ ಪಾಲಕನ ದೈವಿಶಕ್ತಿಯ ಮುಂದೆ ರಾಜನ ಸೈನ್ಯ, ನರ್ತಕಿಯರು ಹೀಗೆ ವಿಫಲರಾದರು. ಕಾಡು ಪ್ರಾಣಿಗಳಿಂದ ಸೆಣಸಾಡಿ ಕಾಡಿನ ಮಧ್ಯ ನೆಲೆಸಿದ ಇವರಿಗೆ ಜನರನ್ನು ಎದುರಿಸಲು ಕಷ್ಟವೆನಿಸಲಿಲ್ಲ. ಈ ದನಕರುಗಳೇ ಹಿಂದಿನಿಂದ ಸೈನಿಕರ ಮೇಲೆ ಇರಿದು, ತುಳಿದು ಎದುರಿಸಿ ಸೋಲಿಸಿದವು.

**ಅಕ್ಕರಾಯಮ್ಮ**

ಅಕ್ಕರಾಯಮ್ಮ ಜೇಡ ಸಮುದಾಯಕ್ಕೆ ಸೇರಿದವಳು. ಈಕೆಯ ತಂದೆ-ತಾಯಿಗಳು ಶುಕ್ಲ ಮಲ್ಲಿನಾಯಕ ಮತ್ತು ದಾನಸಾಲಮ್ಮರೆಂದು ತಿಳಿದುಬರುತ್ತದೆ. ಈಕೆಯೊಬ್ಬ ಪಶುಪಾಲಕಳು.

ಏಳು ಜನ ತಮ್ಮಂದಿರ ಜೊತೆ ಪಶುಪಾಲನೆಯಲ್ಲಿ ತೊಡಗಿರುತ್ತಾಳೆ. ಶ್ರೀಶೈಲದಿಂದ ವಲಸೆ ಬಂದ ಬೇಡಕಂಪಳವು ಜಿನಗಿಹಳ್ಳದ ಪೂರ್ವದಲ್ಲಿ ಬೀಡುಬಿಟ್ಟು ಇಲ್ಲಿಯೇ ನೆಲೆಸಿದರಂತೆ. ಒಮ್ಮೆ ಆನೆಗೊಂದಿ ರಾಯರ ಸೈನ್ಯ ಏಳು ಜನ ಮುತ್ತಿಗಾರರನ್ನು ಮತ್ತು ಪಶುಸಂಪತ್ತನ್ನು ಸೆರೆಮನೆಗೆ ಹಾಕುತ್ತಾರೆ. ಈ ವಿಷಯ ಕಂಪಳಕ್ಕೆ ತಿಳಿದು ತಬ್ಬಿಬ್ಬಾಯಿತು. ಅಕ್ಕ ರಾಯಮ್ಮನಿಗೆ ಈ ವಿಷಯ ತಿಳಿದು ಆನೆಗೊಂದಿಗೆ ಯರಮಂಚಿನಾಯಕನೊಂದಿಗೆ ತೆರಳುತ್ತಾಳೆ. ಇವಳು ಮಾಟದ ಶಕ್ತಿಯಿಂದ ಅರಸನ ಮಗಳಿಗೆ ದಡಾರ ಏಳಿಸಿ ಅರಸನನ್ನು ಚಿಂತೆಗೀಡು ಮಾಡುತ್ತಾಳೆ. ತಾನು ಊರ ಮುಂದೆ ಕುಳಿತು ಒಂದು ಪುಟ್ಟಿಯಲ್ಲಿ ಮಾರಮ್ಮನ ಮೂರ್ತಿಯನ್ನಿಟ್ಟುಕೊಂಡು ಶಾಸ್ತ್ರ ಹೇಳುತ್ತಾಳೆ. ಈ ಸುದ್ದಿ ರಾಜನಿಗೆ ತಿಳಿದು ಆಕೆಯನ್ನು ಅರಮನೆಗೆ ಕರೆಸಿಕೊಂಡು ಮಗಳ ಭವಿಷ್ಯವನ್ನು ಕೇಳುತ್ತಾನೆ. ನಿನಗೆ ಒಬ್ಬಳೇ ಮಗಳು, ಸತ್ಯವಂತರನ್ನು ಸೆರೆ ಹಿಡಿದಿದ್ದೀಯ. ಇದು ಅವರ ಶಾಪ, ಅವರನ್ನು ಬಿಡುಗಡೆ ಮಾಡಿ ಅವರಿಗೆ ಒಪ್ಪಿಸು. ಆಗ ನಿನ್ನ ಮಗಳಿಗೆ ಗುಣವಾಗುತ್ತದೆ ಎನ್ನುತ್ತಾಳೆ. ಆಗ ರಾಯರು ನಾಳೆ ಬೆಳಗಾಗುವುದರೊಳಗೆ ಗುಣವಾದರೆ ಮಾತ್ರ ಬಿಡುಗಡೆ ಮಾಡುತ್ತೇನೆ. ಆಗ ಅಕ್ಕರಾಯಮ್ಮ ಮನೆ ಮುಂದೆ ಬೇವಿನಸೊಪ್ಪಿನ ಗುಡಿಸಲನ್ನು ಹಾಕಿ ಅದರಲ್ಲಿ ಮಾರಮ್ಮನ ವಿಗ್ರಹವನ್ನು ಇಟ್ಟು ರಾಯರ ಮಗಳಿಂದ ಪೂಜೆ ಮಾಡಿಸುತ್ತಾಳೆ. ನಂತರ ಎತ್ತಿನ ಒಡಪು(ಬೂದಿ)ಯನ್ನು ಅವಳಿಗೆ ಸವರಿ ಸ್ನಾನ ಮಾಡಿಸಿರಿ ಎಂದಾಗ ಅದರಂತೆ ಮಾಡುತ್ತಾರೆ. ಬೆಳಗಾಗುವುದರೊಳಗಾಗಿ ರಾಯರ ಮಗಳಿಗೆ ಗುಣವಾಗುತ್ತದೆ. ಬೇವಿನಸೊಪ್ಪು ಮತ್ತು ಬೂದಿಯಲ್ಲಿ ಔಷಧೀಯ ಗುಣಗಳಿರುತ್ತವೆ. ಚರ್ಮದ ಅಲರ್ಜಿಗೆ ಸಹಕಾರಿಯಾಗಿರಬಹುದು. ಕಾಡುವಾಸಿಗಳಾಗಿರುವುದರಿಂದ ಇವರಿಗೆ ನಾಟಿ ವೈದ್ಯಪದ್ಧತಿಯ ಪರಿಚಯವಿರುತ್ತದೆ. ರಾಯರ ಮಗಳಿಗೆ ಗುಣಮುಖವಾದಾಗ ಏಳು ಜನರ ಕಂಪಳವನ್ನು ಬಿಡುಗಡೆ ಮಾಡುತ್ತಾನೆ. ನಂತರ ಮೂರು ದಿನಗಳ ಕಾಲ ಮಾರಮ್ಮನ ಜಾತ್ರೆ ಮಾಡಿ ಮಾರಮ್ಮನನ್ನು ಪೂಜೆ ಮಾಡಿ, ಅಕ್ಕರಾಯಮ್ಮನನ್ನು ಸನ್ಮಾನಿಸಿ ಕಳುಹಿಸಿಕೊಡುತ್ತಾರೆ. ಮುತ್ತಿಗಾರರನ್ನು ಬಿಡುಗಡೆ ಮಾಡಿ, ಅಂದೇ ಮಾರಮ್ಮನ ಜಾತ್ರೆ ಮಾಡಿದ್ದಕ್ಕಾಗಿ ಮುತ್ತಿಗಾರು ಮಾರಮ್ಮ ಎಂದೂ ಹೆಸರು ಪಡೆಯಿತು. ಪ್ರಸ್ತುತ ಈ ಸಮುದಾಯದಲ್ಲಿ ಅಂದಿನಿಂದ ಈ ಮುತ್ತಿಗಾರು ಮಾರಮ್ಮನ ಜಾತ್ರೆಯನ್ನು ಮಾಡುತ್ತಾ, ಉಳಿಸುತ್ತಾ ಬಂದಿದ್ದಾರೆ. ಮೊದಲು ಮಾರಮ್ಮನ ಜಾತ್ರೆ ನಡೆದಿದ್ದೆ ಆನೆಗೊಂದಿಯಲ್ಲಿ ಎಂದು ಈ ಸಮುದಾಯದವರು ಹೇಳುತ್ತಾರೆ. ಹೀಗೆ ಅಕ್ಕರಾಯಮ್ಮ ಕಂಪಳವನ್ನು ಬಿಡಿಸಿದ್ದಕ್ಕಾಗಿ ಇಡೀ ಕಂಪಳಕ್ಕೆ ಅಕ್ಕ. ಏಳು ಜನ ತಮ್ಮಂದಿರಿಗೆ ಅಕ್ಕ, ಎಪ್ಪತ್ತೇಳು ಹಟ್ಟಿಗಳಿಗೆ ಅಕ್ಕ ಎಂದು ಕರೆಯುವರು.

ಕಾಟೀಮಲ್ಲಯ್ಯ ತನ್ನ ಪಶುಸಂಪತ್ತು ಮತ್ತು ಬೇಡಕಂಪಳದೊಂದಿಗೆ ಶ್ರೀಶೈಲ ಪ್ರಾಂತ್ಯದಿಂದ ಮಧ್ಯಕರ್ನಾಟಕದ ಕಡೆ ಬರುತ್ತಿರುವಾಗ ಆನೆಗೊಂದಿಯ ದೊರೆ ಇವರ ಪಶುಸಂಪತ್ತನ್ನು ತನ್ನದಾಗಿಸಿಕೊಳ್ಳಬೇಕೆಂದು ಆಶಿಸಿ ಸೆರೆ ಹಿಡಿದಾಗ ಮೂಲನೆಲೆಯಲ್ಲಿಯೇ ಉಳಿದಿದ್ದ ಅಕ್ಕರಾಯಮ್ಮ ಈ ಸಂಗತಿಯನ್ನು ತಿಳಿದು, ತಕ್ಷಣವೇ ಬಂದು ಮಂತ್ರವಿದ್ಯೆಯನ್ನು ಬಳಸಿಕೊಂಡು ತನ್ನ

ಬೇಡಗಂಪಳವನ್ನು ಆಪತ್ತಿನಿಂದ ಪಾರು ಮಾಡುತ್ತಾಳೆ. ಬುಡಕಟ್ಟು ಸಮುದಾಯಗಳಲ್ಲಿ ಮಾಟದಂತಹ ವಿದ್ಯೆಯು ಇರುತ್ತದೆ. ತಮಗೆ ಕೇಡುಬಗೆದವರಿಂದ ತಮ್ಮನ್ನು ರಕ್ಷಿಸಿಕೊಳ್ಳಲೋಸುಗ ಪ್ರತಿ ಕೇಡು ಬಗೆಯಲು ಈ ಮಾಟವನ್ನು ಬಳಸಿಕೊಳ್ಳುತ್ತಾರೆ. ಹಾಗೆಯೇ ಕಾಡುವಾಸಿಗಳಾಗಿರುವುದರಿಂದ ಗಿಡಮೂಲಿಕೆಗಳಿಂದ ತಯಾರಿಸಿದ ವೈದ್ಯ ಪದ್ಧತಿಯಿಂದ ಸಹ ರೋಗವನ್ನು ಗುಣಪಡಿಸುತ್ತಾರೆ. ತಂತ್ರಗಾರಿಕೆ ಮೂಲಕ ರಾಯಮ್ಮ ತಮ್ಮವರಿಗೆ ಎದುರಾಗಿದ್ದ ವಿಪತ್ತನ್ನು ಪರಿಹರಿಸುವಲ್ಲಿ ಅವಳು ಚಾಣಾಕ್ಷತೆಯನ್ನು ತೋರಿಸುತ್ತಾಳೆ. ಹೀಗೆ ರಾಯಮ್ಮ ಅವಶ್ಯಕ ಸಂದರ್ಭಗಳಲ್ಲಿ ತನ್ನಲ್ಲಿದ್ದ ಯುಕ್ತಿ ಮತ್ತು ಶಕ್ತಿಗಳ ಮೂಲಕ ಸಮುದಾಯದ ಆಂತರಿಕ ಸಮಸ್ಯೆಗಳನ್ನು ಮತ್ತು ಹೊರಗಿನ ಸಮಸ್ಯೆಗಳನ್ನು ಮುಖ್ಯವಾಗಿ ಪ್ರಭುತ್ವವನ್ನು ಎದುರಿಸುತ್ತಾಳೆ. ಆಕ್ರಮಣಕಾರಿ ದಾಳಿಗಳನ್ನು ಎದುರಿಸುವುದು ಸುಲಭದ ಮಾತೇನಲ್ಲ. ಹಿಮ್ಮೆಟ್ಟಿಸಿ ತನ್ನ ಸಂಸ್ಕೃತಿ ರಕ್ಷಣೆಯನ್ನು ಮಾಡುತ್ತಾಳೆ.

### ರೆಪ್ಪಲಸೂರಿ

ರೆಪ್ಪಲಸೂರಿಯು ಬೇಡರ ಪ್ರಮುಖ ಪಶುಪಾಲಕ. ಯರಮಂಚಿನಾಯಕ ಬೇಡಕಂಪಳವನ್ನು ಬಿಟ್ಟು ಹೋದ ಮೇಲೆ ಮುತ್ತಿಗಾರರ ದೇವರೆತ್ತುಗಳ ಜವಾಬ್ದಾರಿಯನ್ನು ಯಾರಿಗೆ ಕೊಡಬೇಕು ಎಂಬ ಪ್ರಶ್ನೆ ಉದ್ಭವಿಸುತ್ತದೆ. ಆಗ ಎನುಮಲಾರು ಬೆಡಗಿನ ರೆಪ್ಪಲಸೂರಿ ಎಂಬುವನು ತಾನು ಜವಾಬ್ದಾರಿ ಹೊರುವುದಾಗಿ ಮುಂದಾಗುತ್ತಾನೆ. ಇವನು ಮುತ್ತಿಗಾರರ ಕಾವಲಿನಲ್ಲಿ ರೊಪ್ಪ ಹಾಕಿಕೊಂಡು ಇರುತ್ತಾನೆ. 'ರೆಪ್ಪಲಸೂರಿ' ಎಂದರೆ ಕಣ್ಣಿನ ರೆಪ್ಪೆಯಲ್ಲಿ ಸೂರ್ಯನ ತೇಜಸ್ಸನ್ನು ಅಡಗಿಸಿಕೊಂಡವನೆಂದು. ಹಾಗೆಯೇ ದನಗಳ ರೊಪ್ಪ ಹಾಕಿಕೊಂಡು ಪಶುಪಾಲನೆ ಮಾಡುತ್ತಿದ್ದರಿಂದ ಇವನನ್ನು ರೆಪ್ಪಲಸೂರಿ ಎಂಬುದಾಗಿ ಕರೆದಿರಬಹುದು.

ನಾಯಕನಹಟ್ಟಿಗೆ ಸಮೀಪವಿರುವ ಗೌಡಗೆರೆ ಪ್ರಾಂತ್ಯವನ್ನು ಅಲಕಿಸಿರಿ ಎಂಬ ದೊರೆ ಆಳುತ್ತಿದ್ದನು. ಈತನು ಬೇಡನಾಯಕ ಸಮುದಾಯಕ್ಕೆ ಸೇರಿದವನು. ಸೂರಿ ದೇವರಹಳ್ಳಿ ಬಳಿ 'ಗೂಡು' ಹಾಕಿಕೊಂಡು ಇದ್ದನು. ಅಲಕಿಸಿರಿಯ(ಮನೆತನ) ಪತ್ನಿ ದೊಡ್ಡೇರಿ ಸಂತೆಗೆ ಹೋಗಿ ಅದೇ ಮಾರ್ಗವಾಗಿ ಹಿಂದಿರುಗುತ್ತಿದ್ದಾಗ ಆಕೆಯ ರೂಪಕ್ಕೆ ಮನಸೋತನು. ರೆಪ್ಪಲಸೂರಿ ಆಕೆಯ ಪಲ್ಲಕ್ಕಿಯನ್ನು ಹೊರುವ ಸೇವಕರಿಗೆ ತಮ್ಮ ಬಳಿ ಸತ್ತಿರುವ ದನದ ಮಾಂಸದ ಆಸೆ ಹುಟ್ಟಿಸಿ ಅವರಿಗೆ ದನದ ಮಾಂಸ ಕೊಡುತ್ತಾನೆ. ಮಾಂಸದ ಅಡುಗೆ ಮಾಡುವುದರಲ್ಲಿ ಸೇವಕರು ಮೈಮರೆಯುತ್ತಾರೆ. ಸಮಯದ ಸದುಪಯೋಗ ಮಾಡಿಕೊಂಡು ಆಕೆಯನ್ನು ಕರೆದುಕೊಂಡು ಅಲ್ಲಿಂದ ಹೊರಟು ರಾಯದುರ್ಗದ 'ಅಚ್ಚುಪಲ್ಲಿ' ಎಂಬಲ್ಲಿಗೆ ಹೋಗಿ ತಲೆಮರೆಸಿಕೊಳ್ಳುತ್ತಾನೆ. ಈ ವಿಷಯ ತಿಳಿದ ಕುಲದ ಹಿರಿಯರು ನ್ಯಾಯ ತೀರ್ಮಾನ ಮಾಡಿ ರೆಪ್ಪಲಸೂರಿಗೆ ಬಹಿಷ್ಕಾರ ಹಾಕಿದರು. ಅಲಕಿಸಿರಿಯನಿಗೆ ತಮ್ಮ ಬಳಿ ಇರುವ ಓಬಳದೇವರನ್ನು ಕೊಟ್ಟು ಅದರ ಮೇಲಿನ ಒಡೆತನವನ್ನು ಅವನಿಗೆ ಒಪ್ಪಿಸುತ್ತಾರೆ. ಇತ್ತ ರೆಪ್ಪಲಸೂರಿಗೆ ಬಹಿಷ್ಕಾರ ಹಾಕಿ ಕಿಲಾರಿ ಕಾಯಕವನ್ನು ಮಾಡದಂತೆ ನಿರ್ಬಂಧ ಹೇರುತ್ತಾರೆ. ರೆಪ್ಪಲಸೂರಿ ಮಾರ್ಯಾದೆಗೆ

ಅಂಜಿ ಹಟ್ಟಿಗಳ ಕಡೆಗೆ ಬರದೆ ಚೌಳಕೆರೆ 'ಪಿಲಿಗುಂಡ್ಲ' ಅಡವಿಯಲ್ಲಿ ಒಂಟಿಯಾಗಿ ಕಾಲ ಕಳೆಯುತ್ತಾನೆ. ಊಟ ನೀರು ಏನು ಸೇವಿಸದೆ ಸದಾ ಚಿಂತೆ ಮಾಡುತ್ತಿರುತ್ತಾನೆ. ಕಿಲಾರಿಯಾದವನು ಪ್ರತಿದಿನ ಸಂಜೆ ದೇವರೆತ್ತುಗಳಿಗೆ ಒಡಪು(ಬೆರಗು) ಹಾಕದೆ ಆಹಾರ ಸೇವಿಸುವಂತಿಲ್ಲ. ಆದ್ದರಿಂದ ರೆಪ್ಪಲಸೂರಿ ಅನ್ನ ನೀರು ತ್ಯಜಿಸಿ ಉಪವಾಸ ಕೈಗೊಳ್ಳುತ್ತಾನೆ. ಕಟ್ಟುನಿಟ್ಟಾಗಿ ಕಿಲಾರಿಯಾದ ಸೂರಿ ಆಕಸ್ಮಿಕವಾಗಿ ಅಚಾತುರ್ಯದಿಂದಾಗಿ ನಡೆದ ಘಟನೆಯಿಂದ ತನ್ನ ಸಮುದಾಯದಿಂದ ದೂರ ಉಳಿಯುತ್ತಾನೆ. ಈ ವಿಷಯವನ್ನು ತಿಳಿದ ಸೂರಿಯ ಹಿರಿಯ ಮಗ ಪ್ರತಿನಿತ್ಯ ಮಧ್ಯರಾತ್ರಿಯಲ್ಲಿ ಕೆಲವು ಎತ್ತುಗಳನ್ನು ತಂದೆಯ ಬಳಿಗೆ ಹೊಡೆದುಕೊಂಡು ಹೋಗಿ ಒಡಪು ಹಾಕಿಸಿ ಬುತ್ತಿ ಕೊಟ್ಟು ಬರುತ್ತಿರುತ್ತಾನೆ. ಈ ವಿಷಯ ತಿಳಿದ ದಡ್ಡಿ ಸೂರನಾಯಕನು ಸಹೋದರರು ಬಹಿಷ್ಕಾರ ಹಾಕಿದ ವ್ಯಕ್ತಿಗೆ ಸಹಾಯ ಮಾಡುವುದರ ಜೊತೆಗೆ ಅವನೊಂದಿಗೆ ಸಂಬಂಧ ಇಟ್ಟುಕೊಂಡ ಕಾರಣ ದಡ್ಡಿ ಸೂರನಾಯಕನು ರಾತ್ರಿಯೆಲ್ಲ ಕಾಯುತ್ತಿರುತ್ತಾನೆ.

ರೆಪ್ಪಲಸೂರಿಯ ಮಗ ದೊಡ್ಡ ಯರಪಾಲನಾಯಕ ಯಾರಿಗೂ ತಿಳಿಯದಂತೆ ಮಧ್ಯರಾತ್ರಿಯೇ ಏಳು ಹಸುಗಳನ್ನು ಹೊಡೆದುಕೊಂಡು ದಿನಾಲು ಹೋಗಿ ನೇಮ(ನಿಯಮ) ಮುಗಿಸಿ ರಾತ್ರಿ ವೇಳೆಯಲ್ಲಿ ಮರಳಿ ಎತ್ತುಗಳನ್ನು ತಂದು ಗೂಡಿಗೆ ಸೇರಿಸಿ ಯಾರಿಗೂ ತಿಳಿಯದಂತೆ ಇದ್ದು ಬಿಡುತ್ತಾನೆ. ಪ್ರತಿ ದಿನ ಓಡಿ ದಣಿದ ಎತ್ತುಗಳು ಗಂಜಲ, ಸೆಗಣಿ ಹಾಕಿದಾಗ ಜೊತೆಗೆ ರಕ್ತವು ಬರುತ್ತದೆ. ಇದನ್ನು ದಡ್ಡಿ ಸೂರನಾಯಕ ಕಂಡು ಹಿಡಿದು ತಡೆದು ನಿಲ್ಲಿಸುತ್ತಾನೆ. ವಿವಾಹಿತಳನ್ನು ಅಪಹರಿಸಿ ಅಪರಾಧವಾಗಿದ್ದು ಅಂತಹ ಅಪರಾಧಿಯ ನೇಮಕ್ಕೆ ಎತ್ತುಗಳನ್ನು ಕೊಂಡೊಯ್ಯುವುದು ಸರಿಯಲ್ಲ. ತಮ್ಮ ಕುಲಕ್ಕೆ ಅಪಮಾನ ಮಾಡಿದ್ದಾನೆ. ಆದ್ದರಿಂದ ಅವನ ನೇಮಕ್ಕೆ ಹರಿದ ಎತ್ತುಗಳನ್ನು ನಮ್ಮ ಗೂಡಿಗೆ ಸೇರಿಸಬೇಡ ಎಂದು ರೆಪ್ಪಲಸೂರಿಯ ದೊಡ್ಡಮಗ ತಂದೆಯನ್ನು ಕುರಿತು ಮಾತನಾಡುತ್ತಾನೆ. ಇಲ್ಲಿ ತಂದೆಗಿಂತ ಕುಲ ಮುಖ್ಯ, ಅಪರಾಧ ಮುಖ್ಯವಾಗುತ್ತದೆ. ಸೂರಿಯ ಮಕ್ಕಳಲ್ಲಿ ಜಗಳವಾಗಿ ಸೂರಿಗೆ ಹರಿಸಿದ ಎತ್ತುಗಳನ್ನು ಮರಳಿ ಸೇರಿಸಿಕೊಳ್ಳುವುದಿಲ್ಲ. ಇವೇ ಮುಂದೆ 'ವಡೇಲು' ಎತ್ತುಗಳೆಂದು ಹೆಸರು ಕರೆದುಕೊಳ್ಳುತ್ತವೆ. ಇಂದಿಗೂ 'ವಡೇಲು ಮುತ್ತಿಗಾರು' ಎತ್ತುಗಳು ಚಳ್ಳಕೆರೆ ತಾಲ್ಲೂಕಿನ ಮ್ಯಾಸರಹಟ್ಟಿ ಬಳಿ ಇವೆ. ವಡೇಲು ಎತ್ತುಗಳು ಎಂದರೆ ರೆಪ್ಪಲಸೂರಿಗೆ ಹರಿಸಿದ ಎತ್ತುಗಳು. ಇಂದಿಗೂ ಇವು ಮುತ್ತಿಗಾರರ ಎತ್ತುಗಳಲ್ಲಿ ಸೇರುವುದಿಲ್ಲ.

ಹಿಂದೆ ವಿಧಿಸಿದ್ದ ನಿಷೇಧಗಳನ್ನು ಸಮುದಾಯ ಇಂದಿಗೂ ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬರುತ್ತದೆ. ಕಾರಣ ಅದಕ್ಕೊಂದು ಧಾರ್ಮಿಕ ಆವರಣವಿದೆ. ಈ ಚೌಕಟ್ಟನ್ನು ಮೀರಬಾರದು ಎಂಬ ಭಯಭೀತಿ ಕಾರಣವಾಗಿ ಇದನ್ನು ನಡೆಸಲಾಗುತ್ತದೆ. ಆದರೆ ಇಂದಿನ ಸಂದರ್ಭಗಳಲ್ಲಿ ಸ್ವಲ್ಪ ಬದಲಾವಣೆ ಕಂಡಿವೆಯೆಂದೇ ಹೇಳಬಹುದು. ರೆಪ್ಪಲಸೂರಿಯ ಮಕ್ಕಳಾದ ದಡ್ಡಿಸೂರನಾಯಕ, ದಡ್ಡಿ ಯರಪಾಲನಾಯಕ, ದಡ್ಡಿ ಕಾಮನಾಯಕ ಈ ಮೂರು ಜನರು ಕಿಲಾರಿ ಕಾಯಕವನ್ನು ಮುಂದುವರೆಸಿಕೊಂಡು ಹೋಗುತ್ತಾರೆ.

**ಯರಗಟ್ಟನಾಯಕ**

ಯರಗಟ್ಟನಾಯಕ ಎಂಬ ವ್ಯಕ್ತಿ ನಾಯಕ ಸಮುದಾಯಕ್ಕೆ ಸೇರಿದವನು. ಇವನಿಗೆ ಯರಗಟ್ಟಯ್ಯ, ಯರಗಟ್ಟಿ, ಯರಗಟ್ಟವಾಡು, ಎಂದೆಲ್ಲಾ ಕರೆಯುವರು. ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳ ನಾಯಕ ಸಮುದಾಯದವರು ಇವನ ಬಗೆಗೆ ಅನೇಕ ವಿಧವಾದ ಚರಿತ್ರೆಯನ್ನು ಹೇಳುತ್ತಾರೆ.

ಯರಗಟ್ಟನಾಯಕ ಮತ್ತು ಗಾದ್ರಿಪಾಲನಾಯಕರನ್ನು ಬೇಡನಾಯಕರು ಪ್ರಬುದ್ಧ ದೇವರುಗಳೆಂದು ಪೂಜಿಸಲಾಗುತ್ತದೆ. ಯರಗಟ್ಟನಾಯಕನು ಚಿತ್ರದುರ್ಗ ಸಮೀಪ ಬೆಳಗಟ್ಟ ಪ್ರದೇಶದಲ್ಲಿ ಪಶುಪಾಲನೆ ಮಾಡುತ್ತಿರುತ್ತಾನೆ. ಈತನ ಬಗೆಗಿನ ಐತಿಹ್ಯ ಹೀಗಿದೆ. ತಮ್ಮ ಪೂರ್ವಜರ ವೃತ್ತಿಯಾದ ಪಶುಪಾಲನೆಯನ್ನು ಯರಗಟ್ಟನಾಯಕ ಕೈಗೊಂಡಿದ್ದ. ಇವನು ಬೆಳೆದು ವಯಸ್ಸಿಗೆ ಬಂದಾಗ ತಾಯಿಯಾದ ತಂಗಡಲ ತಮ್ಮವ್ವಳು ಸುಂದರವಾದ ಕನ್ಯೆಯನ್ನು ನೋಡಿ ಮದುವೆ ಮಾಡಲು ನಿರ್ಧರಿಸಿದಳು. ಅದರಂತೆ ಇವನಿಗೆ ಮದುವೆ ಮಾಡಿದಳು. ಯರಗಟ್ಟನಾಯಕನು ಕಾಲ ಸರಿದಂತೆ ತನ್ನ ಗೆಳೆಯ ತಮ್ಮಯ್ಯನೊಂದಿಗೆ ಮುತ್ತಿಗಾರ ದನಕರುಗಳನ್ನು ಮೇಯಿಸುವ ಸಲುವಾಗಿ ತಮಟಕಲ್ಲು ಕಡೆಗೆ ಹೋದರು.

“ತಮಟಕಲ್ಲು ಗ್ರಾಮದಲ್ಲಿ ಓಬವ್ವ ಎಂಬ ಅಪ್ರತಿಮ ಸುಂದರಿ ಇದ್ದಳು. ಇವಳ ಸೌಂದರ್ಯಕ್ಕೆ ಮನಸೋತು ದುರ್ಗದ ಪರಿಸರದಲ್ಲಿ ರಸಿಕರ ಮನಸ್ಸುಗಳು ಕನಸುಗಳನ್ನು ಕಟ್ಟುತ್ತಿದ್ದವು. ಅವಳನ್ನು ಮದುವೆಯಾಗುವುದಾಗಿ ಪ್ರಯತ್ನಿಸಿದ ಎಲ್ಲಾ ಪುರುಷರಿಗೂ ಅವಳೊಂದು ಕಠಿಣವಾದ ಷರತ್ತಿನ ಸವಾಲನ್ನು ಹಾಕುತ್ತಿದ್ದಳು. ಅದೆಂದರೆ, ಬಾಗೇನಾಳು ಕಾಮನಾಯಕನು ಸಾಕಿ ಸಲುಹಿದ ಗೊಡ್ಡು ಆಕಳಿನ(ಬಂಜೆ ಹಸು) ಹೊಟ್ಟೆಯೊಳಗಿರುವ ಮಾಂಸದ ತುಂಡುಗಳನ್ನು ಸುಟ್ಟು ಕರಿಗಳಾಗಿ(ಮಾಂಸದ ತುಂಡುಗಳು) ಮಾಡಿಕೊಂಡು ಬಂದರೆ ಆನಂತರ ತನ್ನ ಒಪ್ಪಿಗೆಯನ್ನು ತಿಳಿಸುವುದಾಗಿ ಹೇಳಿದ್ದಳು. ಬಾಗೇನಾಳು ಕಾಮಯ್ಯನು ತಮಟಕಲ್ಲಿನ ಓಬವ್ವನ ಸೌಂದರ್ಯಕ್ಕೆ ಮನಸೋತು ವಿವಾಹವಾಗಲು ಕೇಳಿದನು. ಮರುಳಾದ ನಾಯಕನಿಗೆ ಓಬವ್ವ ತನ್ನ ಷರತ್ತನ್ನು ಮುಂದಿಟ್ಟಳು. ಹೆಣ್ಣಿನ ವ್ಯಾಮೋಹಕ್ಕೆ ಒಳಗಾದ ಪುರುಷ ಏನಾದರೊಂದು ಸಾಹಸ ಮಾಡಿ ಆಕೆಯ ಬೇಡಿಕೆಯನ್ನು ಈಡೇರಿಸುತ್ತಾನೆ. ಆದರೆ ನಾಯಕ ತಾನು ಸಾಕಿದ ಬಂಜೆ(ಗೊಡ್ಡು) ಆಕಳನ್ನು ಬಲಿ ಕೊಡಲಾರನೆಂದು ಖಡಾ ಖಂಡಿತವಾಗಿ ನಿಶ್ಚಯಿಸಿದನು. ಈ ಮೂರು ಕಾಸಿನ ಹೆಣ್ಣಿನ ಕಾಮ ತೃಪ್ತಿಗೆ ಸಾಕಿದ ಆಕಳನ್ನು ಕೊಲ್ಲಲಾರನೆಂದು ಹೇಳಿದನು. ಅದೇ ರೀತಿ ಗುಜಗುತ್ತಲ ಕ್ಯಾತಯ್ಯನಿಗೆ ಸಹ ಇವಳು ಕಾಮನಾಯಕನ ಗೊಡ್ಡು ಹಸುವಿನ ಮಾಂಸವನ್ನು ಕೇಳಿದಾಗ ಅವನು ಅಸಹಾಯಕನಾಗಿ ಹಿಂದಿರುಗಿದನು.

ಒಂದು ದಿನ ಸೂರ್ಯ ಉದಯಿಸುತ್ತಿದ್ದ ಸಮಯದಲ್ಲಿ ಓಬವ್ವ ಸ್ನಾನ ಮಾಡಿ ಮನೆಯ ಮೇಲುಪ್ಪರಿಗೆಯಲ್ಲಿ ತನ್ನ ತಲೆಗೂದಲನ್ನು ಬಿಸಿಲಿಗೆ ಆರಿಸಿಕೊಳ್ಳುತ್ತಿದ್ದಳು. ಅದೇ ಸಂದರ್ಭದಲ್ಲಿ

ಯರಗಟ್ಟನಾಯಕನು ತನ್ನ ಸ್ನೇಹಿತನಾದ ತಮ್ಮಯ್ಯನೊಂದಿಗೆ ತಮ್ಮ ದನಕರುಗಳನ್ನು ಮೇಯಿಸಲೆಂದು ಬೆಟ್ಟ, ಗುಡ್ಡ, ಅಡವಿಗಳಲ್ಲೆಲ್ಲಾ ಅಲೆದು ಕೊನೆಗೆ ತಮಟಕಲ್ಲಿನ ಪರಿಸರದಲ್ಲಿ ನಡೆದು ಊರಿನ ಮಧ್ಯೆ ಹೋಗುವಾಗಲೇ ದಾರಿಯಲ್ಲಿ ನಿಂತು ಈ ಅಪೂರ್ವ ಸುಂದರಿಯನ್ನು ವೀಕ್ಷಿಸಿದನು. ಓಬವ್ವ ತನ್ನ ನೀಳವಾದ ಕೂದಲನ್ನು ಎಳೆ ಎಳೆಯಾಗಿ ಬಿಂಗಡಿಸಿ ಆರಿಸಿಕೊಳ್ಳುವ ಸಂದರ್ಭದಲ್ಲಿ ಯರಗಟ್ಟನಾಯಕನು ಅವಳ ಸೌಂದರ್ಯಕ್ಕೆ ಮನಸೋತು ಸ್ಥಳದಲ್ಲಿ ವಿಚಲಿತನಾದ. ಮುಂದಕ್ಕೆ ಹೋಗಲು ಮನಸ್ಸು ಬಾರದೆ ತನ್ನ ಗೆಳೆಯ ತಮ್ಮಯ್ಯನಿಗೆ ತನ್ನ ಇಚ್ಛೆಯನ್ನು ವ್ಯಕ್ತಪಡಿಸಿ ಅವಳೊಡನೆ ಮಾತನಾಡಿ ಬರಲು ಕಳುಹಿಸಿದನು. ಓಬವ್ವ ಅವನಿಗೂ ಸಹ ತನ್ನನ್ನು ಇಷ್ಟಪಟ್ಟವರಿಗೆ ಹೇಳಿದ ಉತ್ತರವನ್ನು ತಿಳಿಸಿರುವಳು. ತಮ್ಮಯ್ಯ ಮರಳಿ ಬಂದು ಯರಗಟ್ಟನಾಯಕನಿಗೆ ಬಾಗೇನಾಳು ಕಾಮನಾಯಕನ ಬಳಿಯಿರುವ ಗೊಡ್ಡು ಆಕಳ ಮಾಂಸ ಬೇಕು. ಅದರ ಹೊಟ್ಟೆಯಲ್ಲಿರುವ ಮಾಂಸ ಖಂಡವನ್ನು ಸುಟ್ಟು ಕರಿಗಳನ್ನು(ಸುಟ್ಟತುಂಡು) ಮಾಡಿಕೊಂಡು ಬಂದರೆ ಅವನೊಂದಿಗೆ ಪ್ರೀತಿಯನ್ನು ಬೆಳೆಸುತ್ತೇನೆ ಎಂದು ಹೇಳಿಕಳುಹಿಸಿದಳೆಂದು ವಿವರಿಸಿದನು.

ವಿಷಯ ತಿಳಿದ ಯರಗಟ್ಟನಾಯಕನು ವಡಪಲು ತಮ್ಮಯ್ಯನೊಂದಿಗೆ ಹೊರಟು, ಮಡಿವಾಳರ ಮನೆಯ ಬಳಿ ಇದ್ದಂಥ ಮೈಲಿಗೆ ಬಟ್ಟೆಗಳನ್ನು ಗಂಟು ಕಟ್ಟಿಕೊಂಡು ಬಂಜೆ(ಗೊಡ್ಡು) ಹಸು ಇರುವ ನೆಲಮಾಳಿಗೆ ಹತ್ತಿರ ಬಂದನು. ನೆಲಮಾಳಿಗೆಯ ಏಳು ಬಾಗಿಲುಗಳಿಗೆ ಬೀಗ ಹಾಕಲಾಗಿತ್ತು. ಯರಗಟ್ಟನಾಯಕನು ದೇವರ ಸ್ಮರಣೆಯಿಂದ ಬೀಗದ ಮೇಲೆ ಬಲಪ್ರಯೋಗ ಮಾಡಿದ ಕೂಡಲೇ ಒಂದರಿಂದ ಒಂದರಂತೆ ಎಲ್ಲಾ ಬೀಗಗಳು ಸಡಲಿ ಬಾಗಿಲುಗಳು ತೆರೆದವು. ನಾಯಕನು ನೆಲಮಾಳಿಗೆಯಲ್ಲಿದ್ದ ಹಸಿವಿನ ಕೊರಳಿನ ಗಂಟೆಗೆ ಬಟ್ಟೆಗಳನ್ನು ತುರುಕಿ ಗಂಟೆಯ ಶಬ್ಧವಾಗದಂತೆ ಮಾಡಿ ಹಸುವನ್ನು ಹೊರಗೆ ನಡೆಸಿಕೊಂಡು ಬರುತ್ತಿದ್ದ. ಆಗ ಅದರ ಕಾಲಿನ ಗೊರಚು ಹೊಸ್ತಿಲಿಗೆ ತಾಕಿ ಅಗೋಚರವಾದ ಶಬ್ದದಂತೆ ಭಾಸವಾಯಿತು. ಈ ಶಬ್ದ ಕಾಮನಾಯಕನಿಗೆ ಕೇಳಿಸಿತು. ಅಲ್ಲಿಂದ ಓಡಿ ಬಂದನು. ಅವನು ಬರುವುದರೊಳಗೆ ಯರಗಟ್ಟನಾಯಕ ವಡಪಲ ತಮ್ಮಯ್ಯ ಇಬ್ಬರು ಸೇರಿ ಹಸುವನ್ನು ಊರಿನ ಪಕ್ಕದ ಬಂಡೆಯ ಮೇಲೆ ಕೊಯ್ದು ಹಸುವಿನಲ್ಲಿದ್ದ ಗುಂಡಿಗೆ ಸತುವಾದ ಮಾಂಸವನ್ನು ತೆಗೆದು ಅಚ್ಚುಕಟ್ಟಾಗಿ ಸುಟ್ಟು ಕರಿಗಳನ್ನು ಮಾಡಿಕೊಂಡು ತಮಟಕಲ್ಲಿನ ನಾಯಕಿ ಸುಂದರಿ ಓಬವ್ವನಿಗೆ(ನಾಗತಿ) ಷರತ್ತಿನಂತೆ ಕೊಟ್ಟರು. ಈ ಯರಗಟ್ಟನಾಯಕನ ಸಾಹಸ, ಪ್ರತಿಭೆ ಹಾಗೂ ದೇಹದಾರ್ಢ್ಯಗಳನ್ನು ಮನಸಾರೆ ಮೆಚ್ಚಿದ ಓಬವ್ವ ಅವನೊಂದಿಗೆ ಪ್ರಣಯ ಬೆಳೆಸಿದಳು. ಅವನ ಹಸುಗಳು ಸಮೀಪದ ರೊಪ್ಪದಲ್ಲಿದ್ದವು. ಜೊತೆಗೆ ಅವನ ತಾಯಿ ಮತ್ತು ಹೆಂಡತಿ ಅಲ್ಲಿಯೇ ಸ್ವಲ್ಪ ದೂರದ ಪ್ರದೇಶದಲ್ಲಿ ವಾಸವಾಗಿದ್ದರು. ತನ್ನ ತಾಯಿ, ಹೆಂಡತಿಗೆ ಪ್ರತಿನಿತ್ಯ ಹಸುಗಳ ಕಾವಲಿಗೆ ಹೋಗುತ್ತೇನೆ ಎಂದು ಸುಳ್ಳು ಹೇಳಿ ಓಬವ್ವನ ಮನೆಗೆ ಹೋಗುತ್ತಿದ್ದನು. ಇಡೀ ರಾತ್ರಿಗಳನ್ನೆಲ್ಲ ಓಬವ್ವಳ ಮನೆಯಲ್ಲಿ ಕಳೆದು ತಾಯಿ, ಹೆಂಡತಿ ಬೆಳಿಗ್ಗೆ ಏಳುವುದರೊಳಗೆ ಬಂದು ಮನೆಗೆಲಸದಲ್ಲಿ

ತೊಡಗಿ, ಹಸುಗಳ ರೊಪ್ಪಕ್ಕೆಂದು ಪುನಃ ಹೋಗುತ್ತಿದ್ದನು. ಇದೇ ರೀತಿ ಸಾಕಷ್ಟು ದಿನ ಸಾಗಿಸಿದನು. ಇಲ್ಲಿ ಸಂಪ್ರದಾಯವನ್ನು ಮುರಿದ ಕಾರಣಕ್ಕೆ ಯರಗಟ್ಟನಾಯಕ ಸಮಾಜಕ್ಕೆ ತಲೆಬಾಗಿ ಬದುಕುವ ಸ್ಥಿತಿ ಬದಲಾಗುತ್ತದೆ.

ಯರಗಟ್ಟನಾಯಕನ ಗುಪ್ತವಾಗಿರುವ ವೈಭವವನ್ನು ಕಂಡು ಸಹಿಸದ, ಓಬವ್ವನಿಂದ ವಂಚಿತನಾದ ವ್ಯಕ್ತಿ ಗುಜಗುತ್ತಲ ಕ್ಯಾತಯ್ಯ ಹೊಟ್ಟೆಕಿಚ್ಚಿನಿಂದ ಸೇಡು ತೀರಿಸಿಕೊಳ್ಳಲು ಒಂದು ದಿನ ಯರಗಟ್ಟನಾಯಕ ಮತ್ತು ತಮ್ಮಯ್ಯ ತಾವು ಭೂ ಚಕ್ರದ ಗೊಡುಗು(ಛತ್ರಿ ಆಕಾರ) ಹಿಡಿದುಕೊಂಡು ಬರುತ್ತಿರುವಾಗ ಕ್ಯಾತಯ್ಯ ತನ್ನ ಬಾಣದಿಂದ ಯರಗಟ್ಟನಾಯಕನ ಹೊಟ್ಟೆಗೆ ಹೊಡೆದನು. ಹೊಟ್ಟೆಯಿಂದ ಹೊರಹೋದ ಬಾಣ ಗಿರಗಿರನೆ ಬಂಡೆಯ ಮೇಲೆ ತಿರುಗುತ್ತಿತ್ತು. ಬಾಣದ ಶಬ್ದ ಕೇಳಿಸಿಕೊಂಡ ತಮ್ಮಯ್ಯ ನಾಯಕರೇ ಏನಿದು ಗಿರಗಿರನೆ ಶಬ್ದ ಎಂದಾಗ ಯರಗಟ್ಟನಾಯಕ ಏನೋ ಕಲ್ಲುಗಳ ಶಬ್ದವಿರಬಹುದು. ಮುಂದಕ್ಕೆ ಸಾಗೋಣ ನಡೆ ಎಂದನು. ಬಾಣದ ಏಟಿನಿಂದ ಯರಗಟ್ಟನಾಯಕನಿಗೆ ನೋವು ಸಂಕಟಗಳು ಉಲ್ಬಣವಾದವು. ಹೊಟ್ಟೆಯನ್ನು ಎರಡು ಕೈಗಳಿಂದ ಹಿಡಿದುಕೊಂಡು ತಮಟಕಲ್ಲಿನಿಂದ ನಾನಾ ದಾರಿಗಳನ್ನು ಬದಲಿಸಿ ನೇರವಾಗಿ ಬೆಳಗಟ್ಟದವರೆಗೆ ಪ್ರಯಾಣಿಸಿದನು. ಬೆಳಗಟ್ಟ ಸಮೀಪದವರೆಗೆ ಬಂದನು. ಹಿಂದಕ್ಕೆ - ಮುಂದಕ್ಕೆ ಹೋಗಲಾರದೆ ವಿಧಿಗೆ ಸೋತು ಮರಣ ಹೊಂದುವ ಹಂತದಲ್ಲಿದ್ದನು. ಇತ್ತ ಕಡೆ ಗೆಳೆಯ ತಮ್ಮಯ್ಯ ಕೈಯಲ್ಲಿದ್ದ ಭೂ ಚಕ್ರದ ಗೊಡಗನ್ನು ಅಲ್ಲಿಯೇ ಬಿಸಾಡಿ ತಾಯಿ ಮತ್ತು ಹೆಂಡತಿಗೆ ನಿಮ್ಮ ಮಗ ಬೆಳಗಟ್ಟದ ಸಮೀಪ ಮರಣಶೈಯ್ಯೆಯಲ್ಲಿರುವನು. ತಾವು ಧಾವಿಸಬೇಕೆಂದು ಬೇಡಿಕೊಂಡನು. ತಕ್ಷಣ ತಾಯಿ ಮತ್ತು ಹೆಂಡತಿ ಕೂಡಿ ದುಃಖಿಸುತ್ತಾ ತೀವ್ರವಾಗಿ ಕಣ್ಣೀರು ಸುರಿಸಿಕೊಂಡು ಬೆಳೆಗಟ್ಟದ ಕಡೆ ನಡೆದು ಯರಗಟ್ಟನಾಯಕ ಬಿದ್ದಿರುವ ಸ್ಥಳಕ್ಕೆ ಬಂದರು.

ಯರಗಟ್ಟನಾಯಕನ ಜೀವ ಅಂತಿಮ ಘಳಿಗೆಯಲ್ಲಿ ತೂಗಾಡುತ್ತಿತ್ತು. ಬಾಯಿಬಿದ್ದು, ಸುಮ್ಮನೆ ಪಿಲಿ ಪಿಲಿ ಕಣ್ಣುಗಳನ್ನು ಮಾತ್ರ ಬಿಡುತ್ತಿದ್ದನು. ಆಗ ತನ್ನ ತಾಯಿ ಎದೆಹಾಲನ್ನು ಬಾಯಿಗೆ ಬಿಟ್ಟಳು. ಅವನ ಆತ್ಮ ದೇಹವನ್ನು ಬಿಟ್ಟು ದೈವವನ್ನು ಸೇರಿಕೊಂಡಿತು. ಇದರಿಂದ ಯರಗಟ್ಟನಾಯಕ ದೈವತ್ವಕ್ಕೇರಿದ ಮಹಾಪುರುಷನಾದನೆಂದು ನಂಬಲಾಗಿದೆ. ನಂತರ ಯರಗಟ್ಟನಾಯಕನ ಶವವನ್ನು ಸಮುದಾಯದ ಎಲ್ಲರೂ ಕೂಡಿ ಹೊತ್ತುಕೊಂಡು, ಬೆಂಕಿಯ ಪಂಜನ್ನು ಕೈಯಲ್ಲಿಟ್ಟುಕೊಂಡು ಮುಂದೆ ಸಾಗಿದರು. ಹೀಗೆ ಮುಂದುವರೆದಾಗ “ಯರಗಟ್ಟನಾಯಕನ ಬಳಿಯಲ್ಲಿದ್ದ ಬಿರುದಾವಳಿಗಳಾದ ಭೂಚಕ್ರದ ಗೊಡಗುಗಳು(ಛತ್ರಿ ಆಕಾರ) ಬೆಳಗಟ್ಟದ ಹತ್ತಿರ ಬಿಟ್ಟು ಬಂದಿದ್ದ ನೆನಪಾಯಿತು. ಮತ್ತೆ ಶವವನ್ನು ಇಳಿಸಿಕೊಂಡು ಕೆಲವರು ಹಿಂದಕ್ಕೆ ಹೋಗಿ ಮರೆತುಬಿಟ್ಟು ಬಂದಿದ್ದ ವಸ್ತುಗಳನ್ನು ತೆಗೆದುಕೊಂಡು ಬಂದರು. ಅಲ್ಲಿಂದ ಶವ ಹೊತ್ತುಕೊಂಡು ಮುಷ್ಟಲಗುಮ್ಮಿ(ಚಿನ್ನಹಗರಿ ಬಳಿ) ಬಳಿ ಬಂದು ಶವವನ್ನು ಇಳಿಸಿದರು. ಆ ಸ್ಥಳವನ್ನು ಇಂದಿಗೂ ದಿಂಪನಗುಡ್ಡ(ಇಳಿಸಿದ ಗುಡ್ಡ) ಎಂದು ಕರೆಯುತ್ತಾರೆ”.[೧] ನಂತರ ಕೂಡ್ಲಿಗಿ ತಾಲೂಕಿನ

ವಲಸೆ ಎಂಬ ಗ್ರಾಮಕ್ಕೆ ತಂದು ಸಮಾಧಿ ಮಾಡಲಾಯಿತೆಂದು ಸ್ಥಳೀಯರು ಹೇಳುತ್ತಾರೆ. ಈತನ ಸಮಾಧಿಯೇ ಇಂದು ದೇವಸ್ಥಾನವೆಂದು ಪೂಜಿಸುತ್ತಾರೆ. ಈಗಲೂ ಯರಗಟ್ಟನಾಯಕನ ಎತ್ತುಗಳೆಂದು ಮೀಸಲಿರಿಸಲಾಗಿದೆ. ಅವುಗಳನ್ನು ನೋಡಿಕೊಳ್ಳಲೆಂದು ಇಬ್ಬರು ಕಿಲಾರಿಗಳನ್ನು ನೇಮಕ ಮಾಡಲಾಗಿದೆ.

**ಗಾದ್ರಿಪಾಲನಾಯಕ**

ಗಾದ್ರಿಪಾಲನಾಯಕ ಒಬ್ಬ ಪಶುಪಾಲಕ. ದನಕರುಗಳನ್ನು ಕಾಯುವ ಒಬ್ಬ ಕಿಲಾರಿ. ಈತನು ರೆಪ್ಪಲು ಸೂರಿಯ ಮಗ. ನಾಯಕ ಸಮುದಾಯಕ್ಕೆ ಸೇರಿದವನು. ಇವರ ವೃತ್ತಿ ಪಶುಪಾಲನೆ. ಈ ಪಶುಪಾಲನೆ ವಂಶಪಾರಂಪರಿಕವಾಗಿ ಬಂದಿದ್ದು, ತಂದೆ-ರೆಪ್ಪಲಸೂರಿ, ಅಣ್ಣ ದಡ್ಡಿಸೂರನಾಯಕ. ನಂತರ ಈತನು ಕಿಲಾರಿ ವೃತ್ತಿಯನ್ನು ಸ್ವೀಕರಿಸಿದವನು. ಈ ಒಂದು ಪಶು ಸಂಕುಲಕ್ಕೆ ಶ್ರೀ ಶೈಲ ಮಲ್ಲಯ್ಯನ ಎತ್ತುಗಳು ಅಥವಾ ಮುತ್ತಿಗಾರ ಎತ್ತುಗಳೆಂದು ಕರೆಯುತ್ತಾರೆ. ತನ್ನ ತಂದೆ ಕೂಡ ಈ ಮುತ್ತಿಗಾರರ ಎತ್ತುಗಳನ್ನು ಕಾಯುವ ಕಿಲಾರಿಯಾಗಿದ್ದವನು. ಈತನು ಸಮುದಾಯದಲ್ಲಿ ಯಾವುದೋ ಒಂದು ತಪ್ಪು ಮಾಡಿದ್ದಕ್ಕಾಗಿ ಸಮುದಾಯದಿಂದ ಬಹಿಷ್ಕಾರಗೊಂಡ ನಂತರ ಮ್ಯಾಸ ಮಂಡಳಿ ಸಭೆ ಸೇರಿ ಕಿಲಾರಿ ಪದ್ಧತಿಯನ್ನು ಪಾಲಯ್ಯನಿಗೆ ವಹಿಸಿದರು. ಗಾದರಿ ಎಂಬ ವಿಶೇಷಣ ಸೇರಿಕೊಳ್ಳಲು ಕಾರಣ ಇವನು ಹುಲಿಯೊಂದಿಗೆ ಹೋರಾಟ ಮಾಡಿ ಹುಲಿಯನ್ನು ಸೋಲಿಸಿ ವೀರಮರಣ ಒಪ್ಪಿದ್ದಕ್ಕಾಗಿ 'ಗಾದರಿ' ವಿಶೇಷಣ ಸೇರಿಕೊಂಡಿದೆ. ಅಂದಿನಿಂದ ಈತನಿಗೆ ಗಾದ್ರಿಪಾಲನಾಯಕ ಎಂದು ಕರೆದಿರುವುದುಂಟು. ಮುತ್ತಿಗಾರರ ಎತ್ತುಗಳನ್ನು ಪಾಲನೆ ಮಾಡಲು ಒಪ್ಪಿ ಪಶುಪಾಲನೆ ವೃತ್ತಿ ಕೈಗೊಂಡನು. ಆರಂಭದಲ್ಲಿ ಅರಿವಿನದೊಡ್ಡಿ(ಅಡವಿಸೂರಮ್ಮನಹಳ್ಳಿ), ಪಿಲಿಗುಂಡ್ಲು ಅಡವಿ(ಚೌಳಕೆರೆ), ಗರಣಿಹಳ್ಳ(ದೇವರಹಳ್ಳಿ), ಶುಕ್ಲಗಿರಿಪರ್ವತ(ನನ್ನಿವಾಳ), ಗೋಸಿಕೆರೆ(ವೇದಾವತಿ ನದಿತೀರ), ಜಾನಮದ್ದಿ, ಸೊಟ್ಟೂರು, ಶಿರಿವಾಳ ಕೊನೆಗೆ ಮಿಂಚೇರಿ ಅಡವಿಯಲ್ಲಿ ಹುಲಿಯೊಂದಿಗೆ ಸೆಣಸಾಡಿ ಮರಣ ಒಪ್ಪುತ್ತಾನೆ.

ಒಮ್ಮೆ ಮೇವು, ನೀರು ಅರಸಲು ಪಾಲನಾಯಕನು ಜೊತೆ ಪಶುಪಾಲನೆ ಮಾಡಲು ಸಹಾಯಕರಾದ ಅಜಡ್ಲು ಬೆಡಗಿನ ನಾಲ್ಕು ಜನರನ್ನು ಕಳುಹಿಸುತ್ತಾನೆ. ಇವರ ಕೆಲಸ ಹುಲ್ಲು, ನೀರು, ಪಶುಪಾಲನೆಗೆ ಸೂಕ್ತ ಸ್ಥಳ ಪ್ರದೇಶವನ್ನು ನೋಡಿಕೊಂಡು ಬರುವುದು ಇವರ ಕರ್ತವ್ಯ. ಇವರು ಒಂದು ಅಡವಿ ಇರುವಾಗಲೇ ಮತ್ತೊಂದು ಅಡವಿಯನ್ನು ಪಶುಪಾಲನೆಗೆ ಆಯ್ಕೆ ಮಾಡಿಕೊಂಡು ಬಂದಿರುತ್ತಾರೆ. ಹೀಗೆ ಇವರು ವೇದಾವತಿ ನದಿತೀರದ ಸೆಟ್ಟೂರು, ಶಿರಿವಾಳ, ಗೋಸಿಕೆರೆ ಅಡವಿಯಲ್ಲಿ ಮೇವು, ನೀರು ಇದ್ದು ದನಕರುಗಳು ನೆಲೆ ನಿಲ್ಲಲು ಸೂಕ್ತವಾದ ಪ್ರದೇಶವೆಂದು ಬಂದು ಪಾಲನಾಯಕನಿಗೆ ತಿಳಿಸುತ್ತಾರೆ. ಪಾಲನಾಯಕ ತನ್ನ ಕಂಪಳವನ್ನು ಮೂಲ ಸ್ಥಳ-ಅರಿವನದೊಡ್ಡಿ(ಸೂರಮ್ಮನಹಳ್ಳಿ) ಅಡವಿಯಿಂದ ಗೌರಸಮುದ್ರ, ಬುಕ್ಕಾಂಬೂದಿ ಮಾರ್ಗವಾಗಿ ಸೆಟ್ಟೂರು ಕಾವಲಿಗೆ ತಲುಪುತ್ತಾನೆ(ವೇದಾವತಿ ನದಿ ತೀರ).

ಇಲ್ಲಿಯೇ ತನ್ನ ಕಂಪಳವನ್ನು ಬೀಡುಬಿಡುತ್ತಾನೆ. ಇಲ್ಲಿಯೇ ಹಲವು ದಿನಗಳ ಕಾಲ ನೆಲೆಸಿರುತ್ತಾನೆ. ಹೀಗೆ ನೆಲೆಸಿರಬೇಕಾದರೆ ಸೆಟ್ಟೂರು ಸೊಟ್ಟಪ್ಪನ ಮಕ್ಕಳಾದ ಕೆಂಚವ್ವ-ಕಾಮವ್ವ ಎಂಬ ಅಕ್ಕತಂಗಿಯರನ್ನು ಮದುವೆಯಾಗುತ್ತಾನೆ. ನಂತರ ಗೋಸಿಕೆರೆ ಬಳಿ ಹಟ್ಟಿಯನ್ನು ಹಾಕಿಕೊಂಡು ಪಶುಪಾಲನೆ ಮಾಡುತ್ತಾನೆ. ಪಾಲನಾಯಕನ ತಮ್ಮ ಚಿನ್ನಪಾಲನಾಯಕ ಇತರ ಪರಿವಾರದವರು ಇರುತ್ತಾರೆ. ಸಹಾಯಕರಾದ ಅಜಡ್ಲು ಬೆಡಗಿನವರನ್ನು ಮತ್ತೊಂದು ಸ್ಥಳಕ್ಕೆ ಹುಲ್ಲು, ನೀರು ಹುಡುಕಲು ಕಳುಹಿಸಿರುತ್ತಾನೆ. ಅಣ್ಣ-ತಮ್ಮ ಇಬ್ಬರು ಅಡವಿಯಲ್ಲಿ ಪಶುಪಾಲನೆ ಮಾಡುತ್ತಿದ್ದಾಗ ಒಂದು ದಿನ ಇದೇ ಅಡವಿಯಲ್ಲಿ ಹುಲಿಗಳು ತುಂಬಿದ್ದವು. ಕಾಡಿನಲ್ಲಿ ಮಧ್ಯಾಹ್ನ ಸಮಯದಲ್ಲಿ ದನಗಳನ್ನು ಕಾಯುತ್ತ ನಿಂತಿರುವಾಗ ಅವನ ಮುಂದೆ ಎರಡು ಹುಲಿಗಳು ಹಾದು ಹೋಗುತ್ತವೆ. ಇದರಿಂದ ಭಯಗೊಂಡು ಪಾಲನಾಯಕ ಹುಲಿಗಳನ್ನು ತಡೆದು ಹೀಗೆ ಹೇಳುತ್ತಾನೆ. ನಾವು ಮೇವು ಹುಡುಕುವ ನಿಮಿತ್ತವಾಗಿ ಕಾಡಿಗೆ ಬಂದಿದ್ದು ತಮ್ಮ ದನಕರುಗಳಿಗೆ ಯಾವುದೇ ತೊಂದರೆ ಮಾಡದಂತೆ ಹುಲಿಗಳಲ್ಲಿ ಮನವಿ ಮಾಡಿಕೊಂಡನು. ನೀವು ನನ್ನ ರಾಶಿಗೆ ಬರದಿದ್ದರೆ ನಾನು ನಿಮ್ಮ ರಾಶಿಗೆ ಬರುವುದಿಲ್ಲ. ಹೀಗೆ ಒಪ್ಪಂದ ಮಾಡಿಕೊಂಡನು. ಈ ಎರಡು ಹುಲಿಗಳು(ಗಂಡು-ಹೆಣ್ಣು) ತನ್ನ ಮರಿಗಳನ್ನು ಪಾಲನಾಯಕನ ಕರುಗಳ ಹಟ್ಟಿಗೆ ಬಿಟ್ಟು ನಾವು ಆಹಾರಕ್ಕಾಗಿ ದೂರದ ಅಡವಿಗೆ ಹೋಗಿ ಬರುತ್ತೇವೆ. ಅಲ್ಲಿಯವರೆಗೆ ನಮ್ಮ ಹುಲಿಮರಿಗಳು ಇಲ್ಲಿಯೇ ಇರಲಿ ಎಂದು ಮಾತುಕೊಟ್ಟು ಹೋಗುತ್ತವೆ. ಹುಲಿಮರಿಗಳು-ಹಸುಮರಿಗಳೊಂದಿಗೆ ಚೆನ್ನಾಟವಾಡಿಕೊಂಡು ಕರುಗಳ ಹಟ್ಟಿಯಲ್ಲಿ ಜೊತೆಗಿದ್ದವು. ಹೀಗೆ ದಿನಗಳು ಕಳೆದಂತೆ ಮೇವು ನೀರು ಹುಡುಕುತ್ತಾ ಹೋಗಿರುವ ಅಜ್ಜಡ್ಲು ವಾಪಸ್ಸು ಮರಳಿದರು. ಪಾಲನಾಯಕ ದನಗಳನ್ನು ಮೇಯಿಸಲು ಅಡವಿಗೆ ತೆರಳಿದನು. ಇವರು ಕರುಗಳ ಹಟ್ಟಿಯ ಬಳಿ ಬಂದಿದ್ದೆ ತಡ ಹಸು ಕರುಗಳ ಜೊತೆಯಲ್ಲಿ ಹುಲಿಮರಿಗಳು ಇರುವುದನ್ನು ಕಂಡು ಏನು ತಿಳಿಯದೆ ನಮ್ಮ ಕರುಗಳನ್ನು ಕೊಲ್ಲಲು ಬಂದಿವೆ ಎಂದು ತಿಳಿದು ನಾಲ್ಕು ಜನರು ಚಿಪ್ಪುಗೊಡಲಿಗಳಿಂದ ಈ ಎಂಟು ಹುಲಿ ಮರಿಗಳನ್ನು ಕತ್ತರಿಸಿಯೇ ಬಿಟ್ಟರು. ಇದೊಂದು ಸಹಜ ಗುಣ. ಇವರಿಗೆ ಪಾಲನಾಯಕ ಮತ್ತು ಹುಲಿಗಳ ಒಪ್ಪಂದ ಬಹುಶಃ ಗೊತ್ತಿರಲಾರದು, ಹಾಗಾಗಿ ಕತ್ತರಿಸಿರಬಹುದು.

ಅಣ್ಣ-ತಮ್ಮಂದಿರು ದನಗಳನ್ನು ಮೇಯಿಸಿಕೊಂಡು ರೊಪ್ಪಕ್ಕೆ ಹಿಂದಿರುಗುತ್ತಾರೆ. ಹಟ್ಟಿಯಲ್ಲಿ ಕತ್ತರಿಸಿಬಿದ್ದ ಹುಲಿಮರಿಗಳನ್ನು ನೋಡಿ ಪಾಲನಾಯಕನಿಗೆ ದಿಕ್ಕೇ ತೋರದಂತಾಗಿ ಚಿಂತಿತನಾಗುತ್ತಾನೆ. ಮುಂದೆ ಆಗಬಹುದಾದ ಅನಾಹುತವನ್ನು ಚಿಂತಿಸುತ್ತಾ ಕುಳಿತುಕೊಳ್ಳುತ್ತಾನೆ. ಆಹಾರ ಹುಡುಕಿಕೊಂಡು ಬೇರೆ ಸೀಮೆಗೆ ಹೋಗಿದ್ದ ಹುಲಿಗಳು ತಮ್ಮ ಮರಿಗಳನ್ನು ಸಾಕಲು ಹೇಳಿ ಬಿಟ್ಟು ಹೋಗಿದ್ದವು. ಎಂತಹ ಘಟನೆ ಜರುಗಿದೆ ಹಟ್ಟಿಯಲ್ಲಿ. ಏನು ಹೇಳೋದು ಹುಲಿಗಳಿಗೆ ಎಂದು ಹುಲಿಮರಿಗಳನ್ನು ನೋಡಿ ದುಃಖಿಸುತ್ತಾನೆ. ಹುಲಿಗಳು ಹಿಂತಿರುಗಿ ಬಂದಾಗ ತನ್ನ ಮರಿಗಳು ಎಲ್ಲಿ ಎಂದು ಕೇಳಿದರೆ ಏನು ಹೇಳಲಿ, ಹೀಗೆ ಯೋಚನೆಯಲ್ಲಿ ತೊಡಗಿದನು. ಹುಲಿಗಳು ಬರುವುದರೊಳಗೆ ಬೇರೆ ಕಡೆ ಪ್ರಯಾಣ ಬೆಳೆಸಲು ತೀರ್ಮಾನಿಸಿದರು.

ಜಾಗ ಖಾಲಿ ಮಾಡಬೇಕೆಂದು ಹಟ್ಟಿ ಕಿತ್ತುಕೊಂಡು ತನ್ನ ಪರಿವಾರದವರು ಸೇರಿ ಮಿಂಚೇರಿ ಕಡೆಗೆ ಪ್ರಯಾಣ ಬೆಳಸಿದರು. ತನ್ನ ಕಂಪಳ ಸಮೇತ ಹುಲಿಗಳಿಗೆ ಹೆದುರಿ ಜಾನಮದ್ದಿ ಬಳಿ ವೇದಾವತಿ ನದಿಯನ್ನು ದಾಟಲು ಬಂದರು. ಈ ನದಿ ತುಂಬಿ ಬೋರ್ಗರೆದು ಹರಿಯುತ್ತಿತ್ತು. ನದಿ ದಾಟುವ ಎಲ್ಲಾ ಪ್ರಯತ್ನಗಳನ್ನು ಮಾಡಿ ಸೋತು ಗಂಗಾದೇವಿಗೆ ಬೇಡುತ್ತಾನೆ. ಗಂಗಾದೇವಿಗೆ ದಾರಿ ಬಿಡಲು ಕೇಳಿಕೊಂಡ. ನಮ್ಮ ಕಡೆಯವರು ತಿಳಿಯದೇ ಮಾಡಿದ ಅನಾಹುತದಿಂದ ತನ್ನ ಸಕಲ ಕಂಪಳಕ್ಕೆ ಹುಲಿಗಳಿಂದ ಆಪತ್ತು ಒದಗಿಬಂದಿದೆ. ನೀನು ನಮ್ಮನ್ನು ಕಾಪಾಡಬೇಕು, ನನ್ನ ಕಂಪಳ ದಾಟುವವರೆಗೂ ನಿಂತರೆ, ನಂತರ ಏಳು ದಿನ ನಿಲ್ಲದೆ ಹರಿದರೆ ನಾನು ಪ್ರತಿ ವರ್ಷಕ್ಕೊಮ್ಮೆ ಇಲ್ಲಿ ಗಂಗೆ ಪೂಜೆ ಮಾಡುತ್ತೇನೆ. ನಂತರ ನನ್ನ ವಂಶಸ್ಥರಿಗೆ ಇಲ್ಲಿಗೆ ಬಂದು ಗಂಗೆ ಪೂಜೆ ಸಲ್ಲಿಸಿ ನನ್ನ ನಿಯಮಗಳನ್ನು ಚಾಚು ತಪ್ಪದೇ ಪಾಲಿಸಲು ತಿಳಿಸುತ್ತೇನೆ. ಗಂಗಾದೇವಿ ಇವನ ಸತ್ಯ ಪ್ರಾಮಾಣಿಕತೆಗೆ ಮೆಚ್ಚಿ, ಇವರ ಮೇಲೆ ಕೃಪೆ ತೋರಿ, ನದಿಯ ದಾರಿ ಕೊಟ್ಟಿತು. ಆಚೆ ದಡ ಮುಟ್ಟುತ್ತಿದ್ದಂತೆ ನದಿ ಮತ್ತೆ ಕೂಡಿಕೊಂಡಿತ್ತು. ಇದರಂತೆ ಅಂದಿನಿಂದ ವೇದಾವತಿ ನದಿಗೆ ಗಂಗೆ ಪೂಜೆಗೆ ಹೋಗಿ ಹರಕೆ ತೀರಿಸಿಕೊಂಡು ಬರುವುದನ್ನು ಪ್ರಚಲಿತದಲ್ಲಿ ಸಹ ಕಾಣಬಹುದು.

ರಾಮಸಾಗರದಲ್ಲಿರುವ ಗಾದ್ರಿಪಾಲನಾಯಕ ದೇವರು ಪ್ರತಿ ಮೂರು ವರ್ಷ ಅಥವಾ ಐದು ವರ್ಷಗಳಿಗೊಮ್ಮೆ ಜಾನಮದ್ದಿ ಬಳಿ(ವೇದಾವತಿ ನದಿ) ಪಾಲನಾಯಕ ಗಂಗೆ ಪೂಜೆ ಮಾಡಿದ ಸ್ಥಳಕ್ಕೆ ಎತ್ತಿನಗಾಡಿಗಳ ಮೂಲಕ ತೆರಳುವರು. ಗಟ್ಟಿಮುತ್ತಿನಾಯಕರ ಬೆಡಗಿಗೆ ಸೇರಿದ ಇವರು ಎರಡು ದಿನಗಳ ಕಾಲ ಅಲ್ಲಿಯೇ ಪಾಲನಾಯಕನ ಹರಕೆಗಳನ್ನು ತೀರಿಸುತ್ತ ಗಂಗಾದೇವಿಗೆ, ಇವರು ಎಲ್ಲಾ ನಿಯಮಗಳನ್ನು ಪಾಲಿಸುತ್ತಾ ಬಂದಿದ್ದಾರೆ. ಇಲ್ಲಿಯ ಹುಲಿ ಸಮಾಧಿ ಕಲ್ಲುಗಳಿಗೆ ಪೂಜೆ ಮಾಡಿ ದೇವರೆತ್ತುಗಳನ್ನು ಈ ಹೊಳೆಯನ್ನು ದಾಟಿಸುವ ಮೂಲಕ ಪುನರ್ ಸ್ಮರಿಸುತ್ತಾರೆ. ಇದಲ್ಲದೆ ನನ್ನಿವಾಳದ ಪಾಲನಾಯಕ ನದಿ ದಾಟಿ ಬರುವಾಗ ದನಕರುಗಳ ಹೆಜ್ಜೆಗಳು ಹುಲಿಗಳಿಗೆ ಗೊತ್ತಾಗಬಾರದೆಂದು ಹಿಂದಿನ ಎತ್ತುಗಳಿಗೆ ಕಾರೆಕಳ್ಳೆಯ ಎಸಳುಗಳನ್ನು ಕಟ್ಟಿ ಹೊಡೆದನು. ಹೆಜ್ಜೆಗಳ ಮೇಲೆ ಕಳ್ಳೆ ಎಳೆದರೆ ಹೆಜ್ಜೆಗಳು ಕಾಣಿಸುವುದಿಲ್ಲ. ಹುಲಿಗಳಿಗೆ ದಾರಿ ತಪ್ಪುವುದು ಎಂದು ಈ ತಂತ್ರ ಉಪಯೋಗಿಸಿರಬಹುದು. ಹೀಗೆ ನದಿ ದಾಟಿ ನನ್ನಿವಾಳ ತಲುಪಿ ಅಲ್ಲಿಂದ ಹೊರಟು ಮಿಂಚೇರಿ ಗುಡ್ಡದ ತಪ್ಪಲಿನಲ್ಲಿ ದನಗಳ ಗೂಡುಹಾಕಿ ಪಶುಪಾಲನೆ ಕೈಗೊಂಡು ನೆಲೆನಿಲ್ಲುತ್ತಾರೆ. ಅಷ್ಟರಲ್ಲಿ ಗಂಡು-ಹೆಣ್ಣು ಹುಲಿಗಳಿಗೆ ತಮ್ಮ ಮರಿಗಳಿಗೆ ಏನೋ ತೊಂದರೆ ಆಗಿದೆ ಎಂದೂ ದುಃಸ್ವಪ್ನ ಬಿದ್ದಿತು. ಅವು ಹಿಂತಿರುಗಿ ಬಂದು ಅವನ ದನಗಳ ಗೂಡಿನಲ್ಲಿ ನೋಡಿದಾಗ ಕತ್ತರಿಸಿ ಹಾಕಿದ ಹುಲಿಮರಿಗಳನ್ನು ನೋಡಿ ಅವನನ್ನು ಹುಡುಕುತ್ತಾ ನದಿ ತೀರಕ್ಕೆ ಬಂದವು. ತುಂಬಿ ಹರಿಯುತ್ತಿದ್ದ ಹೊಳೆಯನ್ನು ಕಂಡು ಘರ್ಜನೆ ಮಾಡುತ್ತಾ ಗಂಡು ಹುಲಿಯೊಂದು ನದಿದಾಟಲು ಧುಮುಕಿ ಪ್ರಾಣ

ಬಿಟ್ಟಿತು. ತುಂಬಿ ಹರಿಯುವ ನದಿಯಲ್ಲಿ ಈಜಿ ಆ ಕಡೆಯ ದಡ ಸೇರಲು ಪ್ರಯತ್ನಿಸಿ ವಿಫಲವಾಗಿ, ನೀರಿನ ಸೆಳೆತಕ್ಕೆ ಸಿಕ್ಕಿ ಈಜಲಾರದೇ ನೀರು ಕುಡಿದು ಪ್ರಾಣ ಬಿಡುತ್ತದೆ. ಹೀಗೆ ಪ್ರಾಣ ಬಿಟ್ಟ ಗಂಡು ಹುಲಿಯ ಸಮಾಧಿಯನ್ನು ನದಿಯ ದಡದಲ್ಲಿ ಮಾಡಲಾಗಿದೆ.

ಹೆಣ್ಣು ಹುಲಿಯ ಪ್ರಯಾಣ - ಗಂಡು ಹುಲಿಯ ಸಾವಿನಿಂದ ವಿಚಲಿತರಾಗದೆ ಹೆಣ್ಣು ಹುಲಿಯು ಪಾಲನಾಯಕನನ್ನು ಕೊಂದು ತನ್ನ ಶಪಥ ತೀರಿಸಿಕೊಳ್ಳಬೇಕೆಂಬ ಸೇಡಿನಿಂದ ಏಳು ದಿನಗಳ ಕಾಲ ನದಿ ತೀರದಲ್ಲಿ ಕಾದು ಕುಳಿತಿತ್ತು. ಏಳು ದಿನಗಳ ನಂತರ ನದಿ ನೀರು ಇಳಿಯಿತು. ನದಿ ದಾಟಿ ಪಾಲನಾಯಕನ ಜಾಡು ಹಿಡಿದು ಹೊರಟವು. ನನ್ನಿವಾಳದ ಮಾರ್ಗವಾಗಿ(ಶುಕ್ಲಗಿರಿಪರ್ವತ) ಗಂಜಿಗಟ್ಟೆ ದಾಟಿ ಮಿಂಚೇರಿ ಕಾಡನ್ನು ಸೇರಿಕೊಳ್ಳುತ್ತದೆ. ಕಾಡು ಸೇರಿಕೊಂಡ ಹುಲಿಯು ಪಾಲನಾಯಕನ ಮೇಲೆ ನೇರವಾಗಿ ಆಕ್ರಮಣ ಮಾಡದೆ ನಿತ್ಯ ಅವನ ಹಸುಗಳನ್ನು ಬೇಟೆಯಾಡುತ್ತಾ ಬರುತ್ತದೆ. ದಿನ ದಿನಕ್ಕೆ ಇವನ ದನಗಳ ಗುಂಪು ಕಡಿಮೆಯಾಗುತ್ತಾ ಬರಲು ಚಿನ್ನಪಾಲನಾಯಕನಿಗೆ ಅನುಮಾನ ಮೂಡುತ್ತದೆ. ಹುಲಿಗಳು ತಮ್ಮನ್ನು ಹುಡುಕಿಕೊಂಡು ಬಂದು ತಮ್ಮ ದನಗಳನ್ನು ಕೊಲ್ಲುತ್ತಿರಬಹುದೆಂದು ತಿಳಿದು ತನ್ನ ಕಂಪಳಕ್ಕೆ ತಿಳಿಸುತ್ತಾನೆ.

ಒಂದು ದಿನ ಪಾಲನಾಯಕನ ಪರಿವಾರದ ಮಹಿಳೆಯೊಬ್ಬಳು ಕಟ್ಟಿಗೆ ತರಲು ಕಾಡಿಗೆ ಹೋಗಿ ಕತ್ತರಿಸುತ್ತಿರಲು ಅಲ್ಲಿಯೇ ಪಕ್ಕದಲ್ಲಿಯೇ ಇರುವ ಒಂದು ಪೊದೆಯಲ್ಲಿ ಸದ್ದು ಕೇಳಿಸುತ್ತದೆ. ಸದ್ದು ಬಂದ ಕಡೆ ಹೋಗಿ ನೋಡಲು ಹುಲಿಯು ಗಗ್ಗರದ ದೇವರೆತ್ತನ್ನು ಕೊಂದು ತಿನ್ನುತ್ತಿರುತ್ತದೆ. ಆ ದೃಶ್ಯ ಕಂಡು ಹೆದರಿದ ಮಹಿಳೆಯು ಭಯದಿಂದ ಓಡುತ್ತಾ ಬಂದು ಪಾಲನಾಯಕನಿಗೆ ವಿಷಯ ತಿಳಿಸುತ್ತಾಳೆ. ಪಾಲನಾಯಕ ತಮ್ಮ ಚಿನ್ನಪಾಲನಾಯಕ ಮತ್ತು ಪರಿವಾರದವರನ್ನು ಒಟ್ಟುಗೂಡಿಸಿಕೊಂಡು ಕಾಡಿಗೆ ಬಂದು ನೋಡಲು ಹುಲಿಯು ಅಲ್ಲಿಂದ ಕಣ್ಮರೆಯಾಗಿ ಗಗ್ಗರದ ಎತ್ತು ಮಾತ್ರ ಸತ್ತು ಬಿದ್ದಿರುತ್ತದೆ. ಹೀಗೆ ಹುಲಿಯು ಬರುತ್ತದೆ. ಅಂದಿನಿಂದ ಪಾಲನಾಯಕನು ಹುಲಿಯನ್ನು ಹುಡುಕುತ್ತಾ ಕಾಡಿನಲ್ಲಿ ಬೀಡು ಬೀಡುತ್ತಾನೆ. ಹುಲಿಯು ಒಂದು ಪೊದೆಯಲ್ಲಿ ಅವಿತು ಕುಳಿತಿರುವಾಗ ಪಾಲನಾಯಕ ಕಾಣಿಸುತ್ತಿದ್ದಾಗ ಅವನ ಮೇಲೆ ಎರಗುತ್ತದೆ. ಆಗ ಹುಲಿ ಮತ್ತು ಪಾಲಯ್ಯ ನಡುವೆ ಮಧ್ಯೆ ಘೋರ ಕಾಳಗ ನಡೆಯುತ್ತದೆ. ಹೀಗೆ ತುಂಬಾ ಹೊತ್ತು ಕಳೆಯಲು ಅಲ್ಲಿಗೆ ಚಿನ್ನಪಾಲನಾಯಕ ಮತ್ತು ಕುಲ ಪರಿವಾರದವರು ಬಂದು ಸೇರುತ್ತಾರೆ. ಚಿನ್ನಪಾಲನಾಯಕ ಚಿಪ್ಪುಗೊಡಲಿಯಿಂದ ಹುಲಿಯನ್ನು ಕೊಲ್ಲುವುದಕ್ಕೆ ಮುಂದಾಗುತ್ತಾನೆ. ಅಣ್ಣ-ತಮ್ಮನನ್ನು ತಡೆದು ಕೊಲ್ಲುವುದು ಬೇಡ ನಮ್ಮಿಬ್ಬರ ಬಾಯಿಗೆ ಹಾಲು ತಂದು ಬಿಡುವಂತೆ ತಿಳಿಸುತ್ತಾನೆ. ಅಣ್ಣನ ಮಾತಿನಂತೆ ಚಿನ್ನಪಾಲನಾಯಕನು ಹಾಲು ತಂದು ಹುಲಿ ಮತ್ತು ಅಣ್ಣನ ಬಾಯಿಗೆ ಬಿಡುತ್ತಾನೆ. ಈ ಘೋರ ಯುದ್ಧದಲ್ಲಿ ಇಬ್ಬರು ಮಡಿಯುತ್ತಾರೆ. ಹೀಗೆ ಹುಲಿ ಮತ್ತು ಅಣ್ಣನು ತ್ಯಾಗ ಮಾಡಿದ

ಸ್ಥಳದಲ್ಲಿಯೇ ಅವರನ್ನು ಚಿನ್ನಪಾಲನಾಯಕನು ಸಮಾಧಿ ಮಾಡುತ್ತಾನೆ. ಪಾಲನಾಯಕನು ದನದ ಗೂಡು ಹಾಕಿದ ಸ್ಥಳವನ್ನು ಗಾದರಿಮಲೆ>ಗಾದುರಿಗುಡ್ಡ ಎಂಬುದಾಗಿ ಕರೆಯುತ್ತಾರೆ.

**ಕೆಂಚವ್ವ-ಕಾಮವ್ವ ಸಹಗಮನ**

ಗಾದ್ರಿಪಾಲನಾಯಕನು ಮಡಿದ ಸುದ್ದಿ ಕೇಳಿದ ಅವನ ಹೆಂಡತಿಯರಾದ ಕೆಂಚವ್ವ-ಕಾಮವ್ವ ಗಂಜಿಗಟ್ಟೆಯಲ್ಲಿ ಕೆಂಡಕ್ಕೆ ಹಾರುತ್ತಾರೆ. ಹೀಗೆ ಪತಿಯ ಸಾವಿನ ವಿಷಯ ತಿಳಿದು ಸಹಗಮನ ಮಾಡಿದ ಕೆಂಚವ್ವ-ಕಾಮವ್ವರ ಸಮಾಧಿಯನ್ನು ಗಂಜಿಗಟ್ಟೆಯಲ್ಲಿರುವ ಹೊಂಡದ ಬಳಿ ಮಾಡಲಾಗಿದ್ದು, ಇವರ ನೆನಪಿಗಾಗಿ ಇಲ್ಲಿಯೇ ಪಾಲನಾಯಕನ ಕಲ್ಲು ಗುಡಿಯನ್ನು ನಿರ್ಮಿಸಿದ್ದು, ಅದರ ಒಳಗಡೆ ಮಡಿದ ಅವನ ಹೆಂಡತಿಯರ ನೆನಪಿಗಾಗಿ ನಿಲ್ಲಿಸಿದ ಮಹಾಸತಿಕಲ್ಲು ಇದೆ. ಆ ಕಲ್ಲಿನ ಮುಕ್ಕಾಲು ಭಾಗದಲ್ಲಿ ಕೈ ಎತ್ತಿ ನಿಂತ ಇಬ್ಬರು ಸ್ತ್ರೀ ವಿಗ್ರಹಗಳಿದ್ದರೆ, ಕಲ್ಲಿನ ಮೇಲು ತುದಿಯಲ್ಲಿ ಹುಲಿ, ಅದರೊಂದಿಗೆ ಹೋರಾಡಿ ಮಡಿದ ಇಬ್ಬರು ವೀರರ ಚಿಕ್ಕ ಚಿತ್ರಗಳು, ಒಂದು ಗೋವಿನ ಚಿತ್ರ ಕೆತ್ತಲಾಗಿದೆ. ಹೀಗಾಗಿ ಇದು ದೈವ ರೂಪವಾಗಿ ಪಾಲನಾಯಕರ ಅಂತ್ಯ ಕಂಡ ಸ್ಥಳವಾದುದರಿಂದ ಇದು ದೇವರ ಗಂಜಿಗಟ್ಟೆ ಎಂದು ಹೆಸರಾಗಿದೆ. ಈ ಪಶುಪಾಲಕ ಎತ್ತಿನ ಕಿಲಾರಿಗಳು ಎಲ್ಲಿ ಇರುತ್ತಾರೆ. ಅಲ್ಲಿಯ ಸಮೀಪ ಹಟ್ಟಿಗಳಲ್ಲಿ ಹಿಂದೆ ಅವರ ಹೆಂಡತಿಯರ ಕುಟುಂಬಗಳು ಇರುತ್ತಿದ್ದವು. ಹಾಗೆಯೇ ಕೆಂಚವ್ವ-ಕಾಮವ್ವ ಗಂಜಿಗಟ್ಟೆಯಲ್ಲಿ ವಾಸ್ತವ್ಯ ಮಾಡಿರಬಹುದು. ಇಲ್ಲಿ ಎತ್ತಿನಗೂಡಿನ ಬಳಿಯಾದರು ಇದ್ದಿರಬಹುದು. ಹೀಗಾಗಿಯೇ ಅವನ ಮಡದಿಯರು ಸುದ್ದಿಯನ್ನು ಕೇಳಿ ಊರಿನಲ್ಲಿ ಕೆಂಡಕೊಂಡವಾಗುತ್ತಾರೆ.

ಮಿಂಚೇರಿಯಲ್ಲಿ ಪ್ರತಿ ಮೂರು ವರ್ಷಕ್ಕೊಮ್ಮೆ ಜಾತ್ರೆಯಾಗುತ್ತದೆ. ಪಾಲನಾಯಕನಿಗೆ ನಡೆದುಕೊಳ್ಳುವ ಭಕ್ತರು ಎತ್ತಿನಗಾಡಿಗಳಲ್ಲಿ ಬರುವ ದೃಶ್ಯ, ಮದುವೆ ದಿಬ್ಬಣದಂತೆ ಸಿಂಗಾರಗೊಂಡಿರುತ್ತದೆ. ಚಿತ್ರದುರ್ಗ ಸಮೀಪ ಬರುವ ಬಚ್ಚಿಬೋರನಹಟ್ಟಿ, ಸುತ್ತಮುತ್ತಲಿನ ಹಟ್ಟಿಗಳವರು ವಿಶೇಷವಾಗಿ ಬರುತ್ತಾರೆ. ಇದರಲ್ಲಿ ಇವನ ಅನುಯಾಯಿಗಳು ಸಮಾಧಿ ಸ್ಥಳಕ್ಕೆ ಹೋಗಿ ಜಾತ್ರೆ ಮಾಡಿದರೆ, ಇನ್ನು ಕೆಲವು ಅನುಯಾಯಿಗಳು ನದಿ ದಾಟಿ ಹುಲಿಗಳಿಗೆ ಮಾತು ಕೊಟ್ಟು ಬಂದಿರುವ ಸ್ಥಳಕ್ಕೆ ಹೋಗಿ ಗಂಗೆ ಪೂಜೆ ಮಾಡಿಕೊಂಡು ಬರುತ್ತಾರೆ. ಒಟ್ಟಿನಲ್ಲಿ ಚಿತ್ರದುರ್ಗ ಪರಿಸರದಲ್ಲಿ ನಾಯಕ ಸಮುದಾಯದಲ್ಲಿ ಪಾಲನಾಯಕನ ಹೆಸರಿನಲ್ಲಿ ಪ್ರತಿ ಹಟ್ಟಿ, ಹಳ್ಳಿಗೊಂದು ದೇವರ ಗುಡಿಗಳಿರುವುದನ್ನು ಕಾಣಬಹುದು.

ಆಚರಣೆ, ಸಂಪ್ರದಾಯಗಳಿದ್ದು, ಮಧ್ಯ ಕರ್ನಾಟಕದಲ್ಲಿ ಬೇಡರ ಪ್ರತಿಯೊಂದು ಹಟ್ಟಿ, ಗ್ರಾಮಗಳಲ್ಲಿಯೂ ಈತನ ದೇವರಗುಡಿ ಮತ್ತು ದೇವರೆತ್ತುಗಳಿವೆ. ಈತನ ಪ್ರತೀಕವಾಗಿ ವರ್ಷಕ್ಕೆ ಎರಡು ಬಾರಿ ದೇವರು ಮಾಡುವುದುಂಟು. ಪ್ರತಿ ಮೂರು ವರ್ಷ, ಐದು ವರ್ಷಗಳಿಗೊಮ್ಮೆ ಈತನ ಪಶುಪಾಲನೆ ನೆಲೆನಿಂತು, ಮೂಲನೆಲೆಗಳಿಗೆ ಈತನ ಅನುಯಾಯಿಗಳು

ದೇವರು ಮತ್ತು ದೇವರೆತ್ತುಗಳೊಂದಿಗೆ ಹೋಗಿ ಜಾತ್ರೆ ಮಾಡಿಕೊಂಡು ಬರುತ್ತಾರೆ. ಈತನ ಸಮಾಧಿ ಎನ್ನಲಾದ ಮಿಂಚೇರಿಯಲ್ಲಿ ಮೂರು ವರ್ಷಕ್ಕೊಮ್ಮೆ ಜಾತ್ರೆಯಾಗುತ್ತದೆ. ಪಾಲನಾಯಕನ ಅನುಯಾಯಿಗಳು ಚಿತ್ರದುರ್ಗ ಸಮೀಪ ಬಚ್ಚಬೋರನಹಟ್ಟಿ ಸುತ್ತಮುತ್ತಲಿನ ಹಟ್ಟಿಯವರು ವಿಶೇಷವಾಗಿ ನೂರಾರು ಎತ್ತಿನಗಾಡಿಗಳಲ್ಲಿ ಹೋಗಿ ಬರುತ್ತಾರೆ. ಗಂಜಿಗಟ್ಟೆಯಲ್ಲಿ ಐದು ವರ್ಷಗಳಿಗೊಮ್ಮೆ ಪಾಲನಾಯಕನ ದೊಡ್ಡ ಜಾತ್ರೆ ನಡೆಯುತ್ತದೆ. ಪ್ರತಿವರ್ಷ ಶಿವರಾತ್ರಿಗೆ ಪಾಲನಾಯಕನ ದೇವಸ್ಥಾನದಲ್ಲಿರುವ ಪಾಲನಾಯಕ ಬಳಸುತ್ತಿದ್ದನೆಂದು ಹೇಳಲಾಗುವ ಮರಬಿಲ್ಲು ತೆಗೆದುಕೊಂಡು ಹೋಗಿ ಪಾಲನಾಯಕನ ಸಮಾಧಿ ಬಳಿ ಇಟ್ಟು ಪೂಜೆ ಮಾಡಿಕೊಂಡು ಬರುತ್ತಾರೆ.

ಗಂಜಿಗಟ್ಟೆಯಲ್ಲಿ ಜಾತ್ರೆ ನೆರೆದಾಗ ಪೂಜಾರಿಯೊಬ್ಬ ಪಾಲನಾಯಕನ ಪ್ರತಿರೂಪವೆಂಬಂತೆ ಕಂಬಳಿ ಹೊದ್ದು, ಅಂದರೆ ಕಂಬಳಿ ಕೋರಿಯ ತುಂಡುಗಳನ್ನು ಭುಜಕ್ಕೆ ಮೊಣಕೈಗೆ ಸುತ್ತಿಕೊಂಡಿದ್ದು, ತಲೆಗೆ ಕೋರಿ ಪೇಟ ಸುತ್ತಿ ಕಿಲಾರಿ ಪಾಲನಾಯಕನಂತೆ ಕಾಣುತ್ತಾನೆ. ಗುಂಡಿಯ ಮುಂಭಾಗದಲ್ಲಿ ಒಂದಡಿ ಆಳವಿರುವ ಸಣ್ಣ ಗುಂಡಿಯನ್ನು ಮಾಡಿರುತ್ತಾರೆ. ಇದು ಒಂದು ರೀತಿಯಲ್ಲಿ ಗಾವಿನ ಗುಂಡಿಯಂತೆ ಕಾಣುತ್ತದೆ. ಅವರು ಇದನ್ನು ಹುಲಿ ಹೋತನ ಗುಂಡಿ ಎಂದೂ ಕರೆಯುತ್ತಾರೆ. ಇದಕ್ಕೆ ಬಲಿ ಕೊಡುವ ಹೋತವನ್ನು ಹರಕೆ ಮಾಡಿಕೊಂಡ ಭಕ್ತರು ತರುತ್ತಾರೆ. ಅದನ್ನು ಈ ಗುಂಡಿಯ ಬಳಿ ತಂದು ಗುಡಿಯ ಕಡೆ ಮುಖ ಮಾಡಿ ಕೂರಿಸುತ್ತಾರೆ. ಇಲ್ಲಿ ಹೋತವನ್ನು ಹುಲಿಯೆಂದು ಭಾವಿಸಲಾಗುತ್ತದೆ. ಪಾಲನಾಯಕನ ವೇಷಧಾರಿ ಪೂಜಾರಿ ಕೈಯಲ್ಲಿ ಚೂರಿಯಿಂದ ಹೋತದ ಎದೆಗೆ ತಿವಿಯುತ್ತಾನೆ. ಇದು ಸ್ವಲ್ಪ ಸಮಯದ ನಂತರ ಸಾಯುತ್ತದೆ. ಹೀಗೆ ಹೋತವನ್ನು ಹುಲಿಯೆಂದು ಕೊಲ್ಲುವ ಒಂದು ಪ್ರತೀಕದ ಸಂಕೇತ. ಪಾಲನಾಯಕ ಮಡಿದ ಹಲವಾರು ವರ್ಷಗಳ ನಂತರ ಅವನ ಬಂಧುಗಳಿಗೆ ಕನಸಿನಲ್ಲಿ ಬಂದು ಹೀಗೆ ಹೇಳುತ್ತಾನೆ. ಹುಲಿಗಳಿಂದ ರಕ್ಷಣೆ ಮಾಡಿದ ಗಂಗಾದೇವಿಗೆ ಹಿಂದೆ ಮಾತುಕೊಟ್ಟು ಬಂದಿದೆ. ನನ್ನ ಬಂಧುಗಳಿಂದ ನನ್ನ ಹರಕೆಗಳನ್ನು ತೀರಿಸುತ್ತೇನೆ ಎಂದು, ಅದರಂತೆ ನೀವು ಐದು ವರ್ಷಗಳಿಗೊಮ್ಮೆ ಗಂಗಾದೇವಿಗೆ ಜಲಧಿ ಪೂಜೆ ಮಾಡಿ, ನನ್ನ ಎತ್ತುಗಳನ್ನು ಹೊಳೆದಾಟಿಸುವ ಮೂಲಕ ಹರಕೆಗಳನ್ನು ತೀರಿಸಿರಿ ಎಂದು ಕನಸಿನಲ್ಲಿ ಹೇಳಿದನಂತೆ. ಅದರಂತೆ ರಾಮಸಾಗರ(ಚಳ್ಳಕೆರೆ ತಾಲ್ಲೂಕು) ಗಟ್ಟಿಮುತ್ತಿನಾಯಕರ ಬೆಡಗಿನವರು ಪ್ರತಿ ಐದು ವರ್ಷಗಳಿಗೊಮ್ಮೆ ಗಾದ್ರಿದೇವರು ಮತ್ತು ಪಾಲನಾಯಕನ ದೇವರೆತ್ತುಗಳನ್ನು ವೇದಾವತಿ ನದಿಗೆ ಜಲಧಿ ಪೂಜೆಗೆ ಹೋಗಿ ಬರುತ್ತಾರೆ. ಐದು ವರ್ಷಗಳಿಗೊಮ್ಮೆ ಶಿವರಾತ್ರಿ ಸಂದರ್ಭದಲ್ಲಿ ನೂರಾರು ಎತ್ತಿನಗಾಡಿಗಳ ಮೂಲಕ ಉರಿಮೆ ವಾದ್ಯಗಳೊಂದಿಗೆ ಈ ನದಿ ತೀರದಲ್ಲಿ ಜಾನಮದ್ದಿ ಬಳಿ ಬೀಡು ಬಿಟ್ಟಿರುತ್ತಾರೆ. ಒಂದು ದಿನ ದೇವರೆತ್ತುಗಳನ್ನು ಇಲ್ಲಿಯೇ ಅಡವಿಗೆ ಹೋಗಿ ಮೇಯಿಸುತ್ತ, ಸಾಯಂಕಾಲ ಅಡವಿಯನ್ನು ಬಿಡುತ್ತಲೇ ಒಂದು ಕುರಿಮರಿಯನ್ನು ಕತ್ತರಿಸಿ ದೇವರೆತ್ತಗಳನ್ನು ಕಿಲಾರಿಗಳು ಓಡಿಸುತ್ತಾ ಹೊಳೆ ಹತ್ತಿರ ಬರುತ್ತಾರೆ. ಹೊಳೆ ಹತ್ತಿರ

ಒಂದು ದಿನ ತಂಗುತ್ತಾರೆ. ಎಲ್ಲಾ ಪೂಜೆಗಳನ್ನು ಮಾಡಿ ಮಾರನೆಯ ದಿನ ಗಂಗಾದೇವಿಯನ್ನು ನೆನೆದು ನಾವು ಹೊಳೆಯನ್ನು ದಾಟಿ ಹೋಗಬೇಕು, ಅನುವು ಮಾಡಿಕೊಡಬೇಕು ಎಂದು ಹೇಳಿ, ದೇವರ ಮತ್ತು ಪಾಲನಾಯಕನ ದೇವರೆತ್ತುಗಳನ್ನು ಹೊಳೆದಾಟಿಸುವ ಹಾಗೂ ಒಂದು ಕುರಿಮರಿಯನ್ನು ಅಡ್ಡ ಕತ್ತರಿಸಿ ಬಲಿಕೊಟ್ಟು ಪಾಲನಾಯಕನ ಹರಕೆಗಳನ್ನು ತೀರಿಸಿ ತಮ್ಮ ಊರಿಗೆ ಹಿಂದಿರುಗುತ್ತಾರೆ. ಹೀಗೆ ಇಲ್ಲಿ ಬಂದು ಆಚರಿಸುವ ಆಚರಣೆಗಳು ತಮ್ಮ ಪೂರ್ವಿಕರ ಸ್ಮರಿಸುವ ಸಂಕೇತವಾಗಿ ಸಂಪ್ರದಾಯದ ಮೂಲಕ ಉಳಿಸುತ್ತ ಬಂದಿರುತ್ತಾರೆ. ಅಡವಿಯಲ್ಲಿ ಕುರಿಮರಿಯನ್ನು ಕತ್ತರಿಸುವುದು, ಇದು ಹುಲಿಯ ಮರಿಯ ಸಂಕೇತ. ಹೊಳೆಯಲ್ಲಿ ದಾಟುವಾಗ ಇನ್ನೊಂದು ಬಲಿ ಕೊಡುವ ಉದ್ದೇಶ; ಈ ಹೊಳೆಯನ್ನು ಗಂಡು ಹುಲಿ ನೀರಿಗೆ ಧುಮುಕಿ ಸಾಯುವ ಒಂದು ಪ್ರತೀಕವಾಗಿ ಬಲಿ ಕೊಡುತ್ತಾರೆ. ಇಲ್ಲಿಯೇ ಪಾಲನಾಯಕನ ಮೇಲೆ ಸೇಡು ತೀರಿಸಲು ಹೊರಟ ಗಂಡು ಹುಲಿ ನದಿ ದಾಟಲು ಹೋಗಿ ಮುಳುಗಿ ಪ್ರಾಣ ಬಿಟ್ಟ ಸ್ಥಳ. ಇದಕ್ಕೆ ಪೂಜೆ ಸಲ್ಲಿಸಿ ತಿಥಿ ಕರ್ಮವನ್ನು ಮಾಡುತ್ತಾರೆ. ಗಂಗೆ ಪೂಜೆ. ಜನಪದ ಸಂಸ್ಕೃತಿಯಲ್ಲಿ ಗಂಗೆ ಕೇವಲ ನೀರನ್ನು ಸಂಕೇತಿಸುವ ಜಲದೇವತೆಯಲ್ಲ. ಈಕೆ ಇಡೀ ನಿಸರ್ಗದ ಪ್ರತೀಕ. ಮೇಲಾಗಿ ನೀರು ಸ್ತ್ರೀರೂಪ, ಕೃಷಿಗೆ ಸಂಬಂಧಿಸಿದ ಅಸಂಖ್ಯ ಜನಪದ ದೇವತೆಗಳಲ್ಲಿ ಹೆಚ್ಚಿನವರು ಹೆಣ್ಣುಗಳೇ. ಈ ಎಲ್ಲಾ ದೇವರುಗಳ ಆದಿದೇವತೆ ಗಂಗೆ. ಗ್ರಾಮೀಣ ಪ್ರದೇಶದಲ್ಲಿ ಕಂಡುಬರುವ ನೂರಾರು ದೈವಗಳ ಪೂಜೆ ಆರಂಭಗೊಳ್ಳುವುದೇ ಗಂಗೆಪೂಜೆಯಿಂದ. ಈ ಆಚರಣೆಯಲ್ಲಿ ದೈವಗಳನ್ನು ಸಮೀಪದ ಜಲ ಮೂಲವೊಂದರ ಬಳಿ ಕರೆದೊಯ್ದು ಪೂಜೆ ಸಲ್ಲಿಸುವರು. ಇದನ್ನು ಗಂಗೆಪೂಜೆ ಹೊರಡಿಸುವುದು ಎಂಬ ಹೆಸರಿನಿಂದ ಗುರುತಿಸುತ್ತಾರೆ. ಜನಪದರಲ್ಲಿ ಗಂಗೆ ಸೃಷ್ಟಿಯ ಮೂಲ. ಫಲವಂತಿಕೆಯ ಪ್ರತಿ ರೂಪ. ಯಾವುದೇ ದೇವರನ್ನು ಪೂಜಿಸಬೇಕಾದರೂ ಕೊಡದಲ್ಲಿ ನೀರು ತುಂಬಿಟ್ಟು ಅದಕ್ಕೆ ಹರಕೆ ಸಲ್ಲಿಸಬೇಕಾದ ದೇವರ ಹೆಸರಿನಲ್ಲಿ ಪೂಜಿಸಿದರೆ ಅದು ದೇವರಿಗೆ ಸಲ್ಲುತ್ತದೆ ಎಂಬ ನಂಬಿಕೆ ಇಂದಿಗೂ ಹಟ್ಟಿ, ಗ್ರಾಮ ಪರಿಸರದಲ್ಲಿ ಆಚರಣೆಯಲ್ಲಿರುವುದನ್ನು ಕಾಣಬಹುದು.

**ಮತ್ತೊಂದು ಐತಿಹ್ಯ**

ಪಾಲನಾಯಕ ಸತ್ತ ಹೊಸದರಲ್ಲಿ ಅವರ ಬಂಧುಗಳಿಗೆ ಕನಸಿನಲ್ಲಿ ಕಾಣಿಸಿಕೊಂಡು ಕಾಡತೊಡಗಿ ನೆಮ್ಮದಿ ಇಲ್ಲದಂತಾಯಿತು. ಕೊನೆಗೆ ಗದ್ದಿಗೆ ಕೇಳಿದಾಗ ಬಂಗಾರದ ಹುಲಿ ಮಾಡಿಸಿ ಪೂಜೆ ಮಾಡಿದರೆ, ಹುಲಿಮರಿಗಳನ್ನು ಕೊಂದ ದೋಷ ತೀರುತ್ತದೆ ಎಂದು ನುಡಿಯುತ್ತದೆ. ಹಾಗೆಯೇ ಮಾಡುತ್ತಾರೆ. ಈ ಬಂಗಾರದ ಹುಲಿ ಇರುವ ಹಟ್ಟಿಯನ್ನು ಬಂಗಾರ ದೇವರಹಟ್ಟಿ ಎಂದು ಕರೆಯುತ್ತಾರೆ. ಇದು ನನ್ನಿವಾಳದಿಂದ ಮೂರು ಕಿ.ಮೀ. ದೂರದಲ್ಲಿದೆ(ಚಳ್ಳಕೆರೆ ತಾಲ್ಲೂಕು). ಈ ಬಂಗಾರು ದೇವರು ಪ್ರತಿವರ್ಷ ಗುಗ್ಗರಿ ಹಬ್ಬದ ಸಂದರ್ಭದಲ್ಲಿ ನಡೆಯುವ ಪಾಲನಾಯಕನ ಜಾತ್ರೆಗೆ ನನ್ನಿವಾಳಕ್ಕೆ ಬರುತ್ತದೆ. ಈ ದೇವರಿಗೆ (ಗಂಡುಹುಲಿ ನೀರು ಕುಡಿದು ಸತ್ತಿದ್ದರಿಂದ) ನೀರು ಸೇರಿಕೆಯಾಗದಿರುವುದರಿಂದ ನೀರುಳ್ಳ

ತೆಂಗಿನಕಾಯಿ ಒಡೆಯುವಂತಿಲ್ಲ. ಹೀಗಾಗಿ ಈ ದೇವರಿಗೆ ಸೇರಿದ ಎನುಮುಲೋರು ಮತ್ತು ಮಂದಲೋರು ಕುಲಕ್ಕೆ ಸೇರಿದ ಅತ್ತೆ-ಸೊಸೆಯರು ಒಬ್ಬರಿಗೊಬ್ಬರು ತಲೆ ಘಟ್ಟಿಸಿಕೊಳ್ಳುವ ಮೂಲಕ ತೆಂಗಿನಕಾಯಿ ಒಡೆಯುವ ಪ್ರಕ್ರಿಯೆಯನ್ನು ಸಾಂಕೇತಿಕವಾಗಿ ಆಚರಿಸುತ್ತಾರೆ. ಇದನ್ನೇ ಡಿಕ್ಕಿ ಹಬ್ಬ ಎಂದೂ ಕರೆಯುವರು.

### ಗೋಸಿಡ್ಲು ಯಾತ್ರೆ

ನನ್ನಿವಾಳದ ಸುತ್ತಮುತ್ತ ಬೇಡರು ತಮ್ಮ ದೇವರು ಮತ್ತು ದೇವರೆತ್ತುಗಳ ಸಮೇತ ವೇದಾವತಿ ನದಿಗೆ ದಂಡೆಗೆ ಹೋಗಿ, ಜಲಧಿಪೂಜೆ ಮಾಡಿಕೊಂಡು ಹುಲಿ ಸಮಾಧಿಗೆ ಪೂಜೆ ಸಲ್ಲಿಸುತ್ತಾರೆ. ಗೋಸಿಡ್ಲು ಎಂದರೆ ಗಾದ್ರಿಪಾಲನಾಯಕನ ಮೇಲೆ ಸೇಡು ತೀರಿಸಿಕೊಳ್ಳಲು ಹೊರಟ ಗಂಡು ಹುಲಿ ನದಿ ದಾಟಲು ಹೋಗಿ ಮುಳುಗಿ ಪ್ರಾಣ ಬಿಟ್ಟ ಸ್ಥಳ. ವೇದಾವತಿ ನದಿಯ ಗೋಸಿಕೆರೆಯ ಬಳಿ ಹುಲಿಯ ಕಲ್ಲುಗಳ ಗುಡ್ಡೆ ಇದೆ. ಇದನ್ನು ಗೋಸಿಡ್ಲು ಎನ್ನುತ್ತಾರೆ.

### ಪಾಪನಾಯಕನಿಗೆ ಸಂಬಂಧಿಸಿದ ಐತಿಹ್ಯ

ಪಾಪನಾಯಕ ಒಬ್ಬ ಪಶುಪಾಲಕ. ಇವರಿಗೆ ಜಗಳೂರಜ್ಜ, ಜಗಳೂರು ಪಾಪಯ್ಯ, ಪಾಪೇದೇವರು, ಪಾಪನಾಯಕ, ಸೂರ್ಯಪಾಪೇನಾಯಕ, ಕೋರೆಲ ಪಾಪನಾಯಕ, ಪಾಪಿನಾಯಕ, ಪರದೇಶಿ ಪಾಪಯ್ಯ ಇತ್ಯಾದಿ ಹೆಸರುಗಳುಂಟು. ಈತನ ತಂದೆ ಕೋರೆಲ ಮಲ್ಲಿನಾಯಕ. ಈತ ಕೂಡ ಪಶುಪಾಲಕ. ಈತನು ನಡುಗಡ್ಡೆ ಪ್ರದೇಶದ ಕಕ್ಕಲಬೆಂಚ, ಕಾರಚೆರವು ಕಾವುಲಗಳಲ್ಲಿ ರೊಪ್ಪಗಳನ್ನು ಕಟ್ಟಿಕೊಂಡು ಮುತ್ತಿಗಾರರ ಎತ್ತುಗಳನ್ನು(ದನಕರುಗಳನ್ನು) ಪಾಲನೆ ಮಾಡುತ್ತಿದ್ದನು. ಇವನಿಗೆ ಬಾಳಪಟ್ನಮ್ಮ ಎಂಬ ಹೆಂಡತಿಯು ಮತ್ತು ಪಚ್ಚಿಪದಿಪಾಲಮ್ಮ ಎಂಬ ತಂಗಿಯು ಇದ್ದರು. ಪಚ್ಚಿಪದಿ ಪಾಲಮ್ಮ ಅಪೂರ್ವ ಸುಂದರಿಯಾಗಿದ್ದಳು. ಹೀಗೆ ಆಕರ್ಷಕವಾದ ಸೌಂದರ್ಯ ಇವಳಲ್ಲಿತ್ತು. ಅಣ್ಣ ಮಲ್ಲನಾಯಕ ಹಗಲಿರುಳು ಇವಳ ವಿವಾಹದ ಬಗ್ಗೆ ಚಿಂತಿಸುತ್ತಿದ್ದ. ಇವಳು ಹಳ್ಳಕ್ಕೆ ನೀರು ತರಲು ಹೋದಳು. ಆ ನೀರಿನಲ್ಲಿ ಕಾಲುಗಳನ್ನು ಚಾಚಿಕೊಂಡು ಆಟವಾಡುತ್ತಾ ಬಿಂದಿಗೆಗೆ ನೀರು ತುಂಬಿಸುತ್ತಿದ್ದಳು. ಅಷ್ಟರಲ್ಲಿ ಬೇಟೆಯಾಡುತ್ತಾ ಬಾಯಾರಿಕೆಯಿಂದ ಅಲ್ಲಿಗೆ ಬಂದಿದ್ದ ಸೆಟ್ಟೂರು ಶಿರಿವಾಳದ ದೊರೆ ಕ್ಯಾಸಯ್ಯನು ಒಮ್ಮೆ ಇವಳನ್ನು ನೋಡಿದ. ಬಿಸಿಲಲ್ಲಿ ಬೇಟೆಗಾಗಿ ಕಾಡೆಲ್ಲ ಅಲೆದು ಬೇಸತ್ತು ದಣಿದಿದ್ದವನು ಪಾಲಮ್ಮನನ್ನು ನೋಡಿ ಅದೆಲ್ಲವನ್ನು ಅವನು ಮೈಮರೆತ. ಇವಳನ್ನು ಬಲವಂತದಿಂದ ಅಪಹರಿಸಿದನು. ಅವಳ ಕಿರುಚಾಟ, ರಂಪವನ್ನು ಲೆಕ್ಕಿಸದೆ ತನ್ನೂರಿಗೆ ಹಿಂದಿರುಗಿದನು. ನಂತರ ಮದುವೆಯಾದರು. ಇತ್ತ ಅಣ್ಣ-ಅತ್ತಿಗೆ ಪಾಲಮ್ಮಳು ಮನೆಗೆ ಬಾರದೆ ಇರುವುದನ್ನು ಕಂಡು ಹಳ್ಳದ ಕಡೆ ಹುಡುಕಲು ಹೋದರು. ಎಲ್ಲಿಯೂ ಕಾಣಲಿಲ್ಲ ಎಂದಾಗ, ಇನ್ನೇನು ಹಿಂತಿರುಗಬೇಕು ಅಷ್ಟರಲ್ಲಿ ಹಳ್ಳದ ದಡದಲ್ಲಿ ಒಡೆದು ಬಿದ್ದಿದ್ದ ಮಡಿಕೆ ಚೂರುಗಳು ಕಂಡವು. ದಂಪತಿಗಳಿಬ್ಬರು ಪರಿಪರಿಯಾಗಿ

ಚಿಂತಿಸುತ್ತಾ ತೆರಳಿದರು. ಯಾರಾದರೂ ಅಪಹರಿಸಿದರೋ ಅಥವಾ ಕ್ರೂರ ಪ್ರಾಣಿಯಿಂದ ಹತವಾದಳೊ ಎಂದು ಹುಡುಕಲು ಶುರು ಮಾಡಿದರು. ನಂತರ ಅಪಹರಿಸಿದ್ದು ಎಂದು ಜನರಿಂದ ತಿಳಿದುಬಂದಿತ್ತು. ಕೂಡಲೇ ದಂಪತಿಗಳಿಬ್ಬರು ಕಾಮಗೇತಿ ಕ್ಯಾಸಯ್ಯನನ್ನು ಭೇಟಿ ಮಾಡಿ ನಡೆದ ಘಟನೆ ಬಗ್ಗೆ ಸಮಾಲೋಚಿಸಿ ತನ್ನ ತಂಗಿಯು ಮೊದಲಿಗಿಂತಲೂ ಉತ್ತಮವಾಗಿರಬೇಕೆಂದು ತಿಳಿಸಿ ಆಶೀರ್ವಾದ ಹೇಳಿ ಬಂದರು.

ಕೋರೆಲು ಮಲ್ಲಿನಾಯಕ ತನ್ನ ತಂಗಿಯ ಮದುವೆಯನ್ನು ಸಂಪ್ರದಾಯದಂತೆ ಮಾಡಲಿಲ್ಲ ಎಂದು ಜಿಗುಪ್ಸೆಪಟ್ಟುಕೊಂಡ. ಹೀಗೆ ಇರುವಾಗ ಬಾಳಪಟ್ನಮ್ಮ ಗರ್ಭವತಿಯಾಗಿದ್ದು, ಈ ವಿಷಯ ತಿಳಿದು ಕುಲ(ಸಮುದಾಯದವರೆಲ್ಲ)ಸಾವಿರದವರೆಲ್ಲ ಸೇರಿ, ತಮ್ಮ ನಾಯಕನಿಗೆ ವಾರಸುದಾರ ಹುಟ್ಟುವ ವಿಷಯ ತಿಳಿದು ಸಂತೋಷದಿಂದ ಎಲ್ಲರೂ ಸೇರಿ ಬಾಳಪಟ್ನಮ್ಮನಿಗೆ ಸೀಮಂತ ಕಾರ್ಯ ನೆರವೇರಿಸುತ್ತಾರೆ. ನವಮಾಸಗಳು ತುಂಬಿ ಬಾಳಪಟ್ನಮ್ಮನಿಗೆ ಹೆರಿಗೆ ನೋವು ಕಾಣಿಸಿಕೊಳ್ಳುತ್ತದೆ. ಮೂರು ದಿನಗಳ ಕಾಲ ಹೆರಿಗೆ ಆಗದೆ ನೋವಿನಿಂದ ಪಟ್ಟಮ್ಮ ಯಾತನೆ ಅನುಭವಿಸುತ್ತಿರಲು, ಕೋರೆಲ ಮಲ್ಲಿನಾಯಕನು ಸಿಕ್ಕ ಸಿಕ್ಕ ದೇವರಿಗೆಲ್ಲ ಹರಕೆ ಹೊರುತ್ತಾನೆ. ಆದರೂ ಹೆರಿಗೆ ಆಗುವುದಿಲ್ಲ. ಹೆರಿಗೆ ನೋವಿನಿಂದ ಪಟ್ನಮ್ಮ ಮೂರ್ಛೆ ಹೋಗಲು, ಗರ್ಭದಲ್ಲಿರುವ ಮಗು ತನ್ನ ತಂದೆಯೊಂದಿಗೆ ಮಾತನಾಡುತ್ತದೆ. ತಂದೆಯೆ ನಾನು ಈ ಪ್ರಪಂಚಕ್ಕೆ ಬರಬೇಕೆಂದರೆ ನೀನು ಹೋಗಿ ನನ್ನ ಅತ್ತೆಯಾದ ಪಚ್ಚಿಪದಿ ಪಾಲಮ್ಮನನ್ನು ಕರೆತಂದು ಹೆರಿಗೆ ಮಾಡಿಸುವಂತೆ ತಿಳಿಸುತ್ತಾರೆ. ಹಿಂದೆ ಈ ಸಮುದಾಯದಲ್ಲಿ ಸೀಮಂತಕಾರ್ಯ ಇತ್ತೇ ಎಂಬ ಪ್ರಶ್ನೆ ಕಾಡುತ್ತದೆ.

ಮಲ್ಲಿನಾಯಕನು ಗರ್ಭದಲ್ಲಿ ಮಾತನಾಡಿದ ಮಗುವಿನ ಮಾತಿನಂತೆ ತನ್ನ ತಂಗಿಯನ್ನು ಕರೆಸಿ ಹೆರಿಗೆ ಮಾಡಿಸುವುದಕ್ಕೆ ಮುಂದಾಗುತ್ತಾನೆ. ಆದರೆ ಅವಳನ್ನು ಕರೆ ತರುವುದು ಕಷ್ಟ. ಏಕೆಂದರೆ ಅವಳ ಗಂಡ ಕ್ಯಾಸಯ್ಯ ಕಳಿಸುವುದಿಲ್ಲವೆಂದು ತಿಳಿದಿರುತ್ತಾನೆ. ಇವನೇ ನೇರವಾಗಿ ಹೋಗುವುದಕ್ಕೆ ಬದಲಾಗಿ ಮಲ್ಲಯ್ಯ ಶೆಟ್ಟಿ ಎಂಬ ವರ್ತಕನನ್ನು ಮಧ್ಯಸ್ಥಿಕೆಗಾರನನ್ನಾಗಿ ಕಳುಹಿಸಿಕೊಡುತ್ತಾನೆ. ಸೆಟ್ಟೂರು ಕಾವಲಿಗೆ ಬಂದ ಮಲ್ಲಯ್ಯಶೆಟ್ಟಿ ನಿಜಸ್ಥಿತಿಯನ್ನು ತಿಳಿಸಿ ಪಾಲಮ್ಮನನ್ನು ಕಳುಹಿಸಿಕೊಡುವಂತೆ ಕ್ಯಾಸಯ್ಯನಿಗೆ ಕೇಳುವನು. ಅದರಂತೆ ಷರತ್ತಿನಿಂದ ಕಳುಹಿಸುವೆನು. ಹೇಗೆ ಕರೆದುಕೊಂಡು ಹೋಗಿರುವೆಯೋ ಹಾಗೆಯೇ ತಂದು ಬಿಡಬೇಕು. ಕ್ಯಾಸಯ್ಯನು ಶೆಟ್ಟಿಗೆ ಹೀಗೆ ಹೇಳುತ್ತಾನೆ. ನನ್ನ ಹೆಂಡತಿಗೆ ಆಕಸ್ಮಿಕವಾಗಿ ತೊಂದರೆಯಾದರೆ ನೀವು ನನ್ನ ಮನೆಯಲ್ಲಿ ನಿಮ್ಮ ಜೀವ ಇರುವ ತನಕ ಜೀತದಾಳಾಗಿ ದುಡಿಯಬೇಕು ಎಂದು ಷರತ್ತಿನ ಮೇಲೆ ಕಳುಹಿಸುತ್ತಾನೆ.

**ಪಾಪನಾಯಕನ ಜನನ**

ಮಲ್ಲಿನಾಯಕ ತನ್ನ ತಂಗಿಯನ್ನು ತನ್ನ ಕುಟೀರಕ್ಕೆ ಕರೆದುಕೊಂಡು ಬಂದನು. ಪಾಲಮ್ಮ ಮನೆಗೆ ಬಂದು ಅತ್ತಿಗೆ ಹೆರಿಗೆ ನೋವು ಪಡುತ್ತಿರುವ ಹತ್ತಿರ ಬಂದು ಹೆರಿಗೆ ಮಾಡಿಸುವುದಕ್ಕೆ

ಮುಂದೆ ಕುಳಿತಳು. ಹೆರಿಗೆಯ ಸಂದರ್ಭದಲ್ಲಿ ವಿಚಿತ್ರಕಾರಿ ಘಟನೆ ಸಂಭವಿಸಿತು. ತಾಯಿಯ ಗರ್ಭದಿಂದ ಹೊರಬರುತ್ತಿರುವಾಗಲೇ ಪುಟ್ಟ ಮಗು ಕಾಲಿನಿಂದ ಜಾಡಿಸಿ ಪಾಲಮ್ಮನನ್ನು(ಅತ್ತೆ) ಒದ್ದು ಬರುತ್ತಾನೆ. ಅವಳ ಮುಂದಿನ ಹಲ್ಲುಗಳು ನೆಲಕ್ಕೆ ಬಿದ್ದವು. ಹುಟ್ಟಿದ್ದು ಗಂಡು ಮಗುವೇ ಆದರೂ ನಡೆದ ಘಟನೆ ಸಂಕಷ್ಟಕ್ಕೀಡುಮಾಡಿತು. ಈ ಘಟನೆಯಿಂದ ಬಾಳಪಟ್ನಮ್ಮ ಗಾಬರಿಗೊಂಡಳು. ಹುಟ್ಟಿದ ಮಗು ಹಲ್ಲು ಮುರಿಯುಂತೆ ಹೊಡೆಯುವುದು ಸಾಧ್ಯವೇ ಎಂದು ಚಿಂತಾಕ್ರಾಂತಳಾದಳು. ಯಾವುದೋ ಪಿಶಾಚಿಯೋ ಇವನ ರೂಪವಾಗಿ ಜನಿಸಿರಬೇಕು. ದೊಡ್ಡದಾದ ಮೇಲೆ ಈ ಮಗು ಏನ ಮಾಡುತ್ತದೆಯೋ ತಿಳಿದವರಾರು. ಇದು ಭೂತವೇ ಇರಬೇಕು. ಈಗ ಮಗು ಬೇಡ, ನಡೆದ ಪ್ರಸಂಗವನ್ನು ಮಲ್ಲಿನಾಯಕನಿಗೆ ತಿಳಿಸಿದಳು. ಪಾಲಮ್ಮನಿಗೆ ಹಲ್ಲು ಮುರಿದಿರುವುದು ಗಂಡನಿಗೆ ಗೊತ್ತಾದರೆ ಸುಮ್ಮನೆ ಬಿಡುವುದಿಲ್ಲ. ಆ ಶೆಟ್ಟಿಯ ಗತಿಯೇನು ಹೀಗೆ ಒಂದಿಲ್ಲೊಂದು ಯೋಚನೆಗಳು ಮನಸ್ಸಿಗೆ ಬರುತ್ತವೆ. ಹುಟ್ಟಿದ ಮಗು ಯಾವುದೋ ಆಗಿರಲಿ. ನಾವು ಭೂತ ಪಿಶಾಚಿ ಎನ್ನುವುದು ಬೇಡ. ಶಿಶುಹತ್ಯೆ ಮಾಡಿ ಪಾಪ ಕಟ್ಟಿಕೊಳ್ಳುವುದು ಯೋಗ್ಯವಲ್ಲ. ಎಲ್ಲಾದರೂ ಅಡವಿಯಲ್ಲಿ ಒಂದು ಗಿಡದ ಕೆಳಗೆ ಮಲಗಿಸಿ ನಾವು ಬೇರೆ ಕಡೆ ವಲಸೆ ಹೋಗೋಣ ಎಂದು ಯೋಚಿಸಿದರು. ಪಾಲಮ್ಮ ಬಾಳಪಟ್ನಮ್ಮ ಮಲ್ಲಿನಾಯಕ ಈ ಮೂವರು ಸೇರಿ ಮಗುವನ್ನು ಎತ್ತಿಕೊಂಡು ಹೋದರು. ಆ ಮಗುವಿಗೆ ಕರಿ ಕಂಬಳಿಯಲ್ಲಿ ಸುತ್ತಿ ಅಡವಿಯಲ್ಲಿ ಒಂದು ಕಾರೆಗಿಡದ ಬುಡದಲ್ಲಿಟ್ಟು ಸಾಣಿಕೆರೆಗೆ ಓಡಿ ಹೋಗಿ ತಲೆಮರೆಸಿಕೊಂಡರು. ಪಾಪನಾಯಕನು ಕಾಲು ಮುಂದಾಗಿ ಜನಿಸಿದ್ದರಿಂದ ಆ ಸ್ಥಳಕ್ಕೆ ಕಾಡ್ಲುಕುಂಟೆ ತಿಪ್ಪೆ ಎಂಬುದಾಗಿ ತಿಳಿದುಬರುತ್ತದೆ.

**ಮಗುವಿಗೆ ನಾಮಕರಣ**

ಕೊರೇಲ ಮಲ್ಲಿನಾಯಕ ತಾನು ಹೊದ್ದುಕೊಂಡಿದ್ದ ಕಂಬಳಿ ಕೋರಿಯನ್ನು ಮಗುವಿಗೆ ಸುತ್ತಿ ಗಿಡದ ನೆರಳಲ್ಲಿ ಮಲಗಿಸಿ ಹೊರಟು ಹೋದರು. ನಂತರ ಅದೇ ಸಮಯಕ್ಕೆ ಸರಿಯಾಗಿ ಲೋಕಕಲ್ಯಾಣಕ್ಕಾಗಿ ಶಿವಪಾರ್ವತಿಯರು ನಂದಿ ವಾಹನದಲ್ಲಿ ಇದೆ ಮಾರ್ಗವಾಗಿ ಬಂದರು. ಇಲ್ಲಿ ಮಗುವಿನ ಆಕ್ರಂದನವು ಪಾರ್ವತಿಯ ಕಿವಿಗೆ ಬಿತ್ತು. ಮಗುವಿನ ಅಳಲನ್ನು ಕೇಳಿ ಶಿವನಿಗೆ ಹೀಗೆ ಹೇಳಿದಳು. ದಟ್ಟವಾದ ಕಾಡಿನಲ್ಲಿ ಮಗುವಿನ ರೋಧನ ಕೇಳಿ ಬರುತ್ತಿದೆ. ಅದನ್ನು ನೋಡಿಕೊಂಡು ಹೋಗೋಣವೆಂದು ಪಾರ್ವತಿ ಹೇಳುತ್ತಾಳೆ. ಶಿವ–ಪಾರ್ವತಿಯರು ಮಗು ಹತ್ತಿರ ಹೋಗಿ ಪಾರ್ವತಿ ಮಗುವನ್ನು ಎತ್ತಿಕೊಂಡು ಮುದ್ದಾಡುತ್ತಾಳೆ. ನಂತರ ಅಲ್ಲಿಯೇ ಪಕ್ಕದಲ್ಲಿ ಒಂದು ಚಿಲುಮೆಯನ್ನು ತೋಡಿ ಆ ನೀರಿನಲ್ಲಿ ಮಗುವಿಗೆ ಸ್ನಾನ ಮಾಡಿಸಿ ಗಿಡದ ನೆರಳಿನಲ್ಲಿ ಜೋಗುಳ ಹಾಡಿ ಮಲಗಿಸುತ್ತಾಳೆ.

ಶಿವ–ಪಾರ್ವತಿಯರ ದರ್ಶನದಿಂದ ಮಗು ಸ್ವತಂತ್ರವಾಗಿ ಜೀವನ ನಡೆಸುವ ತನಕ ಅಡೆ-ತಡೆ, ಹಸಿವು-ಬಾಯಾರಿಕೆ, ಕ್ರಿಮಿ-ಕೀಟ, ಮೃಗಗಳಿಂದ ಯಾರಿಂದಲೂ ಅಪಾಯವಾಗದ ರೀತಿಯಲ್ಲಿ ಆಶೀರ್ವದಿಸಿದರು. ಹಾಗೆಯೇ ಮಗುವಿಗೆ ಹಸಿವಾದರೆ ಅದರ ಬಾಯಿಗೆ ಜೇನುಹನಿ

ಬೀಳುವಂತೆ ಜೇನನ್ನು ಕಟ್ಟಿದರು. ಈ ಮಗು ಮುಂದೆ ಬೆಳೆದು ಸಿದ್ಧಿ ಪುರುಷನಾಗಿ ಲೋಕಕಲ್ಯಾಣ ಸೇವೆ ಮಾಡುವಂತಾಗಲಿ ಎಂದು ಹರಸಿದರು. ಶಿವ-ಪಾರ್ವತಿಯರು ಇವನಿಗೆ 'ಪರದೇಶಿಪಾಪಿ' ಎಂದು ನಾಮಕರಣ ಇಟ್ಟು ಹೋದರು. ಮುಂದೆ ಪಾಪದ ಮಗು ಸೂರ್ಯನ ಕಿರಣಗಳಡಿಯಲ್ಲಿ ಬೆಳೆದಿದ್ದರಿಂದ ಇವನಿಗೆ ಸೂರ್ಯಪಾಪನಾಯಕ>ಸೂರ್ಯಾದೇವ ಪಾಪನಾಯಕ ಎಂದು ಹೆಸರಾದನು.

ಶಿವ-ಪಾರ್ವತಿಯರ ಅಣತಿಯಂತೆ ಓರಗಲ್ಲು(ಚಳ್ಳಕೆರೆ) ಪಟ್ಟಣದ ಮಲ್ಲಮ್ಮ ಎಂಬ ಮುದುಕಿಯು ಕಟ್ಟಿಗೆಗೆ ಕಾಡಿಗೆ ಬರುತ್ತಾಳೆ. ಅಲ್ಲಿ ಆಕೆಗೆ ಒಂದು ಪೊದೆಯಲ್ಲಿ ಕಾರೆಗಿಡದ ಕೆಳಗೆ ಮಗು ಆಳುವ ಶಬ್ದ ಕೇಳಿಸುತ್ತದೆ. ಹೋಗಿ ನೋಡಲು ಚಲುವಾದ ಗಂಡು ಮಗು ಕಾಣಿಸುತ್ತದೆ. ಮಲ್ಲಮ್ಮ ಸುತ್ತಲು ನೋಡಿದಳು. ಯಾರು ಕಾಣಿಸದೆ, ಮಗುವನ್ನು ತನಗೆ ಮಕ್ಕಳಿಲ್ಲದ್ದರಿಂದ ಎತ್ತಿಕೊಂಡು ಬಂದಳು. ಮನೆಗೆ ಬಂದು ಇವಳು ಈ ಮಗುವಿಗೆ ಪರದೇಶಿ ಪಾಪನಾಯಕ ಎಂದು ನಾಮಕರಣ ಮಾಡಿದಳು.

**ಪಾಪನಾಯಕನ ಬಾಲ್ಯಜೀವನ**

ಪಾಪನಾಯಕನು ಅಜ್ಜಿಯ ಲಾಲನೆ ಪಾಲನೆಯಲ್ಲಿ ಬೆಳೆದು ದೊಡ್ಡವನಾಗುತ್ತಾನೆ. ಈ ಮಲ್ಲಮ್ಮ ಪಾಪನಾಯಕನನ್ನು ಓರಗಲ್ಲು ಪಟ್ಟಣದ ಗೌಡನ ಬಳಿ ದುಗ್ಗಾಣಿಗೆ ಒಂದರಂತೆ ದನ ಕಾಯುವ ಕೆಲಸಕ್ಕೆ ಸೇರಿಸುತ್ತಾಳೆ. ಅಂದಿನಿಂದ ಪಾಪನಾಯಕ ಓರಗಲ್ಲು ಪಟ್ಟಣದ ಗೌಡನ ದನಗಳನ್ನು ಕಾಯುವ ಕೆಲಸಕ್ಕೆ ನಿಲ್ಲುತ್ತಾನೆ. ಹೀಗೆ ಒಂದು ದಿನ ಅಜ್ಜಿ ಮಲ್ಲಮ್ಮ ಮುಪ್ಪಿನಿಂದ ಸಾಯುತ್ತಾಳೆ. ಆಗ ಪಾಪನಾಯಕ ಸಾಕಿದ ಅಜ್ಜಿಯನ್ನು ಕಳೆದುಕೊಂಡು ದಿಕ್ಕಿಲ್ಲದೆ ಅನಾಥನಾಗಿ ಊರಿನ ದನಗಳನ್ನು ಕಾಯುತ್ತ ಕಾಲ ಕಳೆಯುತ್ತಾನೆ.

**ಪಾಪನಾಯಕ ಸರ್ಪವನ್ನು ರಕ್ಷಿಸಿದ್ದು**

ಪಾಪನಾಯಕ ತನ್ನ ಕರುಗಳನ್ನು ದಿನನಿತ್ಯ ಕೆರೆಯ ಅಂಗಳದ ಕಾಡಿಗೆ ಮೇಯಿಸಲು ಬರುತ್ತಿದ್ದನು. ಅವುಗಳು ಅತ್ತ-ಇತ್ತ ಓಡಲಾರಂಭಿಸಿದವು. ಇವುಗಳನ್ನು ಒಂದು ಮಾಡಲು ಕೋಲಿನ ಅಗತ್ಯವಿತ್ತು. ಒಂದು ಕೋಲಿಗಾಗಿ ಹುಡುಕುತ್ತಾನೆ. ಅಷ್ಟರಲ್ಲಿ ಮಂಗಾರು ಗಿಡ ಪಾಪನಾಯಕನ ಕಣ್ಣಿಗೆ ಕಾಣಿಸುತ್ತದೆ. ಅದರಲ್ಲಿ ಒಂದು ನೇರವಾಗಿ ರಂಬೆ ಬೆಳೆದಿರುತ್ತದೆ. ಅದು ಹುತ್ತದಲ್ಲಿ ಬೆಳೆದಿರುತ್ತದೆ. ಕೋಲಿಗಾಗಿ ಸುಂದರವಾಗಿದೆ. ಅದನ್ನು ಬಯಸಿ ಕೀಳುವುದಕ್ಕೆ ಹೋಗುತ್ತಾನೆ. ಅದರ ಬೇರುಗಳು ಹುತ್ತದ ಆಳಕ್ಕೆ ಇಳಿದು ಹೋಗಿರುತ್ತವೆ. ಆ ಹುತ್ತದ ಒಳಗಿಂದ ಒಂದು ರೀತಿಯ ಶಬ್ದ ಹೊರಬೀಳುತ್ತದೆ. ಅದನ್ನು ಪಾಪಯ್ಯನು ಕೇಳಿ ಏನಿರಬಹುದೆಂದು ತಿಳಿದು ಮಂಗಾರಿ ಗಿಡದ ರಂಬೆಯನ್ನು ಹಿಡಿದು ಬೇರು ಸಮೇತ ಕೀಳುತ್ತಾನೆ.

ಹೀಗೆ ಗಿಡವನ್ನು ಕೀಳುವಾಗ ಬೇರಿಗೆ ರಕ್ತ ಅಂಟಿಕೊಂಡಿರುವುದನ್ನು ಕಂಡು, ಇದೇನು ರಕ್ತದ ಕಲೆಗಳು ಬೇರಿನಲ್ಲಿವೆಯಲ್ಲ ಎಂದು ಹುತ್ತದ ಕಡೆ ನೋಡುತ್ತಾನೆ. ಹುತ್ತದಿಂದ ಸರ್ಪ

ಮೇಲಕ್ಕೆ ಬಂದು ಪಾಪನಾಯಕನಿಗೆ ನಮಸ್ಕರಿಸುತ್ತದೆ. ನನ್ನನ್ನು ಶಾಪದಿಂದ ಮುಕ್ತಿಗೊಳಿಸಿದ್ದೀರಿ. ಈ ಮಂಗಾರಿ ಗಿಡದ ಬೇರುಗಳು ಕಿವಿಯ ಮೂಲಕ ಭೂಮಿಗೆ ಇಳಿದಿದ್ದವು. ಗಿಡ ಬೇರು ಸಹಿತ ಹೊರಬಂದಿದ್ದರಿಂದ ಹಾವಿನ ಬಿಡುಗಡೆಯಾಯಿತು. ಬಂಧನದಿಂದ ಪುನರ್ಜನ್ಮ ಪಡೆದಂತಾಯಿತು. ಸಂತೋಷಗೊಂಡು ಹಾವು ಏಳುಹೆಡೆ ಬಿಚ್ಚಿ ಹಾರಾಡುತ್ತಿತ್ತು. ಇಷ್ಟು ದಿನಗಳು ಅನುಭವಿಸಿದ ನರಕಯಾತನೆ ದೂರವಾಯಿತು. ಹೀಗೆ ಪಾರು ಮಾಡಿದ್ದಕ್ಕೆ ನಿನ್ನ ಉಪಕಾರವನ್ನು ಎಂದಿಗೂ ಮರೆಯಲಾರೆ. ಈ ಸ್ಥಳವು ಇನ್ನು ಮುಂದೆ ನಿಮ್ಮ ಧ್ಯಾನಕ್ಕೆ ಇರಲಿ, ನೀವು ನೆಲೆಸಿದ ಸ್ಥಳವು ಮುಂದೆ ಪವಿತ್ರ ಪುಣ್ಯಕ್ಷೇತ್ರವಾಗಲಿ ಎಂದಿತು. ಹೀಗೆ ಸರ್ಪ ಪಾಪನಾಯಕನ ಜನ್ಮವೃತ್ತಾಂತವನ್ನು ತಿಳಿಸುತ್ತದೆ. ನೀನೊಬ್ಬ ಮಹಾಪುರುಷನಾಗುತ್ತಿಯಾ. ತಿರುಪತಿ ಯಾತ್ರೆ ಮಾಡು ನಿನಗೆ ತಿಮ್ಮಪ್ಪನ ಆಶೀರ್ವಾದದಿಂದ ಒಳ್ಳೆಯದಾಗುತ್ತದೆ. ಪ್ರಸ್ತುತ ಮಂಗಾರು ಕಾರಿಗಿಡದ ಹತ್ತಿರವೇ ಪಾಪನಾಯಕನನ್ನು ದೈವದ ರೂಪದಲ್ಲಿ ಪೂಜೆ ಮಾಡುವಂತದ್ದು, ಹುತ್ತದಲ್ಲಿರುವ ಮಾಣಿಕ್ಯದ ಹರಳನ್ನು ಸರ್ಪ ಈತನಿಗೆ ಕೊಡುತ್ತದೆ. ಈ ಹರಳನ್ನು ಕಂಬಳಿಯ ಕೋರಿಯಲ್ಲಿಟ್ಟುಕೊಂಡು ಊರ ಕಡೆ ಧಾವಿಸಿದ. ಆ ಹುತ್ತಕ್ಕೆ ಪ್ರತಿನಿತ್ಯ ಪ್ರದಕ್ಷಿಣೆ ಮಾಡಿ ಬರುತ್ತಿದ್ದ. ಮಂಗಾರು ಗಿಡದ ರಂಬೆಯಿಂದ ದನಕಾಯುವುದಕ್ಕೆ ಕೋಲು(ಬೆತ್ತ) ಮಾಡಿಕೊಳ್ಳುತ್ತಾನೆ. ಇದನ್ನು 'ನಾಗಮುರಿಬೆತ್ತ' ಎಂದು ಕರೆಯಲಾಗುತ್ತದೆ.

### ರಾಕ್ಷಸಿಯ ಸಂಹಾರ

ಪಾಪನಾಯಕನು ಹಾವಿಗೆ ಮುಕ್ತಿ ಕಲ್ಪಿಸಿದ ನಂತರ ತಾನು ಆ ಜಾಗದಲ್ಲಿ ನೆಲೆಗೊಂಡು ದಿನವು ಧ್ಯಾನ ಮಾಡುತ್ತ ಇರುತ್ತಾನೆ. ಹೀಗಿರಲು ಓರಗಲ್ಲು ಪಟ್ಟಣಕ್ಕೆ ಒಬ್ಬ ರಾಕ್ಷಸಿ ಗಂಟು ಬಿದ್ದು ಜನರಿಗೆ ಕಾಟ ಕೊಡುತ್ತಿರುತ್ತಾಳೆ. ಈ ಸುದ್ದಿ ತಿಳಿದು ಪಾಪಯ್ಯನು ರಾಕ್ಷಸಿಯನ್ನು ಸಂಹಾರ ಮಾಡಬೇಕೆಂದು ಕೆರೆಯ ಅಂಗಳಕ್ಕೆ ಕೂಗಿ ಕರೆಯುತ್ತಾನೆ. ರಾಕ್ಷಸಿ ಇವನ ಸೊಕ್ಕು ಅಡಗಿಸಬೇಕು ಎಂದು ಈತನ ಮೇಲೆ ನುಗ್ಗಿ ಬರುತ್ತಾಳೆ. ಇವನು ನಾಗಮುರಿ ಬೆತ್ತದಿಂದ ರಾಕ್ಷಸಿಯ ಕಾಲುಗಳಿಗೆ ಹೊಡೆದು ಮುರಿಯುತ್ತಾನೆ. ಅವಳು ಕಾಲು ಮುರಿದ ನೋವಿನಿಂದ ಚೀರಾಡುತ್ತಾ ಇವನಿಗೆ ಶಾಪ ಕೊಡುತ್ತಾಳೆ. ನೀನು ಕೂಡ ನನ್ನಂತೆಯೇ ಕಾಲುಗಳನ್ನು ಕಳೆದುಕೊಂಡು ಕೊನೆಯುಸಿರೆಳೆಯುತ್ತೀಯಾ ಎಂದು ಅವಳು ಸಾಯುತ್ತಾಳೆ.

### ಪಾಪನಾಯಕನು ತಿರುಪತಿ ತಿಮ್ಮಪ್ಪನ ದರ್ಶನ ಪಡೆದಿದ್ದು

ಪಾಪನಾಯಕನು ನಿತ್ಯದ ಕಾಯದಲ್ಲಿ ತೊಡಗಿ ಕೆರೆ ಅಂಗಳದಲ್ಲಿ ಧ್ಯಾನ ಮಾಡುತ್ತ ಕುಳಿತಿರುವಾಗ ಸರ್ಪ ಹೇಳಿದ ಮಾತು ನೆನಪಾಗುತ್ತದೆ. ಅಜ್ಜಿಯು ತೀರಿಕೊಂಡ ಮೇಲೆ ಬಹಳ ದುಃಖಪಟ್ಟು ಆಕೆಯ ಆತ್ಮ ಶಾಂತಿಗಾಗಿ ತಿರುಪತಿಗೆ ಹೋಗಿ ಬರಬೇಕೆಂದು ತೀರ್ಮಾನಿಸಿದನು. ತಿರುಪತಿಗೆ ಹೋಗುವ ಖರ್ಚಿಗೆ ದುಗ್ಗಾಣಿ ಬೇಕಾಗುತ್ತದೆ. ಹೀಗೆ ಯೋಚಿಸಿ ತಾನು ಕಾಯುತ್ತಿದ್ದ ದನಕರುಗಳ ಒಡೆಯರಲ್ಲಿ ಕರುವಿಗೊಂದು ದುಗ್ಗಾಣಿಯಂತೆ ಬಂದು ಕೇಳಿದನು. ಆಗ ಅವರು ಸುಮ್ಮನೆ ದನ ಕಾಯ್ದುಕೊಂಡು ಇರು ಎಂದು ಬೈಯ್ದರು.

ಇದರಿಂದ ಬೇಸರಗೊಂಡು ಬರುತ್ತಾನೆ. ನಂತರ ಕೆರೆಯ ಅಂಗಳದಲ್ಲಿ ಧ್ಯಾನಾಸಕ್ತನಾಗಿ ಕೂತನು. ದನಗಳು ಮೇಯುವುದನ್ನು ಬಿಟ್ಟು ಇವನ ಸುತ್ತಲೂ ಮಲಗಿದವು. ಸಂಜೆಯಾದರೂ ದನಗಳು ಬಾರದೆ ಇದ್ದಾಗ ಊರಿನ ಜನರು ದನಗಳನ್ನು ಹುಡುಕಿಕೊಂಡು ಬಂದರು. ಅವನು ಹಾಗೆ ಕೂತಿರುವುದನ್ನು ನೋಡಿ ದನಗಳನ್ನು ಹೊಡೆದುಕೊಂಡು ಮುಂದಾಗಲು ಅವರಿಗೆ ಬೆಂಕಿಯ ಜ್ವಾಲೆಗಳು ಬಂದು ತಡೆಯುತ್ತವೆ. ಜನರು ಹೆದರಿ ಓಡಿ ಬಂದು ಗೌಡನಿಗೆ ಈ ಸುದ್ದಿಯನ್ನು ತಿಳಿಸಿದಾಗ ಎಲ್ಲರೂ ಬಂದು ನೋಡುತ್ತಾರೆ. ಪಾಪನಾಯಕ ಕೆರೆಯ ಹತ್ತಿರ ಕಣ್ಣುಮುಚ್ಚಿ ತಪಸ್ಸು ಮಾಡುತ್ತಿರುವನು. ಆಗ ಗೌಡನು ಓಹೋ ಇವನು ಸಾಮಾನ್ಯನಲ್ಲ. ಮಹಾಮಾನವನೇ ಇರಬೇಕೆಂದು ಅವನಿಗೆ ಕೊಡಬೇಕಾದ ದುಗ್ಗಾಣಿಯನ್ನೆಲ್ಲ ಕೊಟ್ಟು ಬಿಟ್ಟನು.

ಹೀಗೆ ದುಗ್ಗಾಣಿಯನ್ನು ಪಡೆದು ಪಾಪಯ್ಯನು ಪೆದ್ದಸ್ವಾಮಿಲು(ಹಿರಿಯ ಸ್ವಾಮಿಗಳ) ಬಂಡೆಯ ಮೇಲೆ ನಿಂತು ತನ್ನ ಬಳಿ ಇರುವ ದುಗ್ಗಾಣಿಗಳನ್ನು ಗಾಳಿಗೆ ತೂರುತ್ತಾನೆ. ಹೀಗೆ ಗಾಳಿಗೆ ತೂರಿದ ದುಗ್ಗಾಣಿಯಲ್ಲಿ ಉರುಳಿ ಹೋಗಿ ಕೇವಲ ಮೂರೆ ಮೂರು ದುಗ್ಗಾಣಿ ಬಂಡೆಯ ಮೇಲೆ ಉಳಿಯುತ್ತವೆ. ಅವುಗಳನ್ನು ತೆಗೆದುಕೊಂಡು ಕಂಬಳಿ ಕೋರಿಯಲ್ಲಿ ಹಾಕಿ ಭದ್ರ ಪಡಿಸುತ್ತಾನೆ. ಮೂರು ದುಗ್ಗಾಣಿ ತೆಗೆದುಕೊಂಡು ಪಾಪಯ್ಯ ತಿರುಪತಿಯ ಕಡೆ ಪ್ರಯಾಣ ಹೊರಟನು. ನಡೆಯುತ್ತ ಮಾರ್ಗ ಮಧ್ಯೆ ದಣಿವಾರಿಸಿಕೊಳ್ಳಲು ಒಂದು ಮರದ ಕೆಳಗೆ ಕುಳಿತುಕೊಂಡನು. ಇದೇ ಮಾರ್ಗದಲ್ಲಿ ಕೆಂಗುರಿ ಗೊಲ್ಲರು ತಿಮ್ಮಪ್ಪನಿಗೆ ಮೀಸಲು ಹಾಲು, ಮೊಸರು ತೆಗೆದುಕೊಂಡು ಯಾತ್ರೆಗೆ ಹೊರಟಿದ್ದರು. ಅವರಿಗೂ ನಡೆದು ಸಾಕಾಗಿತ್ತು. ಮರದ ಕೆಳಗೆ ಕೂತಿದ್ದ ಪಾಪನಾಯಕನನ್ನು ನಮಗೆ ಬಾಯಾರಿಕೆಯಾಗಿದೆ, ಕುಡಿಯಲು ನೀರೆಲ್ಲಿದೆ ಹೇಳು ಎಂದು ಕೇಳಿದರು. ಪಾಪಯ್ಯ ಸುಮ್ಮನೆ ಆ ಕಡೆ ಇದೆ ಹೋಗಿ ಕುಡಿದು ಬನ್ನಿ ಎಂದು ಕೈ ತೋರಿಸಿದ. ಗೊಲ್ಲರು ಚಿಲುಮೆಗೆ ಹೋಗಿ ನೀರು ಕುಡಿದು ಬಂದರು. ಅವರು ಮೀಸಲು ಹಾಲು ಮೊಸರು ನೋಡಿಕೊ ಎಂದು ಹೇಳಿ ನೀರು ಕುಡಿದು ಬರುವುದರೊಳಗೆ ಮಡಿಕೆಯಲ್ಲಿರುವ ಹಾಲು, ಮೊಸರನ್ನು ಕುಡಿದು ಬಿಡುತ್ತಾನೆ. ಮಡಿಕೆಗಳನ್ನು ನೋಡಿದ ಗೊಲ್ಲರು ಇವನನ್ನು ಹೀನಾಯವಾಗಿ ಬೈದು ಕಲ್ಲುಗಳನ್ನು ತೆಗೆದುಕೊಂಡು ಹೊಡೆಯುತ್ತಾರೆ. ಪಾಪಯ್ಯ ಪ್ರಜ್ಞೆ ತಪ್ಪಿ ಕೆಳಗೆ ಬೀಳುತ್ತಾನೆ. ಇವನು ಬದುಕುವುದಿಲ್ಲವೆಂದು ತಿರುಪತಿ ಕಡೆಗೆ ಹೆಜ್ಜೆ ಹಾಕಿದರು. ಈ ಕಲ್ಲುಗಳು ಹಾಕಿರುವ ಊರಿಗೆ(ರಾಡ್ಲುಪಲ್ಲಿ) ಕಲ್ಲಹಳ್ಳಿ. ದೇವರ ಮೀಸಲು ಹಾಲನ್ನು ಎಂಜಲು ಮಾಡಿದ ಎಂಬುದೇ ಗೊಲ್ಲರ ಸಿಟ್ಟಿಗೆ ಕಾರಣವಾಗಿತ್ತು. ಕಲ್ಲಿನ ಗುಡ್ಡೆಯೊಳಗೆ ಸಿಕ್ಕಿ ಹಾಕಿಕೊಂಡು ಪಾಪಯ್ಯ ತಿಮ್ಮಪ್ಪನನ್ನು ಧ್ಯಾನಿಸಿದ. ಅವನ ಮೈ ನೋವು, ಗಾಯ ವಾಸಿಯಾಯಿತು. ಪಾಪನಾಯಕನು ಎದ್ದು ತಿರುಪತಿಯ ಹಾದಿ ಹಿಡಿದನು. ಕೆಂಗುರಿ ಗೊಲ್ಲರು ಮುಂದೆ ಮುಂದೆ ನಡೆಯುತ್ತ ನೋಡಿದರೆ ಅಲೊಬ್ಬ ಕರಿಕಂಬಳಿ ಚಿತ್ರ ಒಡಿದು ನಡೆಯುವುದು ಕಾಣಿಸಿತು. ಇವರು ಓಡಿ ಬಂದು ನೋಡಿದರೆ ಅವನೇ ಈ ಬಾಲಕ.

ಇವನು ಮಹಾಪುರುಷನಿರಬೇಕು ಎಂದು ಕೈ ಮುಗಿದು ತಪ್ಪು ಒಪ್ಪಿಕೊಂಡರು. ನಾವು ತಪ್ಪೇನು ಮಾಡಿಲ್ಲ ಬನ್ನಿ ಎಂದು ತಿರುಪತಿ ಕಡೆ ಪ್ರಯಾಣ ಬೆಳೆಸಿದರು. ಪಾಪಯ್ಯನು ದಾರಿಯಲ್ಲಿ ಹೋಗುವಾಗ ಅಲ್ಲಿಯ ಗಿಡವೊಂದರಲ್ಲಿ ಮಂಗಾರು ಕಾಯಿಯನ್ನು ಕಿತ್ತು, ಅದರ ಒಳಗಿನ ತಿರುಳನ್ನು ತೆಗೆದು ಅದರಲ್ಲಿ ಹಾಲನ್ನು ತುಂಬಿ ಮೀಸಲು ಹಾಲು ಮಾಡಿಕೊಂಡನು. ಅಳಿಲಿನ ಚರ್ಮದಿಂದ ತಯಾರಿಸಿದ ಚೀಲದಲ್ಲಿ ದಾರಿಯಲ್ಲಿ ಬಿದ್ದ ಅಕ್ಕಿ, ಬೇಳೆಯನ್ನು ಆರಿಸಿಕೊಂಡು ಈ ಚೀಲದಲ್ಲಿ ಶೇಖರಿಸಿಕೊಂಡನು.

ಹೀಗೆ ಕೆಲವೇ ದಿನಗಳಲ್ಲಿ ಪಾಪಯ್ಯ ತಿರುಪತಿ ತಲುಪಿದನು. ಬೆಳಿಗ್ಗೆ ಎದ್ದು ತಿರುಪತಿಯ ಗುಡಿ ಮುಂದೆ ತಿಮ್ಮಪ್ಪನ ದರ್ಶನಕ್ಕಾಗಿ ನಿಂತನು. ಇವನ ಜೊತೆ ಬಂದಿದ್ದ ಗೊಲ್ಲರು ತಾವು ತಂದ ಮೀಸಲನ್ನು ತೆಗೆದುಕೊಂಡು ಗುಡಿ ಪ್ರವೇಶ ಮಾಡಿದರು. ಪಾಪಯ್ಯನನ್ನು ಕರೆದರು. ಇವನು ಹೋಗದೆ ಗುಡಿಯ ಎದುರಿಗೆ ನಿಲ್ಲುತ್ತಾನೆ. ಎಷ್ಟು ಹೊತ್ತಾದರೂ ತಿಮ್ಮಪ್ಪನ ದರ್ಶನ ಆಗಲಿಲ್ಲ. ಅಲ್ಲಿ ನೆರೆದ ಜನರು ಪಾಪಯ್ಯನನ್ನು ನೋಡಿ ಗೇಲಿ ಮಾಡುತ್ತಿದ್ದರು. ಸಿಟ್ಟಿಗೆದ್ದ ಪಾಪಯ್ಯ ಅಲ್ಲೆ ಗುಡ್ಡದ ಬಳಿಯಿದ್ದ ಕಲ್ಲನ್ನು ಎತ್ತಿ ಹಿಡಿಯುತ್ತಾನೆ. ತಿಮ್ಮಪ್ಪ ಹಿಂದಕ್ಕೆ ತಿರುಗುತ್ತಾನೆ. ಕಲ್ಲು ಎಸೆಯಲು ಮುಂದಾಗಲು, ತಡ ಮಾಡಿದರೆ ಅನಾಹುತ ಆಗಿ ಬಿಡುತ್ತದೆ ಎಂದು ತಿಮ್ಮಪ್ಪನೇ ಬಂದು ದರ್ಶನ ನೀಡುತ್ತಾನೆ. ಗುಂಡನ್ನು ಕೆಳಗೆ ಇಳಿಸಿ ಕಾಲಿಗೆ ಬಿದ್ದು ನಮಸ್ಕರಿಸುತ್ತಾನೆ. ಹೀಗೆ ಎತ್ತಿದ ಕಲ್ಲನ್ನು ಬಿಸಾಡಿದ ಸ್ಥಳವೇ ಇಂದಿನ ಪಾಪ ನಾಶಿನಿವಾಗಿದೆ. ನಿನ್ನ ಬೇಡಿಕೆ ಏನೆಂಬುದನ್ನು ತಿಳಿಸು ನೆರವೇರಿಸುತ್ತೇನೆಂದು ಕೇಳಲು, ನನಗೇನು ಬೇಡ, ನಿಮ್ಮ ದರ್ಶನದಿಂದ ಧನ್ಯನಾದೆ. ನಿನ್ನ ಎದುರಿಗೆ ಮುಕ್ತಿ ಹೊಂದಲು ಪ್ರಯತ್ನ ಮಾಡಿದೆ, ನಿನ್ನ ದರ್ಶನವೇ ಸಾಕು ಎಂದಾಗ, ತಿಮ್ಮಪ್ಪ ನಿನ್ನಿಂದ ಇನ್ನು ಲೋಕಕಲ್ಯಾಣದ ಕಾರ್ಯವಾಗಬೇಕು. ನೀನು ಈಗಲೇ ಲೋಕ ತ್ಯಾಗದ ಮಾತು ಆಡಬಾರದು. ನಿನ್ನ ಆಯಸ್ಸು ಮುಗಿಯುವಾಗ ನಾನೇ ನಿನಗೆ ಮೋಕ್ಷವನ್ನು ಕರುಣಿಸುತ್ತೇನೆ ಎಂದು ಹೇಳಿ ಆಶೀರ್ವಾದ ಮಾಡಿ ಪಾಪನಾಯಕನು ಇರುವವರೆಗೆ ಅವನಿಗೆ ಅನುಕೂಲವಾಗಲೆಂದು ತನ್ನಲ್ಲಿರುವ ಮುತ್ತಿನಕಾಲುಪೆಂಡೆ ಮತ್ತು ಮೂರು ವರಗಳನ್ನು ತಿಳಿಸಿದನು. ಸೂರ್ಯನಂದನ ಕಠಾರಿ, ಮುಕ್ಕಣ್ಣ ಕಠಾರಿ, ಸಿಡಿಲು ಮಿಂಚಿನ ಕಠಾರಿ ಈ ಮೂರು ಕಠಾರಿಗಳನ್ನು ನಿನ್ನ ವಶಕ್ಕೆ ತೆಗೆದುಕೊಂಡು ಪ್ರತಿಷ್ಠಾಪಿಸಿ ಲೋಕಕಲ್ಯಾಣ ಕೆಲಸ ಮಾಡು ಎಂದು ತಿಮ್ಮಪ್ಪ ಹಾರೈಸಿದನು. ತಂದೆ-ತಾಯಿ ಮತ್ತು ಅತ್ತೆಯನ್ನು ಭೇಟಿ ಮಾಡಿದ್ದು ತಿರುಪತಿ ಯಾತ್ರೆ ಮುಗಿಸಿ ಬಂದ ಪಾಪಯ್ಯನಿಗೆ ತಿಮ್ಮಪ್ಪನ ಅನುಗ್ರಹದಿಂದ ತನ್ನ ತಂದೆ ತಾಯಿಗಳ ನೆಲೆಯನ್ನು ತಿಳಿದುಕೊಂಡು ಸಾಣಿಕೆರೆಗೆ ಹೋಗುತ್ತಾನೆ. ಅವರನ್ನು ಭೇಟಿ ಮಾಡಿ ತನ್ನ ಹಿಂದಿನ ವೃತ್ತಾಂತವನ್ನೆಲ್ಲ ತಿಳಿಸಲು ತಂದೆ-ತಾಯಿ, ಮಗ ಮರಳಿ ಬಂದಿದ್ದಕ್ಕೆ ಆಶ್ಚರ್ಯ ಪಡುತ್ತಾರೆ. ಅತ್ತೆ ಪಾಲಮ್ಮಳ ಸ್ಥಿತಿಯನ್ನು ನೋಡಿ ತಾನೇ ಕಾರಣವೆಂದು ದುಃಖಿಸುತ್ತಾನೆ. ನಂತರ ಅತ್ತೆಯನ್ನು ಕರೆದುಕೊಂಡು ಮಾವನ ಮನೆಗೆ ಹೋದನು. ಇಪ್ಪತ್ತು ವರ್ಷಗಳ ಹಿಂದೆ ಅಣ್ಣನೊಂದಿಗೆ ಹೋದವಳು. ಇಂದು ಯಾವುದೋ

ಒಬ್ಬ ಬಾಲಕನೊಂದಿಗೆ ಬಂದಿದ್ದಾಳೆ. ಆ ಕಾಡು ಮಾನವನಿಗೆಷ್ಟು ಧೈರ್ಯ ಎಂದುಕೊಂಡನು. ಪಾಲಮ್ಮ ತಪ್ಪಿತಸ್ಥಳಾಗಿ ಪತಿಯನ್ನು ನೋಡುವ ಧೈರ್ಯ ಮಾಡದಿದ್ದನ್ನು ಕ್ಯಾಸಯ್ಯ ಕಂಡ. ತನ್ನ ಅತ್ತೆಯನ್ನು ಮನೆ ತುಂಬಿಸಿಕೊಂಡು ಶೆಟ್ಟಿಯನ್ನು ಜೀತದಿಂದ ಮುಕ್ತಗೊಳಿಸುವಂತೆ ಕೇಳಿಕೊಳ್ಳುತ್ತಾನೆ. ಇದಕ್ಕೆ ಮಾವ ನಿರಾಕರಿಸುತ್ತಾನೆ. ಇಬ್ಬರಿಗೂ ವಾದ-ವಿವಾದಗಳು ನಡೆಯುತ್ತವೆ. ಪಾಪಯ್ಯನನ್ನು ಬಂಧಿಸಲು ಸೇವಕರಿಗೆ ಹೇಳುತ್ತಾನೆ. ತನ್ನ ಬಳಿಯಿರುವ ಮಂಗಾರು ದೊಣ್ಣೆಯಿಂದ ಅವರನ್ನು ಹೊಡೆದು ಹಿಮ್ಮೆಟ್ಟಿಸುತ್ತಾನೆ. ಆದರೂ ಮನೆಗೆ ಸೇರಿಸಿಕೊಳ್ಳಲು ನಿರಾಕರಿಸುತ್ತಾನೆ. ಪಾಪಯ್ಯನು ಹೀಗೆ ಹೇಳುತ್ತಾನೆ. ತನ್ನ ಅತ್ತೆಯು ನಿನಗೆ ಬೇಕಿಲ್ಲದ ಮೇಲೆ ನೀನು ಅತ್ತೆಯನ್ನು ಅಪಹರಿಸಿಕೊಂಡು ಬಂದ ಸಂದರ್ಭದಲ್ಲಿ ಅಪಹರಸಿ ತಂದ ನಮ್ಮ ದನಗಳನ್ನು ಹಿಂದಿರುಗಿಸಿ ಕೊಡುವಂತೆ ಕೇಳುತ್ತಾನೆ. ನಿಮ್ಮ ಯಾವ ದನಗಳು ಇಲ್ಲ ಎಂದು ಹೇಳುತ್ತಾನೆ. ಪಾಪಯ್ಯ ನಮ್ಮ ದನಗಳನ್ನು ಕರೆಯುತ್ತೇನೆ. ಅವು ಬಂದರೆ ಅವು ನಮ್ಮದೆಂದು ಕರೆಯುತ್ತಾನೆ. ತಿಮ್ಮಪ್ಪನನ್ನು ನೆನೆದು ಕರೆಯುತ್ತಾನೆ. ಕ್ಯಾಸಯ್ಯನ ಅಪಹರಿಸಿ ತಂದ ದನಗಳ ಸಂತತಿ ಪಾಪಯ್ಯನ ಬಳಿ ಬಂದು ನಿಲ್ಲುತ್ತವೆ. ಈತನ ಪವಾಡ ತಿಳಿದು ಶೆಟ್ಟಿಯನ್ನು ಬಿಟ್ಟು ಪಾಲಮ್ಮಳನ್ನು ಮನೆ ತುಂಬಿಸಿಕೊಳ್ಳುತ್ತಾನೆ.

ಯರಗಟ್ಟ(ಟ್ಟಿ)ನಾಯಕ(ದೊಡ್ಡಪ್ಪ)ನನ್ನು ಭೇಟಿಯಾಗಿದ್ದು ತನ್ನ ತಂದೆಯ ದನಕರುಗಳನ್ನು ಹೊಡೆದುಕೊಂಡು ಬಂದು ತನ್ನ ಊರಿಗೆ ಸೇರಿಕೊಳ್ಳುತ್ತಾನೆ. ತಂದೆಯು ಬಲಿ ಕಠಾರಿಗಳ ಕುರಿತು ವಿಚಾರಿಸಿದಾಗ ತನ್ನ ಬಳಿ ಸೂರ್ಯನಂದನ ಕಠಾರಿ ಇದೆ. ಉಳಿದ ಮುಕ್ಕಣ್ಣನ ಕಠಾರಿ ದೊಡ್ಡಪ್ಪನಾದ ಯರಗಟ್ಟನಾಯಕನ ಬಳಿ ಇರುವುದಾಗಿ ತಿಳಿಸಿದನು. ತನ್ನ ತಂದೆಯಿಂದ ಸೂರ್ಯನಂದನ ಕಠಾರಿಯನ್ನು ತಾನು ಹಿಂದೆ ದನಕಾಯುವ ಕೆರೆಯ ಅಂಗಳದಲ್ಲಿ ಹುತ್ತದಲ್ಲಿ ನೆಟ್ಟನು. ಅಲ್ಲಿಂದ ಹೊರಟು ಗೋನೂರಿಗೆ ತಲುಪಿದನು. ತನ್ನ ದೊಡ್ಡಪ್ಪನಾದ ಯರಗಟ್ಟ ನಾಯಕನನ್ನು ಭೇಟಿ ಮಾಡುತ್ತಾನೆ. ದೊಡ್ಡಪ್ಪನು ಇಷ್ಟೊಂದು ಪ್ರಬುದ್ಧ ಮಾನವನಾಗಿ ಬೆಳೆದಿದ್ದೀಯಾ ಎಂದು ಆನಂದಿಸಿ ಆತನನ್ನು ತಬ್ಬಿಕೊಂಡು ಮುದ್ದಾಡಿದನು. ಅಲ್ಲಿಯೇ ಹತ್ತಾರು ದಿನಗಳನ್ನು ಕಳೆದನು. ಕೊನೆಗೆ ದೊಡ್ಡಪ್ಪನು ಮುಕ್ಕಣ್ಣ ಕಠಾರಿಯನ್ನು ಕೊಟ್ಟು ಸಂತೋಷದಿಂದ ಕಳುಹಿಸಿಕೊಟ್ಟನು. ಅಲ್ಲಿಂದ ನೇರವಾಗಿ ಕಂಪಳ ದೇವರಹಟ್ಟಿಗೆ ಬಂದನು. ಅಲ್ಲಿ ಕಂಪಳದೇವರ ಅಮೂಲ್ಯ ವಸ್ತುಗಳು ಕಳವಾಗಿದ್ದವು. ಬಲಮುರಿ, ಶಂಖ, ಚಕ್ರ, ಬಂಗಾರದ ಕೊಳಲು, ಸಾಲಿಗ್ರಾಮ ಮುಂತಾದವನ್ನು ಕಳ್ಳರು ಅಪಹರಿಸಿಕೊಂಡು ಹೋದದ್ದನ್ನು ತಿಳಿದನು. ಕಳ್ಳರನ್ನು ಹುಡುಕುತ್ತ ಜಿನಗಿಹಳ್ಳ ದಾಟಿ ರಾಮಸಾಗರ ಹಟ್ಟಿ ಕಡೆಗೆ ಹೋದಾಗ ಕಳ್ಳರಿಗೆ ಈತನ ಶಕ್ತಿ ತಿಳಿದು, ಅವರೇ ಶರಣಾಗತರಾಗಿ ಕೈಮುಗಿದು ಎಲ್ಲಾ ಒಡವೆಗಳನ್ನು ಕೊಟ್ಟು ಬಿಟ್ಟರು. ಕಂಪಳದೇವರಹಟ್ಟಿಗೆ ಹಿಂದಿರುಗಿ ತಾನು ತಂದಿದ್ದ ಮುಕ್ಕಣ್ಣನ ಕಠಾರಿಯನ್ನು, ಮಂಗಾರು ಗಿಡದ ಬೆತ್ತವನ್ನು ಅಲ್ಲಿಯೇ ಸ್ಥಾಪಿಸಿದನು. ಅದನ್ನೆ ಈಗ ಸೂರ್ಯ ಪಾಪನಾಯಕನ ಗದ್ದುಗೆ ಎಂದು ಕರೆಯುತ್ತಾರೆ. ಕಂಪಳರಂಗನ ಜಾತ್ರೆ ಮಾಡಿ ಕಂಪಳವನ್ನು ಒಗ್ಗೂಡಿಸಿ.

ಇನ್ನು ಮೂರನೆಯದಾದ ಸಿಡಿಲು ಮಿಂಚಿನ ಕಠಾರಿಯನ್ನು ತಿಳಿದು ಜಗಪತಿರಾಯನ ಪ್ರಾಂತ್ಯಕ್ಕೆ ತೆರಳುತ್ತಾನೆ.

**ಜಗಪತಿರಾಯನೊಂದಿಗೆ ಯುದ್ಧ ಮಾಡಿದ್ದು**

ಜಗಪತಿರಾಯ ಎಂಬುವವನು ಜಗಳೂರು ಪ್ರಾಂತ್ಯದ ದೊರೆ. ಹಿಂದೆ ಇವನು ಬೊಗ್ಗಲೋರು ಬೆಡಗಿನ ಸಹಾಯದಿಂದ ಸಿಡಿಲು ಮಿಂಚಿನ ಕಠಾರಿಯನ್ನು ಅಪಹರಿಸಿಕೊಂಡು ಬಂದು ತನ್ನ ಬಳಿ ಇಟ್ಟುಕೊಂಡಿರುತ್ತಾನೆ. ಇದನ್ನು ತಿಳಿದ ಪಾಪಯ್ಯ ಜಗಳೂರು ಹತ್ತಿರ ಗೊಲ್ಲರಹಟ್ಟಿಗೆ ಬಂದು ಬೀಡುಬಿಡುತ್ತಾನೆ. ಗೊಲ್ಲರಹಟ್ಟಿಯಲ್ಲಿ ನೆಲೆನಿಂತು ಗೊಲ್ಲರ ಮನೆಗಳಲ್ಲಿ ಆತಿಥ್ಯ ಸ್ವೀಕರಿಸುತ್ತ, ಚಿಕ್ಕಪುಟ್ಟ ಪವಾಡಗಳನ್ನು ತೋರಿಸಿ ಜನರ ತೊಂದರೆಗಳನ್ನು ನಿವಾರಣೆ ಮಾಡಿ ಜನರ ದೃಷ್ಟಿಯಲ್ಲಿ ಪವಾಡ ಪುರುಷನಾಗಿ ಪೂಜಿಸಲ್ಪಡುತ್ತಾನೆ. ಈ ಸುದ್ದಿ ತಿಳಿದ ಜಗಳೂರು ದೊರೆ ಮುಂದೆ ನನಗೆ ತೊಂದರೆಯಾಗಬಹುದೆಂದು ತಿಳಿದು ಅವನನ್ನು ಬಂಧಿಸುತ್ತಾನೆ. ದೊರೆ ಪಾಪಯ್ಯನನ್ನು ಕುರಿತು ಜನರಿಗೆ ಮೋಸ ಮಾಡಿ ಈ ಪ್ರಾಂತ್ಯದಲ್ಲಿ ಅನುಮತಿ ಇಲ್ಲದೆ ನೆಲೆಸಿದ್ದೀಯ ಎನ್ನುತ್ತಾನೆ. ಜನರಿಗೆ ಮೋಸ ಮಾಡುತ್ತಿರುವುದು ಜಗಪತಿರಾಯ ಎಂದು ಜನರಿಗೆ ಮನವರಿಕೆ ಮಾಡಿಕೊಡುತ್ತಾನೆ. ಇದರಿಂದ ಸಿಟ್ಟಿಗೆದ್ದು ಅವನನ್ನು ಬಂಧಿಸಲು ಸೇವಕರಿಗೆ ಹೇಳುತ್ತಾನೆ. ಸೇವಕರು ಪಾಪಯ್ಯನನ್ನು ಬಂಧಿಸಲು ಬರುತ್ತಾರೆ. ತನ್ನ ಕೈಯಲ್ಲಿರುವ ಬೆತ್ತದಿಂದ ಅವರನ್ನು ಹೊಡೆದುರುಳಿಸುತ್ತಾನೆ. ಹೀಗೆ ಹಲವಾರು ಜಟ್ಟಿಗಳನ್ನು ಹೊಡೆದುರುಳಿಸುತ್ತಾನೆ. ನಂತರ ಜಗಪತಿರಾಯ ಪಾಪಯ್ಯನೊಂದಿಗೆ ರಾಜಿ ಮಾಡಿಕೊಳ್ಳುವ ನಾಟಕ ನಡೆಸಿ ತನ್ನ ಮಂತ್ರಿಯನ್ನು ಕಳುಹಿಸಿಕೊಡುತ್ತಾನೆ. ಇಬ್ಬರ ರಾಜಿಯ ಸಂಕೇತವಾಗಿ ಔತಣ ಏರ್ಪಡಿಸಿ 'ಬಸಿಗೆ ಅಂಬಲಿ'(ಅಕ್ಕಿಯ ನುಚ್ಚು, ಹಾಲು, ಬೆಲ್ಲವನ್ನು ಹಾಕಿ ಮಾಡಿದ ಅನ್ನ)ಯನ್ನು ಪಾಪನಾಯಕನಿಗೆ ಬಡಿಸುತ್ತಾರೆ. ಅದರಲ್ಲಿ ವಿಷ ಬೆರೆಸಿ ಕೊಲ್ಲುವ ಸಂಚು ನಡೆಸುತ್ತಾರೆ. ಹೀಗೆ ವಿಷ ಮಿಶ್ರಿತ ಅಂಬಲಿಯನ್ನು ತಿಂದರು ಬದುಕಿರುತ್ತಾನೆ. ಕುತಂತ್ರಗಳಿಂದ ಬದುಕುಳಿದು ನೇರವಾಗಿ ಜಗಪತಿರಾಯನೊಂದಿಗೆ ಯುದ್ಧ ಮಾಡಿ, ಅವನನ್ನು ಮಿಂಚಿನ ಕಠಾರಿಯಿಂದ ಸಂಹಾರ ಮಾಡಿ ಶತ್ರು ಸೈನ್ಯವನ್ನು ಕೊಲ್ಲುತ್ತ ತನ್ನವರು ಎನ್ನದೇ ಮನುಕುಲದ ನಾಶಕ್ಕೆ ಮುಂದಾಗುತ್ತಾನೆ. ತಿರುಪತಿ ತಿಮ್ಮಪ್ಪ ಹೆದರಿ ಹೀಗೆ ಬಿಟ್ಟರೆ ಉಳಿಗಾಲವಿಲ್ಲವೆಂದು ದುರ್ಗಿಯು ಬಾಣ ಪ್ರಯೋಗಿಸಿ ಕಾಲುಗಳನ್ನು ಕತ್ತರಿಸುತ್ತಾಳೆ. ತಿಮ್ಮಪ್ಪನನ್ನು ಸ್ಮರಿಸಿದಾಗ ಕಾಲುಗಳನ್ನು ದಯಪಾಲಿಸಲು ತಿರಸ್ಕರಿಸುತ್ತಾನೆ. ಹೀಗೆ ಬಾಣ ಪ್ರಯೋಗದಿಂದ ಸಿಡಿಲು ಮಿಂಚಿನ ಕಠಾರಿ ಹಿಡಿದು ಐಕ್ಯನಾಗುತ್ತಾನೆ.

ಈ ಐತಿಹ್ಯದಲ್ಲಿ ಬರುವ ಪ್ರತಿಯೊಬ್ಬ ನಾಯಕರು ತಮ್ಮ ದನಕರುಗಳಿಗೆ ಬೇಕಾಗುವ ಮೇವು ನೀರು ಹುಡುಕುವ ಹಾಗೂ ಅವುಗಳಿಗೆ ಎದುರಾದ ಸಮಸ್ಯೆಗಳನ್ನು ಪರಿಹರಿಸಿಕೊಂಡವರು. ತಮ್ಮ ಪಶು ಸಂಪತ್ತನ್ನು ಕಾಪಾಡಿಕೊಂಡು ಬರುವುದಲ್ಲದೆ ಮುಂದಿನ ಪೀಳಿಗೆಗೆ ವರ್ಗಾಯಿಸಿ

ಹೋಗುವುದರ ಮೂಲಕ ಪಶುಪಾಲಕ ಸಂಸ್ಕೃತಿ ಅನಾವರಣಗೊಳ್ಳುತ್ತದೆ. ಇಲ್ಲಿ ಬರುವ ವ್ಯಕ್ತಿಗಳು ಸಾಮಾನ್ಯರಾಗಿದ್ದು, ತಮ್ಮ ಸಮುದಾಯದ ಏಳಿಗೆ ಮತ್ತು ಉಳಿವಿಗಾಗಿ ದುಡಿದು ತಮ್ಮ ಸಮುದಾಯವನ್ನು ಕಟ್ಟಿ ಬೆಳೆಸುವಲ್ಲಿ ಶ್ರಮವಹಿಸಿ ಅಸಾಮಾನ್ಯರಾಗಿ ಪವಾಡ ಮೆರೆದವರು. ಇವರು ಜನರ ದೃಷ್ಟಿಯಲ್ಲಿ ಪವಾಡ ಪುರುಷರೆನಿಸಿಕೊಂಡು ನಂತರ ದೈವತ್ವಕ್ಕೇರಿ ದೈವದ ರೂಪದಲ್ಲಿ ಪೂಜಿಸಲ್ಪಡುತ್ತಾರೆ. ಪಾಪನಾಯಕನು ಕೆಲವು ಪವಾಡಗಳನ್ನು ಮೆರೆದು ಕಲ್ಲು ಬಣವೆಯಿಂದ ಬದುಕಿ ಮೇಲೆದ್ದು ಬರುವುದು. ನಂತರ ತಿರುಪತಿ ತಿಮ್ಮಪ್ಪನ ದರ್ಶನ ಪಡೆದು, ಸರ್ಪದಿಂದ ಬೆತ್ತವನ್ನು ಪಡೆದು ಮರಳಿ ತಮ್ಮ ನೆಲೆಗಳಲ್ಲಿ ಅವುಗಳನ್ನು ಸ್ಥಾಪಿಸಿದನು.

ತಿರುಪತಿ ತಿಮ್ಮಪ್ಪನ ಆಶೀರ್ವಾದದಿಂದ ಮೂರು ಕಠಾರಿಗಳನ್ನು ಪ್ರತಿಷ್ಠಾಪಿಸುವ ಮೂಲಕ ಸಮುದಾಯವನ್ನು ಒಂದುಗೂಡಿಸುವ ಕಾರ್ಯವನ್ನು ಮಾಡುತ್ತಾನೆ. ಪಾಪನಾಯಕನ ಜೀವನದಲ್ಲಿ ನಡೆದ ಘಟನೆಗಳು ಈ ಸಮುದಾಯದವರು ಪ್ರಸ್ತುತ ಮೌಖಿಕ ಆಚರಣೆಗಳು ಹಾಗೂ ಸಂಪ್ರದಾಯಗಳ ಮೂಲಕ ಉಳಿಸಿಕೊಂಡು ಬಂದಿದ್ದಾರೆ. ಇವರ ಸಂಪ್ರದಾಯ, ಆಚರಣೆಗಳನ್ನು ಅವಲೋಕಿಸಿದರೆ ಅದರಲ್ಲಿ ಅಡಗಿರುವ ಅಂದಿನ ಕಾಲದ ಸಂಗತಿಗಳು ಅವುಗಳಲ್ಲಿ ಹುದುಗಿ ಕೊಂಡಿವೆ. ಉದಾಹರಣೆಯಾಗಿ ಪಾಪನಾಯಕನಿಗೆ ಜಗಪತಿರಾಯ ಬಸಿಗೆ ಅಂಬಲಿಯ ಭೋಜನವನ್ನು ಬಡಿಸುವ ಮೂಲಕ ಪಾಪಯ್ಯನನ್ನು ಕೊಲ್ಲುವ ಸಂಚು ನಡೆಸುತ್ತಾರೆ. ಇದು ಪ್ರಸ್ತುತ ಆಚರಣೆಯ ಮೂಲಕ ಆರಾಧನೆಗೊಳ್ಳುವುದನ್ನು ಇಂದಿಗೂ ಕಾಣಬಹುದು.

**ಪಾಮುಡ್ಲು-ಗುರುನಾಥ**

ಪಾಮುಡ್ಲು ಗುರುನಾಥನ ಐತಿಹ್ಯ ಹೀಗಿದೆ; ನಾಯಕ ಸಮುದಾಯಕ್ಕೆ ಸೇರಿದ ಪ್ರಧಾನ ಬೆಡುಗು ಪಾಮುಡ್ಲು. ಈ ಬೆಡುಗಿಗೆ ಸೇರಿದ ಗುರುನಾಥ ಒಬ್ಬ ದನಕರುಗಳನ್ನು ಕಾಯುವ ಕಿಲಾರಿ. ಹಿಂದೆ ಬಳ್ಳಾರಿ ಜಿಲ್ಲೆಯ ಹಂಪಿ ಸಮೀಪ ಆನೆಗೊಂದಿ, ಕಮಲಾಪುರ ಅಕ್ಕಪಕ್ಕದಲ್ಲಿ ಪಾಮುಡ್ಲು ಸಂತತಿಯವರು ಪಶುಪಾಲನೆ ವೃತ್ತಿಯನ್ನು ಕೈಗೊಂಡು ನೆಲೆನಿಂತಿದ್ದರಂತೆ. ಇವರು ಏಳು ಜನ ಅಣ್ಣತಮ್ಮಂದಿರು. ಇವರ ಮನೆ ದೇವರು ಓಬಳದೇವರು. ಈ ಓಬಳದೇವರಿಗೆ ಸೇರಿದ ಎತ್ತುಗಳನ್ನು ಇವರು ಕಾಯುತ್ತಿದ್ದರಂತೆ. ಈ ಏಳು ಜನರಲ್ಲಿ ಒಬ್ಬನಿಗೆ ದುರಾಲೋಚನೆ ಹುಟ್ಟಿ, ಪಶುಸಂಪತ್ತು ಇಲ್ಲಿ ಇರುವವರಿಗೆ ಹಸುಗಳು ಸಿಗಬಾರದೆಂದು, ಅಣ್ಣ-ತಮ್ಮಂದಿರೇ ದಕ್ಷಿಣ ಮತ್ತು ಪೂರ್ವ ದಿಕ್ಕಿಗೆ ನಮ್ಮ ಹಸುಗಳಿಗೆ ಬಹಳ ಬೇಡಿಕೆಯಿದೆ. ಭಕ್ತರ ಸಮೂಹ ಇದೆ. ಆದಕಾರಣ ನಾನು ಇವುಗಳನ್ನು ಸಾಗಿಸಿಕೊಂಡು ಅವುಗಳಿಗೆ ಬರತಕ್ಕ ಕಪ್ಪಕಾಣಿಕೆ, ಪೂಜೆ, ಪುನಸ್ಕಾರಗಳಿಂದ ಬಂದಂತಹ ಸಂಪತ್ತನ್ನು ಹೇರಿಕೊಂಡು ಬರುತ್ತೇನೆ, ನನ್ನ ಸಹಾಯಕ್ಕಾಗಿ ಕೆಲವರನ್ನು ಕರೆದುಕೊಂಡು ಹೋಗುತ್ತೇನೆಂದು ಹೇಳಿ ಎತ್ತುಗಳನ್ನು ಹಾಗೂ ದೇವರ ಸಾಮಗ್ರಿಗಳನ್ನು ಹೊತ್ತು ಬಂದನಂತೆ. ಹೀಗೆ ಬರುವಾಗ ಸಂಡೂರು ಗುಡ್ಡಗಳಲ್ಲಿ ಕೆಲವು ದಿನಗಳು ತಂಗಿದ್ದರಂತೆ. ಅಲ್ಲಿಯ ದಟ್ಟವಾದ ಕಾಡಿನಲ್ಲಿ ಚಿರತೆಗಳು ಇದ್ದವಂತೆ. ಈ ಎತ್ತಿನ

ಕಿಲಾರಿಗೂ ಮತ್ತು ಚಿರತೆಗೂ ಒಪ್ಪಂದವಾಯಿತು. ಅದೇನೆಂದರೆ ನಾನು ನಿಮ್ಮ ದನಕರುಗಳನ್ನು (ಎತ್ತುಗಳು) ತಿನ್ನುವುದಿಲ್ಲ. ನೀವು ಸಹ ನನ್ನ ಮರಿಗಳನ್ನು ಕೊಲ್ಲಬೇಡಿಯೆಂದು. ಈ ವಚನ ಪಾಲಿಸಿದ್ದಕ್ಕಾಗಿ ಇವರು ಚಿರತೆಯ ಪ್ರಾಮಾಣಿಕತೆಗೆ ಮೆಚ್ಚಿಕೊಂಡು ಇವರ 'ದೇವರಿಗೆ ನಕ್ಕಮುತ್ತೆ ಓಬಳೇಶ್ವರ' ಎಂಬ ಹೆಸರು ಇಟ್ಟರು. ನಕ್ಕ ಎಂದರೆ ಚಿರತೆ ಎಂದು ಹೆಸರು. ಅಂದಿನಿಂದ ಈ ದೇವರನ್ನು ನಕ್ಕಮುತ್ತೆ ಓಬಳೇಶ್ವರ ಎಂದೂ ಕರೆದರು. ಅಲ್ಲಿಂದ ಎತ್ತಿನ ಕಿಲಾರಿಗಳು ಬರುವಾಗ ಜರಿಮಲೆಯ ದೊರೆಗಳು ಇವರನ್ನು ತಡೆದರಂತೆ. ಅವರಿಗೂ ಸಹ ಇದೇ ರೀತಿ ಸುಳ್ಳು ಹೇಳಿ ತಪ್ಪಿಸಿಕೊಂಡು, ಕೂಡ್ಲಿಗಿ ತಾಲ್ಲೂಕಿನ ಹುರುಳಿಹಾಳ್‌ಗೆ ಬಂದರಂತೆ ಅಲ್ಲಿ ಒಂದು ದಿನ ತಂಗಿ ರಾತ್ರಿ ಊಟಕ್ಕೆ ಹುರುಳಿ ಬೇಯಿಸಿ ಗುಗ್ಗರಿಯನ್ನು ಹಂಚಿದ್ದಕ್ಕಾಗಿ ಹುರುಳಿಯಾಳ್ ಎಂಬ ಹೆಸರಿಟ್ಟು ಮುಂದೆ ಸಾಗಿದರಂತೆ.

ಇಲ್ಲಿಂದ ಪೂಜಾರಹಳ್ಳಿಗೆ ಬಂದರಂತೆ. ಅಲ್ಲಿ ಅವರ ಜೊತೆಯಲ್ಲಿ ಬಂದಂತಹ ಅಣ್ಣ-ತಮ್ಮಂದಿರಿಗೆ ಜಗಳವಾಗಿ, ತಾವು ತಂದಂತಹ ವಸ್ತುಗಳಲ್ಲಿ ತ್ರಿಶೂಲವನ್ನು ಕಸಿದುಕೊಂಡು ಅಲ್ಲಿಯೇ ಉಳಿದುಕೊಂಡು ನೆಲೆಸಿ ದೇವರನ್ನು ಸ್ಥಾಪನೆ ಮಾಡಿ ದೇವರಿಗೆ ನಕ್ಕಮುತ್ತೆ ಓಬಳದೇವರು ಎಂಬ ಹೆಸರು ಇಟ್ಟರು. ಅಲ್ಲಿಂದ ಕಿಲಾರಿ ಗುರುವಯ್ಯ>ಗುರುನಾಥ ತಾಯಕನಹಳ್ಳಿಗೆ ಬಂದು ನೆಲೆಸಿದನಂತೆ. ಹೀಗೆ ಇರುವಾಗ ಒಂದು ದಿನ ಗುರುನಾಥ ಕಿಲಾರಿ ಸಂಪ್ರದಾಯದಂತೆ ಜೋಳಿಗೆ ಹಾಕಿ ಹೆಗಲ ಮೇಲೆ ಕರಿಕಂಬಳಿ, ಕೈಯಲ್ಲಿ ಬೆತ್ತದ ಕೋಲನ್ನು ಹಿಡಿದುಕೊಂಡು ಊರೂರು ಅಲೆಯುತ್ತ ಓಬಣ್ಣನಹಳ್ಳಿಗೆ(ಚಳ್ಳಕೆರೆ ತಾಲ್ಲೂಕು) ಹೋದನಂತೆ. ಅಲ್ಲಿ ವಿಶಾಲ ಮೈದಾನದಲ್ಲಿ ದೊರೆ ಯರಮಂಚಿನಾಯಕನ ನೆಲೆಯಲ್ಲಿ ಮ್ಯಾಸಮಂಡಳಿಯ ವಿಶೇಷ ಸಭೆ ಸೇರಿತು. ಆ ಸಭೆಯಲ್ಲಿ ದೊರೆ ಸಿಂಹಾಸನದಲ್ಲಿ ಸಕಲ ವೈಭವದಿಂದ ಸಭೆ ನಡೆಸುತ್ತಿದ್ದನು. ಜನರೆಲ್ಲರು ಶಿಸ್ತಿನಿಂದ, ನಿಶ್ಯಬ್ದವಾಗಿ ದೊರೆಯ ಮಾತುಗಳನ್ನು ಕೇಳುತ್ತಿದ್ದರು. ಹೀಗೆ ಸಭೆ ನಡೆಯುತ್ತಿದ್ದಾಗ ಗುರುನಾಥ ಸಭೆಯ ಹತ್ತಿರ ಹೋಗಿ, ಬೆತ್ತದ ಕೋಲಿನಿಂದ ಊರಿಕೊಂಡು ನಿಂತುಕೊಂಡನಂತೆ. ಆಗ ನೆರೆದ ಜನರೆಲ್ಲರು ಈತನನ್ನು ಗದರಿಸಿ ಬೈದು, ನಾವೆಲ್ಲ ಕುಳಿತುಕೊಂಡು ಕೇಳುತ್ತಿಲ್ಲವೇ, ನೀನು ನಿಂತುಕೊಂಡು ಸಭೆಯ ವಿರುದ್ಧವಾಗಿ ನಿಂತು ಕೇಳುವುದೇನು ಅಂದರಂತೆ. ಆಗ ಈತನು ನಾನು ಕುಳಿತು ಕೇಳುವುದಿಲ್ಲ. ದೊರೆ ಸಿಂಹಾಸನದಲ್ಲಿ ಕುಳಿತುಕೊಂಡರೆ ನಾನು ನೆಲದಲ್ಲಿ ಕುಳಿತುಕೊಳ್ಳಬೇಕೆ ಎಂದು ಪ್ರತಿಕ್ರಿಯೆ ನೀಡಿದನಂತೆ. ಆಗ ಜನರೆಲ್ಲರೂ ಇವನೇನೂ ಹುಚ್ಚನೋ ಇರಬೇಕೆಂದು ದೊರೆಯ ಹತ್ತಿರ ಕರೆದುಕೊಂಡು ಹೋಗಿ ಕಠಿಣ ಶಿಕ್ಷೆ ವಿಧಿಸಿಯೆಂದು ಸೇವಕರು ಕೇಳಿದಾಗ, ದೊರೆಯು ಅಜ್ಞಾಪಿಸಿದನಂತೆ. ಇವನನ್ನು ಕರೆದುಕೊಂಡು ಹೋಗಿ ದೊಡ್ಡ ಸುಣ್ಣದ ಹಗೇವು ತೆಗೆದು ಅದರಲ್ಲಿ ಸುಡುವ ಸುಣ್ಣದಲ್ಲಿ ಆತನನ್ನು ಹಾಕಿ ಹಗೇವು ಮುಚ್ಚಿದರಂತೆ. ಸಭೆ ಮುಗಿದ ಬಳಿಕ ಸುಣ್ಣದ ಹಗೇವು ತೆಗೆದು ನೋಡಿದರೆ ಗುರುನಾಥ(ಕಿಲಾರಿ)ನು ಮೈಯೆಲ್ಲಾ ಹಾವುಗಳು ತುಂಬಿಕೊಂಡು ಜೀವಂತವಾಗಿ ಹೊರಗೆ ಬಂದನಂತೆ. ಈ ಆಶ್ಚರ್ಯವನ್ನು ನೋಡಿ. ಆ ಸಭೆಯಲ್ಲಿ ನೆರೆದ ಜನರೆಲ್ಲರೂ

ಮತ್ತು ದೊರೆ ಯರಮಂಚಿನಾಯಕ ಹತ್ತಿರ ಬಂದು ನೀನು ಯಾರೆಂದು ಕೇಳಿದಾಗ, ನನ್ನ ಹೆಸರು ಗುರುವ>ಗುರುವಯ್ಯ ಗುರುನಾಥ ಎಂದನು. ಆಗ ದೊರೆ ನೀನು ಧರೆಗೆ ದೊಡ್ಡವನು ನೀನು ಬರೀ ಗುರುನಾಥನೇ ಅಲ್ಲ 'ಜಗತ್‌ಗುರು'ವೆಂದು ಸಂಬೋಧಿಸಿ, ನೀನು ಇಂದಿನಿಂದ ನಿನ್ನ ಹೆಸರು ಪಾಮುಡ್ಲು ಜಗತ್‌ಗುರುನಾಥ ಎಂದು. ನೀನು ಇಲ್ಲಿಯೇ ನೆಲೆಸು ಎಂದು, ಕೇಳಿಕೊಂಡು ಈತನ ಕಾಲಿಗೆ ದೊರೆ ನಮಸ್ಕರಿಸಿದನಂತೆ. ಅಂದಿನಿಂದ ಗುರುನಾಥನು ಇಲ್ಲಿಯೇ ನೆಲೆಸಿ ಕೊನೆಗೆ ಓಬಣ್ಣನಹಳ್ಳಿಯ ಹೊರವಲಯದಲ್ಲಿ ಜೀವ ಸಮಾಧಿಯಾದನೆಂದು ತಿಳಿದುಬರುತ್ತದೆ. ಈ ಗುರುನಾಥನ ಸಮಾಧಿಯೇ ದೇವರ ಗುಡಿಯಾಗಿ ನಿರ್ಮಾಣವಾಗಿದೆ. ಗುರುನಾಥ ಪ್ರಸ್ತುತ ಅಪಾರ ಭಕ್ತ ಸಮೂಹವನ್ನು ಹೊಂದಿದ್ದಾನೆ. ಗುರುನಾಥನ ಮಹಿಮೆಯಿಂದ ಅವನ ವಂಶಜರಿಗೆ ಗುರು ಪಾಮುಡ್ಲುರೆಂದು ಬೆಡಗು ಹುಟ್ಟಿಕೊಂಡಿದೆ.

ಈತನ ಸಮಾಧಿಯೇ ದೇವರಗುಡಿಯಾಗಿದ್ದು, ಶ್ರಾವಣ ತಿಂಗಳಲ್ಲಿ ಪ್ರತಿ ಸೋಮವಾರ ವಿಶೇಷ ಪೂಜೆ ಇರುವುದು. ಈ ಬೆಡಗಿಗೆ ಸೇರಿದವರು ಶ್ರಾವಣ ತಿಂಗಳಲ್ಲಿ ವರ್ಷಕ್ಕೊಮ್ಮೆ ಬಂದು ಒಂದು ದಿನ ತಂಗಿ ಹೋಗುವರು. ಈ ಬೆಡಗಿನವರು ಮಕ್ಕಳಿಗೆ ನಾಮಕರಣ ಮಾಡುವಾಗು ಗುರುಸ್ವಾಮಿ, ಗುರುಮೂರ್ತಿ, ಗುರುವಯ್ಯ ಎಂಬ ಹೆಸರು ಮೊದಲಿಡುವುದು. ಈ ದೇವರಗುಡಿಯಲ್ಲಿ ಪ್ರತಿ ಸೋಮವಾರ ಬೆಳಿಗ್ಗೆಯಿಂದ ಸಾಯಂಕಾಲದವರೆಗೂ ನಡೆಯುತ್ತದೆ. ಈತನ ದೇವರೆತ್ತುಗಳು ಕೂಡ್ಲಿಗಿ ತಾಲೂಕಿನ ಕಾತ್ರಿಕೇನಹಟ್ಟಿಯಲ್ಲಿವೆ. ಗುರುಪಾಮುಡ್ಲು ಬೆಡಗಿನವರು ಇವುಗಳನ್ನು ಸಂರಕ್ಷಣೆ ಮಾಡುತ್ತಾರೆ. ಇವರನ್ನು ದಿದ್ದಲರು ಎಂದೂ ಸಹ ಕರೆಯುತ್ತಾರೆ. ಇವರೇ ಕಿಲಾರಿ ಕಾಯಕವನ್ನು ಮಾಡುತ್ತಾರೆ. ಕಮಲಾಪುರದಲ್ಲಿ(ಹೊಸಪೇಟೆ ತಾಲ್ಲೂಕು) ಪಾಮುಡ್ಲು ಬೆಡಗಿನವರಿಗೆ ಸಂಬಂಧಿಸಿದಂತೆ ಕಟ್ಟೆಮನೆ ಇದೆಯೆಂದು ಈ ಕಿಲಾರಿಗಳು ಹೇಳುತ್ತಾರೆ. ಈ ಪಾಮುಡ್ಲು ಬೆಡಗಿನಲ್ಲಿ ಏಳು ಉಪಬೆಡಗುಗಳಿವೆ. ಬಹುಶಃ ಏಳು ಜನ ಅಣ್ಣ-ತಮ್ಮಂದಿರಿಂದ ಏಳು ಉಪಬೆಡಗುಗಳು ಆಗಿರಬೇಕು. ಪ್ರಧಾನವಾಗಿ ಪಾಮುಡ್ಲು ಎಂದೇ ಹೇಳುತ್ತಾರೆ.

### ತಾಳಿಕಟ್ಟದ ನಲಪಾಮುಡ್ಲು ಬೆಡಗಿನವರು

ನಕ್ಕಮುತ್ತಿ ಓಬಳದೇವರಿಗೆ ಸೇರಿದ ಪೂಜಾರಿಹಳ್ಳಿ ನಲಪಾಮುಡ್ಲು ಬೆಡಗಿನವರು ಮಹೂರ್ತದ ಸಂದರ್ಭದಲ್ಲಿ ತಾಳಿಕಟ್ಟುವುದಿಲ್ಲ. ಇವರು ನಾಯಕ ಸಮುದಾಯದ ಒಂದು ಉಪಬೆಡಗು. ಈ ಬೆಡಗಿಗೆ ಸೇರಿದವರು ಬಳ್ಳಾರಿ, ಚಿತ್ರದುರ್ಗ, ದಾವಣಗೆರೆ ಜಿಲ್ಲೆಗಳಲ್ಲಿ ಕಂಡುಬರುತ್ತಾರೆ. ಈ ಬೆಡಗಿನವರು ಮದುವೆಯ ಸಂದರ್ಭದಲ್ಲಿ ಮದುವೆಯ ದಿಬ್ಬಣದ ಜೊತೆಗೆ ಮದುಮಗ ಹೋಗುವುದಿಲ್ಲ. ಅವನ ಬದಲಾಗಿ ಒಂದು ಬಿದಿರಿನ ಪುಟ್ಟಿಯಲ್ಲಿ ಬಾಕು, ಕಂಬಳಿ, ತಾಳಿ, ಕಳಿಸುವರು. ಮದುವೆಯ ದಿಬ್ಬಣದ ಜೊತೆಯಲ್ಲಿ ಹೋಗಿದ್ದ ಬಾಕುವಿಗೆ ಮದುಮಗನಂತೆ ಸಿಂಗಾರ ಮಾಡಿ, ಮುಹೂರ್ತದ ಸಂದರ್ಭದಲ್ಲಿ ತಾಳಿಯನ್ನು ಎಲ್ಲರಿಗೂ ತೋರಿಸಿ ಈ ಬಾಕುವಿನಿಂದ ಸೋದರಮಾವ ವಧುವಿಗೆ ತಾಳಿ ಕಟ್ಟಿಕೊಂಡು ಮದುಮಗನ ಊರಿಗೆ ದಿಬ್ಬಣ

ಹಿಂದಿರುಗುವುದು. ಬಾಕು ಎಂದರೆ ಮದುಮಗನ ಕೈಯಲ್ಲಿಟ್ಟುಕೊಳ್ಳುವ ವಸ್ತು. ವರನ ಮನೆಯಲ್ಲಿ ರಾತ್ರಿ ದಿಬ್ಬಣದೊಂದಿಗೆ ಬಂದ ಬಾಕುವಿಗೆ ಕಟ್ಟಿದ ತಾಳಿಯನ್ನು ಬಿಚ್ಚಿ ಮದುಮಗ ತನ್ನ ಕೈಯಿಂದ ವಧುವಿನ ಕೊರಳಿಗೆ ಕಟ್ಟುತ್ತಾನೆ. ನಂತರ ಎಲ್ಲಾ ಸಂಪ್ರದಾಯಗಳು ಈ ಸಮುದಾಯದಂತೆ ಮುಂದುವರೆಯುವೆವು. ಇದು ಹಿಂದಿನಿಂದ ನಡೆದುಕೊಂಡು ಬಂದ ಸಂಪ್ರದಾಯವಾಗಿದೆ. ತಾಳಿಕಟ್ಟದಿರಲು ಕಾರಣ ಈ ರೀತಿ ಹೇಳುತ್ತಾರೆ. ಈ ಹಿಂದೆ ಈ ಬೆಡಗಿಗೆ ಸೇರಿದ ಪಶುಪಾಲಕ ಮದುವೆಗೆ ಮುಂಚೆ ದನಕಾಯುವಾಗ ದಾರಿಯ ಪಕ್ಕದಲ್ಲಿ ಒಂದು ಹಾವು ಕಾಣುತ್ತದೆ. ಈ ಹಾವನ್ನು ಇವನು ಹೊಡೆಯಲು ಹೋಗುತ್ತಾನೆ. ಅದು ಅಲ್ಲಿಯೇ ಹತ್ತಿರ ಬಿಲಕ್ಕೆ(ಹುತ್ತ) ಹೋಗಿ ಬಿಡುತ್ತದೆ. ಆಗ ಇವನು ಆ ಬಿಲಕ್ಕೆ ಕಲ್ಲುಗಳನ್ನು ಬಡಿದಿದ್ದನಂತೆ. ಹೀಗೆ ಹಾವು ಅರ್ಧ ಏಟು ತಿಂದು ಬಿಲಕ್ಕೆ ಹೋಗಿ ಬಿಟ್ಟಿತು ಎಂದು ಇನ್ನೇನು ಸಾಯುತ್ತದೆ ಎಂದು ಮನೆಗೆ ಹಿಂತಿರುಗುವನು. ಕೆಲವು ವರ್ಷಗಳ ನಂತರ ಇವನಿಗೆ ಮನೆಯಲ್ಲಿ ಮದುವೆ ನಿಶ್ಚಯಿಸುತ್ತಾರೆ. ಮದುಮಗ ಆಗಲು ಸಂಪ್ರದಾಯದಂತೆ ಮನೆದೇವರಿಗೆ ತೆರಳುತ್ತಾನೆ. ಇವನ ಜೊತೆಯಲ್ಲಿ ಇವನ ಸಂಬಂಧಿಕರು ಹೋಗುತ್ತಾರೆ.

ಹೀಗೆ ಮದುಮಗ ಆಗಲು ಮನೆದೇವರಿಗೆ ಹೋಗುವಾಗ ನಡೆದುಕೊಂಡೆ ಹೋಗಬೇಕು, ನಡೆದುಕೊಂಡೆ ಬರಬೇಕಾಗಿತ್ತು. ಮನೆದೇವರಿಗೆ ಹೋಗಿ ಸ್ನಾನ ಮಾಡಿಸಿ ಮದುಮಗ ಮಾಡಿ, ಪೂಜಾರಿಯವರು ಎಲ್ಲಾ ನಿಯಮಗಳನ್ನು ಮಾಡಿ ಸಿಂಗರಿಸಿ ಕಳಿಸುತ್ತಾರೆ. ಹೀಗೆ ಹಿಂದಿರುಗಿ ಬರುವಾಗ ದಾರಿಯ ಪಕ್ಕದಲ್ಲಿ ಹಿಂದೆ ದನಕರುಗಳನ್ನು ಕಾಯುವಾಗ ಹುತ್ತಕ್ಕೆ ಹಾವು ಹೋಗಿದ್ದು, ಕಲ್ಲು ಜೋಡಿಸಿದ್ದು ನೆನಪಾಗಿ, ಅವನ ಜೊತೆಯಲ್ಲಿದ್ದ ಸಹೋದರರಿಗೆ ತಿಳಿಸದೆ ಆ ಹುತ್ತಕ್ಕೆ ಜೋಡಿಸಿದ ಕಲ್ಲುಗಳನ್ನು ಕೀಳುತ್ತಾನೆ. ಹೀಗೆ ಕಿತ್ತ ತಕ್ಷಣವೆ ಹಾವು ಬಂದು ಕಚ್ಚಿ ಬಿಡುತ್ತದೆ. ಈ ಮದುಮಗ ಇಲ್ಲಿಯೆ ಎಚ್ಚರ ತಪ್ಪುತ್ತಾನೆ. ಇವನ ಜೊತೆಯಲ್ಲಿರುವವರು, ಮದುವೆ ಕಾರ್ಯ ನಿಂತು ಬಿಡುತ್ತದೆ ಎಂದು ಯೋಚನೆ ಮಾಡಿ ಮದುಮಗನ ಸಾಮಗ್ರಿಗಳಾದ ಬಾಕು, ಕರಿಕಂಬಳಿ, ದಾರ ಇತ್ಯಾದಿಗಳನ್ನು ಒಬ್ಬ ತೆಗೆದುಕೊಂಡು ಹೋಗುತ್ತಾನೆ. ಅಷ್ಟರಲ್ಲಿ ಮದುವೆ ದಿಬ್ಬಣ ಸಿದ್ಧತೆ ಮಾಡಿಕೊಂಡಿರುತ್ತಾರೆ. ಮದುಮಗನಿಗೆ ಕಾಯುತ್ತಿರುವಾಗ ಇವನು ಓಡಿ ಹೋಗಿ ಯಾರಿಗೂ ಏನು ಹೇಳದೆ ಬಿದಿರುಪುಟ್ಟಿಯಲ್ಲಿ ಮದುಮಗ ಉಪಯೋಗಿಸುವ ವಸ್ತುಗಳನ್ನು ಇಡುತ್ತಾನೆ. ಇಲ್ಲಿಯೇ ಹೋಗಿದ್ದಾನೆ. ದಿಬ್ಬಣ ಹೊರಟು ಬಿಡಿ ನಾವು ಹಿಂದೆ ಬರುತ್ತೇವೆ ಎಂದು ಹೇಳಿ ಕಳಿಸುತ್ತಾನೆ. ನಂತರ ಇವನು ಮದುಮಗನ ಕಡೆ ಹಿಂದಿರುಗಿ ಓಡಿ ಹೋಗುತ್ತಾನೆ. ಅವನ ಜೊತೆಯಲ್ಲಿರುವ ಸಂಬಂಧಿಕರು ಅವನನ್ನು ಹೊತ್ತುಕೊಂಡು ಬರುತ್ತಾರೆ. ಮನೆಯ ಹತ್ತಿರ ಬರುವಷ್ಟರಲ್ಲಿ ಅಸುನೀಗಿರುತ್ತಾನೆ. ಈ ವಿಷಯ ಮದುವೆ ದಿಬ್ಬಣದ ಜೊತೆ ಹೋಗಿರುವವರೆಗೆ ತಿಳಿದಿರುವುದಿಲ್ಲ. ಇನ್ನು ಮದುಮಗ ಬರಲಿಲ್ಲ ಎಂದು ಎದುರು ನೋಡುವಾಗ ಮದಮಗನ ಜೊತೆಯಲ್ಲಿ ಹೋಗಿದ್ದ ಸಹೋದರ ಏನು ಹೇಳದೆ ಹಿಂದೆ ಬರುತ್ತಿದ್ದನು. ಮದುಮಗ ಬರಲು ತಡವಾದ್ದರಿಂದ ಅವನ ಬಾಕುವಿಗೆ ತಾಳಿಕಟ್ಟಿ ಕಾರ್ಯ ಮುಗಿಸಿ ಎಂದು

ದಿಬ್ಬಣ ಮಾತಾಡಿತು. ಆಗ ಅದರಂತೆ ತಾಳಿಯನ್ನು ಬಾಕುವಿಗೆ ಕಟ್ಟಿ ವಧುವನ್ನು ದಿಬ್ಬಣದ ಜೊತೆಗೆ ಕಳುಹಿಸಿಕೊಡಲಾಯಿತು. ದಿಬ್ಬಣ ಹಿಂತಿರುಗಿ ಹೋದಾಗ ಸತ್ಯದ ಘಟನೆ ತಿಳಿಯುತ್ತದೆ.

ಹಿಂದೆ ಇಂದಿನಂತೆ ಬೈಕ್, ಕಾರುಗಳು ಇರಲಿಲ್ಲವೆನ್ನುವುದು ಎಲ್ಲರಿಗೂ ಗೊತ್ತಿರುವ ವಿಷಯ. ಮಧುಮಗ ಆಗಬೇಕಾದರೆ ಈ ಸಮುದಾಯದಲ್ಲಿ ಮನೆ ದೇವರು ಎಷ್ಟೇ ದೂರವಿದ್ದರೂ ನಡೆದುಕೊಂಡೆ ಹೋಗಬೇಕಿತ್ತು. ಅಂದು ಕಾಡುರಸ್ತೆಗಳು, ಕಾಲುರಸ್ತೆಗಳ ಮೂಲಕ ಸಂಚರಿಸುತ್ತಿದ್ದರು. ಹೀಗೆ ಗಿಡಗಂಟಿಗಳ ಮಧ್ಯದಲ್ಲಿ ಹಾವೊಂದು ಮದುಮಗನಿಗೆ ಕಚ್ಚಿ ಅಸುನೀಗಿರಬಹುದು. ಇಲ್ಲವಾದರೆ ಜನಪದರು ಹೇಳಿರುವ ರೀತಿಯಲ್ಲಿ ಹುತ್ತದಲ್ಲಿ ಕಲ್ಲು ಕಿತ್ತಾಗ ಹಾವೊಂದು ಕಚ್ಚಿ ಆಕಸ್ಮಿಕವಾಗಿ ಅಸುನೀಗಿರಬಹುದು. ಇಲ್ಲಿ ದಾರಿ ಮಧ್ಯ ಸಂಘರ್ಷ ಉಂಟಾಗಿ ಸಾವಿಗೆ ಕಾರಣವಿರಬಹುದು. ಹಿಂದೆ ವಿಜಯನಗರದ ಅರಸರ ಪಡೆಗಳಲ್ಲಿ ನಾಯಕ ಸಮುದಾಯದವರು ಸೈನಿಕರಾಗಿ ಕರ್ತವ್ಯ ನಿರ್ವಹಿಸಿದವರು. ಹಾಗಾಗಿ ಇವರ ಯುದ್ಧಗಳಲ್ಲಿ ಅನೇಕ ಮಂದಿ ಸೈನಿಕರು ಸಾವನ್ನಪ್ಪಿದರು. ಬಹುಶಃ ಹೀಗೇನಾದರೂ ಇರಬಹುದು. ಮದುಮಗ ದಾರಿಯಲ್ಲಿ ಹೋಗುವಾಗ ಯುದ್ಧ ನಡೆದಿರಬಹುದು. ಅದರಲ್ಲಿ ಇವನು ಅನಿವಾರ್ಯವಾಗಿ ಅಸುನೀಗಿರಬಹುದು. ಒಟ್ಟಿನಲ್ಲಿ ಮದುಮಗನ ಸಾವಿನ ಸುತ್ತ ಹಲವಾರು ಕಾರಣಗಳಿರಬಹುದು. ಹೀಗೆ ಮದುವೆ ದಿಬ್ಬಣ ಸಿದ್ಧತೆಯನ್ನು ನಿಲ್ಲಿಸಬಾರದು, ನಿರಾಸೆ ಮಾಡಬಾರದೆಂದು ಕೊಟ್ಟ ಮಾತನ್ನು, ಮದುವೆಯನ್ನು ನಿಲ್ಲಿಸಬಾರದೆಂದು ಈ ರೀತಿ ಮಾಡಿರಬಹುದು.

ಅಂದಿನಿಂದ ನಲಪಾಮುಡ್ಲು ಬೆಡಗಿನವರು ಮದುವೆ ದಿಬ್ಬಣದ ಜೊತೆಗೆ ವಧುವಿನ ಊರಿಗೆ ಹೋಗದೆ, ತಾಳಿ, ಬಾಕು, ಕರಿಕಂಬಳಿಯನ್ನು ಮಾತ್ರ ಕಳಿಸುತ್ತಾರೆ. ಈ ಬಾಕು ಮದುಮಗನ ಸಂಕೇತ. ಇದರ ಮೂಲಕ ತಾಳಿ ಕಟ್ಟುವರು. ಮದುಮಗನ ಮನೆಗೆ ಹಿಂದಿರುಗಿ ಬಂದ ನಂತರ ದಿಬ್ಬಣದ ಜನರೆದುರು ವಧುವಿಗೆ ಸಂಜೆ ತಾಳಿ ಕಟ್ಟುತ್ತಾನೆ. ಈ ಸಂಪ್ರದಾಯ, ನಂಬಿಕೆಯನ್ನು ಪೂಜಾರಹಳ್ಳಿ ನಲಪಾಮುಡ್ಲು ಬೆಡಗಿನವರು ಇಂದಿಗೂ ಉಳಿಸಿಕೊಂಡು ಬಂದಿದ್ದಾರೆ. ಇತ್ತೀಚಿನ ದಿನಗಳಲ್ಲಿ ನಗರೀಕರಣದ ಪ್ರಭಾವದಿಂದ ಸಮುದಾಯಗಳಲ್ಲಿರುವ ಆಚರಣೆ, ನಂಬಿಕೆಗಳ ಮಹತ್ವ ಕಡಿಮೆಯಾಗುತ್ತಿವೆ. ಇಂದಿಗೂ ಹಟ್ಟಿಗಳಲ್ಲಿ ಸಾಂಪ್ರದಾಯಿಕ ಆಚರಣೆಗಳನ್ನು ಕಾಣಬಹುದು.

### ೫.೨. ಗೊಲ್ಲ ಸಮುದಾಯಕ್ಕೆ ಸಂಬಂಧಿಸಿದ ಐತಿಹ್ಯಗಳು

ಕಾಡುಗೊಲ್ಲರು ಹಿಂದೆ ಡೆಲ್ಲಿಯ ಬಳಿ ಪಶುಪಾಲನೆ ಮಾಡುತ್ತ ನೆಲೆನಿಂತವರು. ಈ ಸಮುದಾಯದ ಮೂಲಪುರುಷರಾದ ಅಂಬೇರಾಯ ಮತ್ತು ತುಂಬೇರಾಯರು ಸಾಧುಗಳ ರೀತಿಯಲ್ಲಿ ಜೀವನ ಸಾಗಿಸುತ್ತಿದ್ದರು. ಅವರ ವಂಶದಲ್ಲಿ ಚಂದನ ಗಂಧಿ ಎಂಬ ಹೆಣ್ಣುಮಗಳು ಇರುತ್ತಾಳೆ. ಇವಳು ಒಮ್ಮೆ ಚಂದ್ರನನ್ನು ಮೋಹಿಸಿ ಇಷ್ಟ ಪಟ್ಟು ಪಡೆದರೆ ಇಂತಹ ಗಂಡನನ್ನೇ ಪಡೆಯಬೇಕು ಎಂದು ಮನಸಿನಲ್ಲಿ ಅಂದುಕೊಳ್ಳುತ್ತಾಳೆ. ಹೀಗೆ ಒಂದು ದಿನ ಬೆಳದಿಂಗಳು

ಚಂದ್ರನನ್ನು ಮೋಹಿಸಿದರ ಫಲವಾಗಿ ಗರ್ಭಧರಿಸಿ ನವಮಾಸಗಳು ತುಂಬಿ ಒಂದು ಮಗುವನ್ನು ಪಡೆಯುತ್ತಾಳೆ. ಹೀಗೆ ಚಂದ್ರನಿಗೆ ಗರ್ಭಧರಿಸಿ ಹುಟ್ಟಿದಂತಹ ಮಗುವಿಗೆ ಚಂದ್ರಮುತ್ತಿ>ಚಂದಮುತ್ತಿ ಎಂಬ ಹೆಸರು ಬಂದಿತು ಎನ್ನಲಾಗುತ್ತಿದೆ. ಈ ಭೂಲೋಕದಲ್ಲಿ ಚಂದ್ರನಿಗೆ ಗರ್ಭಧರಿಸುವುದುಂಟೆ ಎಂದು ಜನರು ಮಾತನಾಡಿಕೊಳ್ಳುತ್ತಿದ್ದರು. ಚಂದನಗಂಧಿ ಚಂದ್ರನಿಂದ ಗರ್ಭ ಧರಿಸಿದ್ದರ ಬಗ್ಗೆ ಕುತೂಹಲಗೊಂಡು ಹಿರಿಯರು ಒಂದು ಹಸುವಿನ ಕರುವನ್ನು ನೆಲಮಾಳಿಗೆಯಲ್ಲಿ ಕೂಡಿ, ಅದರ ಮೇಲೆ ಸೂರ್ಯನ ಕಿರಣಗಳನ್ನು ಬೀಳುವಂತೆ ಮಾಡಿದರು. ಹೀಗೆ ಸೂರ್ಯನ ಕಿರಣಗಳಿಂದ ಕರುವು ಗರ್ಭಧರಿಸಿ ಒಂದು ಗಂಡು ಮಗುವಿಗೆ ಜನ್ಮ ನೀಡಿತು. "ಸೂರ್ಯನ ಅಂಶದಿಂದ ಹುಟ್ಟಿದ್ದರಿಂದ ಈ ಮಗುವಿಗೆ ಚಿತ್ತಮುತ್ತಿ(ಚಿತ್ರಮೂರ್ತಿ) ಎಂಬ ಹೆಸರಿಟ್ಟರು. ಚಂದನಗಂಧಿಗೆ ಮದುವೆ ಮಾಡಿದರು. ಅವಳು ತನ್ನ ಗಂಡನಿಂದ ಒಂದು ಹೆಣ್ಣು ಮಗುವನ್ನು ಪಡೆದಳು. ಕೆಲವು ವರ್ಷಗಳು ಕಳೆದ ನಂತರ ಚಿತ್ತಮುತ್ತಿ ಮತ್ತು ಚಂದಮುತ್ತಿ ಇವರು ಗೆಳೆಯರಾದರು. ಆದಿಶೇಷನ ಮಗಳಾದ ಬಾಲನಾಗಮ್ಮನನ್ನು ಚಂದಮುತ್ತಿ ಮದುವೆಯಾದ. ಚಂದನಗಂಧಿಯ ಮಗಳನ್ನು ಚಿತ್ತಮುತ್ತಿ ಮದುವೆಯಾದ. ಇವರು ಸುಖವಾಗಿ ಬಾಳುತ್ತ ಮಕ್ಕಳನ್ನು ಪಡೆದರು".[೨] ಇವರು ದೊಡ್ಡವರಾದ ಮೇಲೆ ತಮ್ಮ ಮೂಲವೃತ್ತಿಯಲ್ಲಿ ತೊಡಗಿದರು. ಮಕ್ಕಳು ಕೂಡ ಹಾಲು, ಮೊಸರು ಮಾರಲು ಆರಂಭಿಸಿದರು. ಚಿತ್ತಮತ್ತಿ ಮತ್ತು ಚಂದಮುತ್ತಿಗೆ ಹೆಣ್ಣುಮಕ್ಕಳಾದರು. ಇವರು ದೊಡ್ಡವರಾದ ಮೇಲೆ ಹಾಲು, ಮೊಸರುಗಳನ್ನು ಗಡಿಗೆಗಳಲ್ಲಿ ತುಂಬಿಕೊಂಡು ತಲೆಯ ಮೇಲೆ ಹೊತ್ತು ಡೆಲ್ಲಿಯ ಪಟ್ಟಣದಲ್ಲಿ ಮಾರಾಟ ಮಾಡಲು ತೊಡಗಿದರು. ಇವರು ನೋಡಲು ಸುಂದರವಾಗಿದ್ದರು. ಒಂದು ಸಲ ಮಡಿಕೆಗಳಲ್ಲಿ ಹೊತ್ತುಕೊಂಡು ರಾಜಬೀದಿಯಲ್ಲಿ ಬರುವಾಗ ದಿಲ್ಲಿಯ ನವಾಬ ಇವರ ಸೌಂದರ್ಯದಿಂದ ಮೋಹಿತನಾದನು. ನಂತರ ಮನೆಗೆ ಹಿಂದಿರುಗಿದ ಮೇಲೆ ನವಾಬ ಮಂತ್ರಿಯನ್ನು ಕರೆದು ಕೇಳಿದನು. ಹಾಲು, ಮೊಸರು ಮಾರುತ್ತ ಬರುವ ಯುವತಿಯರು ಯಾರು ಎಂದು ಪ್ರಧಾನಿ ದೊಡ್ಡ ನಾಯಕನನ್ನು ಕೇಳಿದ. ದೊಡ್ಡನಾಯಕ ನವಾಬನಿಗೆ ಅವರು ಕಾಡುಗೊಲ್ಲರಾದ ಚಿತ್ತಮುತ್ತಿ, ಚಂದ್ರಮುತ್ತಿಯವರ ಮಕ್ಕಳೆಂದು ತಿಳಿಸಿದ. ನವಾಬ ಆ ಹೆಣ್ಣುಮಕ್ಕಳನ್ನು ಹೇಗಾದರೂ ಮಾಡಿ ತನ್ನ ವಶಪಡಿಸಿ ಕೊಳ್ಳಬೇಕೆಂದು ನಿರ್ಧರಿಸಿ, ಅವರನ್ನು ಪಡೆಯಲು ಬಗೆ ಬಗೆಯ ತಂತ್ರೋಪಾಯ, ಉಪಾಯಗಳನ್ನು ಮಾಡಿದ. ಆದರೂ ಆ ಹೆಣ್ಣುಮಕ್ಕಳು ಇವನ ವಶವಾಗಲಿಲ್ಲ. ಒಂದು ದಿನ ಇವರನ್ನು ಹಿಂಬಾಲಿಸಿದನು. ನವಾಬ ಚಿತ್ತಮುತ್ತಿ, ಚಂದಮುತ್ತಿ ಅವರ ಬಳಿಗೆ ಹೋಗಿ ನಿಮ್ಮ ಹೆಣ್ಣುಮಕ್ಕಳನ್ನು ತನಗೆ ಮದುವೆ ಮಾಡಿಕೊಡಿ ಎಂದು ಕೇಳಿದ. ಅದಕ್ಕೆ ಅವರು ಹಾಲಿನಂಥ ಪರಿಶುದ್ಧವಾದ ಕುಲದವರಾದ ನಾವು ತುರುಕರೊಡನೆ ಸಂಬಂಧ ಬೆಳೆಸಿ ನೀರು ಪಾಲು ಮಾಡಲು ನಾವು ಅವಕಾಶ ಕೊಡುವುದಿಲ್ಲ ಎಂದು ಹೇಳಿದರು. ಇದಕ್ಕೆ ನವಾಬನಿಗೆ ಕೋಪ ಬಂದು ಈ ಹೆಣ್ಣುಮಕ್ಕಳು ಪೇಟೆಗೆ ಬಂದಾಗ ಅವರನ್ನು ತನ್ನ ಕೊಠಡಿಯಲ್ಲಿ ಬಂಧಿಸಿದನು. ಆದರೆ ಈ ಹೆಣ್ಣುಮಕ್ಕಳು ಅಲ್ಲಿಂದ ಹೇಗೋ ತಪ್ಪಿಸಿಕೊಂಡು ಮನೆಗೆ ಬಂದರು. ಪೇಟೆಯಲ್ಲಿ

ನಡೆದ ವಿಷಯವನ್ನು ತಮ್ಮ ತಂದೆಯವರಿಗೆ ತಿಳಿಸಿದರು. ಆಗ ಚಂದಮುತ್ತಿ ಚಿತ್ತಮುತ್ತಿ ಇಬ್ಬರು ಯೋಚಿಸಿ ನವಾಬನನ್ನು ವಿರೋಧ ಕಟ್ಟಿಕೊಂಡರೆ ತಮಗೆ ಉಳಿಗಾಲವಿಲ್ಲವೆಂದು ಅರಿತುಕೊಂಡು, ಅಲ್ಲಿಂದ ಹದಿನೆಂಟು ಜಾತಿ ಹನ್ನೆರಡು ಕೈವಾಡದವರೊಡನೆ ತಮ್ಮ ದನಕರುಗಳನ್ನೆಲ್ಲಾ ಜೊತೆಯಲ್ಲಿಯೇ ಕರೆದುಕೊಂಡು ಬರುವಾಗ ಹದ್ದು ಕಾಗೆಗಳನ್ನು ಕೂಡ ತಮ್ಮೊಡನೆ ಕರೆದುಕೊಂಡು ದಕ್ಷಿಣದ ಕಡೆಗೆ ವಲಸೆ ಬಂದರು. ಹೀಗೆ ದಾರಿಯುಲ್ಲಿ ಬರುವಾಗ ನದಿ ಅಡ್ಡವಾಯಿತು. ಅವರಿಗೆ ಈ ನದಿಯನ್ನು ದಾಟಲು ಕಷ್ಟವಾಯಿತು. ಆಗ ಡೆಲ್ಲಿಯ ನವಾಬ ಪೇಟೆಯಲ್ಲಿ ಹೆಣ್ಣುಮಕ್ಕಳು ಕಾಣದಿದ್ದರಿಂದ ಅವರನ್ನು ಹುಡುಕುತ್ತ, ಮಂದೆಯ ಬಳಿ ತೆರಳಿ ಅಲ್ಲಿ ಇಲ್ಲದಿರುವುದನ್ನು ಕಂಡು, ಇವನ ದಂಡು ಸಮೇತ ಇವರನ್ನು ಬೆನ್ನಟ್ಟಿ ಬರುತ್ತಿದ್ದರು. ಆದ್ದರಿಂದ ಚಿತ್ತಮುತ್ತಿ ಮತ್ತು ಚಂದ್ರಮುತ್ತಿಯವರು ಹಿಂತಿರುಗಿ ಹೋಗುವಂತಿರಲಿಲ್ಲ. ಹೀಗೆ ನದಿಯ ಬಳಿಯೇ ಭಕ್ತಿಯಿಂದ ಕೈಮುಗಿದು ನದಿಗೆ ಪೂಜೆ ಮಾಡಿದರು. ಅಷ್ಟರಲ್ಲಿ ಜಲ್ದ ಬಪ್ಪರಾಯ ಎಂಬುವನು ತನ್ನ ತಲೆಯನ್ನು ಕತ್ತರಿಸಿ ನದಿಗೆ ಪೂಜೆ ಮಾಡಿದ. ಆಗ ಗಂಗೆಯನ್ನು ನೆನೆದು ನಮಗೆ ಹೋಗಲು ದಾರಿ ಕೊಡಿ ಎಂದಾಗ ನದಿ ಎರಡು ಭಾಗವಾಗಿ ಮಧ್ಯದಲ್ಲಿ ದಾರಿ ಬಿಟ್ಟಿತು. ಹೀಗೆ ಎಲ್ಲರೂ ನದಿ ದಾಟಿದರು. ಇವರು ನದಿ ದಾಟಿದ ನಂತರ ನದಿ ಪುನಃ ಕೂಡಿಕೊಂಡಿತು. ಅನಂತರ ನವಾಬರ ಸೈನಿಕರಿಗೆ ನದಿ ಅಡ್ಡವಾದುದರಿಂದ ಅವರು ಅದನ್ನು ದಾಟಲಾರದೆ ಹಿಂತಿರುಗಿ, ಹೋಗಬೇಕಾಯಿತು. ಜಲ್ದಿ ಬಪ್ಪರಾಯನ ಭಕ್ತಿಗೆ ಮೆಚ್ಚಿದ ಗಂಗಾದೇವಿ ಅವನನ್ನು ಪುನಃ ಬದುಕಿಸಿದಳು. ಇದೇ ತರಹ ಗಾದ್ರಿಪಾಲನಾಯಕನ ಚರಿತ್ರೆಗೆ ಸಂಬಂಧಿಸಿದ ಐತಿಹ್ಯವಿದೆ. ಗಾದ್ರಿಪಾಲನಾಯಕನ ಸಹಚರರು ಹುಲಿಮರಿಗಳನ್ನು ಕತ್ತರಿಸಿದ ಮೇಲೆ ಅಲ್ಲಿಂದ ಪಯಣ ಬೆಳೆಸಿದರು. ಬರುವಾಗ ವೇದಾವತಿ ನದಿ ಅಡ್ಡವಾದುದರಿಂದ ಇವನ ಭಕ್ತಿಗೆ ಮೆಚ್ಚಿ ನದಿ ಎರಡು ಭಾಗವಾಗಿ ಮಧ್ಯದಲ್ಲಿ ಜಾಗ ಬಿಡುತ್ತದೆ. ನಂತರ ನದಿ ದಾಟಿದ ಮೇಲೆ ನದಿ ಕೂಡಿಕೊಳ್ಳುತ್ತದೆ. ಜಲ್ದಿ ಬಪ್ಪ ರಾಯಪ್ಪ ಮಾಡಿದ ಉಪಕಾರವನ್ನು ಸ್ಮರಿಸುವ ಉದ್ದೇಶದಿಂದ ಕಾಡುಗೊಲ್ಲರು ತಮ್ಮ ಮದುವೆ ಸಂದರ್ಭದಲ್ಲಿ ಈತನ ಹೆಸರಿನಲ್ಲಿ ಒಂದು ವೀಳ್ಯವನ್ನು ಎತ್ತುವುದಾಗಿ ಅವನಿಗೆ ಭಾಷೆ ಕೊಟ್ಟರು.

ಈ ಮೇಲಿನ ಐತಿಹ್ಯವನ್ನು ಗಮನಿಸಿದಾಗ ಇದೊಂದು ಸೃಷ್ಟಿ ಮೂಲ ಪುರಾಣವಾಗಿದ್ದು, ಚಂದ್ರನನ್ನು ಕಾಮಿಸಿದ ಚಂದನಗಂಧಿ ಎಂಬ ಹೆಣ್ಣು ಮಗಳು ಚಂದಮುತ್ತಿ ಎಂಬ ಮಗಳನ್ನು ಪಡೆಯುತ್ತಾಳೆ. ಇಲ್ಲಿ ಚಂದ್ರಮುತ್ತಿ ಎಂದು ಇಡಬಹುದಾಗಿತ್ತು. 'ಚಂದಮುತ್ತಿ' ಎಂಬುದು ಬೇರೆ ಹೆಸರು ಇರಬಹುದು. ಇವರ ಹೆಣ್ಣು ಮಕ್ಕಳು ದೊಡ್ಡವರಾಗಿ ಡೆಲ್ಲಿಯ ನಗರದಲ್ಲಿ ಹಾಲು, ಮೊಸರು ಮಾರಾಟ ಮಾಡುವಾಗ ಡೆಲ್ಲಿ ನವಾಬನು ಇವರ ಸೌಂದರ್ಯಕ್ಕೆ ಮನಸೋತು ಮೋಹಿತನಾಗಿ ಅವರನ್ನು ಪಡೆಯಲು ಉಪಾಯ ಮಾಡಿ ವಿಫಲನಾಗುತ್ತಾನೆ. ಇದನ್ನು ತಿಳಿದ ಗೊಲ್ಲ ಸಮುದಾಯದ ಹಿರಿಯರು ನವಾಬನಿಂದ ತಮ್ಮ ಕುಲಕ್ಕೆ ಕೇಡಾಗುವುದೆಂದು ಡೆಲ್ಲಿಯನ್ನು ತೊರೆದು ತಮ್ಮ ಪರಿವಾರ ಸಮೇತ ದಕ್ಷಿಣದ ಕಡೆಗೆ ಚಲಿಸಿತು. ತಮ್ಮ ಹೆಣ್ಣು

ಮಕ್ಕಳ ರಕ್ಷಣೆ, ಗೋ ಸಂಪತ್ತು, ಸಮುದಾಯದ ರಕ್ಷಣೆಗಾಗಿ ಡೆಲ್ಲಿಯನ್ನು ತೊರೆದು ನರ್ಮದಾ ನದಿಯನ್ನು ದಾಟಿ ತುಂಗಾಭದ್ರಾ ನದಿಯ ಆಸುಪಾಸಿನಲ್ಲಿ ಬಂದು ನೆಲೆನಿಂತರು ಎಂದು ಐತಿಹ್ಯ ಹೇಳುತ್ತದೆ.

ಮಹಿಳೆಯೇ ಇಲ್ಲಿ ಆರ್ಥಿಕ ಕ್ಷೇತ್ರದಲ್ಲಿ ಭಾಗಿಯಾಗಿರುವುದು ಕಂಡುಬರುತ್ತದೆ. ಅಂತೆಯೇ ಅವಳಿಗೆ ಆ ಕ್ಷೇತ್ರದಲ್ಲಿ ಅವಳು ಅನ್ಯಪುರುಷರ ಕಣ್ಣಿಗೆ ಗುರಿಯಾಗಿರುವ ಪ್ರಸಂಗವು ಕಂಡುಬರುತ್ತದೆ. ಈ ಐತಿಹ್ಯದಲ್ಲಿ ವರ್ಗ ಸಂಘರ್ಷದ ನೆಲೆಗಳು ಕಂಡುಬರುತ್ತವೆ. ನವಾಬನು ಡೆಲ್ಲಿಯ ಅರಸನಾಗಿದ್ದು ಅವನು ಗೊಲ್ಲತಿಯರಿಗೆ ಮೋಹಿತನಾಗಿ ಅವರನ್ನು ಪಡೆಯಲೇಬೇಕೆಂಬ ನಿರ್ಧಾರಕ್ಕೆ ಬಂದು ಊರ ದಿಡ್ಡಿ ಬಾಗಿಲನ್ನು ಹಾಕಿಸಿ ತಡೆದಿರುವುದು ರಾಜಪ್ರಭುತ್ವದ ವ್ಯವಸ್ಥೆಯೊಂದರಲ್ಲಿ ಶೋಷಣೆಯ ನೆಲೆಗಳು ಕಾಣಿಸಿಕೊಳ್ಳುತ್ತವೆ.

## ಕರಡಿ ಗೊಲ್ಲರಿಗೆ ಸಂಬಂಧಿಸಿದ ಐತಿಹ್ಯ

ಕಾಡುಗೊಲ್ಲರಲ್ಲಿ ಮುಖ್ಯವಾಗಿ ಮೂರು ಒಳಪಂಗಡಗಳು ಕಂಡುಬರುತ್ತವೆ. ಅವು ಚಿತ್ತಮುತ್ತಿ, ಚಂದ್ರಮುತ್ತಿ ಮತ್ತು ರಾಮೇಗೌಡ ಕುಲದವರು. ಇವುಗಳಲ್ಲಿ ಚಿತ್ತಮುತ್ತಿ ಕುಲದಲ್ಲಿ ಕರಡಿಗೊಲ್ಲರು ಮತ್ತು ಮೊರನವರು ಮುಖ್ಯವಾದ ಬೆಡಗುಗಳು. ಚಿತ್ತಮುತ್ತಿ, ಚಂದಮುತ್ತಿ ಅಣ್ಣತಮ್ಮಂದಿರು ಮುಖ್ಯವಾಗಿ ಪಶುಪಾಲನೆ ಮಾಡಿಕೊಂಡಿದ್ದರು. ಚಂದ್ರಮುತ್ತಿ ಮಗಳೇ ಕಾಟಮ್ಮ. ಈಕೆಯನ್ನು ಸೋದರ ಮಾವನಾದ ಮಾರನಿಗೆ ಕೊಡಬೇಕೆನ್ನುವ ಮಾತಾಗಿತ್ತು. ಒಮ್ಮೆ ಪೇಟೆಗೆ ಮೊಸರು ಮಾರಲು ಹೋಗಿದ್ದ ಕಾಟಮ್ಮ ಹಿಂದಿರುಗುವಾಗ ದಾರಿಯಲ್ಲಿ ಕರಡಿವೊಂದು ಅಡ್ಡಹಾಕುತ್ತದೆ. ಆಕೆಯನ್ನು ಈ ಕರಡಿ ಹೊತ್ತುಕೊಂಡು ಹೋಗಿ ಗವಿಯಲ್ಲಿ ಕೂಡಿ ಹಾಕಿ ತನ್ನನ್ನೇ ಮದುವೆಯಾಗುವಂತೆ ಪಟ್ಟು ಹಿಡಿಯಿತು. ಹೀಗೆ ಕರಡಿ ಬೆಳಿಗ್ಗೆ ಎದ್ದು ಆಹಾರಕ್ಕಾಗಿ ಹೋಗುವಾಗ ಗವಿಗೆ ಗುಂಡು ದಬ್ಬಿ ಹೋಯಿತು. ಕಾಟಮ್ಮನಿಗೋಸ್ಕರ ಹುಡುಕುತ್ತಿದ್ದ ಮಾರಣ್ಣನಿಗೆ ಆಕಸ್ಮಾತ್ ಸುಳಿವು ಸಿಕ್ಕು, ಗವಿಯ ಒಳಹೊಕ್ಕು ಕರಡಿ ಮರಿಗಳನ್ನು ಕೊಂದು ಕಾಟಮ್ಮನನ್ನು ಕರೆದುಕೊಂಡು ಬಂದು ಮದುವೆಯಾಗುತ್ತಾನೆ. ಹುಟ್ಟಿದ ಮಕ್ಕಳೆಲ್ಲ ಕರಡಿ ಆಕಾರದಲ್ಲಿ ಹುಟ್ಟಿ ತೊಡಗಿದ್ದರಿಂದ, ದೇವರನ್ನು ಕೇಳಿದಾಗ ಕರಡಿಯನ್ನು ಕೊಂದ ಪಾಪದಿಂದ ಹೀಗಾಗಿದೆ. ಹುಟ್ಟುವ ಮಕ್ಕಳಿಗೆ ಕರಡಿಯ ಹೆಸರು ಇಡಿ ಶಾಪವಿಮೋಚನೆಯಾಗುತ್ತದೆ ಎಂದು ಮುಂದಿನ ಪೀಳಿಗೆಗೆ ಕಲ್ಡೆಪ್ಪ, ಕಲ್ಡಿದೊಡ್ಡ, ಕಲ್ಡಿಮಾರ, ಕರಡಿಬುಳ್ಳ ಇತ್ಯಾದಿ ಹೆಸರಿಟ್ಟರು. ಇವರ ಸಂತತಿಗೆ ಕಲ್ಡೇರಗೊಲ್ಲರು ಎಂದು ಹೆಸರಾಯಿತು.

## ತಾಳಿಕಟ್ಟದ ಗೊಲ್ಲರು

ಕರಡಿ ಗೊಲ್ಲರಲ್ಲಿ ತಾಳಿಕಟ್ಟದ ಬೆಡಗಿನ ಐತಿಹ್ಯ ತುಂಬಾ ಸ್ವಾರಸ್ಯಕರವಾಗಿದೆ. ಹರ್ತಿಕೋಟೆ ಪಾಳೆಯಗಾರರ ಮಗಳು ಕರಿಯೋಬಿ ಎಂಬುವವಳು ಒಗಟನ್ನು ಒಡ್ಡುತ್ತಾಳೆ. “ಕಪ್ಪೆಕಲಕದ ನೀರು, ಬಿಸಿಲಿಗೆ ಬಾಡದ ಹೂವು, ನಾಲ್ಕು ಪಣಿಸ ಹಸಿರು ಕಲ್ಲಕಂಭ, ತಲೆಗೆ ಮೆತ್ತಲೆ ಕಲ್ಲು,

ಕಾಯಿಸದೆ ಆಗಿರೋ ತುಪ್ಪ, ಒಂಟಿ ಕೊಂಬಿನ ಮೇಕೆಯ ಹೋತು ತಂದುಕೊಟ್ಟವನಿಗೆ ವಿವಾಹವಾಗ್ತೀನಿ. ಈ ಒಗಟು ಬಿಡಿಸದೆ ಸೋತವರು ಸಾವಿರ ವರಹ ದಂಡ ಕೊಡಬೇಕು ಎಂಬ ಕರಾರು ಹಾಕಿ ಪಶುಪಾಲಕರಿಂದ ಸೋಲಿಸಿ ಏಳು ಕೊಪ್ಪರಿಕೆ ಹೊನ್ನು ಸಂಪಾದಿಸಿದ್ದಳು. ಒಗಟನ್ನು ಒಡ್ಡಿ ಸೋತವರಿಂದ ಪಶುಸಂಪತ್ತನ್ನು ವಶಪಡಿಸಿಕೊಳ್ಳುವುದು ಇವಳ ಉದ್ದೇಶವಿರುತ್ತದೆ.

ಕರಡಿ ಬುಳ್ಳಣ್ಣ ಇಂಥ ಸಾವಿರ ಒಗಟು ನನ್ನ ತಲೆಯಲ್ಲಿವೆ. ಕಪ್ಪೆ ಕಲಕದ ನೀರು ಅಂದರೆ ಏಳನೀರು, ಬಿಸಿಲಿಗೆ ಬಾಡದ ಹೂ ಅಂದರೆ ನವಿಲುಗರಿ, ನಾಲ್ಕು ಏಣಿನ ಹಸಿರು ಕಲ್ಲಕಂಭ ಅಂದರೆ ಮುಂಗಾರುಬಳ್ಳಿ, ತಲೆಗೆ ಮೆತ್ತನೆಕಲ್ಲು ಎಂದರೆ ತೋಳುದಿಂಬು. ಕಾಯಿಸದೆ ಆಗಿರೋ ತುಪ್ಪ ಎಂದರೆ ಜೇನುತುಪ್ಪ, ಒಂಟಿಕೊಂಬಿನ ಮೇಕೆ-ಹೋತ ಎಂದರೆ ಕೋಳಿ, ಹುಂಜ ಎಂದು ಒಗಟು ಬಿಡಿಸಿದ. ಆಗ ಇವಳು ಮದುವೆಯಾಗು ಎಂದು ಬೆನ್ನು ಬಿದ್ದಳು. ಆದರೆ ಅಷ್ಟೊತ್ತಿಗೆ ಕರಡಿ ಬುಳ್ಳಣ್ಣನಿಗೆ ಮದುವೆಯಾಗಿತ್ತು. ಬಾಲಮ್ಮ-ನಾಗಮ್ಮ ಅಂತ ಇಬ್ಬರು ಹೆಂಡರಿದ್ದರು. ಅವರನ್ನು ಒಪ್ಪಿಸಿ ಮದುವೆಯಾದಳು ಕರಿಯೋಬಿ. ಕರಿಯೋಬಿ ಬಂದು ನೆಲೆಸಿದ ಈ ಹಟ್ಟಿ ನಂತರ ಕರಿಯೋಬಿನಹಳ್ಳಿ ಎಂದೂ ಹೆಸರಾಯಿತು.

ಈಕೆಗೆ ತನ್ನ ತಂದೆಯರು ಮೂನ್ನೂರು ಎಕರೆ ಭೂಮಿಯನ್ನು ಉಡುಗೊರೆ ರೂಪದಲ್ಲಿ ಕೊಟ್ಟಿದ್ದರೆಂದು ಜನಪದರು ಹೇಳುತ್ತಾರೆ. ವಯಸ್ಸಾದ ಮೇಲೆ ಕರಿಯೋಬಿ ಇಲ್ಲಿಯೇ ಕೊನೆಯುಸಿರು ಎಳೆಯುತ್ತಾಳೆ. ಊರಿನ ಹೊರವಲಯದಲ್ಲಿ ಈಕೆಯನ್ನು ಸಮಾಧಿ ಮಾಡಿದ್ದಾರೆ. ಹಬ್ಬ, ಜಾತ್ರೆಗಳ ಸಂದರ್ಭದಲ್ಲಿ ಸಮಾಧಿಗೆ ಪೂಜೆ ಮಾಡಿ ಎಡೆಹಾಕುವರು. ಆದರೆ ಕರಿಯೋಬಿಗೆ ಮಕ್ಕಳಾಗಲಿಲ್ಲ. ಇನ್ನೊಬ್ಬ ಹೆಂಡತಿ ನಾಗಮ್ಮನಿಗೂ ಮಕ್ಕಳಿರಲಿಲ್ಲ. ಬಾಲಮ್ಮನಿಗೆ ಚಿತ್ತಮುತ್ತಿ, ಮಾರಾಮುತ್ತಿ ಅಂತ ಇಬ್ಬರು ಗಂಡು ಮಕ್ಕಳಿದ್ದರು. ಹಿರಿಯವನಾದ ಚಿತ್ತಮುತ್ತಿಯನ್ನು ದತ್ತು ತೆಗೆದುಕೊಂಡಳು. ಅವನು ದೊಡ್ಡವನಾದ ಮೇಲೆ ಅವನಿಗೆ ನಾಯಕ ಸಮುದಾಯದಲ್ಲಿ ಹೆಣ್ಣು ತೆಗೆದು ಮದುವೆ ಮಾಡುತ್ತಾಳೆ. ಇಬ್ಬರಿಗೂ ಏಳೇಳು ಮಕ್ಕಳಾಗಿ ಅವರೂ ವಯಸ್ಸಿಗೆ ಬಂದು ಅವರಿಗೂ ಮದುವೆಯಾಗಿ ತಲಾ ಏಳೇಳು ಮಂದಿ ಸೊಸೆಯರು ಮನೆಗೆ ಬರುತ್ತಾರೆ. ಒಮ್ಮೆ ಈ ಗ್ರಾಮಕ್ಕೆ ವ್ಯಾಪಾರಕ್ಕೆಂದು ಬಂದ ಮುತ್ತಿನಶೆಟ್ಟಿಯ ಬಳಿಯಿದ್ದ ಮುತ್ತಿನವಸ್ತ್ರ ಕಂಡು ನಮ್ಮತ್ತೆ ಏಳು ಕೊಪ್ಪರಿಕೆ ವರಹ ಸಂಪಾದಿಸಿದ್ದರೇನು. ಇಂಥ ಮುತ್ತಿನ ವಸ್ತ್ರ ಸಂಪಾದಿಸಿಲ್ಲ ಎಂದೂ ಹೀಗೆ ಹಾಸ್ಯ ಮಾಡಿದರು. ಕರಿಯೋಬಿ ಮಕ್ಕಳ ಬಳಿ ದುಃಖ ತೋಡಿಕೊಂಡಳು. ಅಷ್ಟರಲ್ಲಿ ಮುತ್ತಿನಶೆಟ್ಟಿ ಬೆಲೆಬಾಳುವ ತನ್ನ ವಸ್ತ್ರಕೊಳ್ಳುವವರಿಲ್ಲದೆ ಬೇರೆ ಊರಿಗೆ ಹೋಗುತ್ತಿದ್ದ. ಕರಿಯೋಬಿಯ ಮಕ್ಕಳು ಶೆಟ್ಟಿಯನ್ನು ತಡೆದು ಮುತ್ತಿನ ವಸ್ತ್ರಗಳನ್ನು ಅಪಹರಿಸಿ ತಂದರು. ಶೆಟ್ಟಿ ಪಂಚಾಯಿತಿಗೆ ಹಾಕಿಸಿದ ಇವರು ದಂಡಕ್ಕೊಳಗಾಗಿ ತಮ್ಮಲ್ಲಿರುವ ಸಮವಸ್ತ್ರವನ್ನು ಕಟ್ಟಿಕೊಟ್ಟರು. ಅದು ಸರಿತೂಗದೆ ಕರಿಯೋಬಿಯ ದತ್ತು ಮಗ ಚಿತ್ತಮುತ್ತಿಯ ಸೊಸೆಯರೆಲ್ಲ ತಮ್ಮ ಕೊರಳ ಮಾಂಗಲ್ಯ ತೆಗೆದುಕೊಟ್ಟರು, ಸಮನಾಗಲಿಲ್ಲ. ಆದರೆ ಮಾರಮುತ್ತಿಯ ಸೊಸೆಯರೆಲ್ಲ

ಮಾಂಗಲ್ಯ ತೆಗೆಯಲು ನಿರಾಕರಿಸಿದರು. ಇದೇ ಕಾರಣವಾಗಿ ಅಸಮಾಧಾನಗಳು ಬೆಳೆದು ಅಣ್ಣ-ತಮ್ಮಂದಿರು ಬೇರೆಯಾದರು. ದಂಡಕ್ಕೊಳಗಾಗಿ ತಾಳಿ ತೆಗೆದವರು ಮುಂದೆ ಮದುವೆಯಲ್ಲಿ ತಾಳಿಕಟ್ಟುವ ಸಂಪ್ರದಾಯವನ್ನೇ ತೊರೆದು ತಾಳಿಕಟ್ಟದ ಗೊಲ್ಲರಾದರು. ಇವರನ್ನು ಚಿತ್ತಗೊಲ್ಲರು ಎಂದೇ ಕರೆಯಲಾಗುತ್ತದೆ.

ತಾಳಿ ತೆಗೆಯಲು ನಿರಾಕರಿಸಿದವರು ತಾಳಿಕಟ್ಟುವ ಸಂಪ್ರದಾಯ ಮುಂದುವರಿಸಿಕೊಂಡು ಹೋಗಿ ತಾಳಿಕಟ್ಟುವ ಗೊಲ್ಲರು ಆದರು. ತಾಳಿಕಟ್ಟುವ ಇವರು ಮಾರಮುತ್ತಿ ಗುಂಪಿಗೆ ಸೇರಿದವರಾದುದರಿಂದ ಇವರನ್ನು 'ಮಾರನೋರ' ಗೊಲ್ಲರು ಎಂದು ಕರೆಯುತ್ತಾರೆ. ಈ ಎರಡು ಗುಂಪುಗಳ ಮಧ್ಯೆ ಹೊಂದಾಣಿಕೆ ತಪ್ಪಿದ್ದರಿಂದ ತಮ್ಮ ಕಟ್ಟೆ ಮನೆಗಳನ್ನೇ ಬೇರೆ ಬೇರೆ ಮಾಡಿಕೊಂಡರು. ತಾಳಿ ಕಟ್ಟದವರಿಗೆ ಕರಿಯೋಬಿನಹಳ್ಳಿಯೇ ಕಟ್ಟೆ ಮನೆಯಾಗಿ ಮುಂದುವರೆದರೆ, ತಾಳಿ ಕಟ್ಟುವವರು ಬೇವಿನಹಳ್ಳಿಯನ್ನು ಹೊಸ ಕಟ್ಟೆ ಮನೆಯಾಗಿ ಮಾಡಿಕೊಡರು. ತಾಳಿಕಟ್ಟದ ಗೊಲ್ಲರ ಕೋಮು ಹುಟ್ಟಿಗೆ ಕಾರಣಳಾದ ಬೇಡರ ಕರಿಯೋಬಜ್ಜಿ ಅಲ್ಲೇ ಸತ್ತು ಮಣ್ಣಾದಳು. ಇಂದಿಗೂ ಕರಿಯೋಬಿಯ ಗುಡ್ಡೆ(ಸಮಾಧಿ)ಯನ್ನು ಹೊರವಲಯದಲ್ಲಿ ನೋಡಬಹುದು. ಇಲ್ಲಿ ಬೇವಿನಮರ ಇದೆ. ಇಲ್ಲಿ ದಸರ, ಯುಗಾದಿ ಸಂದರ್ಭಗಳಲ್ಲಿ ಈ ಸಮಾಧಿಗೆ ಪೂಜೆ ಮಾಡಿ ಹೊಸ ಬಟ್ಟೆ ಏರಿಸುವರು.

**ಎತ್ತಪ್ಪ**

ಎತ್ತಪ್ಪ ಕಾಡುಗೊಲ್ಲರ ಪ್ರಮುಖ ಪಶುಪಾಲಕ. ಇವನು ಪಶುಪಾಲನ ಸಂಸ್ಕೃತಿ ಹಿನ್ನೆಲೆಯಲ್ಲಿ ಬಂದವನು. ಈತನ ಬಗೆಗೆ ಐತಿಹ್ಯ ಹೀಗಿದೆ. ಎತ್ತಪ್ಪನ ಹೆಸರೇ ಸೂಚಿಸುವಂತೆ ಇವನ 'ಎತ್ತು' ಎಂದರೆ ಗೋವುಗಳನ್ನು ಕಾಯುವ ಗೋಪಾಲಕ. ಒಮ್ಮೆ ಗೌರಸಮುದ್ರ ಮಾರಮ್ಮ ದನಗಳನ್ನು ಕಾಯಲು ಕೈಲಾಸದಿಂದ ಕರೆತರುವ ವ್ಯಕ್ತಿಯೇ ಈ ಎತ್ತಪ್ಪ. ಇವನು ದನಗಳ ಪಾಲನೆ, ಪೋಷಣೆಯಲ್ಲಿ ತೊಡಗಿರುತ್ತಾನೆ. ಸದಾ ನಾಗರಿಕ ಜೀವನದಿಂದ ದೂರವೇ ಉಳಿದಿರುತ್ತಾನೆ. ಒಮ್ಮೆ ಕುರುಬರು ಕಂಬಳಿ ಹಾಕಿಕೊಂಡು ವ್ಯಾಪಾರಕ್ಕೆಂದು ಹೊರಟಿದ್ದಾಗ ದಾರಿ ಮಧ್ಯ ಎತ್ತಯ್ಯನು ಕಾಣಿಸುತ್ತಾನೆ. ಈ ದನಗಳನ್ನು ನೋಡಿ ಸಂತೋಷಗೊಂಡ ವ್ಯಾಪಾರಿಗಳು, ಹೊತ್ತು ಹೋಗಿ ಎತ್ತಯ್ಯನ ಹಟ್ಟಿಯ ಬಳಿ ರಾತ್ರಿ ಕಳೆಯುತ್ತಾರೆ. ಇವರಿಗೆಲ್ಲ ಎತ್ತಯ್ಯ ಹಾಲುಡಿಗೆಯ ಉಪಚಾರ ಮಾಡುತ್ತಾನೆ. ಈ ಹಟ್ಟಿಯಲ್ಲಿ ಎತ್ತುಗಳನ್ನು ಕಂಡು ಇವು ಸಿಕ್ಕರೆ ಕಂಬಳಿ ಹೇರೋಕೆ ಅನುಕೂಲ ಆಗುತ್ತೆ ಎಂದು, ಎತ್ತು ಕೊಟ್ಟರೆ ಹೊನ್ನು ಕೊಡ್ತೀವಿ ಎಂದು ಹೇಳುತ್ತಾರೆ. ಹೀಗೆ ಎತ್ತಯ್ಯನಿಗೆ, ವ್ಯಾಪಾರಿಗಳಿಗೂ ವ್ಯವಹಾರ ನಡೆದು ವಿಶ್ವಾಸ ಗಳಿಸುತ್ತಾರೆ. ಕುರುಬರು ಎತ್ತಯ್ಯನಿಗೆ ಯರಬಳ್ಳಿ ಗೊಲ್ಲರ ಹಟ್ಟಿಯಿಂದ ಗೆಜ್ಜೆ ಕಾಲು ಮಲ್ಲಮ್ಮನನ್ನು ತಂದು ಮದುವೆ ಮಾಡುತ್ತಾರೆ. ಎತ್ತಯ್ಯನು ವಿವಾಹವಾದರು ಸಹ ಎಂದು ಸಂಸಾರಕ್ಕೆ ಅಂಟಿಕೊಂಡಿರದೆ, ದನಗಳನ್ನು ಕಾಯೋ ಪವಿತ್ರ ಕಾಯಕದಲ್ಲಿ ತೊಡಗಿರುತ್ತಾನೆ. ತನಗೆ ಹೆಣ್ಣಿನ ನೆರಳು ಸೋಕಿದರೆ ತನ್ನ ಕಾಯಕಕ್ಕೆ ಅಡ್ಡಿ ಆಗುತ್ತದೆ ಎಂದು ಹೆಂಡತಿಯ ಕೈಯ

ಅಡುಗೆಯನ್ನು ಉಂಡವನಲ್ಲ. ತನ್ನ ಕೈಯಿಂದ ಹಾಲಡಿಗೆ ಮಾಡಿಕೊಳ್ಳುತ್ತಿದ್ದ. ಹೆಸರಿಗಷ್ಟೇ ಮದುವೆಯಾದ ಎತ್ತಯ್ಯ ಮಲ್ಲಮ್ಮನನ್ನು ಕಣ್ಣೆತ್ತಿ ನೋಡಲಿಲ್ಲ. ಸದಾ ಎತ್ತುಗಳ ಯೋಗಕ್ಷೇಮದಲ್ಲಿ ನಿರತನಾಗಿದ್ದ ಎತ್ತಯ್ಯ ನೀರಿಲ್ಲದ ಬರಗಾಲದಲ್ಲಿ ಪಡಬಾರದ ಕಷ್ಟಪಟ್ಟು ಗೋಕಟ್ಟೆಗಳನ್ನು ಹಾಕಿಸುತ್ತಾನೆ.

**ಎತ್ತಯ್ಯ ಮತ್ತು ಗುಡ್ಡದ ಬೋರಿಯ ಪ್ರಸಂಗ**

ಎತ್ತಯ್ಯನ ನೆಲೆಯಲ್ಲಿ ಒಮ್ಮೆ ಬರ, ಕ್ಷಾಮ ಉಂಟಾಗಿ, ಮೇವು ನೀರು ಅರಸುತ್ತಾ ಸಂಡೂರು ಬೊಮ್ಮನ ಕಾವಲಿಗೆ ತೆರಳುತ್ತಾನೆ. ಬೊಮ್ಮನ ಕಾವಲು ಕೂಡ್ಲಿಗಿ ತಾಲ್ಲೂಕಿನ ಬೊಮ್ಮಘಟ್ಟ, ಡಿ. ಸಿದ್ಧಾಪುರ(ಗುಡ್ಡಲುಸೀಮಾ) ಪ್ರದೇಶ ಇರಬೇಕು. ಬೊಮ್ಮನ ಕಾವಲಿನಲ್ಲಿ ದಟ್ಟವಾದ ಹುಲ್ಲನ್ನು ನೋಡಿ ಇಲ್ಲಿಯೇ ಕೆಲವು ದಿನಗಳ ಕಾಲ ಗೂಡು ಹಾಕಿ ನೆಲೆನಿಲ್ಲುತ್ತಾನೆ. ಅಷ್ಟರಲ್ಲಿ ಗುಡ್ಡದ ಬೋರಿ ಎಂಬ ಬೇಡರ ಮಹಿಳೆ ಎತ್ತಯ್ಯನ ಬಳಿ ಬಂದು ಅನುಮತಿ ಇಲ್ಲದೆ ದನಗಳ ದೊಡ್ಡಿಯನ್ನು ಹಾಕಿದ್ದಕ್ಕೆ ಮಾತುಕತೆ ನಡೆದು ಹುಲ್ಲು ಮೇಲಿನ ಸುಂಕವನ್ನು ಕೇಳುತ್ತಾಳೆ. ದನಗಳನ್ನು ಕೊಡಲು ಒಪ್ಪದ ಎತ್ತಯ್ಯನನ್ನು ಮದುವೆಯಾಗಲು ಷರತ್ತು ವಿಧಿಸುತ್ತಾಳೆ. ಬೋರಿಯ ಮಾತನ್ನು ಕೇಳಿದ ಎತ್ತಯ್ಯ ನಿರಾಕರಿಸುತ್ತಾನೆ. ಅವಳು ಬೆನ್ನತ್ತಿ ಬಂದು ಎತ್ತಯ್ಯನ ದನಗಳ ಹಿಂಡನ್ನು ತಡೆಯುತ್ತಾಳೆ.

"ಆಳುವ ನೂರು ಬ್ಯಾಡರು ನಮ್ಮಗಳ ಮಕ್ಕಳು
ನೀನು ನಮ್ಮಿಗೆ ಕಿರುದಂಗಿ
ನೀನು ನಮ್ಮಿಗೆ ಕಿರುದಂಗಿ ಬೋರಮ್ಮ
ನಿನೋಗೆ ನಿನ್ನರಮನೆಗೆ"[೩]

ಎತ್ತಯ್ಯ ಸಮಾಧಾನದಿಂದ ಬೋರಿಯನ್ನು ಕುರಿತು ಹೀಗೆ ಹೇಳುತ್ತಾನೆ. ಬ್ಯಾಡರು ನಮಗೆ ಸಹೋದರರು, ನೀನು ಕಿರು ತಂಗಿ ಇದ್ದಂತೆ, ಬುದ್ಧಿವಾದ ಹೇಳುತ್ತಾನೆ. ನಿನ್ನ ಹಡೆದವ್ವಳಿಗೆ ತಿಳಿದರೆ ದುಃಖಪಡುತ್ತಾಳೆ. ಮನೆಗೆ ಹೋಗು ಎಂದು ಕಳುಹಿಸುತ್ತಾನೆ. ಆದರೂ ಬೋರಿ ಅವಳ ಪ್ರಯತ್ನವನ್ನು ಬಿಡಲಿಲ್ಲ.

ಗುಡ್ಡದ ಬೋರಿಯ ಸಂಗವನ್ನು ನಿರಾಕರಿಸಿದ ಎತ್ತಪ್ಪ ಆಕೆಯನ್ನು ಸಹೋದರಿ ಎಂಬ ಭಾವನಾತ್ಮಕ ಸಂಬಂಧಗಳಿಂದ ನಿರಕಾರಿಸುತ್ತಾನೆ. ಮುಂದೆ ಆಗಬಹುದಾದ ಆಪತ್ತನ್ನು ಮನಗೊಂಡು ದೂರ ಸರಿಯುತ್ತಾನೆ. ಮದುವೆಯಾದರೆ ತನ್ನ ಕಾಯಕಕ್ಕೆ ಅಡ್ಡಿವುಂಟಾಗುವುದೆಂದು ಮರಗುತ್ತಾನೆ. ಹೀಗೆ ಎತ್ತಯ್ಯ ಬೋರಿಗೆ ವಶವಾಗದೆ ಇದ್ದುದರಿಂದ ಅವಳ ಪ್ರೀತಿ ಕೋಪಕ್ಕೆ ತಿರುಗಿತ್ತು. ಸಂಡೂರು ಬೊಮ್ಮನಿಂದ ನಿನ್ನ ತಲೆ ತೆಗೆಸಿ, ಅದನ್ನು ಬಜ್ಜಲಲ್ಲಿಟ್ಟು ಅದರ ಮೇಲೆ ನನ್ನ ಮೈ ನೀರು ಹುಯ್ದು ನಿನ್ನ ಬತ ಕೆಡಿಸದೆ ಇದ್ದರೆ ನನ್ನ ಎದೆಯಲ್ಲ, ಎಕ್ಕೆಕಾಯಿ ಎಂತ ತಿಳಿದಿಕೊ ಎಂದು ಎತ್ತಯ್ಯನಿಗೆ ಸವಾಲು ಹಾಕಿ ಅಲ್ಲಿಂದ ಬೊಮ್ಮ ಘಟ್ಟಕ್ಕೆ ಹೋಗಿ ತನ್ನ

ಹಟವನ್ನು ತೀರಿಸಬೇಕೆಂದು ಅವನನ್ನು ಒತ್ತಾಯ ಮಾಡುತ್ತಾಳೆ. ಬೊಮ್ಮನು ಎತ್ತಯ್ಯನಿಗೆ ಕಾಗದ ಬರೆದು ಕಳುಹಿಸುತ್ತಾನೆ. ಎತ್ತಯ್ಯ ಕಾಗದ ಓದುತ್ತಾನೆ. ನೀನು ಗಂಡಾಗಿದ್ದರೆ ನನ್ನ ಕಾವಲಿಗೆ ದನ ಬಿಡು, ಇಲ್ಲದೆ ಇದ್ದರೆ ಬಳೆ ತೊಡು ಎಂದು ಇರುತ್ತದೆ. ಎತ್ತಯ್ಯ ದನಗಳನ್ನು ಸಂಡೂರು ಬೊಮ್ಮನ ಕಾವಲಿಗೆ ಬಿಟ್ಟುಕೊಂಡು ಹೋದನು. ಇಬ್ಬರಿಗೂ ಬಾರಿ ಕದನ ನಡೆಯಿತು. ಎತ್ತಯ್ಯನ ಪ್ರಾಣ ಹೋಗುತ್ತಲು, ಅವನ ತಲೆಯನ್ನು ಕತ್ತರಿಸಿದ ಸಂಡೂರು ಬೊಮ್ಮ ಅದನ್ನು ಗುಡ್ಡದ ಬೋರಿಗೆ ಕೊಟ್ಟನು.

ಬೋರಿಗೆ ಎತ್ತಯ್ಯನ ರುಂಡ ಕಂಡು ಸಂತೋಷವಾಯಿತು. ಅದನ್ನು ತೆಗೆದು ಬಚ್ಚಲಲ್ಲಿಟ್ಟಳು. ನಂತರ ಎತ್ತಯ್ಯ ಒಬ್ಬ ದೈವ ಸಮಾನನಾದ, ಪವಾಡ ಪುರುಷನೇ ಆಗಿದ್ದಾನೆ. ಆದರೂ ಅಂಥವನಿಗೆ ಬೋರಿ ಸವಾಲೆಸೆದಿರುವುದನ್ನು ನೋಡಿದರೆ ಮಹಿಳೆ ತನ್ನ ಪ್ರಭುತ್ವವನ್ನು ಸ್ಥಾಪಿಸಿಕೊಳ್ಳಲು ನಡೆಸಿದ ಹೋರಾಟವೇ ಇದಾಗಿದೆ ಎನ್ನಬಹುದು. ಇದು ಒಂದು ರೀತಿಯಲ್ಲಿ ಕೌರವರಿಂದ ಅನುಮಾನಿತಳಾದ ದ್ರೌಪದಿ ಪಾಂಡವರ ಮೂಲಕ ಸೇಡನ್ನು ತೀರಿಸಿಕೊಂಡ ಪ್ರಸಂಗವನ್ನು ನೆನಪು ಮಾಡುವಂತಿದೆ.

ಮೀರಾಸಾಬಿಹಳ್ಳಿ ಶಿವಣ್ಣನವರು ಕಾಡುಗೊಲ್ಲ ಬುಡಕಟ್ಟು ವೀರರ ಕೃತಿಯಲ್ಲಿ ಗುಡ್ಡದ ಬೋರಿ ತನ್ನ ಲೈಂಗಿಕ ಹಸಿವನ್ನು ತೀರಿಸಿಕೊಳ್ಳಲು ಭೋಗ ಕೊಡುತ್ತೀನಿ ಎಂದು ಎತ್ತಯ್ಯನ ಹಿಂದೆ ಬೀಳುತ್ತಾಳೆ. ಎತ್ತಪ್ಪನನ್ನು ವ್ಯಾಮೋಹಿಸಿ ವಿಫಲವಾಗುತ್ತಾಳೆ ಎಂದು ವಿವರಿಸಿದ್ದಾರೆ. ಆದರೆ ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಗುಡ್ಡದ ಬೋರಿಯ ಸುತ್ತ ಭಿನ್ನವಾದ ದೃಷ್ಟಿಕೋನಗಳು ದೊರಕುತ್ತವೆ. ಇಲ್ಲಿ ಎತ್ತಪ್ಪ ಗುಡ್ಡದ ಬೋರಿಯ ಕಾವಲಿಗೆ ಬಂದು ಮೂರು ತಿಂಗಳವರೆಗೆ ಅನುಮತಿ ಇಲ್ಲದೆ ತನ್ನ ದನಗಳೊಂದಿಗೆ ಬೀಡುಬಿಟ್ಟಿರುತ್ತಾನೆ. ಹುಲ್ಲು ಬನ್ನಿ(ಸುಂಕ) ಕೇಳುತ್ತಾಳೆ. ಹಸುಗಳನ್ನು ಕೇಳಿದಾಗ ಎತ್ತಪ್ಪ ಕೊಡಲು ಒಪ್ಪದೆ ನಿರಾಕರಿಸುತ್ತಾನೆ. ಅಪ್ಪಣೆಯಿಲ್ಲದೆ, ಸುಂಕವು ಇಲ್ಲದೆ ನೆಲೆನಿಂತಿರುವ ಎತ್ತಯ್ಯನ ಮೇಲೆ ಗುಡ್ಡದ ಬೋರಿಗೆ ಕೋಪಬಂದು ಉಕ್ಕೇರುತ್ತದೆ. ತನ್ನ ಕಣ್ಣುಮುಂದೆ ಹುಲ್ಲುಗಾವಲನ್ನು ನಾಶಪಡಿಸಿದ ವ್ಯಕ್ತಿಯ ಮೇಲೆ ಸಹಜವಾಗಿ ಸಿಟ್ಟು, ತಾಳ್ಮೆ ಕಳೆದುಕೊಂಡು ಸಂಘರ್ಷಗಳು ನಡೆಯುತ್ತವೆ. ಸಹಜವಾಗಿ ಕಾವಲಿನ ಒಡೆತನದಿಂದ ಅವಳ ಮನಸ್ಸು ಉಗ್ರವಾಗುತ್ತದೆ. ಬೋರಿ ತನ್ನ ವಿಶಾಲ ಹುಲ್ಲುಗಾವಲಿನ ಒಡೆತನವನ್ನು ಕಾಪಾಡಿಕೊಳ್ಳುವ ಹಿನ್ನೆಲೆಯಲ್ಲಿ ಎತ್ತಯ್ಯನೊಂದಿಗೆ ಹಗೆತವನ್ನು ಸಾಧಿಸುತ್ತಾಳೆ. ಜೊತೆಗೆ ತನ್ನ ಹುಲ್ಲುಗಾವಲಿನ ನಿಯಂತ್ರಣದ ಹಕ್ಕಿನ ಪ್ರತಿಪಾದನೆಯನ್ನು ಮಾಡುತ್ತಾಳೆ.

ಮೀರಾಸಾಬಿಹಳ್ಳಿಯವರು ಗುಡ್ಡದ ಬೋರಿಯನ್ನು ಕುರಿತು ಹೀಗೆ ಹೇಳಿದ್ದಾರೆ. "ಎತ್ತಯ್ಯನ ಚೆಲುವನ್ನು ನೋಡಿ ಹುಚ್ಚು ಹಿಡಿದಂತಾಯಿತು. ಬಂದು ಕಾಲಿಡಿದು ಬೋಗ ಕೊಡು ಎಂದು ಕೇಳಿದಳು"[9] ಎಂದಿದೆ. ಎತ್ತಯ್ಯ ಬೋರಿಯ ಹುಲ್ಲುಗಾವಲನ್ನು ಅತಿಕ್ರಮಿಸಿಕೊಂಡದ್ದು ತಪ್ಪೇ ಅಲ್ಲವೇನು ಎಂಬಂತೆ ಚಿತ್ರಿಸಿ ಬೋರಿಯನ್ನು ಮಾತ್ರ ವ್ಯಾಘ್ರಳನ್ನಾಗಿ ಸೂಳೆಯಂತೆ ಚಿತ್ರಿಸಿರುವುದರ

ಹಿಂದೆ ಬೋರಿಯ ಸತ್ಯಾಸತ್ಯವನ್ನು ಮಾರೆಮಾಚಿದ್ದಾರೆ. ಇದರ ಹಿಂದೆ ಪುರುಷ ಸಮಾಜದ ಯಜಮಾನಿಕೆಯ ಕೆಲಸ ಮಾಡಿದೆ ಎನ್ನಬಹುದು.

**ಜುಂಜಪ್ಪನಿಗೆ ಸಂಬಂಧಿಸಿದ ಐತಿಹ್ಯ**

ಜುಂಜಪ್ಪ ಒಬ್ಬ ಪಶುಪಾಲಕ. ಗೊಲ್ಲ ಸಮುದಾಯಕ್ಕೆ ಸೇರಿದವನು. ಕೆಂಗುರಿ ಮಲ್ಲೇಗೌಡ-ಚಿನ್ನಮ್ಮ ಈತನ ತಂದೆ-ತಾಯಿಗಳು. ಕೆಂಗುರಿ ಮಲ್ಲೇಗೌಡ ಹೆಂಗಸರ ಅಂಟು-ಮುಂಟಿನಿಂದ ಗೋವುಗಳಿಗೆ ಅಪಾಯ ಬಂದೊದಗಬಹುದೆಂಬ ಅನುಮಾನವು ಕಾರಣವಾಗುತ್ತದೆ. ಹಾಗಾಗಿಯೇ ಚಿನ್ನಮ್ಮ ತಾವು ಮದುವೆಯಾದ ಮೂರನೇ ದಿನದಿಂದ ಒಂಟಿತನ ಅನುಭವಿಸಬೇಕಾಗುತ್ತದೆ.

ಗಂಡನ ವೈರಾಗ್ಯದಿಂದ ಬೇಸತ್ತು ಚಿನ್ನವ್ವ ಗೌರಸಮುದ್ರದ ಮಾರಮ್ಮನ ಮೊರೆ ಹೋಗುತ್ತಾಳೆ. ನಿನಗೆ ಮಕ್ಕಳು ಬೇಡ. ಇದರಿಂದ ತೊಂದರೆ ಅನುಭವಿಸುತ್ತೀಯಾ ಎಂದು ಮಾರಮ್ಮ ಹೇಳುತ್ತಾಳೆ. ಚಿನ್ನವ್ವನನ್ನು ತಾಯಿತನ ಕಾಡುತ್ತದೆ. ಮುಂದೆ ಶಿವ-ಪಾರ್ವತಿಯರು ಕೊಟ್ಟ ಮೂರು ಹೂಗಳನ್ನು ಪ್ರೀತಿಯಿಂದ ಸೇವಿಸುತ್ತಾಳೆ. ಆಕೆಗೆ ಬೇಸರ, ವಿರಹ ವೇದನೆ ಕಡಿಮೆಯಾಗುವುದರ ಜೊತೆಗೆ ಆಕೆ ಗರ್ಭವತಿಯಾಗುತ್ತಾಳೆ. ಚಿನ್ನಮ್ಮ ಗರ್ಭವತಿಯಾದ ಪ್ರಸಂಗ ಸಮುದಾಯದ ಹೆಂಗಸರಲ್ಲಿ ತಮಾಷೆ ಸಂಗತಿಯಾಗುತ್ತದೆ. ಚಿನ್ನಮ್ಮನಿಗೆ ನವಮಾಸ ತುಂಬಿದಾಗ ಅವಳ ಬೆನ್ನಿನಿಂದ ಹುಟ್ಟಿದ ಅವನ ಹುಟ್ಟು ಹೇಗೆ ವಿಶೇಷ ರೀತಿಯಾಗಿತ್ತು. ಆತನ ನಡವಳಿಕೆಯೂ ಅದೇ ರೀತಿಯಾಗಿತ್ತೆಂದು ತಿಳಿಯುತ್ತದೆ. ಗಂಡ ದನಕಾಯಲು ದೇಶಾಂತರ ಹೋಗಿರುವಾಗ ಹೇಗೆ ಬಸಿರಾದಳೋ ಎಂಬ ಕುಹಕದ ಮಾತು ಕೇಳಿ ಬರುತ್ತದೆ. ಆದರೂ ಚಿನ್ನಮ್ಮ ಬೇಸರವಾಗಲಿಲ್ಲ. ಹೀಗೆ ಚಿನ್ನಮ್ಮ ಕಾಲಕಳೆಯುತ್ತಾಳೆ. ಆಗ ಕೆಂಗುರಿ ಮಲ್ಲೇಗೌಡ ಮನೆಗೆ ಬರುತ್ತಾನೆ. ಬಂದವನೇ ಹೆಂಡತಿಯನ್ನು ಕಾಣುತ್ತಾನೆ. ಆತನಿಗೂ ಅನುಮಾನವುಂಟಾಗುತ್ತದೆ. ಆಗ ಹೊಟ್ಟೆಯೊಳಗಿದ್ದ ಮಾಯಾ ಶಿಶು ಜುಂಜಪ್ಪ ತನ್ನ ತಾಯಿ ಶಿವನ ಆಶೀರ್ವಾದದಿಂದ ಗರ್ಭಧರಿಸಿದ ಸಂಗತಿಯನ್ನು ಕೆಂಗುರಿ ಮಲ್ಲೇಗೌಡನಿಗೆ ತಿಳಿಸುತ್ತದೆ. ಆಗ ಸಮಾಧಾನವಾಗುತ್ತದೆ.

ಗೌರಸಮುದ್ರದ ಮಾರಮ್ಮನ ವರದಿಂದ ಜುಂಜಪ್ಪ, ಮಾರಣ್ಣ, ಮೈಲಣ್ಣ ಹಾಗೂ ಮಾರಮ್ಮ ಹುಟ್ಟುತ್ತಾರೆ. ಜುಂಜಪ್ಪ ದೊಡ್ಡವನಾದ ಮೇಲೆ ಏಳು ಗೂಡಿನ ದನಗಳಿಗೆ ಒಡೆಯನಾಗುತ್ತಾನೆ. ಜುಂಜಪ್ಪನ ಬೆಳವಣಿಗೆಯನ್ನು ಸಹಿಸದೆ ಸೋದರ ಮಾವಂದಿರಿಗೆ ಅಸೂಯೆಯಾಗಿ ಅಸಮಾಧಾನವಾಗಿ ಕಾಡುತ್ತದೆ. ಒಮ್ಮೆ ದನಗಳನ್ನು ಮರಡಿಗುಡ್ಡದ ಪಕ್ಕದ ಕಾವಲಿಗೆ ತೆರಳುತ್ತಾನೆ. ಸೋದರ ಮಾವಂದಿರು ಜುಂಜಪ್ಪನ ದನಗಳನ್ನು ಸಾಯಿಸಲು ಕುತಂತ್ರ ಹೂಡುತ್ತಾರೆ. ಕಂಬೇರ ಗೊಲ್ಲರು ತಮ್ಮಲ್ಲಿನ ರೋಗಗ್ರಸ್ಥ ಕರುವನ್ನು ತಂದು ಜುಂಜಪ್ಪನ ದನಗಳು ನೀರು ಕುಡಿಯುವ ಸ್ಥಳದಲ್ಲಿ ಕೆಸರಲ್ಲಿ ನಿಲ್ಲಿಸುತ್ತಾರೆ. ಇದರಿಂದ ರೋಗ ಹರಡಿ ದನಗಳು ಸಾಯುತ್ತವೆಂಬ ಬಯಕೆ ಸೋದರ ಮಾವಂದಿರದು. ರೋಗದ

ಕರುವಿನಿಂದ ರೋಗ ಹರಡುವ ಬದಲು ಆರೋಗ್ಯ ಸುಧಾರಿಸಿ ಸದೃಡವಾಗಿ ಬೆಳೆಯುತ್ತದೆ. ಮೊದಲ ಪ್ರಯತ್ನ ವಿಫಲವಾದ ಮೇಲೆ ಮರಡಿ ರಂಗನಿಂದ ಮಾಟ ಮಾಡಿಸುತ್ತಾರೆ. ಈ ವಿಷಯವನ್ನು ತಿಳಿದ ಜುಂಜಪ್ಪ ರಂಗನನ್ನು ಹೆದರಿಸಿ ಅವನಿಂದ ಮಾಟದ ಪ್ರಭಾವ ತೆಗೆಸಿದ.

**ಜುಂಜಪ್ಪನ ಸಾವು**

ಹದಿನಾರು ವರ್ಷಗಳ ಕಾಲ ಜುಂಜಪ್ಪನ ಪರಾಕ್ರಮದಿಂದ ಸಾಹಸ ಕಾರ್ಯಗಳನ್ನು ನೋಡಿದ ಈತನ ಸೋದರ ಮಾವಂದಿರು ಅಸಾಧ್ಯವಾದ ಸಂಕಟದಿಂದ ಬಳಲಿದರು. ಏನಾದರೂ ಸರಿಯೇ ಜುಂಜಪ್ಪನನ್ನು ಸಾಯಿಸುವದೊಂದೆ ಮಾರ್ಗ ಎಂದೂ ತೀರ್ಮಾನಿಸಿದರು. ಮುರಿದು ಹೋದ ಸಂಬಂಧವನ್ನು ಮತ್ತೆ ಕುದುರಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಸೋದರ ಮಾವಂದಿರು ಮನೆದೇವರ ಹಬ್ಬವನ್ನು ಆಚರಿಸುತ್ತಿರುವುದಾಗಿಯೂ ಅದಕ್ಕೆ ಜುಂಜಪ್ಪ ತನ್ನ ಸೋದರರೊಂದಿಗೆ ಆಗಮಿಸಬೇಕೆಂದು ಕೋರುತ್ತಾರೆ. ತಾಯಿಯ ಮಾತಿಗೆ ಒಪ್ಪಿದ ಜುಂಜಪ್ಪ ಹಾಗೂ ಆತನ ಪ್ರೀತಿಯ ಜೂಲನಾಯಿಯೊಂದಿಗೆ ಕಂಬೇರಹಟ್ಟಿಗೆ ಹೊರಡುತ್ತಾನೆ.

ಕಂಬೇರಹಟ್ಟಿಯಲ್ಲಿ ಜುಂಜಪ್ಪನ ಸೋದರ ಮಾವಂದಿರ ಹೆಣ್ಣು ಮಕ್ಕಳು ಸುಂದರಿಯರಾಗಿದ್ದು, ಜುಂಜಪ್ಪನ ದರ್ಶನಕ್ಕೆ ಕಾತರಿಸುತ್ತಾರೆ. ಕುತಂತ್ರ ಅರಿಯದ ಮುಗ್ಧ ಹುಡುಗಿಯರು ಬಂದ ಜುಂಜಪ್ಪನಿಗೆ ಆರತಿ ಎತ್ತಿ ಬರಮಾಡಿಕೊಳ್ಳುತ್ತಾರೆ. ಜುಂಜಪ್ಪನ ತಂಗಿ ಮಾರಕ್ಕ. ಈಕೆಯನ್ನು ತೌರು ಮನೆಗೆ ಸೇರಿದ ಸೋದರಮಾವನಿಗೆ ಕೊಟ್ಟು ಮದುವೆ ಮಾಡಿದ್ದರು. ಈಕೆಯಿಂದಲೇ ವಿಷ ಕುಡಿಸಿ ಕೊಲ್ಲುವ ಪ್ರಯತ್ನ ಇವರದು. ಮಾರಕ್ಕನನ್ನು ಬಲವಂತವಾಗಿ ವಿಷದ ಅಡುಗೆ ತಯಾರಿಸಿ, ತಮ್ಮಂದಿರಿಗೆ ತನ್ನ ಕೈಯಿಂದಲೇ ಬಡಿಸಬೇಕೆಂದು ಒತ್ತಾಯಿಸಿದರು. ಮಾರಕ್ಕ ಬಲವಂತಕ್ಕೆ ಮಣಿದು ತನ್ನ ಸಹೋದರನಾದ ಜುಂಜಪ್ಪನನ್ನು ಕೊಲ್ಲಬೇಕೆಂದು ಅತಿಯಾದ ಸಂಕಟ, ಈ ಸಂಕಟವನ್ನು ಹೊತ್ತುಕೊಂಡೆ ಮಾರಕ್ಕ ದತ್ತೂರಿ ಬೀಜಗಳನ್ನು ಅರೆದು ಅಡುಗೆಗೆ ಸೇರಿಸಿದಳು. ತನ್ನ ಮನೆಯವರ ಒತ್ತಡದಿಂದ ಜುಂಜಪ್ಪನಿಗೆ ಊಟ ಬಡಿಸುತ್ತಾಳೆ. ಜುಂಜಪ್ಪ ವಿಷದ ಕಜ್ಜಾಯ ತಿಂದು ಎಕ್ಕದ ಹಾಲು ಕುಡಿದನು. ತನ್ನ ಬಳಿ ಇದ್ದ ನಾಯಿಗೂ ಹಾಕಿದನು. ನಾಯಿ ಆಹಾರ ತಿಂದ ಕೂಡಲೇ ಗಿರಗಿರನೆ ಒದ್ದಾಡಿ ಸತ್ತು ಹೋಯಿತು. ನಂತರ ಜುಂಜಪ್ಪನ ತಮ್ಮಂದಿರು ಊಟ ಮುಗಿಸಿ ಹೊರಟು ಹೋದರು. ಹೊನ್ನಹಟ್ಟಿಗೆ ಅಲೇಗೌಡನ ಹುಲ್ಲಿನ ಬಣವೆಯ ಒಳಗೆ ಹೊಕ್ಕು ತನ್ನ ಉರಿಗಣ್ಣು ಬಿಟ್ಟರು. ಆ ಬಣವೆಯೊಡನೆ ಮೂವರು ಸುಟ್ಟು ಬೂದಿಯಾದರು.

ಜುಂಜಪ್ಪ ತಾನು ಸತ್ತನಂತರವು ಅನೇಕ ಪವಾಡಗಳನ್ನು ಮಾಡಿದ. ಹೀಗಾಗಿ ಕಾಡುಗೊಲ್ಲರು ಜುಂಜಪ್ಪನನ್ನು ತಮ್ಮ ಆರಾಧ್ಯ ದೈವವೆಂದು ಪೂಜೆ ಮಾಡಲು ಆರಂಭಿಸಿದರು. ಹೀಗೆ ಜುಂಜಪ್ಪನ ಐತಿಹ್ಯವು ಕಾಡುಗೊಲ್ಲರ ಸಂಸ್ಕೃತಿಯನ್ನು ರೂಪಿಸಿರುವುದಕ್ಕೆ ಪ್ರಮುಖವಾಗಿದೆ. ಕಾಡುಗೊಲ್ಲರಲ್ಲಿ ಪಶುಪಾಲಕನೊಬ್ಬ ಇದ್ದು ಕಾಲಕ್ರಮೇಣ ಪುರಾಣ ಪುರುಷನ ಸ್ಥಾನಮಾನಗಳನ್ನು

ಪಡೆದು ಸಾಂಸ್ಕೃತಿಕ ವೀರನಾಗಿ ಪರಿಣಮಿಸಿರಬೇಕು. ಜುಂಜಪ್ಪನ ಐತಿಹ್ಯವು ಶೈವ ಸಂಪ್ರದಾಯ ಗಳಿಂದ ಹುಟ್ಟಿದ್ದುದಾಗಿದೆ.

**ಈರಗಾರ ಈರಣ್ಣ**

ಈರಣ್ಣ ಒಬ್ಬ ಪಶುಪಾಲಕ. ಈತ ಕಾಡುಗೊಲ್ಲ ಸಮುದಾಯಕ್ಕೆ ಸೇರಿದವನು. ಈತನು ಮೊಳಕಾಲ್ಮೂರು ತಾಲೂಕಿನ ಕೊಂಡ್ಲಹಳ್ಳಿ ಗೊಲ್ಲರಹಟ್ಟಿಯವನು. ಈತನ ವೃತ್ತಿ ದಿನಾಲು ದನಕರುಗಳನ್ನು ಕಾಯುವುದು. ಅಡವಿಯಲ್ಲಿ ದನಕರುಗಳನ್ನು ಕಾಯ್ದುಕೊಂಡು ಬಂದು ಹಟ್ಟಿ ಸೇರುತ್ತಿದ್ದನು. ಹೀಗೆ ಒಂದು ದಿನ ಈರಣ್ಣನು ಅಡವಿಗೆ ದನ ಕಾಯಲು ಹೋದಾಗ ತನ್ನ ಗೆಳೆಯರಿಗೆ ಹೀಗೆ ಹೇಳುತ್ತಾನೆ. ನನ್ನ ಆರೋಗ್ಯ ಇವತ್ತು ಸರಿಯಿಲ್ಲ, ನಾನು ಸತ್ತರೆ ನಮ್ಮ ದನಗಳು ಎಲ್ಲಿ ಹೋಗಿ ಕಾಲುಕೆದುರಿ ಗೋಮೂತ್ರ ಮಾಡುತ್ತವೆಯೋ ಅಲ್ಲಿ ನನ್ನನ್ನು ಮಣ್ಣು ಮಾಡಿರಿ ಎಂದು ತಿಳಿಸಿದನು. ಹೀಗೆ ಈರಣ್ಣ ಇದ್ದಕ್ಕಿದ್ದಾಗಿ ಆಕಸ್ಮಿಕವಾಗಿ ಅಸುನೀಗಿದನು. ಹೀಗೆ ಅಸುನೀಗಿದ ಸಾವಿನ ಸುದ್ದಿಯನ್ನು ಗೆಳೆಯರು ಓಡಿ ಹೋಗಿ ಹಟ್ಟಿಯಲ್ಲಿ ಹಿರಿಯರಿಗೆ ತಿಳಿಸಿದಾಗ ಗೊಲ್ಲರಹಟ್ಟಿಯ ಸಂಬಂಧಿಕರು, ಯಜಮಾನರು ಬಂದು ಈರಣ್ಣನು ಹೇಳಿದಂತೆ ಇವನ ಹಸುಗಳು ಕಾಲುಕೆದುರಿ ಗೋಮೂತ್ರ ಮಾಡಿದ ಸ್ಥಳದಲ್ಲಿಯೇ ಸಮಾಧಿ ಮಾಡಿದರು. ಈ ಸಮಾಧಿ ಸ್ಥಳ ಮಾರಮ್ಮನಹಳ್ಳಿ ಸಮೀಪವಿದೆ. ಈ ಸಮಾಧಿ ಸುತ್ತಾ ಕಲ್ಲಿನ ಪೌಳಿ ಇದೆ. ಇದೊಂದು ಪುಣ್ಯಸ್ಥಳವಾಗಿ ಪರಿಣಮಿಸಿದೆ. ಇದರ ಸಾವಿನ ಸುತ್ತ ಹಲವು ಕಾರಣಗಳಿರಬಹುದು. ಏನಾದರೂ ಸಂಘರ್ಷಗಳಾಗಿರಬಹುದು. ಇಲ್ಲ ಅನಾರೋಗ್ಯದಿಂದ ಹೃದಯಾಘಾತ ಆಗಿರಬಹುದು. ಸಮುದಾಯದ ಒತ್ತಡಗಳು, ದನಕರುಗಳ ದಾಳಿ, ಕಳ್ಳರ ಹಾವಳಿ ಹೀಗೆ ಹಲವಾರು ಕಾರಣಗಳಿಂದ ದನಗಾಹಿ ಈರಣ್ಣನ ಸಾವಿನಲ್ಲಿ ಅಂತ್ಯಗೊಂಡಿದೆ. ಇಲ್ಲಿ ಈರಣ್ಣ ದೈವಕ್ಕೆ ಏರಿದ್ದಾನೆ. ಈತನಿಗೆ ಬೇಡರು ಮತ್ತು ಗೊಲ್ಲರು ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಈರಣ್ಣ ಈ ಪ್ರದೇಶದ ಪಶುಪಾಲಕರ ದೇವರಾಗಿದ್ದಾನೆ. ಈರಣ್ಣನಿಗೆ ಮಕ್ಕಳಾಗದಿದ್ದವರು ನಡೆದುಕೊಂಡರೆ ಮಕ್ಕಳಾಗುತ್ತಾರೆ. ಎಷ್ಟು ಜನರಿಗೆ ಮಕ್ಕಳಾಗಿರುವುದನ್ನು ನಮ್ಮ ಊರಿನಹಳ್ಳಿಯಲ್ಲಿ ನಾವು ನೋಡಿದ್ದೇವೆ ಎಂದು ಮಾರಮ್ಮನಹಳ್ಳಿ ಕೇತಯ್ಯನವರು ಹೇಳುತ್ತಾರೆ.

ವರ್ಷಕ್ಕೆ ಎರಡು ಬಾರಿ ಈರಣ್ಣನ ದೇವರು ಆಗುತ್ತದೆ. ಮೂಲಗುಡಿ ಗೊಲ್ಲರಹಟ್ಟಿಯಲ್ಲಿದೆ. ಗೊಲ್ಲರಹಟ್ಟಿಯಿಂದ ಈ ದೇವರು ಅಡವಿಗೆ ಬರುತ್ತದೆ. ಈತನಿಗೆ ನಡೆದುಕೊಳ್ಳುವ ಭಕ್ತರು ಇಲ್ಲಿ ಬಂದು ಜವುಳ ತೆಗಿಸುತ್ತಾರೆ. ಈತನ ಹೆಸರಿನಲ್ಲಿ ನಾಮಕರಣ ಮಾಡುವುದು ಕಂಡುಬರುತ್ತದೆ. ಈತನ ಸಮಾಧಿ ಸುತ್ತಮುತ್ತಲು ಸಾವಿರಾರು ತುಗ್ಗಲಿ ಮರಗಳು ಇವೆ. ಇವು ಆತನ ಸಿಡಿಗೆ ಕಟ್ಟಿಗೆಯಿಂದ ಚಿಗುರಿದ ಮರಗಳು ಎನ್ನುತ್ತಾರೆ. ಸಾವಿರಾರು ಮರಗಳ ತೋಪು ಇದ್ದ ಹಾಗೆ ಇದೆ. ಇವುಗಳನ್ನು ಯಾರು ಕಡಿಯುವುದಿಲ್ಲ. ಇದರ ಸೌದೆಯನ್ನು ಸಹ ಬಳಸುವುದಿಲ್ಲ. ಇವುಗಳನ್ನು ಯಾರೂ ಕಾಯುವುದಿಲ್ಲ. ಹೀಗೆ ಕೊಂಡ್ಲಹಳ್ಳಿಯವರು ತುಗ್ಗಲಿ ಮರವನ್ನು

ಹಾಗೂ ಆಸಿನ ಮರವನ್ನು ಕಡಿದುಕೊಂಡು ಹೋಗಿ ಮನೆಯ ವಸ್ತಲಿಗೆ ಹಾಕಿಕೊಂಡಿದ್ದರಂತೆ. ಆತ ಒಂದು ತಿಂಗಳೊಳಗೆ ಒಬ್ಬ ಮಗನನ್ನು ಕಳೆದುಕೊಂಡನಂತೆ. ಇದುವರೆಗೂ ಅವರ ಮನೆತನ ಉದ್ಧಾರವಾಗಿಲ್ಲವಂತೆ ಎಂದು ಗೊಲ್ಲರ ಹಟ್ಟಿಯವರು ಹೇಳುತ್ತಾರೆ. ಹಾಗಾಗಿ ಈ ತುಗ್ಗಲಿ ಮರಗಳನ್ನು ಯಾರು ಕಡಿಯುವುದಿಲ್ಲ. ಕಡಿದರೆ ಏನಾದರೂ ಅನಾಹುತ ಆಗುವುದೆಂದು ಜನಪದರು ನಂಬಿದ್ದಾರೆ. ಈ ಮರಗಳನ್ನು ಮಳೆಗಾಲದಲ್ಲಿ ನೋಡಿದರೆ ಸುಂದರವಾಗಿ ಕಾಣುತ್ತವೆ.

**ಸಾಣೆಕೆರೆ ಚಿಕ್ಕಣ್ಣ**

ಸಾಣಿಕೆರೆ ಚಳ್ಳಕೆರೆ ತಾಲ್ಲೂಕಿನಲ್ಲಿ ಕಂಡುಬರುವ ಗ್ರಾಮ. ಚಿಕ್ಕಣ್ಣ ಎಂಬ ವ್ಯಕ್ತಿ ಇದೇ ಗ್ರಾಮದವನು. ಗೊಲ್ಲ ಸಮುದಾಯಕ್ಕೆ ಸೇರಿದವನು. ಇವನೊಬ್ಬ ಕುರಿಗಾಯಿ. ಒಮ್ಮೆ ಕುರಿಮರಿ(ಪಟ್ಲಿಮರಿ) ಸಾಕಿದ್ದ. ಇದು ಸದಾ ಇವನ ಜೊತೆಯಲ್ಲಿಯೇ ಇರುತ್ತಿತ್ತು. ಎಲ್ಲಿಗೆ ಹೋದರು ಹಿಂಬಾಲಿಸುತ್ತಿತ್ತು. ರಾತ್ರಿ ಮಲಗುವಾಗ ಚಿಕ್ಕಣ್ಣನ ಪಕ್ಕದಲ್ಲಿಯೇ ಮಲಗುತ್ತಿತ್ತು. ಚಿಕ್ಕಣ್ಣನಿಗೂ ಕುರಿ ಪಟ್ಲಿ ಎಂದರೆ ಪಂಚಪ್ರಾಣ. ಚಿಕ್ಕಣ್ಣ ಒಮ್ಮೆ ಕುರಿಮರಿಗಳಿಗೆ ಸೊಪ್ಪು ತರಲು ಹೋದ. ಅವನ ಹಿಂದೆಯೇ ಕುರಿಮರಿ ಹೋಗಿತ್ತು. ಅಡವಿಯಲ್ಲಿ ತೋಳಗಳ ದಂಡು ಕಾಣಿಸಿಕೊಂಡಿತು. ಕುರಿಮರಿ ಗಾಬರಿಯಾಗಿ ಚಿಕ್ಕಣ್ಣನ ಹತ್ತಿರ ಓಡಿ ಬಂತು. ಒಬ್ಬನೇ ಮನುಷ್ಯ ಇದ್ದದ್ದು ನೋಡಿ ಕುರಿಪಟ್ಲಿ ಮೇಲೆ ಬೀಳಲು ಹೋದವು. ಸೊಪ್ಪು ಕೊಯ್ಯಲು ತಂದಿದ್ದ ಜನಿಗೆ ಕುಡುಗೋಲುನಿಂದ ಸ್ವಲ್ಪ ಹೊತ್ತು ತೋಳಗಳನ್ನು ಹೆದರಿಸಿದ. ಆದರೂ ತೋಳಗಳು ಚಿಕ್ಕಣ್ಣನನ್ನು ಕಣ್ಣು ಕೆಂಪಗೆ ಮಾಡಿ ಎದುರಿಸಿದವು. ಬಹುಸಂಖ್ಯೆಯಲ್ಲಿ ಇದ್ದ ತೋಳಗಳು ಚಿಕ್ಕಣ್ಣನ ಮೇಲೆ ಏರಿಬಂದವು. ಕೆಲವು ಕುರಿಮರಿಯನ್ನು ಕಚ್ಚಿ ಸಿಗಿದು ರಕ್ತಹೀರಿ ತಿಂದವು. ಚಿಕ್ಕಣ್ಣ ತೋಳಗಳೊಂದಿಗೆ ಹೋರಾಡುತ್ತ ಕಿರುಚಿ ಕೂಗಾಡಿದರೂ ಯಾರು ಹತ್ತಿರ ಸುಳಿಯಲೇ ಇಲ್ಲ. ಚಿಕ್ಕಣ್ಣನ ಎದುರಿನಲ್ಲಿ ತಾನು ಸಾಕಿದ್ದ ಕುರಿಮರಿಯನ್ನು ತೋಳಗಳು ಹರಿದು ತಿಂದವು. ಪಟ್ಟಿಮರಿಯನ್ನು ಉಳಿಸಲು ಹೋರಾಟ ಮಾಡಿದ ಚಿಕ್ಕಣ್ಣನಿಗೆ ತೋಳುಗಳು ಮೈತುಂಬ ಗಾಯ ಮಾಡಿದವು. ಕೊನೆಗೆ ತೋಳಗಳು ಚಿಕ್ಕಣ್ಣನನ್ನು ಕಚ್ಚಿ ಸಾಯಿಸಿಯೇ ಬಿಟ್ಟವು. ಮರುದಿನ ಬೆಳಿಗ್ಗೆ ಚಿಕ್ಕಣ್ಣನನ್ನು ಹುಡುಕುತ್ತಾ ಬಂದ ಜನಕ್ಕೆ ಛಿದ್ರ ಛಿದ್ರವಾಗಿದ್ದ ಚಿಕ್ಕಣ್ಣನ ದೇಹ, ಅರೆ-ಬರೆ ಉಳಿದ ಕುರಿಪಟ್ಲಿಯ ಅವಶೇಷಗಳು ಕಾಣಿಸಿದವು. ಚಿಕ್ಕಣ್ಣನನ್ನು ತೆಗೆದುಕೊಂಡು ಹೋಗಿ 'ಮಣ್ಣು' ಮಾಡಿ, ಆತನ ಹೆಸರಿನಲ್ಲಿ ಅಲಗು ಹೋಯಿಸಿ ದೈವಕ್ಕೆ ಏರಿಸಿದ್ದಾರೆ.

**ಕರಿಯಣ್ಣ**

ಕರಿಯಣ್ಣ ಒಬ್ಬ ಪಶುಪಾಲಕ. ಕಾಡುಗೊಲ್ಲ ಸಮುದಾಯಕ್ಕೆ ಸೇರಿದವನು. ಈತನಿಗೆ ಸಂಬಂಧಿಸಿದ ಐತಿಹ್ಯ ಹೀಗಿದೆ. ಒಮ್ಮೆ ದುರ್ಗದ ಭರಮಣ್ಣ ನಾಯಕನ ದಂಡು ಕ್ಯಾತೇದೇವರ

ಮೇಲೆ ದಾಳಿ ಮಾಡಲು ಬರುವರು. ಈ ಸುದ್ದಿ ತಿಳಿದ ಚೆನ್ನಮ್ಮ ನಾಗತಿಹಳ್ಳಿ ಗೊಲ್ಲ ಮುಖಂಡರು ದೊರೆಯ ಕೈಗೆ ಈ ದೇವರು ಸಿಗಬಾರದೆಂದು ನಿರ್ಧರಿಸಿ, ಅದರ ಜವಾಬ್ದಾರಿಯನ್ನು ಕರಿಯಣ್ಣನೆಂಬ ಭಕ್ತನಿಗೆ ಒಪ್ಪಿಸುತ್ತಾರೆ. ಆಗ ಈ ದೇವರನ್ನು ಹೊತ್ತುಕೊಂಡು ಪರುಶುರಾಮಪುರದ ಕಡೆ ಬೊಮ್ಮನಕುಂಟೆಗೆ ಹೋದನು. ಅಲ್ಲಿ ಸೂಲಂಗಿ ಬೆಳೆದ ವನದಲ್ಲಿ ದೇವರನ್ನು ಅಡಗಿಸಿದನು. ಅಲ್ಲಿಯೂ ನೆಮ್ಮದಿ ಕಾಣದೆ ಅಲ್ಲಿಂದ ಹತ್ತಿರದ ಪುಲಸುಮರಡಿ (ಮಹಾದೇವಪುರ) ಬಳಿ ನೆಲೆಸಿದನು. ಚಿತ್ರದುರ್ಗದ ದಂಡು ಕರಿಯಣ್ಣನನ್ನು ಹಿಂಬಾಲಿಸಿಕೊಂಡು ಬಂತು.

"ಬ್ಯಾಡಾರ ದಂಡು ಬೇಲ್ಲುಗ್ಂಟಾ ಬರುವಾಗ
ಬೆಳ್ಳಿಯ ಕವಣೆ ಬಲಗೈಲಿ - ಕರಿಯಣ್ಣ
ಜಂಗೂಸಿ ಹೊಡೆದ ತೆಲಿ ನೂರು
ಒಬ್ಬಾನೆ ಕರಿಯಣ್ಣ ದಿಬ್ಬುಗಂಟು ಬರುವಾಗ
ಕಬ್ಬಕ್ಕಿ ಹಿಂಡುಗವುದಂಗೆ - ಬ್ಯಾಡರ ದಂಡು
ಒಬ್ಬನ ಕೂಟೆ ಕಾದಿ ಮಡಿದಾರು"[೫]

ಬ್ಯಾಡರ ದಂಡಿನ ದಾಳಿಗೆ ಕರಿಯಣ್ಣ ಹೋರಾಡಿ ವೀರ ಮರಣವನ್ನಪ್ಪುತ್ತಾನೆ. ನಂತರ ಗೊಲ್ಲರು ಆತನನ್ನು ಅಲ್ಲಿಯೇ ಸಮಾಧಿ ಮಾಡುತ್ತಾರೆ. ಗೊಲ್ಲರ ಒಂದು ಬೆಡಗಿನವರು ಸೋಮನೋರ ಗೊಲ್ಲರು ಕರಿಯಣ್ಣನ ಹೆಸರಿನಲ್ಲಿ ಅಲಗು ಹೊಯಿಸುತ್ತಾರೆ. ಕೊನೆಗೆ ಕ್ಯಾತೆದೇವರನ್ನು ಸೆರೆಹಿಡಿದು ದುರ್ಗಕ್ಕೆ ಬರುತ್ತಾರೆ. ಹೀಗೆ ಬರುವಾಗ ಸೈನಿಕರಿಗೆ ವಾಂತಿಭೇದಿ ಕಾಣಿಸಕೊಳ್ಳುತ್ತದೆ. ಇದರಿಂದ ಸೈನಿಕರಿಗೆ ಸಾವು-ನೋವು ಉಂಟಾಗುತ್ತದೆ.

ಗೊಲ್ಲರು ದುರ್ಗದ ದೊರೆಯಲ್ಲಿ ಹೋಗಿ ದೇವರನ್ನು ಸೆರೆ ಹಿಡಿದು ನಿಮ್ಮ ದಂಡಿನವರು ತಂದಿರುತ್ತಾರೆ. ನಮ್ಮ ದೇವರನ್ನು ಬಿಡುಗಡೆ ಮಾಡಿದರೆ ನಾವು ಮರಳಿ ಹೋಗುತ್ತೇವೆ ಎಂದಾಗ ದೊರೆ ಅವರನ್ನು ಕೋಟೆಯಿಂದ ಹೊರಕ್ಕೆ ದಬ್ಬಿಸುತ್ತಾನೆ. ಹೀಗೆ ದುರ್ಗದ ದಂಡುವಿಗೆ ವಾಂತಿಭೇದಿಯಿಂದ ಸಾವು ಕಾಣಿಸಿಕೊಂಡು ಒಬ್ಬೊಬ್ಬರೆ ಸಾಯುತ್ತಾರೆ. ಇದಕ್ಕೆ ಕಾರಣ ಕೊರವಂಜಿ ಭವಿಷ್ಯ ಹೀಗೆ ನುಡಿಯುತ್ತದೆ. ಕ್ಯಾತೆದೇವರನ್ನು ಸೆರಿಹಿಡಿದಿರುವುದಕ್ಕೆ ಈ ರೀತಿಯಾಗಿದೆ ಎಂದು ಹೇಳುತ್ತಾರೆ. ದುರ್ಗದ ದೊರೆಯು ತಪ್ಪಾಯಿತೆಂದು ಕ್ಯಾತೆದೇವರನ್ನು ಕೋಟೆಯ ಕೆಳಗಡೆ ಕರುವಿನ ಸರ್ಕಲ್‌ನಲ್ಲಿ ಪ್ರತಿಷ್ಠಾಪಿಸುತ್ತಾರೆ. ಕ್ಯಾತೆದೇವರ ಗುಡಿಯನ್ನು ಈ ಸರ್ಕಲ್ ಬಳಿ ಕಾಣಬಹುದು. ಈ ಸರ್ಕಲ್ ಸುತ್ತಮುತ್ತ ಗೊಲ್ಲರ ಕುಟುಂಬದವರು ಹೆಚ್ಚಿನ ಸಂಖ್ಯೆಯಲ್ಲಿ ನೆಲೆಸಿದ್ದಾರೆ. ಬಹುಶಃ ದೇವರನ್ನು ಸೆರೆಹಿಡಿಯುವಾಗ ಇವರನ್ನು ಸಹ ಕರೆದೊಯ್ದಿರಬಹುದು. ಕರುವಿನಕಟ್ಟೆ ಸರ್ಕಲ್ ಕೂಡ ಪಶುಪಾಲನೆ, ಪಶುಮಂದೆಯನ್ನು ಸೂಚಿಸುವಂತದ್ದು.

ಕರಿಯಣ್ಣ ತಮ್ಮ ಕುಲದೈವವನ್ನು ರಕ್ಷಿಸುವುದರ ಮೂಲಕ ತನ್ನ ಪ್ರಾಣವನ್ನು ಲೆಕ್ಕಿಸದೇ ಪಾಳೆಯಗಾರರ ಸೈನ್ಯದ ಎದುರು ಹೋರಾಡಿ ವೀರಮರಣ ಒಪ್ಪುತ್ತಾನೆ. ಸಮುದಾಯದ ಸಂಸ್ಕೃತಿಗೆ ಧಕ್ಕೆ ಬಾರದ ಹಾಗೆ ತನಗೆ ವಹಿಸಿದ್ದ ಕೆಲಸವನ್ನು ನಿಷ್ಠೆಯಿಂದ ನಿರ್ವಹಿಸಿ ದೇವರನ್ನು ರಕ್ಷಿಸುವುದರಲ್ಲಿ ಕೊನೆಗೆ ವಿಫಲನಾಗುತ್ತಾನೆ. ಹೀಗೆ ವೀರಮರಣ ಒಪ್ಪಿದ ಕರಿಯಣ್ಣ ದೈವಕ್ಕೆ ಏರುತ್ತಾನೆ. ಈತನ ನೆನಪಿಗಾಗಿ 'ಅಲಗ'ನ್ನು ಸ್ಥಾಪಿಸಿ ದೈವದ ರೂಪದಲ್ಲಿ ಪೂಜಿಸುವರು.

**ಕೋಣನ ತಮ್ಮಜ್ಜ**

ತಮ್ಮಣ್ಣ(ತಮ್ಮಜ್ಜ) ಚಳ್ಳಕೆರೆ ತಾಲ್ಲೂಕಿನ ಚೆನ್ನಮ್ಮ ನಾಗತಿಹಳ್ಳಿ ಗ್ರಾಮದವನು. ಈತ ಕಾಡುಗೊಲ್ಲ ಸಮುದಾಯಕ್ಕೆ ಸೇರಿದವನು. ಈತನ ಮೂಲ ಹೆಸರು ತಮ್ಮಣ್ಣ(ತಮ್ಮಜ್ಜ). ಇವನು ಪರಾಕ್ರಮ, ಧೈರ್ಯದಿಂದ ಕೋಣವನ್ನು ಹೊಡೆದು ಉರುಳಿಸಿದ್ದರಿಂದ 'ಕೋಣ' ಎಂಬ ಪದ ಹೆಸರಿನಿಂದ ವಿಶೇಷಣವಾಗಿ ಸೇರಿಕೊಂಡಿದೆ. ಅಂದಿನಿಂದ ಕೋಣನ ತಮ್ಮಜ್ಜನೆಂದು ಹೆಸರಾಗಿದ್ದಾನೆ. ಪ್ರಸ್ತುತ ಈತನ ವಂಶಸ್ಥರಿಗೆ 'ಕೋಣ'ನ ಬೆಡಗಿನವರು ಎಂದು ಕರೆದುಕೊಳ್ಳುತ್ತಾರೆ. ಒಮ್ಮೆ ಈ ಹಳ್ಳಿಯಲ್ಲಿ ಮಹಿಳೆಯೊಬ್ಬಳು ಕೋಣವನ್ನು ಹಗ್ಗ ಹಿಡಿದು ಮೇಯಿಸಲು ಹೊಲಕ್ಕೆ ತೆರಳುವಳು. ಅದು ಹಗ್ಗ ಜಾರಿಸಿಕೊಂಡು ಬೀದಿಯಲ್ಲಿ ರೆಂಕೆ ಹಾಕುತ್ತ ಅಡ್ಡಾ ದಿಡ್ಡಿಯಾಗಿ ಜನಗಳ ಮೇಲೆ ಹಾರಿ ತುಳಿಯುತ್ತ ಓಡೋಡಿ ಬರುತ್ತಿತ್ತು. ತಮ್ಮಜ್ಜ ಬೀದಿಯಲ್ಲಿ ಬರುವಾಗ ಈತನ ಮೇಲೇರಿ ಬಂತು. ಕೋಪ ಬಂದ ತಮ್ಮಜ್ಜ ತನ್ನ ಮೊಣ ಕೈಯಿಂದ ಒಂದೇ ಏಟಿಗೆ ಅದರ ತಲೆ ಮೇಲೆ ಗುದ್ದಿದ ಆ ಹೊಡೆತಕ್ಕೆ ಅದರ ಕಣ್ಣು ಗುಡ್ಡೆಗಳು ಹೊರಕ್ಕೆ ಸಿಡಿದು ಬಂದು ಅಲ್ಲಿಯೇ ಪ್ರಾಣ ಬಿಟ್ಟಿತು. ಅಲ್ಲಿಯವರೆಗೆ ತಮ್ಮಜ್ಜನೆಂದು ಹೆಸರಾಗಿದ್ದವನು, ಕೊಬ್ಬಿದ ಕೋಣವನ್ನು ಸಾಯಿಸಿದ್ದರಿಂದ ಕೋಣನ ತಿಮ್ಮಜ್ಜನೆಂದು ಹೆಸರಾದ. ಕೋಣನ ಬಲಿ ತೆಗೆದುಕೊಂಡ ನೆನಪಿಗಾಗಿ ಒಂದು ಕಲ್ಲನ್ನು ಅಲ್ಲಿಯೇ ನಿಲ್ಲಿಸಿದರು.

ಈ ಮೇಲಿನ ಐತಿಹ್ಯವನ್ನು ಗಮನಿಸಿದರೆ ಪ್ರಧಾನವಾಗಿ ಪಶುಪಾಲನ ಸಂಸ್ಕೃತಿಯನ್ನು ಸೂಚಿಸುತ್ತದೆ. ಎಮ್ಮೆಗಳನ್ನು ಪಾಲನೆ ಮಾಡುತ್ತಿದ್ದರೆಂದು ತಿಳಿಯುತ್ತದೆ. ಕೊಬ್ಬಿದ ಕೋಣವನ್ನು ಮದಿಸಿದ್ದರಿಂದ ತಮ್ಮಣ್ಣನ ಪರಾಕ್ರಮವನ್ನು ಸೂಚಿಸುತ್ತದೆ. ಈತನ ವಂಶಸ್ಥರಿಗೆ 'ಕೋಣ'ನ ಬೆಡಗಿನವರು ಎಂದು ಗುರುತಿಸಿಕೊಳ್ಳುತ್ತಾರೆ. ಈ ಬೆಡಗು ಪಶುಪಾಲನೆಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿರುವಂಥದ್ದು. ಕೋಣನ ತಮ್ಮಣ್ಣನ ಸಮಾಧಿ ಸೂರನಹಳ್ಳಿ(ಚಳ್ಳಕೆರೆ ತಾಲ್ಲೂಕು) ಬಳಿ ಇದ್ದು, ಅಮವಾಸ್ಯೆ, ಹಬ್ಬ, ಜಾತ್ರೆ ದಿನಗಳಲ್ಲಿ ಪೂಜೆ ನಡೆಯುತ್ತದೆ. ಕ್ಯಾತೆದೇವರ ಜಾತ್ರೆಯಲ್ಲಿ ವಿಶೇಷ ಗೌರವ ಸಲ್ಲುವುದು.

ಇನ್ನೊಂದು ಐತಿಹ್ಯ ಪ್ರಕಾರ ಚೆನ್ನಮ್ಮ ನಾಗತಿಹಳ್ಳಿ ಸಮೀಪ ಮತ್ಸಮುದ್ರ ಗ್ರಾಮದಲ್ಲಿ ಬೊಮ್ಮಣ್ಣ ಗೌಡನೆಂಬುವನು ಇರುವನು. ಇವನ ಜೊತೆಯಲ್ಲಿ ಹನುಮಂತರಾಯನ ಪೂಜಾರಿ ಮತ್ತು ತಮ್ಮಣ್ಣನು ಇರುವರು. ಒಮ್ಮೆ ನಿಡಗಲ್ಲು ದೊರೆಗಳು ಹುಲ್ಲಿನ ಮೇಲೆ ತೆರಿಗೆ ವಸೂಲಿ

ಮಾಡಲು ಸೇವಕರನ್ನು ಕಳುಹಿಸುತ್ತಾರೆ. ತೆರಿಗೆಯನ್ನು ಕೇಳಿದಾಗ ಬೊಮ್ಮಣ್ಣಗೌಡ ಮತ್ತು ಪೂಜಾರಿಗಳು ತೆರಿಗೆ ಕೊಡದೆ, ನಾವೇ ನಿಡಗಲ್ಲು ದೊರೆಗಳ ಬಳಿ ಬರುತ್ತೇವೆ ಎಂದು ಸೇವಕರ ಹಿಂದೆ ತೆರಳುವರು. ಇವರ ಜೊತೆ ಹರೆಯಕ್ಕೆ ಬಂದ ತಮ್ಮಣ್ಣ ಬೇಡವೆಂದರೂ ಹಠ ಮಾಡಿ ಹೋಗುತ್ತಾನೆ. ನಿಡುಗಲ್ಲಿನಲ್ಲಿ ಕೊಬ್ಬಿದ ಕೋಣವು ಜನರನ್ನು ಎದುರಿಸಿಕೊಂಡು ರಾಜಬೀದಿಯಲ್ಲಿ ಮೆರೆಯುತ್ತಿರುತ್ತದೆ. ಅಲ್ಲಿನ ಜನರು ಕೋಣವನ್ನು ಕಂಡರೆ ಭಯ ಭೀತರಾಗಿ ಬೀದಿಗೆ ಬರಲು ಹೆದರುತ್ತಿದ್ದರು. ಇವರು ಹೋಗುತ್ತಿದ್ದಂತೆ, ಕೋಣವು ಇವರ ಮೇಲೇರಿ ಬರುತ್ತದೆ. ತಮ್ಮಣ್ಣನಿಗೆ ಸಿಟ್ಟು ಬಂದು ಕೋಣವನ್ನು ಮೊಣಕೈಯಿಂದ ಗುದ್ದಿ ಸಾಯಿಸುತ್ತಾನೆ. ಹೀಗೆ ಸಾಯಿಸಿದ ಸಂಗತಿಯು ನಿಡಗಲ್ಲು ದೊರೆಗೆ ತಿಳಿಯುತ್ತದೆ. ಇಷ್ಟು ದಿನಗಳ ಕಾಲ ಕೋಣವನ್ನು ಯಾರು ಎದುರಿಸಲಿಲ್ಲ. ಅದರೊಂದಿಗೆ ಸೆಣಸಾಡಿ ಸಾಯಿಸಿದ ವೀರ ಯಾರೆಂದು, ಸೇವಕರಿಗೆ ಕರೆತನ್ನಿ ಎಂದು ಆಜ್ಞೆ ಮಾಡುತ್ತಾನೆ. ಆ ಸ್ಥಾನಕ್ಕೆ ಬೊಮ್ಮಣ್ಣ, ತಮ್ಮಣ್ಣ ಮತ್ತು ಪೂಜಾರಿ ದೊರೆ ಬಳಿ ನಿಂತಾಗ ಇವರನ್ನು ಕಂಡು ಸಂತೋಷಗೊಂಡು ಗೌರವಿಸುತ್ತಾನೆ. ನಿಮಗೆ ನಮ್ಮ ಪ್ರಾಂತ್ಯದಲ್ಲಿ ಏನು ಬೇಕು ಎಂದು ಕೇಳಿದಾಗ ನಮಗೆ ಪಶುಪಾಲನೆ ಮಾಡಿ ನೆಲೆಸಲು ಅನುಮತಿ ಬೇಕು ಎನ್ನುತ್ತಾರೆ. ಆಗ ತಮ್ಮಣ್ಣನಿಗೆ ಕೇಳಿದಾಗ ತಮ್ಮಣ್ಣ ಬೊಮ್ಮಣ್ಣಗೌಡನಿಗೆ ಏನು ನೀಡುವರು ಅದು ನನಗೆ ಸಲ್ಲಬೇಕು. ಆತನಿಗೆ ಒಂದು ಪೂಜೆಯಲ್ಲಿ ಬಲಭಾಗ ಕೊಟ್ಟರೆ ನನಗೆ ಎಡಭಾಗ ಬೇಕು ಎಂದು ಕೇಳುತ್ತಾನೆ. ದೊರೆ ಅದನ್ನು ಒಪ್ಪಿಗೆ ನೀಡುತ್ತಾನೆ. ಅದರಂತೆ ಕ್ಯಾತೆದೇವರಿಗೆ ಬೊಮ್ಮಣ್ಣಗೌಡ ಮತ್ತು ಕೋಣನವರು ಒಕ್ಕಲಾಗಿದ್ದಾರೆ.

**ಹಂದಿ ಸಿರಿಯಣ್ಣ**

ಸಿರಿಯಣ್ಣ ಚಳ್ಳಕೆರೆ ತಾಲ್ಲೂಕಿನ ತಿಮ್ಮಣ್ಣನಾಯಕನ ಕೋಟೆಯವನು. ಈತನ ಬಗೆಗೆ ಐತಿಹ್ಯ ಹೀಗಿದೆ. ಸಿರಿಯಣ್ಣ ನಿಡಗಲ್ಲು ಪಾಳೆಯಗಾರರ ಸೈನ್ಯದಲ್ಲಿದ್ದವನು. ಈ ಪಾಳೆಯಗಾರರ ಪರವಾಗಿ ಯುದ್ಧಗಳಲ್ಲಿ ಭಾಗಿಯಾಗಿ ಗೆದ್ದ ವೀರ. ಕಾಳಗವೆಂದರೆ ಸಂಭ್ರಮಿಸುವ ಶೂರ. ಕೋಟೆ ಕೆರೆಯ ಬಳಿ ಹೋಗುವಾಗ, ಹಂದಿಗಳ ದಂಡು ಎದುರಾಯಿತು. ಅನಿವಾರ್ಯವಾಗಿ ಹಂದಿಯ ಮೇಲೆ ಯುದ್ಧ ಮಾಡುತ್ತಾನೆ. ಹಂದಿ ಮತ್ತು ಸಿರಿಯಣ್ಣನ ಮಧ್ಯೆ ಘೋರವಾದ ಕದನ ನಡೆದು ಹಂದಿಯೊಂದಿಗೆ ಹೋರಾಡುತ್ತಲೇ ಮಡಿಯುತ್ತಾನೆ. ತನ್ನ ಮೇಲೆ ಆಕ್ರಮಣ ಮಾಡಿದ ಹಂದಿಗಳನ್ನು ಕೊಲ್ಲುತ್ತಾನೆ. ಇಲ್ಲಿ ನಡೆದ ಸಂಗತಿಯನ್ನು ಸಿರಿಯಣ್ಣನ ತಾಯಿ ಸಿಂಪಮ್ಮನಿಗೆ ತಿಳಿಯುತ್ತದೆ. ಆಕೆ ಶೋಕ ಮಾಡುತ್ತಾ ಬಂದು ಮಣ್ಣು ಮಾಡಿದಳು. ಆನಂತರ ಅಲಗು ಹೊಯಿಸುತ್ತಾಳೆ. ಇಂದಿಗೂ ಸಿರಿಯಣ್ಣ ಮತ್ತು ಹಂದಿಯ ಸಮಾಧಿಗಳನ್ನು ಚಳ್ಳಕೆರೆ ತಾಲ್ಲೂಕಿನ ಟಿ.ಎನ್. ಕೋಟೆ ಬಳಿ ಇರುವ ಕೋಟೆ ಕೆರೆಯ ಸಮೀಪದಲ್ಲಿ ನೋಡಬಹುದು. ಈ ಗ್ರಾಮದ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಜನರು ಸಿರಿಯಣ್ಣ, ಸಿರಿಯಮ್ಮ ಎಂಬ ಹೆಸರನ್ನೆ ಹೆಚ್ಚು ಇಟ್ಟಿರುವುದನ್ನು ನೋಡಬಹುದು. ಹಂದಿಯೊಂದಿಗೆ ಹೋರಾಡುತ್ತ ಮಡಿದಿದ್ದರಿಂದ ಹಂದಿ ಸಿರಿಯಣ್ಣನೆಂಬ ಹೆಸರು ಬಂದಿದೆ.

## ವೀರನಾಗಣ್ಣ - ವೀರ ತಿಮ್ಮವ್ವ

ವೀರನಾಗಣ್ಣ - ವೀರತಿಮ್ಮವ್ವನ ಕಥನಗೀತೆಯು ಹಿರಿಯೂರು ತಾಲ್ಲೂಕಿನ ಯರಬಳ್ಳಿ ಮತ್ತು ಮದನಕುಂಟೆ ಸುತ್ತಮುತ್ತಲ ಗ್ರಾಮಗಳಲ್ಲಿ ಹೆಚ್ಚು ಪ್ರಚಲಿತದಲ್ಲಿದೆ. ನಾಗಣ್ಣ ಜಂಪಳವ್ವನ ಮಗ. ಜಂಪಳವ್ವನ ಗಂಡ ಪಶುಪಾಲಕ. ಈತ ತೀರಿಕೊಂಡ ಮೇಲೆ ಜಂಪಳವ್ವ ದನಗಳನ್ನು ಮೇಯಿಸುವ ಕಾಯಕದಲ್ಲಿ ತೊಡಗಿರುತ್ತಾಳೆ. ನಾಗಣ್ಣ ದೊಡ್ಡವನಾದ ಮೇಲೆ ದನಗಳನ್ನು ಕಾಯಲು ತೊಡಗಿಸಿರುತ್ತಾಳೆ. ಜಂಪಳವ್ವ ಹಾಲು, ಮೊಸರು ಮಾರುವ ಕಾಯಕದಲ್ಲಿ ನಿರತಳಾಗಿರುತ್ತಾಳೆ. ನಾಗಣ್ಣ ಪ್ರತಿದಿನ ಅಡವಿಗೆ ದನಗಳನ್ನು ಮೇಯಿಸಲು ಹೊಡೆದುಕೊಂಡು ಹೋಗುತ್ತಾನೆ. ಒಂದು ದಿನ ಹುಲಿಯೊಂದು ದನಗಳ ಮೇಲೆ ದಾಳಿ ಮಾಡುತ್ತದೆ. ಅದನ್ನು ಹಿಂಬಾಲಿಸುತ್ತ ಸಿರಾದವರೆಗೆ ಹೋಗಿ ಪಂಜರದ ಹುಲಿಯನ್ನು ಹೊಡೆದ. ಅರಮನೆಯ ಸಿಬ್ಬಂದಿ ಬಾಲಕ ನಾಗಣ್ಣನನ್ನು ಬಂಧಿಸಿ ರಂಗಪ್ಪನ ಮುಂದೆ ಹಾಜರು ಪಡಿಸಿದರು. ರಾಜ ಬಂಧನದಲ್ಲಿಡಲು ಆದೇಶಿಸಿದ. ತಾಯಿ ಜಂಪವ್ವ ಬಿಡುಗಡೆಗಾಗಿ ಬೇಡಿಕೊಂಡರೂ ಪ್ರಯೋಜನವಾಗಲಿಲ್ಲ. ನಂತರ ಬಿಡುಗಡೆಯಾಗುತ್ತದೆ. ಜಂಪಳವ್ವ ಸಿರಾ ಸೀಮೆಯನ್ನು ತೊರೆದು ಯರಬಳ್ಳಿ ಕಡೆ ಬರುತ್ತಾರೆ. ಮತ್ತೆ ನಾಗಣ್ಣ ತನ್ನ ಸಣ್ಣ ದಂಡಿನೊಡನೆ ಹರ್ತಿಕೋಟೆಗೆ ಹೋಗಿ ಅಲ್ಲಿ ಕಂಕಜಟ್ಟಿ, ಬಾಣಂತಮ್ಮ ಇವರನ್ನು ಕೊಂದು ಕೀರ್ತಿ ಗಳಿಸಿದ. ಇಂಥ ವೀರರನ್ನು ವಿವಾಹವಾಗಲು ಹೆಣ್ಣು ಮಕ್ಕಳು ಬಯಸಿದರು. ನಾಗಣ್ಣ ಹರ್ತಿಕೋಟೆಯ ತಿಮ್ಮವ್ವಳನ್ನು ಬಯಸಿದ. ಮುಂದೊಂದು ದಿನ ವಿವಾಹ ಆಗಿಯೇ ಬಿಟ್ಟ. ಲಗ್ನವಾದ ಕೆಲವೇ ವರ್ಷಗಳಲ್ಲಿ ನಾಗಣ್ಣ ಸಾಣಿಕೆರೆಯ ಬಳಿ ಆದ ಲಡಾಯಿಯಲ್ಲಿ ಭಾಗವಹಿಸಿ ತೀರಿಕೊಂಡ.

ತಿಮ್ಮವ್ವನಿಗೆ ಮದುವೆಗೆ ಮುಂಚೆ ಕನಸಿನಲ್ಲಿ ಸಾವು ಕಾಣಿಸುತ್ತದೆ. ಅವಳ ತಂದೆ ಮತ್ತು ಅಣ್ಣಂದಿರಲ್ಲಿ ಬೇಡುತ್ತಾಳೆ.

> "ಅಕ್ಕೀಯ ಅನ್ನಾಕ ಒಪ್ಪಾದಮಾತೀಗೆ ಅಪ್ಪಯ್ಯನನ್ನ
> ಕೊಡದಿರೋ ಸಂದನೋರ । ಪುತ್ರಾನು
> ಕಾಳಗದಾಗ ಮಡುದಾನೋ
> ಆಲು ಅನ್ನಾಕ ಮೋವಾದ ಮಾತೀಗೆ
> ರಾಯ ನನ್ನ ಕೊಡದೀರೋ । ಸಂದನೋರ
> ಬಾಲಕಾಳುಗದಲ್ಲಿ ಮಡುದಾನೋ ॥"[೬]

ಆದರೂ ತಿಮ್ಮವ್ವನನ್ನು ನಾಗಣ್ಣನಿಗೆ ಕೊಟ್ಟು ಮದುವೆ ಮಾಡುತ್ತಾರೆ. ಅವಳ ಕನಸಿನ ಕಳವಳಕ್ಕೆ ಯಾರು ಮನ್ನಣೆ ಕೊಡುವುದಿಲ್ಲ. ಬಳೆ ತೊಡುವಾಗ ಕುಪ್ಪಸ ತೊಡುವಾಗ ಆಗುವ ಅಪಶಕುನಗಳಲ್ಲಿ ಅವನ ಸಾವು ಖಂಡಿತವೇ ಎಂದೂ ಕಂಡು ಬಂದರೂ ಮನೆಯ ಹಿರಿಯರು ವಿವಾಹ ಮಾಡಿಯೇ ತೀರುತ್ತಾರೆ.

"ವುಲಿಯ ವಡೆದವನೆ ವುಲಿ ಚರ್ಮವೊದ್ದವನೆ
ನೀರಿಗೆ ನಾಗಣ್ಣ ಬಲು ಬಂಟ । ಸೀರ್ಯಾದ
ವುಲಿಯಾ ಕೊಂದರಸು ಇವನಂತೆ ॥"[೭]

ಇಂತಹ ವೀರನನ್ನು ಬಯಸಿದ ಹೆಣ್ಣುಗಳು ಹಲವಾರು. ಆದರೆ ನಾಗಣ್ಣ ಬಯಸಿದ್ದು ಹರ್ತಿಕೋಟೆಯ ತಿಮ್ಮವ್ವನನ್ನು. ಹಾಗೆಯೇ ಮದುವೆಯಾದ. ಹುಲಿಯನ್ನು ಹೊಡೆದ ಪರಾಕ್ರಮಿ ಪಾಳೆಯಗಾರ ಸಿರಾದ ರಂಗಣ್ಣನಾಯಕನಿಂದ ಚಿನ್ನದ ಸಲಗೆ ಭೂಚಕ್ರದ ಗೊಡಗು ಪಡೆದ.

"ಮಡಿದನಂಬುದ ಕೇಳಿ ಮಡಿಯಾತಗುದುಟ್ಟಾಳು
ಇಡುದಾಳು ಕನ್ನಡಿಯಾ ಬಲಗೈಲಿ । ನಾಗಣ್ಣನ
ಅಡಿಗೇಯ ರಾಣಿ ವೊರಟಾಳೆ ॥"[೮]

ತಿಮ್ಮವ್ವ ಸಾಣಿಕೆರೆ ಬಯಲಿಗೆ ಬಂದಳು. ಯುದ್ಧದಲ್ಲಿ ಹೋರಾಡಿ ಕೊನೆಯ ಜೀವನ ಇಟ್ಟುಕೊಂಡಿದ್ದ ಗಂಡನ ತಲೆಯನ್ನು ತೊಡೆಯ ಮೇಲಿಟ್ಟುಕೊಂಡು ಬಾಯಲ್ಲಿ ನೀರು ಬಿಟ್ಟಳು. ಕೊನೆಗೆ ಜೀವ ಹೋಗುತ್ತದೆ. ಸತ್ತ ಗಂಡನ ದೇಹದಿಂದ ತಲೆಯನ್ನು ಕತ್ತರಿಸಿ ಮಡಿಲಲ್ಲಿಟ್ಟುಕೊಂಡು ಹೋಗುತ್ತಾಳೆ. ಈ ತಲೆಯನ್ನು ಒಂದು ಕಡೆ ಯಾರಿಗೂ ಕಾಣದ ರೀತಿಯಲ್ಲಿಟ್ಟು ಪೂಜೆ ಮಾಡಿಕೊಡು ಇರುತ್ತಾಳೆ. ಗಂಡ ಸತ್ತು ವರ್ಷ ಕಳೆದರೂ ಇನ್ನೂ ಬದುಕಿದ್ದಾಳೆ ಎಂದು ಜನ ಆಡಿಕೊಳ್ಳುತ್ತಾರೆ. ಈ ಮಾತುಗಳನ್ನು ಕೇಳಿ ಕೊಂಡವಾಗಲು ನಿರ್ಧರಿಸಿ ಬಚ್ಚಿಟ್ಟಿದ್ದ ಗಂಡನ ತಲೆಯನ್ನು ತೆಗೆದು ತೋರಿಸಿದಳು. ಆ ತಲೆಯಿಂದ ಇನ್ನು ರಕ್ತ ಜಿನುಗುತ್ತಿದ್ದು ಕಣ್ಣುಗಳು ತಿರುಗುತ್ತಿದ್ದವಂತೆ. ಈ ದೃಶ್ಯವನ್ನು ಕಂಡ ಜನ ಅವಳನ್ನು ಸತ್ಯವಂತೆ ಎಂದು ಹೊಗಳಿದರಂತೆ. ನಂತರ ಈ ತಲೆಯನ್ನು ಮಡಿಲಲ್ಲಿಟ್ಟುಕೊಂಡು ಕೊಂಡಕ್ಕೆ ಹೋಗುತ್ತಾಳೆ.

"ಗಂಡ ಸತ್ತ ಮೇಲೆ ಗಳಿಗೆ ನಾನಿರಲಾರೆ
ಗಂಜೀಯ ಸೀರೆ ನಾನುಡಲಾರೆ ।
ಗಂಜೀಯ ಸೀರೆ ನಾನುಡಲಾರೆ ಮಾವಗಳ
ಚಿತ್ತಾರದ ಕೊಂಡ ತಗಸೀರಿ ॥"[೯]

ತಿಮ್ಮವ್ವ ಕೊಂಡಕ್ಕೆ ಹೋಗುವುದಕ್ಕೆ ಅಪ್ಪಣೆಯನ್ನು ಕೇಳುತ್ತಾಳೆ. ತವರಿನವರು ಬಂದು ಕೊಂಡಕ್ಕೆ ಹೋಗದಂತೆ ತಡೆಯಲು ಪ್ರಯತ್ನಿಸುತ್ತಾರೆ. ಆಗ ಅಣ್ಣನನ್ನು 'ನಿನ ತಂಗೀಯ ಬಡವರಿಗೆ ಕೊಡಬಹುದೆ' ಎಂದು ಕೇಳುತ್ತಾಳೆ. ಅದಕ್ಕೆ ಅವಳ ಅಣ್ಣನ

"ಬಡವರಿಗೆ ಕೊಟ್ಟಾರೆ ಉಡುವಾಕೆ ಸೀರಿಲ್ಲ
ಒಡವೆ ಬಂಗಾರ ಮೊದಲಿಲ್ಲ। ತಿಮ್ಮವ್ವ ನಿನ್ನ
ತೆರವಿನಣವೀಗೆ ತಡೆದೇವು ॥"[೧೦]

ಎಂದು ತಂಗಿಯನ್ನು ಕೊಂಡ ಬೀಳುವುದರಿಂದ ತಡೆಯಲು ತೆರದ ಹಣದ ನೆಪವೊಡ್ಡುತ್ತಾರೆ.

ಈ ಕಥನ ಗೀತೆಯಲ್ಲಿ ಮತ್ತೊಂದು ವಿಶೇಷತೆಯನ್ನು ಕಾಣಬಹುದು. ಕೊಂಡಕ್ಕೆ ಹೋಗುವ ಈ ತಿಮ್ಮವ್ವ ತವರಿನವರ ಮನೆಗೆ ಶಾಪ ಹಾಕುತ್ತಾಳೆ. ತವರಿನವರು ಕೊಂಡಕ್ಕೆ ಹೋಗುವುದನ್ನು ತಡೆಯಲು ಬಂದಾಗ ಅವರು 'ತೆರ'ದ ನೆಪವೊಡ್ಡಿದ್ದು ಇದಕ್ಕೆ ಕಾರಣವಿರಬಹುದು ಅಥವಾ ಮದುವೆಗೆ ಮನ್ನವೇ ಕನಸಿನಲ್ಲಿ ನಾಗಣ್ಣ ಮಡಿಯುವನೆಂದು ಹೇಳಿದ್ದಳು. ಅದನ್ನು ಮೀರಿ ಅವಳನ್ನು ವಿವಾಹ ಮಾಡಿಕೊಟ್ಟಿದ್ದು ಕಾರಣವಿರಬಹುದು. ಇದನ್ನು ಅರಿಯದ ಮಾವನ ಮನೆಯವರು ತನ್ನನ್ನು ಮದುವೆ ಮಾಡಿಕೊಡಿರೆಂದು ಅವರಿಗೆ ಶುಭ ಹಾರೈಸಿದ್ದಾಳೆಯೇ ಎಂಬ ಪ್ರಶ್ನೆ ಕಾಡುತ್ತದೆ.

ತಿಮ್ಮವ್ವ ಒಂದು ದೃಢ ನಿರ್ಧಾರಕ್ಕೆ ಬಂದು ತನ್ನ ಗಂಡನ ತಲೆಯನ್ನು ಮಡಿಲಿಗೆ ಕಟ್ಟಿಕೊಂಡು ಧುಮುಕುತ್ತಾಳೆ. ಇದೊಂದು ತನ್ನ ಪಾಲಿನ ಕರ್ತವ್ಯವೆಂಬಂತೆ ಸಹಜವಾಗಿರುತ್ತಾಳೆ. ಅವಳನ್ನು ಕರುಳ ಬಳ್ಳಿ ಕಿಚ್ಚಿಗೆ ತವರಿನವರು ತಡೆಯುವುದು ಬಿಟ್ಟರೆ ಮತ್ಯಾರು ತಡೆಯುವುದಿಲ್ಲ. ಇದು ತಪ್ಪು ಎಂದು ಹೇಳುವುದಿಲ್ಲ. ಕೊಂಡದಲ್ಲಿ ತಿಮ್ಮವ್ವ ಸುಡುತ್ತಿದ್ದಾಗ ಎಲ್ಲರೂ ತಮ್ಮ ತಮ್ಮ ಪಾಡಿಗೆ ತಾವು ಮನೆಗೆ ಮರಳುತ್ತಾರೆ. ಹೀಗೆ ತಿಮ್ಮವ್ವ-ನಾಗಣ್ಣ ಮಡಿದು ವೀರರೆಂಬ ಹೆಸರು ಪಡೆಯುತ್ತಾರೆ. ಈ ವೀರ ತಿಮ್ಮವ್ವನ ಕಥನ ಗೀತೆಯು ಯರಬಳ್ಳಿ ಗೊಲ್ಲರಹಟ್ಟಿ-ಹಿರಿಯಟ್ಟಿ, ಮದನಕುಂಟೆಯಲ್ಲಿ ಈಗಲೂ ಪ್ರಚಲಿತದಲ್ಲಿದೆ. ಯರಬಳ್ಳಿ(ಹಿರಿಯೂರು ತಾಲ್ಲೂಕು)ಯಿಂದ ಒಂದು ಕಿ.ಮೀ. ದೂರದ ಬಳಿ ದಿನ್ನೆಯಲ್ಲಿ ವೀರ ತಿಮ್ಮವ್ವ ಕೊಂಡ ಹೊಕ್ಕ ಸ್ಥಳವನ್ನು ನೋಡಬಹುದು. ಅಲ್ಲಿ ನಿಲ್ಲಿಸಲ್ಪಟ್ಟ ಮಾಸ್ತಿಕಲ್ಲು ಈಗಲೂ ಇದೆ. ಪ್ರತಿವರ್ಷ ಹಾಲದ ಗುಡ್ಡದಪ್ಪನ ಜಾತ್ರೆಯ ಸಮಯದಲ್ಲಿ ಮಾಸ್ತಿಕಲ್ಲನ್ನು ಪೂಜೆ ಮಾಡಲಾಗುತ್ತದೆ. ಅಲ್ಲಿನ ಸುತ್ತಮುತ್ತಲ ಜನರು ಮಕ್ಕಳಾಗದಿದ್ದವರು ಇಲ್ಲಿ ಪೂಜೆ ಸಲ್ಲಿಸುತ್ತಾರೆ.

**ಈರೋಬಿ**

ಈರೋಬಿ ಕರಿಯೋಬಿನಹಳ್ಳಿ ಗ್ರಾಮದವಳು. ಈಕೆಯನ್ನು ಆಂಧ್ರದ ಬೆಸ್ತರಹಳ್ಳಿಗೆ ಮದುವೆ ಮಾಡಿರುತ್ತಾರೆ. ಆದರೆ ಇವಳು ಕೊಂಡವಾಗಿರುವುದು ಹಿರಿಯೂರು ತಾಲ್ಲೂಕಿನ ಬುಡರ ಕುಂಟೆಯಲ್ಲಿ. ಇವಳ ಗಂಡ ಕುರಿಗಾಯಿಯಾಗಿರುತ್ತಾನೆ. ಈರೋಬಿಯ ಐತಿಹ್ಯ ಹೀಗಿದೆ. ಬಾಣಂತಿಯಾದ ಈರೋಬಿ ಊಟಕ್ಕೆ ಗಂಗಳ(ತಟ್ಟೆ) ತರಲು ಘಟ್ಟದ ಕೆಳಗೆ ಹೋದ ಗಂಡನು ಮಲಗಿದ್ದ ಹುಲಿಯನ್ನು ಕೆಣಕಿ ಮಡಿಯುತ್ತಾನೆ. ಗಂಡನ ಈ ಸುದ್ದಿ ರಕ್ತದ ಪಾವುಡದೊಂದಿಗೆ ಬಂದಾಗ ಅವಳು ಕೊಂಡಕ್ಕೆ ಹೋದ ಶೋಚನೀಯ ಸಂದರ್ಭವೇ ಈರೋಬಿಯ ಕಥನ ಐತಿಹ್ಯ. ಬಾಣಂತಿ ಈರೋಬಿಯ ಸಂದರ್ಭದಲ್ಲಿ ಹಾಡುಗಾರರು ಅವಳ ಗಂಡ ಮಡಿದ ಸಂಗತಿಯನ್ನು ಕಟ್ಟಿಕೊಳ್ಳುತ್ತಾರೆ. ನಂತರ ಅವಳಿಗೆ ಬಿದ್ದ ಕೇಡನ್ನು ಗಂಡನ ಸಾವಿಗೆ ಸಮೀಕರಿಸುವಲ್ಲಿ ಮನೋವೈಜ್ಞಾನಿಕವಾದ ತಿಳುವಳಿಕೆಯನ್ನು ಇಲ್ಲಿ ನೀಡುತ್ತಾರೆ.

ಇವಳು ಬಾಣಂತಿಯಾದಾಗ ಊಟ ಮಾಡಲು ಒಂದು ತಟ್ಟೆ ತರಲು ಇವಳ ಗಂಡನು ಘಟ್ಟದ ಕೆಳಗೆ ಬಂದು ಮಲಗಿದ್ದ ಹುಲಿಯನ್ನು ಕೆಣಕಿ ಮಡಿದ ಸುದ್ದಿಯನ್ನು ಈರೋಬಿ ಸುಲಭಕ್ಕೆ ನಂಬಿದ ಹೆಣ್ಣಲ್ಲ.

"ಸತ್ತ ಸುದ್ದಿ ಬರಲಿ ನೆತ್ತರದರಬಿ ಬರಲಿ
ಕಿತ್ತುಳ್ಳಿ ಬರಲಿ ಗುರುತೀಗೆ - ಸೋಮವಾರದ
ಹೂನಂತೆ ಕೊಂಡ ಹೋಗುತ್ತೀನಿ"[10]

ಈರೋಬಿ ಬಾಣಂತಿಯಾಗಿದ್ದಾಗ ಗಂಡನು ಘಟ್ಟದ ಕೆಳಗೆ ಹೆಂಡತಿಗಾಗಿ ತಟ್ಟೆಯೊಂದನ್ನು ತರಲು ಹೋಗಿ ಹುಲಿಯೊಡನೆ ಸೆಣಸಾಡಿ ಸಾವನ್ನಪ್ಪುತ್ತಾನೆ. ಈ ಸುದ್ದಿ ತಿಳಿದ ಕೂಡಲೇ ಈರೋಬಿಯು ಕೊಂಡವೇರುತ್ತಾಳೆ. ಮೇಲೆ ತಿಳಿಸಿದ ಎಲ್ಲಾ ಹೆಣ್ಣುಮಕ್ಕಳು ಸಂಶಯಕ್ಕೆ ಗುರಿಯಾದವರು. ತಾವು ಸತ್ತ ಮೇಲೆ ದೈವವಾಗಿರುತ್ತೀವಿ, ಎಲ್ಲರ ಮನದಲ್ಲೂ ಆದರ್ಶವಾಗುತ್ತವೆಂದೇನೂ ಭಾವಿಸಿದ್ದವರಲ್ಲ. ಆದರೆ ಸಾಮಾಜಿಕ ಸಮಸ್ಯೆಗಳನ್ನು ಎದುರಿಸುವಲ್ಲಿ ಅಸಹಾಯಕರಾದವರು. ಜೀವಂತ ಇದ್ದು ಮುಂದೆ ಆಗಬಹುದಾದ ಅನಾಹುತಗಳಿಗೆ ಗುರಿಯಾಗುವುದಕ್ಕಿಂತ ಸಾವೇ ಮೇಲು ಎಂದುಕೊಂಡವರು. ಇಂಥ ಮಹಿಳೆಯರನ್ನು ಸಮಾಜದಲ್ಲಿ ಆದರ್ಶದ ಮಟ್ಟಕ್ಕೇರಿಸಿ ಅವರಿಗೆ ಕಟ್ಟೆಗಳು, ಗುಡಿಗಳನ್ನು ಕಟ್ಟಿಸುವ ಮೂಲಕ ದೈವತ್ವಕ್ಕೇರಿಸಿದ್ದಾರೆ. ಇವರೆಲ್ಲಾ ಇಂದಿಗೂ ಪೂಜೆಗೊಳ್ಳುತ್ತಾರೆ.

ಈರೋಬಿಯನ್ನು ಕೊಂಡಕ್ಕೆ ಹೋಗಬೇಕೆಂದು ಯಾರು ನಿಶ್ಚಿಯಿಸುವುದಿಲ್ಲ, ಒತ್ತಾಯಿಸುವುದಿಲ್ಲ. ಆದರೆ ಹಿಂದಿನಿಂದ ಬಂದ ಆಚರಣೆಯಂತೆ, ನಂಬಿಕೆಯಂತೆ ಕೊಂಡ ಹೋಗುವುದಕ್ಕೆ ತಾನೇ ನಿರ್ಧರಿಸಿ ಬಿಡುತ್ತಾಳೆ. ಇಂತಹದ್ದೊಂದು ಮನಸ್ಥಿತಿಯನ್ನು ಈ ಸಮಾಜ ನಿರ್ಮಿಸಿ ಬಿಡುತ್ತದೆ. ಇವಳು ಗಂಡನ ಮಡಿದ ಸುದ್ದಿ ತಿಳಿಯುವ ಮೊದಲೇ ತಾನೊಂದು ಕನಸನ್ನು ಕಂಡದ್ದಾಗಿ ಅತ್ತೆಗೆ ಹೇಳುತ್ತಾಳೆ. ನನ್ನ ಗಂಡ ಮಲಗುವ ಸುತ್ತಲು ಕತ್ತಿಗಳು ಮುತ್ತಿದಂತೆ, ಹುತ್ತದ ಮೇಗಲ ಕಾಗೆ ನೆತ್ತರು ಕಾರಿದಂತೆ ನನ್ನ ಮೂಗತಿ ಮುರಿದಂತೆ ಮುಂದಿನ ಹಲ್ಲು ಸಿಡಿದಂತೆ, ಹೀಗೆ ಹಲವು ಬಗೆಯಲ್ಲಿ ಕನಸು ವಿಸ್ತರಿಸುತ್ತದೆ. ಈ ಕನಸನ್ನು ಕಂಡ ಈರೋಬಿ ಭಯ ಬೀಳುತ್ತಾಳೆ. ಆಗ ಅತ್ತೆ ಇದನ್ನು ತೇಲಿಸುತ್ತಾಳೆ. ನಮ್ಮಂಥವರಿಗೆ ಕನಸುಗಳು ಬೀಳುವುದಿಲ್ಲ ಎಂದು ಬಿಡುತ್ತಾಳೆ. ತಾಯಿಯೊಬ್ಬಳಿಗೆ ಮಗನ ಮಮಕಾರದಲ್ಲಿ ಕೇಡನ್ನು ಕನಸಲ್ಲೂ ಬಯಸದವಳು. ಆದರೆ ಈ ಕನಸು ನಿಜವಾಗಿ ಬಿಡುತ್ತದೆ. ಸಿಗ್ಮಂಡ್ ಫ್ರಾಯ್ಡ್ ಹೇಳುವಂತೆ ಕನಸುಗಳು ಮನುಷ್ಯ ಭ್ರಮೆಯನ್ನು, ಊಹೆಯನ್ನು ಒಳಗೊಂಡಿರುತ್ತವೆ. ನಡೆಯಬಹುದಾದ ಘಟನೆಗಳನ್ನು ಸಂಭಾವ್ಯಗಳನ್ನು ಕನಸುಗಳು ಒಳಗೊಂಡಿರುತ್ತವೆ ಎಂಬ ಮಾತು ಈರೋಬಿಯ ಕನಸಿಗೆ ಹತ್ತಿರವಾದುದು.

**ಈರಮಾಸ್ತಮ್ಮ**

ಈರಮಾಸ್ತಮ್ಮ ಗೊಲ್ಲರ ಮಹಿಳೆ. ಹಿರಿಯೂರು ತಾಲ್ಲೂಕಿನ 'ಪಿಲಾಳಿ' ಗ್ರಾಮದವಳು. ತನ್ನ ಸಲುವಾಗಿ ತನ್ನ ಪ್ರಿಯಕರ ನೀರಲ್ಲಿ ಮುಳುಗಿ ಸತ್ತನೆಂಬ ಕಾರಣಕ್ಕೆ ಸತ್ತವನ ಗುಡ್ಡೆಗೆ ಧಾರೆ ಎರೆದು ಹೋದ ಕನ್ಯೆಯೊಬ್ಬಳ ಧಾರುಣ ಐತಿಹ್ಯ ಈರಮಾಸ್ತಮ್ಮನದು.

ಮಾಸ್ತಮ್ಮ ಎಮ್ಮೆ ಕಾಯಲು ಪಿಲಾಳಿ ಕೆರೆ ಬಳಿ ಹೋದಳು. ಅಲ್ಲಿ ದೊಡ್ಡಣ್ಣ ಎಂಬಾತ ಕುರಿಕಾಯಲು ಬರುತ್ತಿದ್ದ. ಇಬ್ಬರ ಮಧ್ಯೆ ಸ್ನೇಹ ಬೆಳೆದು ನಂತರ ಪ್ರೀತಿಗೆ ತಿರುಗಿ ಮದುವೆಯ ಕನಸು ಕಾಣುತ್ತಿರುತ್ತಾರೆ. ಒಂದು ದಿನ ನೀರಿನ ಮಡುವಿನ ಬಳಿ ಕುಳಿತುಕೊಂಡಿರುವಾಗ ಮಾಸ್ತಮ್ಮಳ ಕೈಯ ಉಂಗುರ ಜಾರಿ ನೀರಿಗೆ ಬೀಳುತ್ತದೆ. ಅದನ್ನು ತರಲು ಹೋದ ದೊಡ್ಡಣ್ಣನು ನೀರಿನಲ್ಲಿ ಜಾಲಿ ಮರದ ಮೋಟಿಗೆ ಅವನ ಉದ್ದನೆಯ ಕೂದಲು ಸಿಕ್ಕಿ, ಮೇಲೆ ಬರಲಾಗದೆ ಸಾವನ್ನಪ್ಪುತ್ತಾನೆ.

ತನ್ನಿಂದ ದೊಡ್ಡಣ್ಣನು ಸತ್ತನು ಎಂದು ಅವನ ಮೇಲಿದ್ದ ಪ್ರೀತಿಯಿಂದ ಮಾಸ್ತಮ್ಮ ಸತ್ತವನ ಗುಡ್ಡೆಗೆ ಧಾರೆ ಎರೆಸಿಕೊಂಡು ತಾನು ಕೊಂಡಕ್ಕೆ ಬೀಳುತ್ತಾಳೆ. ಮಾಸ್ತಮ್ಮಳು ಮನಸಾಕ್ಷಿಗೆ ವಿರುದ್ಧವಾಗಿ ನಡೆದುಕೊಳ್ಳಲಾರದೆ, ಮತ್ತೊಬ್ಬನೊಂದಿಗೆ ಬದುಕಲಾರದೆ ತಾನು ಆತ್ಮಾಹುತಿ ಮಾಡಿಕೊಳ್ಳುತ್ತಾಳೆ. ಇವಳು ಕನ್ಯೆಯಾಗಿದ್ದು, ಬದುಕಿ ಬಾಳಬಹುದಿತ್ತು ಎಂಬ ಯೋಚನೆ ಸಹಜವಾಗಿ ಬರುತ್ತದೆ. ಪ್ರಾಣ ತ್ಯಾಗವೊಂದೆ ಸರಿಯಾದ ಕ್ರಮವಲ್ಲವೆನಿಸುತ್ತದೆ. ಆದರೆ ಒಬ್ಬ ಗಂಡಸಿಗೆ ಮನಸ್ಸು ಕೊಟ್ಟು ಹೆಣ್ಣು ನೈತಿಕತೆಯನ್ನು ಕಾಪಾಡುವಲ್ಲಿ ಇಂತಹ ನಿರ್ಧಾರಕ್ಕೆ ಬಂದಿರಬಹುದೆ? ಮಾರ್ಯಾದೆಗೆ ಅಂಜಿ ಆತ್ಮಾಹುತಿ ಮಾಡಿಕೊಂಡಿರಬಹುದೆ? ಎಂಬ ಪ್ರಶ್ನೆ ಸಹಜವಾಗಿ ಮೂಡುತ್ತದೆ.

ಮುಂದೆ ಬರಬಹುದಾದ ನಿಂದನೆಯನ್ನು ಸಹಿಸಲಾರದೆಯೇ ಈ ತೀರ್ಮಾನ ಕೈಗೊಂಡಿರ ಬಹುದು ಎನಿಸುತ್ತದೆ. ಮಗನನ್ನು ಕಳೆದುಕೊಂಡ ತಾಯಿ ಆ ಕೆರೆಗೆ ಶಾಪ ಕೊಡುವುದು. ತಾಯಿಯ ವಾತ್ಸಲ್ಯವನ್ನು ಕಲಕುವಂತದ್ದು. ಇಲ್ಲಿ ಬರುವ ದೊಡ್ಡಣ್ಣನ ತಾಯಿಗೆ ಮಾತ್ರ ಆಗದೆ ಸಮಾಜದ ಎಲ್ಲಾ ತಾಯಂದಿರ ದುಃಖ, ನೋವು, ವಾತ್ಸಲ್ಯವನ್ನು ಕಲಕುವಂತಾಗಿದೆ. ಮಗನನ್ನು ಕಳೆದುಕೊಂಡ ತಾಯಿ ಕೆರೆಗೆ ಶಾಪ ಹಾಕುತ್ತಾಳೆ. ಇದು ಹಿರಿಯೂರು ತಾಲ್ಲೂಕಿನ 'ಪಿಲಾಳಿ' ಹತ್ತಿರದ ಕೆರೆಯಾಗಿದೆ. ಈ ಕೆರೆಯ ಆಚೆ, ಈಚೆಯಲ್ಲಿ ಈರಮಾಸ್ತಮ್ಮ ಮತ್ತು ದೊಡ್ಡಣ್ಣನ ಗುಡ್ಡೆಗಳಿವೆ. ಆತನ ಕೂದಲು ಸಿಕ್ಕಿಕೊಂಡು ಸತ್ತ ಜಾಲಿಯ ಮರದ ಮೋಟನ್ನು ಗುಡ್ಡೆ ಬಳಿ ಇಟ್ಟು ಪೂಜಿಸಲಾಗುತ್ತದೆ. ಈಗಲೂ ಯಾವಾಗಲಾದರೊಮ್ಮೆ ಅಲ್ಲಿನ ಸುತ್ತಮುತ್ತಲಿನವರು ಗುಡ್ಡೆಗೆ ಪೂಜೆಗೆಂದು ಬರುತ್ತಾರೆ.

**ಕೊಂಡದ ಕಾಟವ್ವ**

ಕಾಟವ್ವ ಗೊಲ್ಲ ಸಮುದಾಯಕ್ಕೆ ಸೇರಿದವಳು. ಈಕೆಯ ತಂದೆ - ತಾಯಿಗಳು ಹಾಗಲವಾಡಿಯ ಮೂಲದವರು. ಒಮ್ಮೆ ಬರ ಕ್ಷಾಮ ಉಂಟಾಗಿ, ಜೀವನೋಪಾಯಕ್ಕಾಗಿ ಹರ್ತಿಕೋಟೆಗೆ

ಬಂದು ನೆಲೆನಿಂತರು. ಕಾಟವ್ವನನ್ನು ಹುಲಿಕುಂಟೆಯ ಮುತ್ತಣ್ಣನಿಗೆ ಕೊಡಲಾಗಿತ್ತು. ಅವನು ದನಗಳನ್ನು ಕಾಯುತ್ತಿದ್ದನು. ಅವನಿಗೆ ಪ್ರತಿದಿನ ಬುತ್ತಿಯನ್ನು ಕೊಟ್ಟು ಬರುತ್ತಿದ್ದ ಕಾಟವ್ವ ನೀರನ್ನು ಹೊಯ್ಯುತ್ತಿರಲಿಲ್ಲ. ಹಾಗಾದರೆ ಊಟ ಮಾಡಲು ನೀರು ಎಲ್ಲಿಂದ ತರುತ್ತಾರೆ ಎಂದೂ ಕೂತಹಲವಾಯಿತು. ಒಂದು ದಿನ ಬುತ್ತಿ ಇಳಿಸಿದವಳು ಮರದ ಮರೆಗೆ ಹೋಗಿ ನಿಂತಳು. ಗಂಡನು ಚಿಲುಮೆ ತೋಡಿ ನೀರು ತರುತ್ತಿದ್ದುದನ್ನು ಕದ್ದು ನೋಡಿದಳು. ಇದರಿಂದ ಗಂಡನು ಆ ಚಿಲುಮೆಗೆ ಅಪವಿತ್ರವಾಯಿತೆಂದು ಅನ್ನ, ನೀರು ಬಿಟ್ಟ. ಆದರೂ ಕಾಟವ್ವ ದಿನಾಲು ಬುತ್ತಿ ತರುತ್ತಿದ್ದಳು. ಬುತ್ತಿ ಮಾತ್ರ ಕರಗುತ್ತಿರಲಿಲ್ಲ. ಹಿಂತಿರುಗಿ ಬಂದಾಗ ಕಾಟವ್ವಳು ಗೂಡಿನಿಂದ ಏಳು ಕುಂಭದ ಹಾಲನ್ನು ತಲೆ ಮೇಲೆ ಹೊತ್ತು, ಏಳು ಕುರಿ ಮರಿಯನ್ನು ಎರಡು ಹೆಗಲಿಗೆ ಹಾಕಿಕೊಂಡು ಬರುತ್ತಿದ್ದಳು. ಇದನ್ನು ಕಂಡ ಮೈದುನ ಸಿರಿಗೊಂಡ ಗೌಡನು ಇಂಥವಳು ಅಣ್ಣನೊಡನೆ ಸಂಸಾರ ಮಾಡುತ್ತಾಳಾ? ಎಂದೂ ಸಂಶಯ ಪಡುತ್ತಾನೆ. ಇದನ್ನು ಅರಿತ ಕಾಟವ್ವ ಇಂಥ ಅಪವಾದ ಬಂದ ಮೇಲೆ ಇನ್ನು ಬದುಕಿರಬಾರದು ಎಂದು ಕೊಂಡವನ್ನು ಮಾಡಿಸು ಎಂದು ಗಂಡನಿಗೆ ಹೇಳಿ ಸಿದ್ಧವಾಗುತ್ತಾಳೆ. ತವರು ಮನೆಯವರು ಏನು ತಪ್ಪು ಕಂಡು ಮಗಳಿಗೆ ಕೊಂಡಕ್ಕೆ ಕಳುಹಿಸುತ್ತಿರೆಂದಾಗ ಕಾಟವ್ವ ತಾನೇ ನಿರ್ಧರಿಸಿದ್ದಾಗಿ ತಿಳಿಸುತ್ತಾಳೆ. ತನ್ನ ಸೆರಗಿನಿಂದ ಗಂಡನ ವಲ್ಲಿಗೆ ಕೆಂಡ ಸುರಿದು ಪಾತಿವ್ರತ್ಯ ತೋರಿಸುತ್ತಾಳೆ. ನಂತರ ಕೊಂಡವೇರುತ್ತಾಳೆ. ಹೀಗೆ ಕಾಟವ್ವ ಕೊಂಡವೇರಿ ಕೊಂಡದ ಕಾಟವ್ವನೆಂದು ಹೆಸರಾಗುತ್ತಾಳೆ.

ಅನೇಕ ಕಥನ ಗೀತೆಗಳಲ್ಲಿ ಗಂಡ ಸತ್ತ ನಂತರ ಹೆಂಡತಿಯು ಕೊಂಡಕ್ಕೆ ಹೋಗುವ ತೀರ್ಮಾನ ಮಾಡಿ ಕೊಂಡಕ್ಕೆ ಹೋಗಿದ್ದಾರೆ. ಕಾಟವ್ವ ಕಥೆ ಬಹಳ ವಿಶಿಷ್ಟವಾದುದು. ಇವಳು ತನ್ನ ಗಂಡನು ಜೀವಂತ ಇರುವಾಗಲೇ ಮೈದುನ ಪಟ್ಟ ಸಂಶಯಕ್ಕೆ ತನ್ನ ಪಾತಿವ್ರತ್ಯ ಮೆರೆಯಲು ಕೊಂಡಕ್ಕೆ ಹೋಗಿರುವುದು ವಿಚಿತ್ರವೆನಿಸುತ್ತದೆ. ಕತ್ತಾಲ ದಾರಿ ದೂರ ಕೃತಿಯಲ್ಲಿ ಈ ಕಥನ ಗೀತೆಯ ಕುರಿತಂತೆ ಕಾಟವ್ವ ಕೊಂಡಕ್ಕೆ ಹೋಗುವ ಸೊಗಸಾದ ವಿವರಣೆ ಇದೆ. ವೀರಾಸಾಬಿಹಳ್ಳಿ ಶಿವಣ್ಣನವರು ಈ ಕಥೆಯನ್ನು ಸಂಗ್ರಹಿಸಿದ್ದಾರೆ.

ಕೊಂಡಕ್ಕೆ ಹೋಗುವ ಮುನ್ನ ಕಾಟವ್ವನು ಗಂಡನೊಡನೆ ತವರಿಗೆ ಬಂದು ಮಡಿಲಕ್ಕಿ ಪಡೆದು ಬರುತ್ತಾಳೆ. ತವರಿನವರು ಯಾಕೆ ಕೊಂಡ ಹೋಗಬೇಕು ಎನ್ನುವಾಗ ತಾನೇ ನಿರ್ಧರಿಸಿದನೆಂದು ಹೇಳುವಲ್ಲಿ ಮೈದುನನ ಸಂಶಯಕ್ಕೆ ಗುರಿಯಾದನೆಂದು, ದೂರು ನೀಡುವುದಿಲ್ಲ. ಬದಲಿಗೆ ಸಮಾಧಾನ ಹೇಳುತ್ತಾಳೆ. ಅವಳ ಸೆರಗಿನಲ್ಲಿದ್ದ ಕೆಂಡ ಸುಡದೆ ಇರುವುದನ್ನು ಕಂಡ ಜನ ಅವಳ ಪಾತಿವ್ರತಕ್ಕೆ ಬೆರಗಾಗುತ್ತಾರೆ. ಆದರೂ ಕಾಟವ್ವ ಕೊಂಡಕ್ಕೆ ಹೋಗುವ ಮನಸ್ಸು ಮಾಡಿದ್ದು ಯಾಕೆ ಇತ್ಯಾದಿ ಪ್ರಶ್ನೆಗಳು ಉದ್ಭವಿಸುತ್ತವೆ. ತಾನು ತಪ್ಪು ಮಾಡಿಲ್ಲ ಎಂದು ಸಾಬೀತು ಪಡಿಸಿದಾಗಲೂ ಅವಳು ಆತ್ಮಾಹುತಿ ಮಾಡಿಕೊಂಡಿದ್ದು ಸರಿಯೇ ಎಂಬ ಹಲವಾರು ಕಾರಣಗಳಿಗೆ ಎಡೆಮಾಡಿಕೊಡುತ್ತದೆ. ನಿಂದಿಸಿದ ಮೈದುನನ್ನು ಕಳುಹಿಸಿ ದುರ್ಗದ ರಾಜನ ಅಪ್ಪಣೆ ಪಡೆಯುತ್ತಾಳೆ. ಈಗ ಹಾಕಿದ ಕೆಂಡ ಸುಡದೆಂದು ಮತ್ತಷ್ಟು ಕಟ್ಟಿಗೆ ಕಡಿಸಿ ಹಾಕಿಸುತ್ತಾಳೆ.

"ಕಿಚ್ಚಿಗೋಗೊಳಿಗೆ ಪಟ್ಟೆದ ಸೀರ್ಯಾಕೊ
ಕಿಚ್ಚಿಗ್ಯೊಪ್ಯಾವೆ ಗುಲಗಂಜಿ । ಬಣ್ಣದ ಸೀರೆ
ಗಕ್ಕನವಪ್ನ ಬರವಿಳೋ ॥"[೧೨]

ಕಾಟವ್ವ ತವರಿನವರಿಗೆ ಗುಲಗಂಜಿ ಬಣ್ಣದ ಸೀರೆ ತರಲು ಹೇಳುತ್ತಾಳೆ. ಉರಿಯುವ ಕಿಚ್ಚಿನ ಬಣ್ಣದಲ್ಲಿ ಕೆಂಪು ಬಣ್ಣದ ಸೀರೆಯು ಬೆಂಕಿಯಂತೆಯೇ ಕಾಣಲಿ. ಆದರೆ ಅದರಲ್ಲಿ ತಾನು ಉರಿಯುವುದು ಕಾಣದಿರಲೆಂದು ಅವಳ ಉದ್ದೇಶವಿರಬಹುದು.

"ಬಾಳೇಯ ಮರಕ ಬಾಲನತೊಟ್ಟಿಲು ಕಟ್ಟಿ
ಬಾಲಸಿರಿಯಣ್ಣ ಅಳದಿರೋ । ನಿಮ್ಮಮ್ಮ
ಬಾಯಾರಿದರೆ ಬರವಲ್ಲಳೋ॥"[೧೩]

ಹೆತ್ತ ಕಂದನನ್ನು ಈ ರೀತಿ ತಬ್ಬಲಿ ಮಾಡಿ ಅಗಲುವ ತಾಯಿಯೊಬ್ಬಳ ನೋವು, ಸಂಕಟಗಳು ಯಾರಿಗೂ ತಟ್ಟುವುದಿಲ್ಲ. ಪುರುಷ ಪ್ರಧಾನ ಸಮಾಜವೊಂದರಲ್ಲಿ ಹೆಣ್ಣಿಗೆ ನಿಷ್ಠೆ ಬಹಳ ಮುಖ್ಯವಾದುದು. ಹೆಣ್ಣಿನ ಬೌದ್ಧಿಕ ಬಲವನ್ನು ಅವಳ ಅಪರಿಮಿತ ಶಕ್ತಿಯನ್ನು ಈ ಸಮಾಜ ಸಹಿಸುವುದಿಲ್ಲ ಎಂಬುದಕ್ಕೆ ಇದು ನಿದರ್ಶನವಾಗಿದೆ.

"ಕಣ್ಣಾಗ ಸೆರೆಬಿದ್ದು ಎಣ್ಯಾಕ ನೊಣಬಿದ್ದು
ಸಣ್ಣ ಸೀರ್ಯಾಕ ಕಿಡಿಬಿದ್ದು । ಕಾಟಮ್ಮಾನ
ಎಣೆಗಂಟಿಂದೇ ಉರುದಾವು ॥"[೧೪]

ಜನರ ಕಣ್ಣಲ್ಲಿ ಕಾಟವ್ವನು ಪಾತಿವ್ರತಕ್ಕೆ ಹೆಸರಾದವಳಾಗಿ ಕೊಂಡವೇರುವ ಮೂಲಕ ದೇವತೆಯಾಗುತ್ತಾಳೆ. ಇಲ್ಲಿ ಕೊಂಡಕ್ಕೆ ಹೋಗಲು ಮುಮ್ಮಡಿ ಬಪ್ಪಣ್ಣ ಅಪ್ಪಣೆ ಪಡೆದಿರುವುದು ಒಂದು ಐತಿಹಾಸಿಕ ಸಂಗತಿಯಾಗಿದೆ. ಒಂದು ಸಣ್ಣ ಸಂಶಯಕ್ಕೆ ಅಂಜಿ, ಕೊಂಡ ಪದ್ಧತಿ ಕಡ್ಡಾಯವೇನಲ್ಲ. ಆದರೂ ಇಂತಹ ತ್ಯಾಗ ಬಲಿದಾನ ಆತ್ಮಾಹುತಿಗಳು ಯಾಕಾಗಿ ಆಗುತ್ತವೆಂಬುದನ್ನು ತಿಳಿಯುವ ಅಗತ್ಯವಿದೆ. ಕೊಂಡದ ಕಾಟವ್ವ ಕೊಂಡಕ್ಕೆ ಹೊಕ್ಕ ಸ್ಥಳ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ಹುಲಿಕುಂಟೆ ದಿಬ್ಬದಲ್ಲಿದೆ. ಆ ಪ್ರದೇಶದಲ್ಲಿ ಒಂದು ಮರ ಮತ್ತು ಪುಟ್ಟ ಕಲ್ಲಿನ ಗುಡಿಯೂ ಇದೆ.

ಮಹಾಸತಿಯ ಹಿನ್ನೆಲೆಯಲ್ಲಿ ಬರುವ ಕಥನಗೀತೆಗಳೆಲ್ಲಾ ಹೆಚ್ಚು ಕಡಿಮೆ ಒಂದೇ ವಸ್ತುವನ್ನು ಆಧರಿಸಿ ರಚಿತವಾಗಿವೆ. ಈರೋಬಿ, ವೀರತಿಮ್ಮವ್ವ, ಈರಮಾಸ್ತಮ್ಮ, ಕೊಂಡದ ಕಾಟವ್ವ ಹೀಗೆ ಮೊದಲಾದ ಸ್ತ್ರೀಪಾತ್ರಗಳನ್ನು ಕುರಿತು ಕಥನಗೀತೆಗಳನ್ನು ಖಂಡಕಾವ್ಯಗಳನ್ನು ಗುರುತಿಸಬಹುದು. ಈ ಕಥನಗೀತೆಗಳ ಆಶಯ ಸತಿಯಾಗುವುದು. ಕಥನಗೀತೆಯ ಕೇಂದ್ರಬಿಂದು ಹೆಣ್ಣು. ಸಹಗಮನ ಕನ್ಯಾಗಮನ ಎರಡು ರೀತಿಯಲ್ಲಿ ಬಲಿಯಾಗಿರುವ ಮಹಿಳೆಯರನ್ನು ಈ ಕಥನಗೀತೆಗಳಲ್ಲಿ

ಗುರುತಿಸಬಹುದು. ಈ ಹೆಣ್ಣುಮಕ್ಕಳು ಪತಿ ತೀರಿಕೊಂಡ ಮೇಲೆ ಕೊಂಡಕ್ಕೆ ಹಾಯ್ದು ಗ್ರಾಮೀಣರ ಕಣ್ಣಿನಲ್ಲಿ ದೇವತೆಯಾಗಿ ಪೂಜಿಸಿಕೊಳ್ಳುತ್ತಾರೆ.

ಸತಿಸಹಗಮನ ಪದ್ಧತಿ ಆದಿಮ ಸಂಸ್ಕೃತಿಗಳಲ್ಲಿರುವುದಿಲ್ಲ. ಇದು ಮಧ್ಯಕಾಲೀನ ಸಂದರ್ಭದಲ್ಲಿ ಪ್ರವೇಶ ಪಡೆದಿರುವಂಥದ್ದು. ಇದು ಆದಿಮ ಸಂಸ್ಕೃತಿಯ ಆಚರಣೆಗಳಲ್ಲಿ ಇಲ್ಲ. ಇದು ವೈದಿಕ ಧರ್ಮದ ಪ್ರತಿಪಾದನೆಯಾಗಿದೆ. ಇವು ರಾಜಮನೆತನಗಳು ಮತ್ತು ತಳಸಮುದಾಯಗಳಲ್ಲಿ ಹೆಚ್ಚು ಕಂಡುಬರುತ್ತವೆ. ಶೀಲ ಪಾವಿತ್ರ್ಯತೆಯಂತಹ ಮೌಲ್ಯದಿಂದ ಸತಿಸಹಗಮನ(ಕೊಂಡ ಹಾರುವುದು) ಆಚರಣೆ ಕಂಡುಬರುತ್ತದೆ. ವಿಧವೆ ಸಮಾಜದಲ್ಲಿ ಶೋಷಣೆಗೆ ಗುರಿಯಾಗಿ ತನ್ನ ಪ್ರಾಣವನ್ನು ಆತ್ಮಾಹುತಿ ಮಾಡಿಕೊಳ್ಳುತ್ತಾಳೆ. ಗಂಡ ಸತ್ತ ಮೇಲೆ ಹೆಂಡತಿ ಸಮಾಜದಲ್ಲಿ ಬದುಕಿದರೆ ಅವಳನ್ನು ಪರ ಪುರುಷರು ನೋಡುವ ದೃಷ್ಟಿಕೋನ ಬೇರೆಯಾಗಿರುತ್ತದೆ. ಹೆಣ್ಣಿನ ಆರ್ಥಿಕ ಶಕ್ತಿ ಹಂಚಿ ಹೋಗುತ್ತದೆ, ಆಸ್ತಿಯನ್ನು ಕಬಳಿಸುವುದಕ್ಕಾಗಿ ಇಂತಹ ಕ್ರೂರವಾದ ಆಚರಣೆಯನ್ನು ಹೇರಿಕೆ ಮಾಡಲಾಗಿದೆ.

**ಕೊನೆಟಿಪ್ಪಣಿಗಳು**

೧. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೨, **ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು,** ಪು. ೧೩೬.

೨. ಶಂಕರನಾರಾಯಣ ತೀ.ನಂ., ೧೯೮೨, **ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು,** ಪು. ೧೨೦.

೩. ಕೃಷ್ಣಮೂರ್ತಿ ಹನೂರು, ೨೦೦೫, **ಸಾವಿರದ ಸಿರಿಬೆಳಗು,** ಪು. ೯೨.

೪. ಮೀರಾಸಾಬಿಹಳ್ಳಿ ಶಿವಣ್ಣ, ೨೦೦೫, **ಕಾಡುಗೊಲ್ಲ ಬುಡಕಟ್ಟು ವೀರರು,** ಪು. ೨೯೮.

೫. ಮೀರಾಸಾಬಿಹಳ್ಳಿ ಶಿವಣ್ಣ, ೧೯೯೯, **ದುರುಗ ಜಾನಪದ,** ಪು. ೪೭.

೬. ಕೃಷ್ಣಮೂರ್ತಿ ಹನೂರು, ೨೦೦೦, **ಕತ್ತಾಲ ದಾರಿ ದೂರ,** ಪು. ೨೨..

೭. ಅದೇ, ಪು. ೯.

೮. ಅದೇ, ಪು. ೨೮.

೯. ಮೀರಾಸಾಬಿಹಳ್ಳಿ ಶಿವಣ್ಣ, ೨೦೦೫, **ಕಾಡುಗೊಲ್ಲ ಬುಡಕಟ್ಟು ವೀರರು,** ಪು. ೧೬೯.

೧೦. ಅದೇ.

೧೧. ಜೀ.ಶಂ.ಪ., ಜನಪದ ಕಾವ್ಯ, ಪು. ೧೮.

೧೨. ಕೃಷ್ಣಮೂರ್ತಿ ಹನೂರು, ೨೦೦೨, **ಕತ್ತಾಲ ದಾರಿ ದೂರ,** ಪು. ೮೭.

೧೩. ಅದೇ, ಪು. ೯೨.

೧೪. ಅದೇ, ಪು. ೯೫.



ಅಧ್ಯಾಯ : ಆರು

# ಪಾಳೆಯಗಾರರಿಗೆ ಸಂಬಂಧಿಸಿದ ಐತಿಹ್ಯಗಳು

೬.೧. ಹಟ್ಟಿ ನಾಯಕರಿಗೆ ಸಂಬಂಧಿಸಿದ ಐತಿಹ್ಯಗಳು
೬.೨. ಹರತಿ ಪಾಳೆಯಗಾರರಿಗೆ ಸಂಬಂಧಿಸಿದ ಐತಿಹ್ಯಗಳು
೬.೩. ಚಿತ್ರದುರ್ಗ ಪಾಳೆಯಗಾರರಿಗೆ ಸಂಬಂಧಿಸಿದ ಐತಿಹ್ಯಗಳು

## ಅಧ್ಯಾಯ : ಆರು

# ಪಾಳೆಯಗಾರರಿಗೆ ಸಂಬಂಧಿಸಿದ ಐತಿಹ್ಯಗಳು

ಕರ್ನಾಟಕವನ್ನು ಅನೇಕ ಪ್ರಸಿದ್ಧ ರಾಜಮನೆತನಗಳು ಮತ್ತು ಪ್ರಮುಖ ವ್ಯಕ್ತಿಗಳು ಆಳ್ವಿಕೆ ಮಾಡಿದ್ದಾರೆ. ಕರ್ನಾಟಕದ ಇತಿಹಾಸವೆಂದರೆ ಪ್ರಸಿದ್ಧ ರಾಜಮನೆತನಗಳ ಇತಿಹಾಸವೆಂದೇ ಇತ್ತೀಚಿನವರೆಗೂ ಅಧ್ಯಯನಗಳು ನಡೆದಿದ್ದವು. ಆದರೆ ಇತ್ತೀಚಿನ ದಿನಗಳಲ್ಲಿ ಸ್ವಲ್ಪಮಟ್ಟಿನ ಬದಲಾವಣೆಯಾಗುತ್ತಿದೆ. ಪ್ರಸಿದ್ಧ ಸಾಮ್ರಾಜ್ಯದ ನಿಜವಾದ ಇತಿಹಾಸ ದೊರಕಬೇಕಾದರೆ ಇವುಗಳ ಆಧಾರ ಸ್ತಂಭಗಳಂತಿದ್ದ ರಾಜಕೀಯ ಘಟಕಗಳು ಮುಖ್ಯವೆನಿಸುತ್ತವೆ. ಪ್ರಸಿದ್ಧ ವಿಜಯನಗರ ಸಾಮ್ರಾಜ್ಯದ ಏಳಿಗೆ ಮತ್ತು ಖ್ಯಾತಿಗೆ ಅವರ ಕಾಲದ ರಾಜಕೀಯ ಘಟಕಗಳಲ್ಲಿನ ಅಮರನಾಯಕರು ಅಥವಾ ಪಾಳೆಯಗಾರರು ಪ್ರಮುಖ ಪಾತ್ರವನ್ನು ನಿರ್ವಹಿಸಿದ್ದಾರೆ. ವಿಜಯನಗರ ಅರಸರಿಗೆ ಅನುಗುಣವಾಗಿ ತಮ್ಮದೇಯಾದ ರೀತಿಯಲ್ಲಿ ಆಳ್ವಿಕೆ ಮಾಡಿ, ಸಾಮ್ರಾಜ್ಯದ ಆಧಾರ ಸ್ತಂಭಗಳಾಗಿ ಈ ಪಾಳೆಯಗಾರರೆಂದು ಎಲ್ಲಿಯೂ ಹೇಳಿಕೊಂಡಿಲ್ಲ. ಚಿಕ್ಕಪುಟ್ಟ ಪ್ರದೇಶಗಳಲ್ಲಿ ಒಡೆತನವನ್ನು ನಡೆಸುತ್ತಿದ್ದ ನಾಯಕರಿಗೆ 'ಪಾಳೆಯಗಾರರು' ಎಂದು ಕರೆಯುತ್ತಾರೆ. ಎಂ.ಎಸ್. ಪುಟ್ಟಣ್ಣನವರು 'ಪಾಳೆಯಗಾರ' ಎಂಬ ಪದವನ್ನು ಈ ರೀತಿ ಅರ್ಥೈಸಿದ್ದಾರೆ. "ದಂಡಿನೊಡನೆ ಪಾಳೆಯವನ್ನು ಹಾಕಿ ಇಳಿದುಕೊಂಡು ಕದನಕ್ಕೆ ಸಿದ್ಧವಾಗಿರತಕ್ಕ ಪಾಳೆಯಗಾರರು"[1] ಎಂದು ಗುರುತಿಸಿದ್ದಾರೆ.

ಚಿತ್ರದುರ್ಗದ ಪರಿಸರದಲ್ಲಿ ಬರುವ ಪಾಳೆಯಗಾರರ ಚರಿತ್ರೆಗಳನ್ನು ಗಮನಿಸಿದಾಗ ಅವರೆಲ್ಲರೂ ಮೊದಲಿಗೆ ಪಶುಪಾಲಕರಾಗಿಯೇ ಕಂಡುಬರುತ್ತಾರೆ. ಇವರು ಆಂಧ್ರಪ್ರದೇಶದ ಅಹೋಬಲ, ತಿರುಪತಿಯ ಜಡೇಕಲ್, ಶ್ರೀಶೈಲ ಪ್ರಾಂತದ ಕರಿಮಲೆ, ಬಿಳಿಮಲೆಯಿಂದ(ನಲ್ಲಾಮಲ್ಲಾ - ತೆಲಾಮಲ್ಲಾ)ಮೇವು, ನೀರು ಅರಸುತ್ತ ವಲಸೆ ಬಂದವರು. ಇವರು ಬೇಡ ಬುಡಕಟ್ಟು ಸಮುದಾಯಕ್ಕೆ ಸೇರಿದ್ದು, ಬೆಟ್ಟ ಗುಡ್ಡ-ಕಾಡಿನಲ್ಲಿ ಪಶುಪಾಲನೆ ಮಾಡುತ್ತಾ ನೆಲೆನಿಂತವರು. ಕಾಡುಪ್ರಾಣಿಗಳೊಂದಿಗೆ ಸೆಣಸಾಡಿ ಜೀವನ ಸಾಗಿಸಿದವರು. ವಿಜಯನಗರ ಸಾಮ್ರಾಜ್ಯದ ಪೂರ್ವದಲ್ಲಿ ವಲಸೆ ಬಂದ ಇವರು ಮಧ್ಯಕರ್ನಾಟಕದ ತುಂಗಾಭದ್ರಾ ಮತ್ತು ವೇದಾವತಿ ನದಿ ಬಯಲಿನಲ್ಲಿ ನೆಲೆಸಿದರು. ಅನುಮತಿಯಿಲ್ಲದೆ ಪಶುಸಂಪತ್ತಿನ ಮೇಲೆ ದೆಹಲಿ ಸುಲ್ತಾನರು, ಹೊಯ್ಸಳರು, ವಿಜಯನಗರದ ಅರಸರು ದಾಳಿ ಮಾಡಿದರು. ಇವರು ತಮ್ಮ ಪಶುಸಂಪತ್ತಿನ ರಕ್ಷಣೆಗಾಗಿ

ದಾಳಿ ಮಾಡುವವರನ್ನು ಪ್ರತಿ ದಾಳಿ ಮಾಡಿ ಸೋಲಿಸುತ್ತಿದ್ದರು. ಇವರ ಸಾಹಸ, ಶೌರ್ಯ, ಧೈರ್ಯವನ್ನು ಅರಿತ ವಿಜಯನಗರದ ಅರಸರು ಬಲವಂತವಾಗಿ ಸೈನ್ಯಗಳಿಗೆ ಸೇರಿಸಿಕೊಂಡರು. ಪಶುಪಾಲಕರು ತಮ್ಮ ಸಮುದಾಯದ ರಕ್ಷಣೆ ಹಾಗೂ ಪಶುಸಂಪತ್ತಿನ ರಕ್ಷಣೆಗಾಗಿ ಸಂಸ್ಥಾನಗಳು, ಕಟ್ಟೆಮನೆಗಳನ್ನು ಕಟ್ಟಿಕೊಂಡಿದ್ದರು. ಇಂತಹ ಪಶುಪಾಲಕರನ್ನು ವಿಜಯನಗರದ ಅರಸರು ಪಾಳೆಯಗಾರರನ್ನಾಗಿ ಸೃಷ್ಟಿಸಿದರು. ಪಾಳೆಯಗಾರರಿಗೆ ಅಮರ ನಾಯಕರೆಂಬ ಹೆಸರಿತ್ತು. ಇವರನ್ನು ಆಡಳಿತ ನಡೆಸುವ ತಂತ್ರವಾಗಿ ಸೃಷ್ಟಿಸಿದರು.

ಚಿತ್ರದುರ್ಗ ಪರಿಸರದಲ್ಲಿ ಬರುವ ಹಟ್ಟಿ, ಹರತಿ, ನಿಡಗಲ್ಲು, ಚಿತ್ರದುರ್ಗ ಮುಂತಾದೆಡೆ ಪಾಳೆಯಗಾರರು ಪ್ರಮುಖರೆನಿಸಿದ್ದಾರೆ. ಚಿತ್ರದುರ್ಗ ಜಿಲ್ಲೆಯ ಪಾಳೆಯಗಾರರು ೧೫ನೆಯ ಶತಮಾನದಲ್ಲಿ ತಲೆ ಎತ್ತಿದ ಮೇಲೆ ವಿಜಯನಗರದ ಪರೋಕ್ಷ ಆಡಳಿತವು ಇಲ್ಲಿ ಆರಂಭವಾಯಿತು. ಇವರ ಬಗೆಗಿನ ಸಾಹಿತ್ಯ, ಶಾಸನ, ಹಸ್ತಪ್ರತಿಗಳು ಆಕರಗಳಾಗಿ ಲಿಖಿತವಾಗಿ ಆಳ್ವಿಕೆ ನಡೆಸಿದ ಬಗ್ಗೆ ಮಾಹಿತಿಗಳನ್ನು ಒದಗಿಸುತ್ತವೆ. ಆದರೆ ಈ ನಾಯಕರ ಮೂಲದ ಬಗ್ಗೆ ಚರ್ಚೆ ಮಾಡುವಾಗ ಲಿಖಿತ ಆಧಾರಗಳು ದೊರೆಯುವುದಿಲ್ಲ. ಆದರೆ ಜನಪದರು ತಮ್ಮ ಪರಂಪರೆಯ ನೆನಪುಗಳನ್ನು ಅಲಿಖಿತ ರೂಪದಲ್ಲಿ ಉಳಿಸಿಕೊಂಡು ಬಂದಿರುತ್ತಾರೆ.

**೬.೧. ಹಟ್ಟಿನಾಯಕರಿಗೆ ಸಂಬಂಧಿಸಿದ ಐತಿಹ್ಯಗಳು**

ನಾಯಕನಹಟ್ಟಿ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿನಲ್ಲಿದೆ. ಅಂದು ಪಶುಪಾಲಕರ ಹಟ್ಟಿಯೇ ಇಂದು ಹೋಬಳಿ ಕೇಂದ್ರವಾಗಿದೆ. ಈ ಹಟ್ಟಿಯ ನೆಲೆಯನ್ನು ಮೊದಲು ಸ್ಥಾಪಿಸಿದವರು 'ನಾಯಕ'ರಾದುದರಿಂದ ಇದು ಸಹಜವಾಗಿ 'ನಾಯಕನಹಟ್ಟಿ' ಎನಿಸಿಕೊಂಡಿತು. ಆದ್ದರಿಂದ ಇವರನ್ನು ಹಟ್ಟಿಯ ನಾಯಕರು ಎಂದೇ ಗುರುತಿಸಲಾಗಿದೆ.

ಹಟ್ಟಿ-ನಾಯಕರ ಸಂಸ್ಥಾನವೆಂದು ಪ್ರಸಿದ್ಧವಾಗಿರುವ ಈ ಸಂಸ್ಥಾನವು ಇಂದಿನ ಚಳ್ಳಕೆರೆ ಮತ್ತು ಮೊಳಕಾಲ್ಮೂರು ತಾಲೂಕಿನ ಬಹುಭಾಗವನ್ನು ಒಳಗೊಂಡಿತ್ತು. ತಮ್ಮ ಪಶುಸಂಪತ್ತಿನ ರಕ್ಷಣೆಗಾಗಿ ಕಟ್ಟಿಕೊಂಡಂತಹ ಈ ಸಂಸ್ಥಾನವನ್ನು ಸುಮಾರು ಇನ್ನೂರು ವರ್ಷಗಳ ಕಾಲ ಆಳಿದರು. ಕರ್ನಾಟಕದ ಇತಿಹಾಸದಲ್ಲಿ ಅನೇಕ ಏಳುಬೀಳುಗಳಿದ್ದರು, ಸಣ್ಣ ಸಂಸ್ಥಾನವೊಂದು ಅಷ್ಟು ದೀರ್ಘಕಾಲ ಹೇಗೆ ಸುರಕ್ಷಿತ ಅಸ್ತಿತ್ವವನ್ನು ಪಡೆದಿತ್ತು ಎನ್ನುವುದೇ ಆಶ್ಚರ್ಯದ ಸಂಗತಿಯಾಗಿದೆ. ಆದರೆ ಬೇರೆಲ್ಲಾ ಪಾಳೆಯಪಟ್ಟುಗಳಿಗೆ ಇಲ್ಲದ ವಿಶೇಷತೆ ಇದಕ್ಕಿದೆ. ಪಶುಪಾಲಕ ಮೂಲದಿಂದ ಬಂದ ಅಪರೂಪದ ಪಾಳೆಯಪಟ್ಟು. ಹಟ್ಟಿ ನಾಯಕರ ಅಥವಾ ಪಾಳೆಯಗಾರರ ಮೂಲ ಪುರುಷರು ಅಲೆಮಾರಿ ಪಶುಪಾಲಕ ಬೇಡನಾಯಕ ಬುಡಕಟ್ಟಿನಿಂದ ಬಂದವರು. ಇವರು ಯಾರ ಮೇಲೆಯೂ ಶತ್ರುತ್ವವನ್ನು ಕಟ್ಟಿಕೊಳ್ಳಲಿಲ್ಲ. ಪಶುಸಂಪತ್ತಿನ ಮೇಲೆ ದಾಳಿ ಮಾಡಿದವರಿಂದ ತಮ್ಮ ಸಂಸ್ಥಾನವನ್ನು ರಕ್ಷಿಸಿಕೊಳ್ಳುತ್ತಿದ್ದರು. ಇದ್ದುದರಲ್ಲೇ ತೃಪ್ತಿಪಡುವ ಬುಡಕಟ್ಟು ಗುಣ ಇವರದಾಗಿದ್ದುದರಿಂದ ಪಾಳೆಯಪಟ್ಟಿನ ವಿಸ್ತೀರ್ಣದಂತಹ ಮಹತ್ವಾಕಾಂಕ್ಷೆಯ ಕನಸು ಕಾಣಲಿಲ್ಲವೆನಿಸುತ್ತದೆ.

**ಹಟ್ಟಿ ಸಂಸ್ಥಾನದ ಮೂಲ ಪುರುಷ**

ಶುಕ್ಲಮಲ್ಲನಾಯಕ ಮತ್ತು ದಾನಸಾಲಮ್ಮ ಶ್ರೀಶೈಲ ಪ್ರಾಂತ್ಯದಲ್ಲಿ ಪಶುಪಾಲನೆ ಕೈಗೊಂಡು ನೆಲೆಸಿದ್ದರು. ಒಮ್ಮೆ ಶ್ರೀ ಶೈಲ ಪ್ರದೇಶದಲ್ಲಿ ಬರ, ಕ್ಷಾಮ, ಉಂಟಾಗಿ ಮೇವು ನೀರು ಅರಸುತ್ತ ಕರ್ನಾಟಕದ ಕಡೆ ವಲಸೆ ಬಂದರೆಂದು ಜನಪದ ಇತಿಹಾಸ ಹೇಳುತ್ತದೆ. ಆದರೆ ನಾಯಕನಹಟ್ಟಿ ಬಖೈರು ಕಾಟೇಮಲ್ಲನಾಯಕನ ನೇತೃತ್ವದಲ್ಲಿ ವಲಸೆ ಬಂದು ಜಿನಗಿಹಳ್ಳದ ಸಮೀಪ ಬೀಡುಬಿಟ್ಟಿದ್ದರೆಂದು ತಿಳಿದುಬರುತ್ತದೆ.

ಕಾಟೇಮಲ್ಲಿನಾಯಕನ ನೇತೃತ್ವದಲ್ಲಿ ಏಳು ಜನ ಸಹೋದರರು, ಒಂದು ಲಕ್ಷ ಪಶುಸಂಪತ್ತು ಪರಿವಾರ ಸಮೇತ ಎಂದಿದೆ. ಕೋರ್ಲಮಲ್ಲಿರಾಜು ಮಗನೇ ಕಾಟೇಮಲ್ಲಯ್ಯನೆಂದು ತಿಳಿದುಬರುತ್ತದೆ(ಶುಕ್ಲಮಲ್ಲನಾಯಕನ ಮೊಮ್ಮಗ). ಈ ಕಾಟೇಮಲ್ಲನಾಯಕ ಆರಂಭದಲ್ಲಿ ಕಂಪಳದೇವರಹಟ್ಟಿ ಅರಿವನದೊಡ್ಡಿ ಸಮೀಪ ನೆಲೆ ನಿಲ್ಲುತ್ತಾನೆ. ಒಮ್ಮೆ ವಿಜಯನಗರದ ಸೈನ್ಯ ಮಲ್ಲನಾಯಕನ ಪಶುಸಂಪತ್ತಿನ ಮೇಲೆ ದಾಳಿ ಮಾಡುತ್ತಾರೆ. ವಿಜಯನಗರದ ಸೈನಿಕರು ಬಿಟ್ಟ ಬಾಣಗಳ ರಭಸಕ್ಕೆ ದನಕರುಗಳು ಬೆದರಿ ಅಡ್ಡಾದಿಡ್ಡಿಯಾಗಿ ಓಡಾಡುತ್ತವೆ. ನಂತರ ಸೈನಿಕರಿಗೆ ಇರಿದು ತುಳಿದು ಬಿಡುತ್ತವೆ. ಸೈನಿಕರು ಹೆದರಿ ಮರಳಿ, ರಾಯರ ಬಳಿ ಇಲ್ಲಿ ನಡೆದ ಸಂಗತಿ ತಿಳಿಸುತ್ತಾರೆ. ಆಗ ರಾಯರು ಮತ್ತೊಮ್ಮೆ ಸೈನ್ಯ ಕಳಿಸುತ್ತಾರೆ, ಅವನನ್ನು ಎಳೆದು ತನ್ನಿ ಎಂದು. ಬಂದಂತಹ ಸೈನ್ಯ ಕಾಟೇಮಲ್ಲನಾಯಕನ ವಿರುದ್ಧ ಸೋತು ಹಿಂದಿರುಗುತ್ತದೆ. ಒಮ್ಮೆ ವಿಜಯನಗರ ಕಡೆಯಿಂದ ಒಬ್ಬ ಸಾಧು ದೇಶ ಸಂಚಾರವಾಗಿ ಕಾಲ್ನಡಿಗೆಯಲ್ಲಿ ಬರುತ್ತಾನೆ. ಮಲ್ಲಯ್ಯನ ಪಶುಸಂಪತ್ತನ್ನು ಕಂಡು ಕುಡಿಯಲು ಹಾಲು, ಮೊಸರು ಸಿಗಬಹುದು ಎಂದು ಹಟ್ಟಿಯ ಬಳಿ ಬರುತ್ತಾನೆ. ಈ ಸಾಧು ಮಲ್ಲಯ್ಯನ ಜನ್ಮ ವೃತ್ತಾಂತವನ್ನು ಹೇಳಿ ಹೊಗಳಿದನು. ಮಲ್ಲಯ್ಯ ಈ ಸಂಗತಿಯನ್ನು ಕೇಳಿ ಸಂತೋಷಗೊಂಡು ಅವರಿಗೆ ದೇಶ ಸಂಚಾರಕ್ಕಾಗಿ ಒಂದು ಎತ್ತನ್ನು ಕೊಟ್ಟನು. ಆ ವ್ಯಕ್ತಿ ಮರಳಿ ಹಂಪಿಗೆ ತೆರಳಿ ರಾಯರ ಬಳಿ ಕಾಟೇಮಲ್ಲಯ್ಯನ ಬಗ್ಗೆ ಹೊಗಳಿದನು. ಇದರಿಂದ ಕೋಪಗೊಂಡ ರಾಯರು ಅನುಮತಿಯಿಲ್ಲದೆ ತನ್ನ ರಾಜ್ಯದಲ್ಲಿ ಕಂಪಳ ಇಟ್ಟುಕೊಂಡು ಮಲ್ಲಯ್ಯನನ್ನು ಹಿಡಿದು ತರಲಿಕ್ಕೆ ಡಂಗುರು ಹಾಕಿಸಿದನು. ಈ ಸುದ್ದಿಯನ್ನು ತಿಳಿದ ನೃತ್ಯ ನರ್ತಕಿಯರು ತಮ್ಮ ಪ್ರೌಢಿಮೆಯಿಂದ ಆತನನ್ನು ಒಲಿಸಿಕೊಳ್ಳುತ್ತೇವೆ ಎಂದು ವೀಳ್ಯ ಪಡೆದು ತೆರಳಿದರು. ಆತನ ಮುಂದೆ ನರ್ತನ, ಗಾನ ಇನ್ನೂ ಮುಂತಾದ ವಿದ್ಯೆಗಳನ್ನು ಪ್ರಯೋಗ ಮಾಡಿದರು ಇವರಿಗೆ ವಶವಾಗಲಿಲ್ಲ. ಆತನನ್ನು ಒಲಿಸಿಕೊಳ್ಳಲು ಪ್ರಯತ್ನಿಸಿ ವಿಫಲರಾಗಿ ಆಸ್ಥಾನಕ್ಕೆ ಮರಳಿದರು. ಅಲ್ಲಿ ನಡೆದ ಸಂಗತಿಯನ್ನು ತಿಳಿಸಿದರು. ರಾಯರು ಸಂಧಾನಕ್ಕಾಗಿ 'ಸಾಧು'ವನ್ನು ಕಳಿಸಿದರು. ಆತನು ಕಂಪಳ ಸಮೇತವನ್ನು ಕರೆದುಕೊಂಡು ಹೋಗಿ ರಾಯರನ್ನು ಭೇಟಿ ಮಾಡಿಸಿದನು. ಮಲ್ಲನಾಯಕನ ಗೋವುಗಳನ್ನು ರಾಜ ಬೀದಿಯಲ್ಲಿ ಮೆರವಣಿಗೆ ಮಾಡಿಸಿ ರಾಯರು ಮಲ್ಲಯ್ಯ ಕಂಪಳವನ್ನು ಪೂಜಿಸಿ, ತಮ್ಮ ರಾಜ್ಯದಾದ್ಯಂತ ಕಂಪಳ ಸಮೇತ ಸಂಚರಿಸಲು ಅನುಮತಿ ನೀಡುತ್ತಾನೆ. ಅಲ್ಲಿಂದ ಹಿಂದಿರುಗಿ ತನ್ನ ನೆಲೆಗೆ ಬರುತ್ತಾನೆ.

ಕಾಟೇಮಲ್ಲನಾಯಕನು ಹಂಪಿಯಿಂದ ಹಿಂದಿರುಗಿದ ನಂತರ ಉತ್ತರ ಭಾರತದ ಕಡೆ ವಲಸೆ ಹೋಗುತ್ತಾನೆ. ಡೆಲ್ಲಿಯ ಹೊರವಲಯದಲ್ಲಿ ಬೀಡುಬಿಡುತ್ತಾನೆ. ಪ್ರತಿನಿತ್ಯ ತಮ್ಮ ಶಿವಪೂಜೆಯನ್ನು ಮುಗಿಸಿಕೊಂಡು 'ಕಿಲಾರಿ' ವೇಷದಲ್ಲಿ ಭತ್ಯೆ(ಅಡುಗೆಗೆ ಬೇಕಾದ ಹಿಟ್ಟು, ಅಕ್ಕಿ ಇತ್ಯಾದಿ) ಎತ್ತಲು ಡೆಲ್ಲಿಯಲ್ಲಿ ಮನೆ ಮನೆಗೆ ತೆರಳುತ್ತಾನೆ. ಹೀಗೆ ಡೆಲ್ಲಿಯ ಸುಲ್ತಾನರ ಮನೆಗೆ ಹೋಗುತ್ತಾನೆ. ಸುಲ್ತಾನರ ಮಗಳು ಕಾಟೇಮಲ್ಲನಾಯಕನನ್ನು ನೋಡಿ ಮರುಳಾಗಿ ಇವನ ಹಿಂದೆಯೆ ಬರುತ್ತಾಳೆ. ಅವನು ಬೇಡವೆಂದರೂ ಎತ್ತಿನಗೂಡು ಬಳಿ ಬರುತ್ತಾಳೆ. ಕಂಪಳ ಸಮೇತ ಅವಳನ್ನು ಹತ್ತಿರ ಬಿಡಿಸಿಕೊಳ್ಳದೇ ಹೊರತಳ್ಳುತ್ತಾರೆ. ಅವಳು ಮಲ್ಲನಾಯಕನನ್ನು ಮದುವೆಯಾಗಲು ಒಪ್ಪಿ ಗೂಡಿನ ಬಳಿಯೆ ಇರುತ್ತಾಳೆ. ಅಷ್ಟರಲ್ಲಿ ಸುಲ್ತಾನರ ದಂಡು ಹುಡುಕಿಕೊಂಡು ಮಲ್ಲನಾಯಕನ ಕಂಪಳ ಬಳಿ ಬರುತ್ತದೆ. ಮಲ್ಲನಾಯಕ ಇದನ್ನರಿತು ಒಡಪು(ಬೂದಿ) ತೆಗೆದುಕೊಂಡು ಸೈನಿಕರಿಗೆ ಮಂತ್ರಿಸಿ ಊದುತ್ತಾನೆ. ಸೈನಿಕರ ಆಯುಧಗಳು ಕೆಲಸ ಮಾಡುವುದಿಲ್ಲ. ಇವನನ್ನು ಸೆರೆ ಹಿಡಿಯಲು ಬರುತ್ತಾರೆ. ಎತ್ತಗಳು(ದನಕರುಗಳು) ಪರಸ್ಪರ ಅವುಗಳೇ ಇರಿದಾಡಿ ಕೆಂದೂಳು ಎಬ್ಬಿಸುತ್ತ ಡೆಲ್ಲಿಯ ಸೈನಿಕರ ಮೇಲೆ ಇರಿದಾಡುತ್ತ ಅವರನ್ನು ದಿಕ್ಕಾಪಾಲಾಗಿ ಓಡಿಸುತ್ತವೆ. ಡೆಲ್ಲಿಯ ದಂಡು ಸೋತು ಸುಲ್ತಾನನ ಬಳಿ ನಡೆದ ಸಂಗತಿಯನ್ನು ತಿಳಿಸುತ್ತಾರೆ.

ಕಂಪಳ ಯೋಚನೆ ಮಾಡಿ ಇಲ್ಲಿಯೇ ಇದ್ದರೆ ತಮ್ಮ ಸಂಸ್ಕೃತಿಗೆ ಧಕ್ಕೆ ಬರುತ್ತದೆ ಎಂದು ತಿಳಿದು ಅಂದು ಡೆಲ್ಲಿಯನ್ನು ತೊರೆದು ದಕ್ಷಿಣ ಕಡೆ ಚಲಿಸಿ ಚಿತ್ರದುರ್ಗ ಜಿಲ್ಲೆಯ ನಾಯಕನಹಟ್ಟಿ ಸಮೀಪ ಹೊಸಗುಡ್ಡದ ಬಳಿ ನೆಲೆಸುತ್ತಾರೆ. ಡೆಲ್ಲಿಯ ಸುಲ್ತಾನರ ಮಗಳನ್ನು ಕಾಟೇಮಲ್ಲನಾಯಕ ಮದುವೆಯಾದನೆಂದು ಮುತ್ತಿಗಾರರ ಅಡವಿಯ ಪರಿಸರದಲ್ಲಿ ಹೇಳುತ್ತಾರೆ. ನನ್ನಿವಾಳದ ಪರಿಸರದಲ್ಲಿ ಚಿನ್ನಪಾಲನಾಯಕನು ಹೈದರಾಲಿ ಕಡೆಯ ಮುಸ್ಲಿಂ ಯುವತಿಯನ್ನು ಮದುವೆಯಾದನೆಂದು ಹೇಳುತ್ತಾರೆ. ಈ ಎರಡು ಐತಿಹ್ಯಗಳಲ್ಲಿ ಗೊಂದಲವಿದೆ. ಕಾಟೇಮಲ್ಲನಾಯಕನು ಡೆಲ್ಲಿ ಕಡೆ ಕಂಪಳ ಸಮೇತ ವಲಸೆ ಹೋಗಿರುವುದನ್ನು ಇಡೀ ಸಮುದಾಯದ ಜನಪದ ಇತಿಹಾಸವೇ ಹೇಳುತ್ತದೆ. ಆದರೆ ಡೆಲ್ಲಿಯ ಸುಲ್ತಾನರ ಮಗಳನ್ನು ಮದುವೆಯಾಗಿದ್ದನೇ ಎಂಬುದು ಗೊಂದಲ. ಇನ್ನೊಂದು ಐತಿಹ್ಯ ಪ್ರಕಾರ ಹೈದರಾಲಿಯು ದುರ್ಗವನ್ನು ವಶಪಡಿಸಿಕೊಂಡಾಗ ದುರ್ಗದ ದೊರೆಗಳು ನನ್ನಿಯಮ್ಮನನ್ನು ಅಪಹರಿಸಿ ಮೂರು ಕಟ್ಟೆ ಮನೆಗಳ ದೊರೆಗಳಿಗೆ ವಹಿಸಿದ್ದರಂತೆ. ಅದರಲ್ಲಿ ನನ್ನಿವಾಳದ ದೊರೆ ನನ್ನಿಯಮ್ಮನನ್ನು ವಿವಾಹವಾಗಿ ಮುಸ್ಲಿಂ ಸಂಪ್ರದಾಯ ಮುಂದುವರೆಸಿದನಂತೆ. ಇಂದಿಗೂ ಪ್ರಚಲಿತವಿರುವ ದೊರೆ ಮನೆಗಳಲ್ಲಿ ಮುಸ್ಲಿಂ ಸಂಪ್ರದಾಯ, ದೀಟಿಸಲಾಮು, 'ಮುಂಜಿ' ಸಂಪ್ರದಾಯ ಇತ್ಯಾದಿ ನೋಡಬಹುದು.

ಕಾಟೇಮಲ್ಲನಾಯಕ ಒಮ್ಮೆ ಶ್ರೀಶೈಲ ಪ್ರದೇಶದಲ್ಲಿ ಬರ, ಕ್ಷಾಮ ಉಂಟಾಗಿ ಶ್ರೀಶೈಲ ಪ್ರದೇಶವನ್ನು ತೊರೆದು ಕಂಪಳ ಸಮೇತ, ಮೇವು ನೀರು ಅರಸುತ್ತ ಕನ್ನಡ ನಾಡಿಗೆ ವಲಸೆ ಬಂದ. ಆನೆಗೊಂದಿ, ಹಂಪಿ ಮತ್ತು ಚಿತ್ರದುರ್ಗ ಪರಿಸರದಲ್ಲಿ ಪಶುಪಾಲನೆ ಕೈಗೊಂಡು

ಕೊನೆಗೆ ಹೊಸಗುಡ್ಡದ ಬಳಿ ಮಡಿಯುತ್ತಾನೆ. ಈ ಸಮಾಧಿಯನ್ನು ಹೊಸಗುಡ್ಡದ ಸಮೀಪದಲ್ಲಿಯೇ ಮಾಡಿದ್ದಾರೆ. ಇದನ್ನು ಜನಪದರು ಕಾಟೇಮಲ್ಲಯ್ಯನ ಗುಡ್ಡೆ ಎಂದು ಕರೆಯುತ್ತಾರೆ. ಅಮವಾಸ್ಯೆ, ಹಬ್ಬ-ಹರಿದಿನಗಳಲ್ಲಿ ಈ ಸಮಾಧಿಗೆ ಎಡೆಹಾಕಿ ಪೂಜೆ ಮಾಡುತ್ತಾರೆ. ರಾಮದುರ್ಗ, ರಾಮಸಾಗರ, ಚಳ್ಳಕೆರೆ, ಸೂರಮ್ಮನಹಳ್ಳಿಯ ಗಟ್ಟಿಮುತ್ತಿನಾಯಕರ ಬೆಡಗಿನವರು ಯುಗಾದಿ, ದಸರಾ ಸಂದರ್ಭದಲ್ಲಿ ಇಲ್ಲಿಗೆ ಬಂದು ಈ ಗುಡ್ಡೆಗೆ ಎಡೆ ಹಾಕಿ ಹೊಸಬಟ್ಟೆಯನ್ನು ಏರಿಸಿಕೊಂಡು ಹಿರಿಯರ ಹಬ್ಬ ಮಾಡಿಕೊಂಡು ಹೋಗುತ್ತಾರೆ. ಈ ಬೆಡಗಿನವರು ಗಾದ್ರಿಪಾಲನಾಯಕ ದೈವವನ್ನು ಪ್ರತಿ ಮೂರು ವರ್ಷಗಳಿಗೊಮ್ಮೆ ಈ ಗುಡ್ಡೆಗೆ ಹೊರಡಿಸುತ್ತಾರೆ. ಸೂರಮ್ಮನಹಳ್ಳಿಯ ಗಟ್ಟಿಮುತ್ತಿನಾಯಕ ಬೆಡಗಿನವರು. ಪ್ರತಿ ಮನೆಯಲ್ಲಿ ಚಿಕ್ಕ ಮಕ್ಕಳಿಗೆ ಜವುಳ ತೆಗಿಸುವುದು ಕಡ್ಡಾಯವೆಂಬಂತೆ ಈ ಗುಡ್ಡೆಗೆ, ಎತ್ತಿನಗಾಡಿಗಳ ಮೂಲಕ ತೆರಳುತ್ತಾರೆ. ಈ ಗುಡ್ಡೆಗೆ ಪೂಜೆ ಮಾಡಿ ಎಡೆ ಹಾಕಿ ಪರವು ಮಾಡುತ್ತಾರೆ.

**ಮಲ್ಲಪ್ಪನಾಯಕ**

'ಹಟ್ಟಿ' ಸಂಸ್ಥಾನದ ಪ್ರಬಲ ಆಡಳಿತಗಾರನಾಗಿದ್ದು, ಸುತ್ತಲಿನ ಪಾಳೆಯಗಾರರೊಂದಿಗೆ ಹಾಗೂ ಆನೆಗೊಂದಿಯ ಅರಸರೊಂದಿಗೆ ಸಂಬಂಧವಿಟ್ಟುಕೊಂಡಿದ್ದನು. ಒಮ್ಮೆ ಕಾಶಿಯಾತ್ರೆಗೆ ಹೊರಡುತ್ತಾನೆ. ಆನೆಗೊಂದಿ ಮಾರ್ಗವಾಗಿ ಕಾಶಿಗೆ ಹೋಗುವಾಗ ಅಲ್ಲಿ ಒಬ್ಬ 'ಭೀಮಜಟ್ಟಿ' ಎಂಬುವನು ಈ ನಾಡಿನಲ್ಲಿ ನಮ್ಮನ್ನು ಸೋಲಿಸುವವರು ಯಾರು ಇಲ್ಲ ಎಂದು ಅಟ್ಟಹಾಸದಿಂದ ಮೆರೆಯುತ್ತಿದ್ದನು. ಮಲ್ಲಪ್ಪ ನಾಯಕನು ಅವನನ್ನು ಕೊಂದು ಆನೆಗೊಂದಿ ಅರಸನ ಮೆಚ್ಚುಗೆಗೆ ಪಾತ್ರನಾದನು. ರಾಯರು ಮಲ್ಲಪ್ಪನಾಯಕನನ್ನು ಹೊಗಳಿದರು. ಹಾಗೆಯೇ ಇವನ ಶೌರ್ಯಕ್ಕೆ ಮೆಚ್ಚಿ 'ಭೀಮ' ಎಂಬ ಬಿರುದನ್ನು ನೀಡಿ ಗೌರವಿಸಿದನು. ನಂತರ ಕಾಶಿಗೆ ಹೋಗಿ 'ಕಾಶಿಬಾಣ'ವನ್ನು ತೆಗೆದುಕೊಂಡು ಬಂದು ಹಟ್ಟಿಯ ಸಮೀಪ ಪ್ರತಿಷ್ಠಾಪಿಸಿ 'ರಾಮಲಿಂಗ'ವನ್ನು ರಾಮದುರ್ಗದ ಹೊಸ ಗುಡ್ಡದಲ್ಲಿ ಸ್ಥಾಪಿಸುತ್ತಾನೆ. ಹಟ್ಟಿಯ ದಕ್ಷಿಣ ಭಾಗದಲ್ಲಿರುವ ಹೊಸಗುಡ್ಡದ ಮೇಲೆ ಭವ್ಯವಾದ ಕೋಟೆಯನ್ನು ಕಟ್ಟಿಸಿ ಅದಕ್ಕೆ ರಾಮದುರ್ಗ' ಎಂದು ನಾಮಕರಣ ಮಾಡಲಾಯಿತು. ಹೊಸಗುಡ್ಡವು(ರಾಮದುರ್ಗ) ಕೆಲವು ವರ್ಷಗಳು ಹಟ್ಟಿನಾಯಕರ ರಾಜಧಾನಿಯಾಗಿತ್ತು. ಈ ಗುಡ್ಡದಲ್ಲಿ ಎರಡು ಪುಷ್ಕರಣಿ, ಗುಹಾಂತರ ದೇವಾಲಯ, ನಂದಿವಿಗ್ರಹ ಮೊದಲಾದವುಗಳು ಹಟ್ಟಿಯ ಪಾಳೆಯಗಾರರ ಉನ್ನತಿಯ ಪ್ರತೀಕಗಳಾಗಿವೆ.

ಮಲ್ಲಪ್ಪನಾಯಕನು ಪ್ರಜೆಗಳ ಹಿತದೃಷ್ಟಿಯಿಂದ ಕಾಶಿಯಾತ್ರೆ ಮುಗಿಸಿಕೊಂಡು ಬಂದು ಏಳುಕೆರೆಗಳು ಮತ್ತು ಏಳು ಪುರಗಳನ್ನು ಕಟ್ಟಿಸಿದನು. ಕುದಾಪುರ, ಗೌರಿಪುರ, ಗಿಡ್ಡಾಪುರ, ಕಾಶೀಪುರ, ಮಹದೇವಪುರ, ಮಲ್ಲಾಪುರ, ಬಸಾಪುರ ಹಾಗೂ ಕೃಷಿ ಅಭಿವೃದ್ಧಿಗಾಗಿ ಏಳುಕೆರೆಗಳನ್ನು ಕಟ್ಟಿಸುತ್ತಾನೆ. ರಾಮಸಾಗರ ಕೆರೆ, ಭೀಮಸಾಗರ ಕೆರೆ, ಹಿರೇಕೆರೆ, ಚಿಕ್ಕಕೆರೆ, ಹೊಸಕೆರೆ, ವರುವಿನ ಕೆರೆ, ನಾಯಕನ ಕೆರೆ. ಈ ಮೇಲಿನ ಕೆರೆಗಳಲ್ಲಿ ಆನೆಗೊಂದಿ ರಾಯರ ಹೆಸರಿನಲ್ಲಿ ರಾಮಸಾಗರ ಕೆರೆಯನ್ನು, ಜಟ್ಟಿಯ ಹೆಸರಿನಲ್ಲಿ ಭೀಮಸಕೆರೆ ಕಟ್ಟಿರುವುದು ತಿಳಿದುಬರುತ್ತದೆ.

**ಹೊಸಗುಡ್ಡದ - ಗುಹಾಂತರ ದೇವಾಲಯ**

ಹೊಸಗುಡ್ಡ ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕಿನಲ್ಲಿ ಕಂಡುಬರುತ್ತದೆ. ಇದು ನಾಯಕನಹಟ್ಟಿಯಿಂದ ಆರು ಕಿ.ಮೀ. ದೂರದಲ್ಲಿದೆ. ಭಾರತದ ಕಲೆ ಮತ್ತು ವಾಸ್ತುಶಿಲ್ಪಗಳಲ್ಲಿ ಗುಹಾಂತರ ದೇವಾಲಯಗಳ ನಿರ್ಮಾಣದ ವಾಸ್ತುಶಿಲ್ಪ ಮುಖ್ಯವಾದ ಘಟ್ಟವಾಗಿದೆ. ಮೌರ್ಯರಿಗಿಂತ ಹಿಂದಿನಿಂದಲೂ ಕಲೆ ಮತ್ತು ವಾಸ್ತುಶಿಲ್ಪ ಕಟ್ಟಿಗೆಯಿಂದ ನಿರ್ಮಾಣವಾಗುತ್ತಿತ್ತು. ಕಟ್ಟಿಗೆ ಬಹುಭಾಗ ನಾಶ ಹೊಂದುವ ಗುಣ ಹೊಂದಿದ್ದು, ಇಂದು ಯಾವುದೇ ಆಧಾರವಿಲ್ಲವಾಗಿದೆ. ಆರಂಭದ ಗುಹಾಂತರ ದೇವಾಲಯಗಳನ್ನು ಕಟ್ಟಿಗೆಯಲ್ಲಿ ಮಾಡಿದ ಶೈಲಿಯನ್ನು ಬಳಸಿಕೊಂಡು ದೇವಾಲಯಗಳನ್ನು ನಿರ್ಮಾಣ ಮಾಡಿದರು. ನಂತರ ಉತ್ತಮ ಮಟ್ಟದ ಗುಹಾಂತರ ದೇವಾಲಯಗಳು ಬೌದ್ಧರ ಕಾಲದಲ್ಲಿ ನಿರ್ಮಾಣವಾದವು.

ಬಹುಪಾಲು ಗುಹಾಂತರ ದೇವಾಲಯಗಳು ಮಹಾರಾಷ್ಟ್ರದ ನಾಸಿಕ್ ಸುತ್ತಮುತ್ತ ಹೆಚ್ಚಾಗಿ ಹರಡಿಕೊಂಡಿವೆ. ಕರ್ನಾಟಕದಲ್ಲಿ ನೋಡುವುದಾದರೆ ಬಾದಾಮಿ ಚಾಲುಕ್ಯರ ಕಾಲದಲ್ಲಿ ಗುಹಾಂತರ ದೇವಾಲಯಗಳಾಗಿವೆ. ನಂತರ ಈ ದೇವಾಲಯುಗಳನ್ನು ಯಾವ ಸಾವಮ್ರಾಜ್ಯಗಳು ಮುಂದುವರಿಸಲಿಲ್ಲ. ಕರ್ನಾಟಕದಲ್ಲಿ ಅಪರೂಪವಾಗಿ ಒಂದು ಅಥವಾ ಎರಡು ಗುಹಾಂತರ ದೇವಾಲಯಗಳು ಉತ್ತಮವಾದ ಉದಾಹರಣೆಯಾಗಿವೆ. ಈ ಹೊಸಗುಡ್ಡದ ಗುಹಾಂತರ ದೇವಾಲಯವನ್ನು ನಿರ್ಮಿಸಿದ ಕೀರ್ತಿ ಹಟ್ಟಿ ನಾಯಕರಿಗೆ ಸಲ್ಲುತ್ತದೆ.

ಮಲ್ಲಪ್ಪನಾಯಕನು ಕೆರೆ-ಪುರಗಳನ್ನು ಕಟ್ಟಿಸುವುದರೊಂದಿಗೆ ಆ ಗ್ರಾಮದ ಜನತೆಗೆ ಅಗತ್ಯವಾದ ದೇವಸ್ಥಾನಗಳನ್ನು ಕಟ್ಟಿಸಿದನು. ಕಾಶಿಯಿಂದ ಬಾಣವನ್ನು ತೆಗೆದುಕೊಂಡು ಬಂದು ಹೊಸಗುಡ್ಡದಲ್ಲಿ ಪ್ರತಿಷ್ಠಾಪಿಸಲಾಯಿತು. ಅತ್ಯಂತ ಕಠಿಣವಾದ ಗ್ರ್ಯಾನೈಟ್ ಶಿಲೆಯನ್ನು ಕೊರೆದು ನಿರ್ಮಿಸಿದ ಈ ಗುಹಾಂತರ ದೇವಾಲಯ ಶಿಲ್ಪಕಲೆಯ ದೃಷ್ಟಿಯಿಂದ ಹಟ್ಟಿಯ ಪಾಳೆಯಗಾರರಿಗೆ ಹೆಸರು ತರುವ ಕಲಾಕೃತಿಯಾಗಿ ಉಳಿದಿದೆ. ಹಟ್ಟಿಯ ಪಾಳೆಯಗಾರರ ಕೀರ್ತಿಯನ್ನು ಮುಗಿಲೆತ್ತರಕ್ಕೆ ಏರಿಸಿದ ಬೋಡಿ ಮಲ್ಲಪ್ಪನಾಯಕನ ಕಾಲವನ್ನು ಸುವರ್ಣಯುಗವೆನ್ನಬಹುದು.

**೬.೨. ಹರತಿ ಪಾಳೆಯಗಾರರಿಗೆ ಸಂಬಂಧಿಸಿದ ಐತಿಹ್ಯಗಳು**

ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲೂಕಿನ ಹರ್ತಿಕೋಟೆ ಒಂದು ಐತಿಹಾಸಿಕ ಗ್ರಾಮ. ಹರತಿ ನಾಯಕ ಮನೆತನದವರು ಇಲ್ಲಿ ಸಂಸ್ಥಾನವನ್ನು ಸ್ಥಾಪಿಸಿ ಆಳ್ವಿಕೆ ನಡೆಸುವ ಮೂಲಕ ಇತಿಹಾಸವನ್ನು ಸೃಷ್ಟಿಸಿದ್ದಾರೆ. ಹರತಿ ಮನೆತನದ ಮೂಲ ನಾಯಕ ತಿಪ್ಪರಾಜ. ಈತನು ಸೂರ್ಯದೇವನಿಂದ ತಿಮ್ಮರಾಜನ ಪುತ್ರಿಯಲ್ಲಿ ಜನಿಸಿದನೆಂದು ಪ್ರತೀತಿ. ಇವನು ಮನೆಯಿಂದ ತ್ಯಜಿಸಿ ಹಾವಾಡಿಗನಿಂದ ಪೋಷಿಸಲ್ಪಟ್ಟನು. ವಯಸ್ಸಿಗೆ ಬಂದ ಮೇಲೆ ವಿಜಯನಗರ ಸೈನ್ಯವನ್ನು ಸೇರಿದನು. ದಸರಾ ಸಂದರ್ಭದಲ್ಲಿ ಮಹಾನವಮಿ ದಿಬ್ಬದ ಬಯಲಿನಲ್ಲಿ ಹುಲಿಗಳ ಕುಸ್ತಿ ನಡೆಯಿತು. ಆ ಗುಂಪಿನಿಂದ ತಪ್ಪಿಸಿಕೊಂಡ ಹುಲಿಯೊಂದು ದನಕರುಗಳ ನಡುವೆ

ನುಗ್ಗಲು ಇವನು ತನ್ನ ಚಿಪ್ಪು ಕೊಡಲಿಯಿಂದ ಅದನ್ನು ಕೊಂದನು. ಹೀಗೆ ತಿಪ್ಪರಾಜನು ಅಪ್ರತಿಮ ಸಾಹಸಿಯಾದ್ದರಿಂದಲೇ ವಿಜಯನಗರದ ಅರಸರ ಪ್ರೀತಿಗೆ ಪಾತ್ರನಾದನು. ಇನ್ನೊಂದು ಸಂದರ್ಭದಲ್ಲಿ ಜಟ್ಟಿಯನ್ನು ಸೋಲಿಸಿದನು. ಇವನ ಶೌರ್ಯದಿಂದ ಸಂತುಷ್ಟನಾದ ವಿಜಯನಗರದ ಅರಸರು ಈತನಿಗೆ ಚಿತ್ರದುರ್ಗ ಜಿಲ್ಲೆಯ ಪೂರ್ವಭಾಗದ ವನರಾಜ್ಯವನ್ನು ಕೊಡಲ್ಪಟ್ಟರು.

ಇನ್ನೊಂದು ಐತಿಹ್ಯ ಪ್ರಕಾರ ಹರತಿಯಲ್ಲಿ ಕಾಮನಾಯಕ ಎಂಬ ದೊರೆಯಿದ್ದನು. ಈತನು ಎಮ್ಮೆಗಳನ್ನು ಸಾಕಿದನು. ಈತನ ಮಗಳು ಹದಿನಾಲ್ಕು ವರ್ಷದವಳಿದ್ದಾಗ ಸೂರ್ಯನನ್ನು ಮೋಹಿಸಿದಳು. ನಂತರ ಗರ್ಭಿಣಿಯಾಗಿ ಶಿಶು ಜನನವಾಯಿತು. ಆ ಶಿಶುವನ್ನು ಯಾರಿಗೂ ತಿಳಿಯದಂತೆ ಸೂಲಗಿತ್ತಿಯರು ತಿಪ್ಪೆಯೊಳಗೆ ಗೂಡು ಮಾಡಿ ಇಟ್ಟು ಬಂದರು. ಕಾಮನಾಯಕನ ಎಮ್ಮೆಯೊಂದು ಹೋಗಿ ತಿಪ್ಪೆಯ ಮೇಲೆ ಇದ್ದ ಶಿಶುವಿಗೆ ಹಾಲು ಕೊಟ್ಟು ಬಂದಿತು. ಆ ಎಮ್ಮೆಯನ್ನು ಕಾಮನಾಯಕ ನಸುಕಿನ ಜಾವದಲ್ಲಿ ಹಾಲು ಕರೆಯಲಾಗಿ, ಮೊಲೆಯಲ್ಲಿ ಹಾಲು ಇಲ್ಲದ ಕಾರಣ ಪರೀಕ್ಷೆ ಮಾಡಿದಾಗ ಅದು ಪ್ರತಿದಿನ ತಿಪ್ಪೆಯಲ್ಲಿರುವ ಶಿಶುವಿಗೆ ಹಾಲುಣಿಸುತ್ತಿರುವುದು ತಿಳಿದುಬಂದಿತು. ಆಶ್ಚರ್ಯಗೊಂಡ ಕಾಮನಾಯಕನು ತನಗೆ ಪುತ್ರರಿಲ್ಲದ್ದರಿಂದ ಆ ಶಿಶುವನ್ನು ಮನೆಗೆ ತೆಗೆದುಕೊಂಡು ಹೋಗಿ 'ತಿಪ್ಪರಾಜ' ಎಂಬ ಹೆಸರಿಟ್ಟು ಶಿಶುವನ್ನು ಸಂರಕ್ಷಿಸಿದನು. ಆ ಶಿಶು ಬೆಳೆಯುತ್ತ ದೊಡ್ಡವನಾದನು.

ಒಮ್ಮೆ ಕಾಮನಾಯಕ ಕಂಪಳ ಸಮೇತ ಪಂಪಾ ತೀರಕ್ಕೆ ಬಂದು, ರೊಪ್ಪ ಹಾಕಿಕೊಂಡು ಇದ್ದನು. ತಿಪ್ಪರಾಜನು ದನಗಳೊಡನೆ ಆಟವಾಡುತ್ತ ಇದ್ದಾಗ ನರಪತಿಯು ಬೇಟೆಯಾಡಲು ಒಂದು ಹುಲಿಯನ್ನು ಬೆನ್ನಟ್ಟಿದನು. ಆ ಹುಲಿ ದನಗಳ ಮಧ್ಯೆ ಬಂದಾಗ ತಿಪ್ಪರಾಜ ಬಾಲಕನು ಬಾಣಗಳನ್ನು ಬಿಟ್ಟು ಅದನ್ನು ಸಂಹರಿಸಿದನು. ತರುವಾಯ ಹುಲಿಯನ್ನು ಹುಡುಕುತ್ತ ಬಂದ ನರಪತಿಯು ಸತ್ತಿರುವ ಹುಲಿಯನ್ನು ನೋಡಿ 'ಇದನ್ನು ಕೊಂದವರು' ಯಾರು ಎಂದು ವಿಚಾರಿಸಿದಾಗ, ತಿಪ್ಪರಾಜ ಬಾಲಕನೆಂದು ಕಂಪಳ ಸಮೇತ ಹೇಳಿತು. ನರಪತಿಯು ಆ ಬಾಲಕನನ್ನು ಕರೆದುಕೊಂಡು ಹೋಗಿ ಅವನ ಜನ್ಮ ವೃತ್ತಾಂತವನ್ನು ತಿಳಿದುಕೊಂಡನು. ತಮ್ಮ ಬಳಿ ಇದ್ದ ಕೆಂಚಪ್ಪ ನಾಯಕನ ಕುಮಾರಿ 'ವೀರಮ್ಮ' ಎಂಬ ಕನ್ಯೆಯನ್ನು ಅವನಿಗೆ ವಿವಾಹ ಮಾಡಿಸಿ, ಕಾಮನಾಯಕನು ದೊಡ್ಡಿ ಹಾಕಿಕೊಂಡ ಸ್ಥಳಕ್ಕೆ ಕಾಮಲಾಪುರ ಎಂಬ ಹೆಸರಿಟ್ಟು ಆ ಗ್ರಾಮವನ್ನು ಅವನಿಗೆ ಕೊಟ್ಟರು.

"ಕೆಲವು ದಿವಸದ ನಂತರ ದಿಲ್ಲಿ ಬಾದಷಹರ ಬಳಿಯಿಂದ 'ಬಹುದರ ಮಲಿಕ'ನೆಂಬ ಕುಸ್ತಿ-ಕಾಳಗದಲ್ಲಿ ಹೆಸರಾದ ಪೈಲ್ವಾನನು ವಿಜಯನಗರದಲ್ಲಿ ಇದ್ದ ನಲವತ್ತೆಂಟು ಪಂಚ ಕಲಶಗಳು ಇಟ್ಟಂತಹ ಗರಡಿಗಳ ಬಳಿಗೆ ಬಂದು, ಅಲ್ಲಿ ಇದ್ದ ಕುಸ್ತಿ ಪಟುಗಳನ್ನು ತಿರಸ್ಕರಿಸಿ, ರಾಯರ ಸಮೀಪಕ್ಕೆ ಬಂದು ತನ್ನ ಸಂಗಡ ಯುದ್ಧಕ್ಕೆ ಜೋಡಿ ಕಟ್ಟಿಸಬೇಕೆಂದೂ, ಇಲ್ಲದಿದ್ದರೆ ಈ ನಲವತ್ತೆಂಟು ಗರಡಿಗಳ ಕಳಸಗಳನ್ನು ತೆಗೆಸಬೇಕೆಂದು, ತನ್ನ ಪುರುಷರ ಮಾತುಗಳ ಆಡಿಕೊಂಡಲ್ಲಿ

ರಾಯರು ಆತನ ಮಾತು ಕೇಳಿ ಮನಸ್ಸು ಬಹು ಕೋಪದಿಂದ ಸಮೀಪದಲ್ಲಿದ್ದಂತಹ ಜನರತ್ತ ಗಮನ ಹರಿಸಿದರು. ಯಾರು ಮುಂದೆ ಬರದಿದ್ದಾಗ, ಅದೇ ಸಮಯದಲ್ಲಿ ತಿಪ್ಪನಾಯಕ ಮುಂದೆ ಬಂದು ದೊರೆಗಳ ಅನುಮತಿಯನ್ನು ಕೇಳಿದನು.

ತಿಪ್ಪನಾಯಕ ತನ್ನ ಸಾಧನೆಯನ್ನು ರಾಜನ ಮುಂದೆ ಹೇಳಿದಾಗ, ರಾಯರು ಅನುಮತಿ ನೀಡಿದರು. ತಿಪ್ಪನಾಯಕ ತನ್ನ ಕೈಯಲ್ಲಿದ್ದ ಕತ್ತಿಯ ಮೊನೆಯ ಕಸ್ತೂರಿ ಹಚ್ಚಿಕೊಂಡು ತನ್ನ ಸಾಧಕ ಚಮತ್ಕೃತಿಯಿಂದ ಅವನ ತಲೆಯ ಮೇಲೆ ಕಠಾರಿಯಿಂದ ಹಣೆಗೆ ಹೊಡೆದಾಗ ಅವನ ತಲೆ ಒಡೆದು ಸತ್ತನು. ತರುವಾಯ ರಾಯರು ಸಂತೋಷಪಟ್ಟು ತಿಪ್ಪರಾಜನನ್ನು ತಮ್ಮ ಬಳಿಯಲ್ಲಿ ಕೂರಿಸಿಕೊಂಡು ತಮಗೆ ಸಲ್ಲತಕ್ಕ ಬಿರುದುಗಳನ್ನು ಕೊಟ್ಟನು".[೨]

ಹೀಗೆ ರಾಯರು ತಿಪ್ಪರಾಜನಿಗೆ ಚಿತ್ರದುರ್ಗ ಜಿಲ್ಲೆಯ ಪೂರ್ವಭಾಗದ ವನರಾಜ್ಯವನ್ನು ಕೊಟ್ಟನೆಂದು ತಿಳಿದು ಬರುತ್ತದೆ. ತಿಪ್ಪರಾಜನು ಮಾಚಿಸಮುದ್ರ, ಗೋಸಿಕೆರೆ, ಚಳ್ಳಕೆರೆ ಪ್ರಾಂತ್ಯಗಳು ಇವನ ರಾಜ್ಯವಾದವು. ದೊಡ್ಡೇರಿ - ಹರತಿ ಮುಂತಾದ ಊರುಗಳನ್ನು ತನ್ನ ಪೂರ್ವಿಕರ ನೆನಪಿಗಾಗಿ ಕಟ್ಟಿಸಿದನು.

### ೬.೩. ಚಿತ್ರದುರ್ಗ ಪಾಳೆಯಗಾರರಿಗೆ ಸಂಬಂಧಿಸಿದ ಐತಿಹ್ಯಗಳು

ಚಿತ್ರದುರ್ಗದ ಪಾಳೆಯಗಾರರ ಪೂರ್ವಿಕರು ಮೊದಲು "ಕುಮ್ಮಟದುರ್ಗದಲ್ಲಿ ಕುಮಾರರಾಮನ ಬಳಿ ಇದ್ದರಂತೆ. ಒಮ್ಮೆ ಮಹಮ್ಮದ್ ಬಿನ್-ತೊಘಲಕನು ಕುಮ್ಮಟದುರ್ಗದ ಮೇಲೆ ಯುದ್ಧ ಮಾಡಿ ಅನೇಕರನ್ನು ಡೆಲ್ಲಿಗೆ ಸೆರೆಹಿಡಿದು ಒಯ್ದನು".[೩] ಅವರಲ್ಲಿ ಕಾಮಗೇತಿ ವಂಶದ ತಿಮ್ಮಣ್ಣನಾಯಕನು ಒಬ್ಬನಾಗಿದ್ದನು. ಕಾಲಾನಂತರದಲ್ಲಿ ಇವನ ವಂಶೀಯರು ಡೆಲ್ಲಿಯ ನಾಡ ತಳವಾರರಾದರು. ಆಗ ಪಟ್ಟದಾನೆಯು ಮದವೇರಿ ಮುಖ್ಯಬೀದಿಗಳಲ್ಲಿ ತಿರುಗಾಡುತ್ತ ಅಪಾರ ಜನರ ಸಾವಿಗೆ-ನೋವಿಗೆ ಕಾರಣವಾಗಿತ್ತು. ಇದನ್ನು ಕಂಡ ತಿಮ್ಮಣ್ಣನಾಯಕನು ಆ ಮದವೇರಿದ ಆನೆಯನ್ನು ಪಳಗಿಸಿದ್ದರಿಂದ, ದಿಲ್ಲಿಯ ಸುಲ್ತಾನನು ಅವನಿಗೆ 'ಮದಕರಿ' ಎಂಬ ಬಿರುದನ್ನು ನೀಡಿದ್ದರಿಂದ ಮುಂದೆ ಪಾಳೆಯಗಾರರೆಲ್ಲ ಮದಕರಿಗಳೆನಿಸಿದರು. ಆನೆಯನ್ನು ಪಳಗಿಸುವಷ್ಟು ಪರಾಕ್ರಮಿಗಳು, ಶೌರ್ಯಕ್ಕೆ ಹೆಸರಾದವರು ಎಂದು ತಿಳಿಯಬಹುದು.

"ವಿಜಯನಗರದ ದಸರಾ ಕಾಲದಲ್ಲಿ ನಾಡ ತಳವಾರ ವಂಶದವರು ಡೆಲ್ಲಿಯನ್ನು ಬಿಟ್ಟು ಕರು ಕುರಿ ಕೋಲಾರಿ ಮುಂತಾದ ಕಂಪಳ ಸಮೇತ ವಲಸೆ ಹೊರಟು ಚಿತ್ರದುರ್ಗ ಜಿಲ್ಲೆಗೆ ಬಂದು ನೆಲೆಸಿದರು".[೪] ಇವರಲ್ಲಿ ಶೂರನಾದ ತಿಮ್ಮಣ್ಣನಾಯಕನು(ಚಿತ್ರನಾಯಕನು) ಚಿತ್ರದುರ್ಗದ ಪಾಳೆಯಪಟ್ಟನ್ನು ಸ್ಥಾಪಿಸಿದನು.

#### ತಿಮ್ಮಣ್ಣ ನಾಯಕ

ತಿಮ್ಮಣ್ಣ ನಾಯಕ ಚಿತ್ರದುರ್ಗದ ಮೂಲ ಪುರುಷ. ಈತನು ಅಧಿಕಾರಕ್ಕೆ ಬರುವುದಕ್ಕಿಂತ ಮುಂಚೆ ವಿಜಯನಗರ ಅರಸರ ಅಧಿಕಾರ ಅವಧಿಯಲ್ಲಿ ಆನೆಗೊಂದಿ, ಹೊಳಲ್ಕೆರೆ, ಹಿರಿಯೂರು

ಮತ್ತು ಚಿತ್ರದುರ್ಗದಲ್ಲಿ ಅವರ ಪ್ರತಿನಿಧಿಯಾಗಿ ಕಾರ್ಯ ನಿರ್ವಹಿಸಿದನು. ಈತನಿಗೆ ಸಂಬಂಧಿಸಿದ ಐತಿಹ್ಯ ಹೀಗಿದೆ. ಒಮ್ಮೆ ಶತ್ರುಗಳು ದುರ್ಗದ ಬೆಟ್ಟಕ್ಕೆ ಮುತ್ತಿಗೆ ಹಾಕಲು ಬಂದು ಕಾನಾಪುರದ, ಬೈಲಿನಲ್ಲಿ ಇಳಿದಿರುವಾಗ, ಒಂದು ದಿನ ಅರ್ಧ ರಾತ್ರಿಯಲ್ಲಿ ಸೇನೆಯವರು ಪಾಳೆಯದಲ್ಲಿ ಮಲಗಿಕೊಂಡು ನಿದ್ರೆ ಮಾಡುತ್ತಿರಲು ತಿಮ್ಮಣ್ಣನಾಯಕನು ಒಂಟಿಯಾಗಿ ಆ ಪಾಳಯಕ್ಕೆ ನುಗ್ಗಿ ಸೇನಾಪತಿಯಾದ ಪಾಳೇ ನರಸಿಂಗರಾಯನ ಖಾಸಾ ಕುದುರೆಯನ್ನು ಕಟ್ಟಿದ್ದ ಕಡೆಗೆ ಸ್ವಲ್ಪವೂ ಗದ್ದಲವಾಗದಂತೆ ಹೋಗಿ ಅದನ್ನು ಬಿಚ್ಚುತ್ತಾ ಇದ್ದನು. ಆಗ ಕುದುರೆಯು ಕುಣಿದು ಶಬ್ದ ಮಾಡಿತು. ಕುದುರೆ ಖಾಸದಾರರಿಗೆ ಎಚ್ಚರವಾಯಿತು, ಅವನು ಕಣ್ಣನ್ನು ಉಜ್ಜುತ್ತಾ ಎದ್ದನು. ಆಗ ತಿಮ್ಮಣ್ಣನಾಯಕನು ಅವನಿಗೆ ಕಾಣದ ಹಾಗೆ ನೆಲದ ಮೇಲೆ ಅಂಗಾತ ಮಲಗಿಕೊಂಡು ಅಲ್ಲಿದ್ದ ಭತ್ತದ ಹುಲ್ಲನ್ನು ತನ್ನ ಮೇಲೆ ಎಳೆದುಕೊಂಡನು. ಕುದುರೆಯವನು ಕಿತ್ತು ಹೋಗಿದ್ದ ಕುದುರೆಯ ಗೂಟವನ್ನು ನೆಲದ ಮೇಲೆ ಇರಿಸಿ ಗಟ್ಟಿಯಾಗಿ ಪೋಣಿಸಿದನು. ಆ ಗೂಟವು ತಿಮ್ಮಣ್ಣನಾಯಕನ ಅಂಗೈಯ ಮಧ್ಯೆ ಹಾದು ನೆಲಕ್ಕೆ ಬಲವಾಗಿ ಇಳಿದಿತ್ತು. ತರುವಾಯ ಕುದುರೆ ಚಾಕರನು ಅದನ್ನು ಆ ಗೂಟಕ್ಕೆ ಕಟ್ಟಿ ಮಲಗಿಕೊಂಡನು. ಅವನಿಗೆ ನಿದ್ರೆ ಬಂದಿದ್ದನ್ನು ಕಂಡು ತಿಮ್ಮಣ್ಣನಾಯಕ ತನ್ನ ಎಡಗೈಯಿಂದ ಸೊಂಟದಲ್ಲಿದ್ದ ಬಾಕಿನಿಂದ ಇರಿದುಕೊಂಡು ತನ್ನ ಮಣಿಕಟ್ಟನ್ನು ಕುಯಿದು ಮೇಲಕ್ಕೆ ಎದ್ದು ಮೋಟು ಕೈಗೆ ಬಟ್ಟೆಯನ್ನು ಸುತ್ತಿ ಅದೇ ಕುದುರೆಯನ್ನು ಬಿಚ್ಚಿ ಅದರ ಮೇಲೆ ಏರಿಕೊಂಡು ಮೇಲು ದುರ್ಗಕ್ಕೆ ಹೋದನು. ಈ ಸಾಹಸ ಇಲ್ಲಿಗೆ ನಿಲ್ಲಲಿಲ್ಲ. ಮೂರನೇ ದಿವಸ, ಸಾಳೇ ನರಸಿಂಗರಾಯನು ಕೂತುಕೊಳ್ಳುತ್ತಿದ್ದ ಖಾಸ ಆನೆಯನ್ನು ದುರ್ಗದ ತಪ್ಪಲಲ್ಲಿರುವ ತಿಮ್ಮಣ್ಣನಾಯಕ ಕೆರೆಗೆ ನೀರು ಕುಡಿಸಲು ಹಿಡಿದು ತಂದನು. ಇದು ಪಾಳೆಯಗಾರನಿಗೆ ತಿಳಿಯಿತು. ಅವನು ಆ ಕ್ಷಣದಲ್ಲಿಯೇ ಎದ್ದು ತನ್ನ ಬಿಲ್ಲನ್ನು ತರಿಸಿ ಅದನ್ನು ಕಾಲಲ್ಲಿ ಮೆಟ್ಟಿ ಬಾಣವನ್ನು ಎದೆಗೆ ಏರಿಸಿ ಅದನ್ನು ಆನೆಯ ಹಣೆಗೆ ಗುರಿಯಿಟ್ಟು ಬಾಣ ಬಿಟ್ಟನು. ಆಗ ಆನೆಗೆ ತಗುಲಿ ಅದು ಕಿರ್ರನೆ ಅರಚಿಕೊಂಡು ನೆಲಕ್ಕೆ ಬಿದ್ದು ಪ್ರಾಣವನ್ನು ಬಿಟ್ಟಿತು.

**ತಿಮ್ಮಣ್ಣನಾಯಕನನ್ನು ಸೆರೆಮನೆಗೆ ಹಾಕಿದ್ದು**

ತಿಮ್ಮಣ್ಣನಾಯಕನು ದುರ್ಗದ ನಾಯಕತನವನ್ನು ಮಾಡಿಕೊಂಡು ಕೋಟೆಯನ್ನು ಕಟ್ಟಿ ರಾಜ್ಯವನ್ನು ವಿಸ್ತರಿಸುತ್ತಿದ್ದನು. ತನ್ನ ಸ್ವ-ಸಾಮರ್ಥ್ಯದಿಂದ ಹಲವು ಸೀಮೆಗಳನ್ನು ಗೆದ್ದು ಸಂಸ್ಥಾನದ ವಿಸ್ತೀರ್ಣವನ್ನು ವಿಸ್ತರಿಸಿ ಚಿತ್ರದುರ್ಗ ಕೋಟೆಯ ಬಲಿಷ್ಠತೆಯ ಕಡೆ ಗಮನ ಹರಿಸಿದನು. ಇವನ ಸಾಧನೆಯನ್ನು ಸಹಿಸದ ಕೆಲವು ಜನರು ವಿಜಯನಗರದ ರಾಯರಲ್ಲಿ ದೂರು ಹೇಳಿದರು. ಇದರಿಂದ ರಾಯರು ಬೇಸರಗೊಂಡು ತಿಮ್ಮಣ್ಣ ನಾಯಕನನ್ನು ಕರೆಯಿಸಿ ಸೆರೆಯಲ್ಲಿಟ್ಟು ಅವನ ಕಡೆಯ ಓಬಣ್ಣ, ದಾದಾನಾಯಕ ಮತ್ತು ಇತರ ಮಂದಿಯನ್ನು ಸಹ ಸೆರೆಮನೆಗೆ ಹಾಕಿದರು. ಆಗ ತಿಮ್ಮಣ್ಣ ನಾಯಕನು ಓಬಣ್ಣ, ದಾದಾನಾಯಕ ಮುಂತಾದವರಿಗೆ ರಸಸಿದ್ಧರಿಂದ

ಪ್ರಸಾದವಾಗಿ ತನಗೆ ಬಂದಿದ್ದ ದೇಸೆಗಟ್ಟಿನ ವಿಭೂತಿ ಕೈಯೆಂಬು ಕೊಟ್ಟು, ತನ್ನ ಕೋರಿಕೆಯನ್ನು ನೇರವೇರಿಸಬೇಕೆಂದು ಹೇಳಿ ಅವರನ್ನು ದುರ್ಗಕ್ಕೆ ಕಳುಹಿಸಿದನು. ಇವರು ತಲೆ ತಪ್ಪಿಸಿಕೊಂಡು ದುರ್ಗಕ್ಕೆ ಬಂದು ಸೇರಿದರು. ತಿಮ್ಮಣ್ಣನಾಯಕನು ರಾಜಾಜ್ಞೆಯನ್ನು ಮೀರಬಾರದಂತೆ ವಿಜಯನಗರದಲ್ಲಿಯೇ ಮರಣ ಹೊಂದಿದನು. ಆತನ ಮರಣ ಕಾಲದಲ್ಲಿ ಅವನ ಬಳಿಯಲ್ಲಿಯೇ ಇದ್ದ ಮಗನಾದ ಓಬಣ್ಣ ನಾಯಕನು ತಮ್ಮ ತಂದೆಯ ಶವವನ್ನು ತುಂಗಭದ್ರಾ ನದಿಯ ದಡದಲ್ಲಿ ದಹನ ಮಾಡಿ ಉತ್ತರ ಕ್ರಿಯಾದಿಗಳನ್ನು ಮಾಡಿ, ತಂದೆಯ ಅಸ್ಥಿಯನ್ನು ತೆಗೆದುಕೊಂಡು ಯಾರಿಗೂ ಅರಿಯದಂತೆ ತಪ್ಪಿಸಿಕೊಂಡು ದುರ್ಗಕ್ಕೆ ಬರುವ ದಾರಿಯಲ್ಲಿ ತನ್ನ ತಂದೆಯ ಗುಡ್ಡೆಯನ್ನು ಹಾಕಿಸಿ ದುರ್ಗ ಸೇರಿದನು.

**ಏಳುಸುತ್ತಿನ ಕೋಟೆ ನಿರ್ಮಾಣ**

ಈ ಏಳುಸುತ್ತಿನ ಕೋಟೆಯನ್ನು ೧ನೇ ಮದಕರಿ ಓಬಣ್ಣ ನಾಯಕ ತಮ್ಮ ಸೈನಿಕರಿಂದ ದಿನನಿತ್ಯ ಸ್ವಲ್ಪ ಸ್ವಲ್ಪವೇ ಕೋಟೆಯನ್ನು ಕಟ್ಟಿಸುತ್ತಿದ್ದನು. ಅದು ದಿನ ಬೆಳಗಾಗುವುದರಲ್ಲಿ ಬಿದ್ದು ಹೋಗುತ್ತಿತ್ತು. ಹೀಗೆ ದಿನಗಳು ಕಳೆದ ನಂತರ ಒಮ್ಮೆ ಸೈನಿಕರ ಸ್ವಪ್ನದಲ್ಲಿ ಏಕನಾಥೇಶ್ವರಿ ಬಂದು ನಿಮ್ಮ ನಾಯಕ ಯಾರ ಅಪ್ಪಣೆ ಮೇರೆಗೆ, ಯಾರ ಅಧೀನದಲ್ಲಿ ಕೋಟೆ ಕಟ್ಟಿಸುತ್ತಾನೆ. ಮುಂದೆ ಅನಾಹುತ ಆಗುವುದೆಂದು ಹೇಳುವಳು. ಆಗ ಪಾಳೆಯಗಾರ ಅದಕ್ಕೆ ಏನು ಮಾಡಬೇಕು ಎಂದಾಗ, ಒಂದು ಕೋಣವನ್ನು ಬಲಿಕೊಟ್ಟು ನನಗೆ ನಡೆದುಕೊಂಡು ಹೋಗು ನಿನ್ನ ಮನೆದೇವತೆಯಾಗಿ ನಿನ್ನ ಬೆನ್ನಿಂದೆ ಇದ್ದು ನಿನ್ನ ಕಾದಾಟಗಳಿಗೆಲ್ಲ ಜಯವನ್ನುಂಟು ಮಾಡುತ್ತೇನೆಂದು ಏಕನಾಥೇಶ್ವರಿ ಅಂದು ಓಬಣ್ಣನಾಯಕನಿಗೆ ವಾಗ್ದಾನ ಕೊಟ್ಟಳು. ಅಂದೇ ರಾತ್ರಿ ಓಬಣ್ಣ ನಾಯಕ ಜೋರಾಗಿ ಜಾತ್ರೆ ಮಾಡಿ ರಾತ್ರಿ ಕೋಣ ಬಲಿಕೊಟ್ಟು ನಂತರ ಕೋಟೆಕಟ್ಟಲು ಪ್ರಾರಂಭಿಸಿದನು. ಅಂದಿನಿಂದ ಕೋಟೆ ನಿಲ್ಲತೊಡಗಿತು.

**ಮದಕರಿ (ಬಿರುದು)**

ದುರ್ಗದ ಪಾಳೆಯಗಾರರ ಪೂರ್ವಿಕರು ಮೊದಲು ಕುಮ್ಮಟ ದುರ್ಗದಲ್ಲಿ ಕುಮಾರರಾಮನ ಬಳಿ ಆನೆಯ ಮಾವುತರಾಗಿ ಶೌರ್ಯದಿಂದ ಕಾದಾಡಿದರು. ಮಹಮದ್-ಬಿನ್ ತೊಘಲಕನು ಕುಮ್ಮಟದುರ್ಗವನ್ನು ಸೂರೆ ಮಾಡಿ ಅನೇಕರನ್ನು ಡೆಲ್ಲಿಗೆ ಸೆರೆಹಿಡಿದು ಒಯ್ದನು. ಅವರಲ್ಲಿ ಕಾಮಗೇತಿ ವಂಶದ ತಿಮ್ಮಣ್ಣ ನಾಯಕ ಒಬ್ಬನಾಗಿದ್ದನು. ಒಮ್ಮೆ ಪಟ್ಟದಾನೆಯು ಮದವೇರಿ ಪ್ರಮುಖ ಬೀದಿಗಳಲ್ಲಿ ತಿರುಗಾಡುತ್ತ ಜನರ ಸಾವು ನೋವುಗಳಿಗೆ ಕಾರಣವಾಯಿತು. ಆಗ ಬಾದಷಹನು ಈ ಆನೆಯ ಮದವನ್ನು ಮರ್ದಿಸಿ, ಅದರ ಸೊಂಡಿಲನ್ನು ನಾಯಿಕುನ್ನಿಯಂತೆ ಓಡಿದು ತರುವಂತೆ ಹೇಳಿದಾಗ, ಅದರಂತೆ ತಿಮ್ಮಣ್ಣ ನಾಯಕ ಮದಿಸಿದ ಆನೆಯನ್ನು ಪಳಗಿಸಿದ್ದರಿಂದ ದಿಲ್ಲಿಯ ಸುಲ್ತಾನನು ಇವನಿಗೆ ಮದಕರಿ ಎಂಬ ಬಿರುದನ್ನು ನೀಡಿದ ಅದೇ ರೀತಿ ಮುಂದೆ ಪಾಳೆಯಗಾರರೆಲ್ಲ ಮದಕರಿಗಳೆನಿಸಿದರು.

## ರಸಸಿದ್ಧರ ದರ್ಶನ

ಈ ರಸಸಿದ್ದರು ಜೋಗಿಮಟ್ಟಿಯ ಕೆಳಗೆ ಸೀಳಿಕಲ್ಲು ಎಂಬ ಬೆಟ್ಟದಲ್ಲಿ ವಾಸಿಸುತ್ತಿದ್ದರು. ಇವರು ಅನೇಕ ರೀತಿಯ ವಿದ್ಯೆಗಳಲ್ಲಿ ಪರಿಣತಿ ಪಡೆದಿದ್ದರು. ಒಮ್ಮೆ ದುರ್ಗದ ಓಬಣ್ಣನಾಯಕ ಬೇಟೆ ನಾಯಿಗಳೊಂದಿಗೆ ಅಡವಿಗೆ ಬೇಟೆಯಾಡಲು ಹೋಗಿದ್ದನು. ಬಿಸಿಲಿನಲ್ಲಿ ದಣಿದು ಒಂದು ಮರದ ಕೆಳಗೆ ವಿಶ್ರಾಂತಿ ಪಡೆಯುತ್ತಿದ್ದಾಗ, ಈ ನಾಯಿಗಳು ಎಲ್ಲಿಯೋ ಹೋಗಿ ನೀರು ಕುಡಿದು ಬಂದವಂತೆ. ಅವುಗಳ ಮೂತಿಗಳನ್ನು ನೋಡಿದಾಗ ಚಿನ್ನದ ಧೂಳಿನಂತೆ ಮೆತ್ತಿಕೊಂಡಿದ್ದವಂತೆ. ಆ ನಾಯಿಗಳು ನೀರು ಕುಡಿದ ಸ್ಥಳವನ್ನು ನೋಡಲು ಹೋದಾಗ ಅವನಿಗೆ ಸೀಳಕಲ್ಲು ಬೆಟ್ಟದಲ್ಲಿ ಸಿದ್ಧರ ದರ್ಶನವಾಯಿತು. ಓಬಣ್ಣ ನಾಯಕ ಅವರಿಗೆ ಭಕ್ತಿಯಿಂದ ನಮಸ್ಕರಿಸಿದಾಗ ಸಿದ್ಧರು ಆಶೀರ್ವಾದ ಮಾಡಿದರು. ಸಿದ್ಧರು, ವಿಭೂತಿ, ಅಂಬು ಮುಂತಾದವುಗಳನ್ನು ಕೊಟ್ಟು ನಿನಗೆ ಯಾವುದೇ ಅಪಾಯ ಬಾರದ ಹಾಗೆ ರಾಜ್ಯಭಾರ ಮಾಡುವಂತೆ ವಚನವಿತ್ತರು. ಈ ರಸಸಿದ್ಧರು ಅಂದಿನಿಂದ ಓಬಣ್ಣ ನಾಯಕನಿಗೆ ಮದಕರಿ ಎಂಬ ಹೆಸರಿಟ್ಟರಂತೆ. ನಂತರ ಅವರು ಪಾಳೆಯಗಾರರಿಗೆ ಮಾರ್ಗದರ್ಶನದ ಜೊತೆಗೆ ಅವರ ಆಗುಹೋಗುಗಳ ಬಗ್ಗೆ ಭವಿಷ್ಯ ನುಡಿಯುತ್ತಿದ್ದರು.

## ರಸಸಿದ್ಧರಿಗೆ ಹಸು ಹಾಲು ಕೊಟ್ಟಿದ್ದು

ಓಬಣ್ಣ ನಾಯಕನ ದನಗಳು ದುರ್ಗದ ಜೋಗಿ ಮರಡಿಗಳಲ್ಲಿ ಪ್ರತಿನಿತ್ಯ ಮೇವಿಗಾಗಿ ಹೋಗುತ್ತಿದ್ದವು. ಒಮ್ಮೆ ಓಬಣ್ಣ ನಾಯಕನ ಹಸು ಒಂದು ತಿಂಗಳಿಂದ ಹಾಲು ಕೊಡದೆ ಇರಲಾಗಿ, ಆಗ ದನ ಕಾಯುವ ಹುಡುಗನಿಗೆ ಕರೆದು ಅಡವಿಯಲ್ಲಿ ಹಾಲು ಕರೆದು ನೀನು ಕುಡಿಯುತ್ತೀಯ ಎಂದು ಹೊಡೆದಿದ್ದರಿಂದ, ನಾನು ಕುಡಿದವನಲ್ಲ ಎಂಬುದಾಗಿ ಹೇಳಿದ್ದರಿಂದ, ದನಗಳು ಮೇಯಲಿಕ್ಕೆ ಬರುವುದಕ್ಕಿಂತ ಮುಂಚಿತವಾಗಿ ಆ ಹುಡುಗನ ತಂದೆ ಯಾರಿಗೂ ಕಾಣದ ಹಾಗೆ ಮರದ ಮೇಲೆ ಕಾದು ಕುಳಿತನು. ಓಬಣ್ಣ ನಾಯಕನ ಹಸು ಮಧ್ಯಾಹ್ನ ದುರ್ಗದ ಮರಡಿಗಳಲ್ಲಿ ಏರಿ ಹೋಗುವುದನ್ನು ಕಂಡ ದನ ಕಾಯುವ ಹುಡುಗನ ತಂದೆ ಮರ ಇಳಿದು ಆ ಹಸುವಿನ ಹಿಂದಿಂದೆ ಹೋದನು. ದುರ್ಗದ ಮೇಲೆ ರಸಸಿದ್ಧರ ಬಳಿಗೆ ಈ ಗೋವು ಹೋಗಿ ಅವರ ಮಡಿಕೆಗಳಲ್ಲಿ ಹಾಲು ಇಳಿಸಿಕೊಟ್ಟದ್ದು ಇವನು ಮರೆಯಿಂದ ನೋಡಿ ಈ ಗೋವಿನ ಕಡೆ ಬಂದ ಹಾದಿಗೆಲ್ಲ ಎಲೆ ಮುರಿದು ಹಾಕಿಕೊಂಡು ಬರುತ್ತಾ ಊರಿಗೆ ಬಂದು ಓಬಣ್ಣ ನಾಯಕರಿಗೆ ತಿಳಿಸಿದನು. ಈ ಸುದ್ದಿ ತಿಳಿದ ನಾಯಕರು ಮರುದಿವಸ ಹಸುವಿನ ಜೊತೆಯಲ್ಲಿ ಐದು ಜನರೊಂದಿಗೆ ಚಿನ್ಮೂಲಗಿರಿಗೆ ಹೋದರು. ದುರ್ಗದ ರಣಮಂಡಲ ಎಂಬ ಸ್ಥಳದಲ್ಲಿ ರಸಸಿದ್ದರು ಇರುವಲ್ಲಿಗೆ ಹಸು ಹೋಗಿ ಅವರ ಕಮಂಡಲದಲ್ಲಿ ಹಾಲು ಕೊಟ್ಟು ತಿರುಗಿ ಬರುವಾಗ ಓಬ್ಬಣ್ಣ ನಾಯಕರಿಗೂ ರಸಸಿದ್ದರು ಕಂಡರು. ಈತನು ದೂರದಿಂದ ರಸಸಿದ್ಧರಿಗೆ ನಮಸ್ಕರಿಸಿದಾಗ ಅವರು ಸಮೀಪಕ್ಕೆ ಕರೆದು ಅಭಯ ಕೊಟ್ಟು ನಿನ್ನ ಹೆಸರೇನು? ಎಂದು ಕೇಳಿದರು. ಈತ ಓಬಣ್ಣ ನಾಯಕ ಎಂದು ಹೇಳಿದನು. ಆಗ ರಸಸಿದ್ಧರು ಇನ್ನು

ಮುಂದೆ ನಿನ್ನ ಹೆಸರು ಮದಕರಿನಾಯಕ ಎಂದು ಮರುನಾಮಕರಣ ಮಾಡಿದರು. ರಸಸಿದ್ಧರು ವಿಭೂತಿ, ಕೊಂಬು, ಧೂಳಿತ ಕೊಟ್ಟು ಈ ದುರ್ಗದ ಹೆಸರು ಚಿನ್ನದಗಿರಿ, ನೀನು ಕೋಟೆ ಕಟ್ಟಿಕೋ ಎಂದು ಹೇಳಿ ಈ ರಸಸಿದ್ಧರು ಜೋಗಿ ಮರಡಿಗೆ ಹೋದರು. ಆಗ ಓಬಣ್ಣ ನಾಯಕ ಕಂಪಳ ದೇವರ ಪೆಟ್ಟಿಗೆ ಸಮೇತವಾಗಿ ದುರ್ಗಕ್ಕೆ ಬಂದರು. ಅಷ್ಟರಲ್ಲಿ ಸಂಪಿಗೆ ಸಿದ್ಧೇಶ್ವರನ ಗುಡಿಯಲ್ಲಿ ರಸಸಿದ್ಧರ ಪುನಃ ದರ್ಶನವಾಗಿ ಕಿನ್ನರಿಗವಿಯಲ್ಲಿ ಏಳು ಮಂದಿ ಸಿದ್ಧರು ಇದ್ದಲ್ಲಿ ಇವರ ಬಳಿಗೆ ಹೋಗಿ ದರುಶನ ತೆಗೆದುಕೊಂಡು ಮುಂದೆ ರಾಜಪ್ರಭು ಆಗುತ್ತೀಯ ಎಂದು ಹಾರೈಸಿ ಮಾಯವಾದರು.

**ಕುರಿ ಕಾಯುವವನಿಗೆ ಐಶ್ವರ್ಯ ಬಂದದ್ದು**

ಚಿತ್ರದುರ್ಗದ ದೊರೆಯಾದ ಭರಮಪ್ಪನಾಯಕನು ದುರ್ಗದ ಪಾಳೆಯಗಾರತನಕ್ಕೆ ಹಕ್ಕುದಾರನಾಗಿದ್ದನು. ಇವನ ತಂದೆ ಕಸ್ತೂರಿ ರಂಗಪ್ಪನು ಬಿಳಿಚೋಡಲ್ಲಿ ಪಶುಪಾಲನೆ ಕೈಗೊಂಡು ನೆಲೆನಿಂತಿದ್ದನು. ಇವನ ಮಗ ಭರಮನು ಮೇಕೆ ಕಾಯುವುದಕ್ಕೆ ಅಡವಿಗೆ ಹೋಗಿ ಒಂದು ದಿನ ಆಯಾಸದಿಂದ ಬಂದು ಮರದ ಕೆಳಗೆ ಮಲಗಿಕೊಂಡು ನಿದ್ರೆ ಮಾಡುತ್ತಿರುವಾಗ ಇವನ ತಲೆದಿಸೆಯಲ್ಲಿ ಒಂದು ನಾಗರಹಾವು ಬಂದು ಹೆಡೆ ಎತ್ತಿ ಆಡುತ್ತಿದ್ದಿತಂತೆ. ಉತ್ತರ ದೇಶದಿಂದ ಮುರುಗೇಂದ್ರಯ್ಯನವರು ಪರದೇಶಿಗಳಾಗಿ ದಕ್ಷಿಣ ದೇಶಕ್ಕೆ ಸಂಚಾರ ನಿಮಿತ್ತ ಬರುತ್ತಾ ಮಾರ್ಗದಲ್ಲಿ ಈ ಭರಮನ ತಲೆಯ ಬಳಿಯಲ್ಲಿ ನಾಗಸರ್ಪ ಹೆಡೆಯಾಡುವುದನ್ನು ಕಂಡು ಇವನ ಬಳಿಗೆ ಬಂದರು. ಸರ್ಪವು ಮರದ ಮೇಲಕ್ಕೆ ಹತ್ತಿ ಹೋಯಿತು. ಆಗ ಅಯ್ಯನವರು ಈ ಹುಡುಗನನ್ನು ಎಬ್ಬಿಸಿ ನೀನು ಯಾರು? ನಿನ್ನ ಹೆಸರು ಏನು? ನಿನ್ನ ಜಾತಿ ಯಾವುದು ಎಂದು ಕೇಳಿದರು. ಭರಮನು ಅಯ್ಯನವರನ್ನು ನೋಡಿ ಭಯಪಟ್ಟು ಎದ್ದು ಅವರಿಗೆ ನಮಸ್ಕಾರವನ್ನು ಮಾಡಿ ನಾನು ವಾಲ್ಮೀಕಿ ಕುಲದ ಕಾಮಗೇತಿಯವನು. ನನ್ನ ಹೆಸರು ಭರಮ ಎಂದನು. ಆಗ ವಿರಕ್ತರು, ಈ ದೇಶದ ದೊರೆತನವು ಮೂರು ತಿಂಗಳಲ್ಲಿ ನಿನಗೆ ಆಗುವುದು ಎಂದು ಹೇಳಿ ಹೊರಟು ಹೋದರು. ಅದರಂತೆ ಭರಮಪ್ಪ ನಾಯಕನು ಮುಂದೆ ದುರ್ಗದ ದೊರೆಯಾದನು.

**ತಲೆ ಒಡಕ ಈರಣ್ಣ**

ಈರಣ್ಣ ಪಾಳೆಯಗಾರರ ಕಾಲದಲ್ಲಿದ್ದ ಪ್ರಮುಖ ಅರ್ಚಕ. ಇವನು ಹಿಡಿಂಬೇಶ್ವರನ ದೇವಸ್ಥಾನದಲ್ಲಿ ಅರ್ಚಕನಾಗಿ ಕಾರ್ಯನಿರ್ವಹಿಸಿದ್ದನು. ಇವನು ಅಚಾತುರ್ಯದಿಂದ ಮಾಡಿದ ಕಾರ್ಯದಿಂದಾಗಿ ತಲೆ ಒಡಕ ಹೆಸರಿನಿಂದ ವಿಶೇಷಣವಾಗಿ ಸೇರಿಕೊಂಡು ತಲೆ ಒಡಕ ಈರಣ್ಣನೆಂದು ಹೆಸರಾಗಿದ್ದಾನೆ. ಒಮ್ಮೆ ಚಿತ್ರದುರ್ಗದಲ್ಲಿ ಪಾಳೆಯಗಾರರು ರಾಜ್ಯಭಾರ ಮಾಡುತ್ತಿದ್ದಾಗ ಮುಖ್ಯ ದೇವಾಲಯಗಳಿಗೆಲ್ಲ ಆಗಾಗ ಭೇಟಿ ಕೊಡುತ್ತಿದ್ದರು. ಆ ಪದ್ಧತಿಯಂತೆ ಒಂದು ದಿನ ರಾತ್ರಿ ಅವರು ಹೊರಡುವುದು ತಡವಾಯಿತು. ಇನ್ನೇನು ಬರಲಾರರು ಎಂದು ತಿಳಿದು ಹಿಡಿಂಬೇಶ್ವರ ದೇವರ ಅರ್ಚಕರು ದೇವರ ಮೇಲಿನ ಹೂ ಮೊದಲಾದವುಗಳನ್ನು ತೆಗೆದುಕೊಂಡು

ಮನೆಗೆ ಹೋದನು. ಸ್ವಲ್ಪ ಹೊತ್ತಿನ ನಂತರ ರಾಜರು ಬರುವ ಸುದ್ದಿ, ಕೊಂಬು ಕಹಳೆಗಳು ಮೊಳಗಿದವು. ಆ ಶಬ್ದ ಕೇಳಿದ ಅರ್ಚಕರು ಗಾಬರಿಯಿಂದ ಭಯ ಭೀತರಾಗಿ ಅವಸರದಲ್ಲಿ ತನ್ನ ಪತ್ನಿಗೆ ಮುಡಿಸಿದ್ದ ಹೂವುಗಳನ್ನು ಕಿತ್ತು ತಂದು ದೇವರಿಗೆ ಮುಂಚಿನಂತೆ ಮುಡಿಸಿದನು. ಆಗ ಪಾಳೆಯಗಾರರು ಬಂದು ದೇವರಿಗೆ ವಂದಿಸಿ ಮಂಗಳಾರತಿ ಮೊಳಗಿಸಿದರು. ತೀರ್ಥ ಪ್ರಸಾದಗಳು ಸ್ವೀಕಾರವಾದವು. ಹಾಗೆಯೇ ಕೈಯಲ್ಲಿದ್ದ ಹೂವನ್ನು ನೋಡಿದಾಗ ಅದರಲ್ಲಿ ಒಂದು ಕೂದಲಿತ್ತು. ಹಿಡಿಂಬೇಶ್ವರನಿಗೆ ಕೂದಲಿರುವುದೇ? ಎಂದು ಪಾಳೆಯಗಾರರು ಅರ್ಚಕರಿಗೆ ಪ್ರಶ್ನಿಸಿದರು. ಆಗ ಅರ್ಚಕ ಹೌದು ಇರುತ್ತದೆ ಎಂದು ಸುಳ್ಳು ಹೇಳಿದನು. ಒಳ್ಳೆಯದು ಪ್ರಾತಃಕಾಲ ಪರೀಕ್ಷಿಸೋಣ ಎಂದು ನಡೆದರು.

ರಾತ್ರಿಯೆಲ್ಲ ಅರ್ಚಕ ಈರಣ್ಣನಿಗೆ ಸುಳ್ಳು ನುಡಿದೆನು ಎಂದು ಭಯಪಟ್ಟು ನಿದ್ದೆ ಬರಲಿಲ್ಲ. ಓ ದೇವರೇ ನನ್ನನ್ನು ಕಾಪಾಡು. ನಾನು ನನ್ನ ಹೆಂಡತಿಯ ಜಡೆಯಲ್ಲಿದ್ದ ಹೂಗಳನ್ನು ನಿನಗೆ ಮುಡಿಸಿದ್ದೇನೆ. ಹಿಡೆಂಬೇಶ್ವರನಿಗೆ ಕೂದಲಿರುವುದು ಎಂದು ಸುಳ್ಳು ಹೇಳಿದೆನು. ನನ್ನ ಮಾತನ್ನು ಉಳಿಸಪ್ಪ ಎಂದು ದೇವರಿಗೆ ಅಡ್ಡ ಬಿದ್ದನು. ಅಷ್ಟರಲ್ಲಿ ಬೆಳಗಾಯಿತು. ಮಡಿಯಿಂದ ಪಾಳೆಯಗಾರರು ಬಂದೇ ಬಿಟ್ಟರು. ಕೂದಲನ್ನು ಎಷ್ಟೇ ಎಳೆದರೂ ಕೈ ನೋವಾಯಿತೆ ವಿನಾಃ ಕೂದಲು ಬರಲಿಲ್ಲ. ಆಗ ಪಾಳೆಯಗಾರರು ದೇವರಿಗೆ ಅಡ್ಡ ಬಿದ್ದು ತಪ್ಪಾಯಿತು ಎಂದು ವಂದಿಸಿ ಅರಮನೆಗೆ ಹೋದರು. ಆಗ ಅರ್ಚಕ ಈರಣ್ಣನಿಗೆ ಮಾತ್ರ ಆವೇಶ ಬಂದು ದೇವರು ನನ್ನನ್ನು ಕಾಪಾಡಿದ್ದಾನೆ. ನನ್ನನ್ನು ದೇವರಿಗೆ ಅರ್ಪಿಸಿಕೊಳ್ಳಬೇಕೆಂದು ಮನಸ್ಸಿನಲ್ಲಿ ತೀರ್ಮಾನಿಸಿದನು. ತನ್ನ ಕೈಯಲ್ಲಿದ್ದ ಕತ್ತಿಯಿಂದ ತನ್ನ ರುಂಡವನ್ನು ತಾನೇ ಕಡಿದು ಶಿವನಿಗೆ ಅರ್ಪಿಸಿಕೊಂಡನು.

**ನಾಗತಿ ಕಂಬ**

ಚಿತ್ರದುರ್ಗದ ಬೆಟ್ಟದಲ್ಲಿ ಏಕನಾಥೇಶ್ವರಿ ದೇವಿಯ ಗುಡಿ ಮುಂಭಾಗದಲ್ಲಿ ಎತ್ತರವಾದ ದೀಪಮಾಲೆಯ ಕಂಬವು ಇದೆ. ಈ ಕಂಬಕ್ಕೆ ನಾಗತಿ ಕಂಬ ಎಂದು ಕರೆಯುತ್ತಾರೆ. ಆ ಕಂಬದ ಪೂರ್ವ ದಿಕ್ಕಿನಲ್ಲಿ ನಾಗತಿ ಚಿತ್ರವಿದೆ. ಪಾಳೆಯಗಾರರ ಕಾಲದಲ್ಲಿ ಉತ್ತರ ಭಾಗದಲ್ಲಿ ಗಡ್ಡದ ಮದಕರಿನಾಯಕನ ಚಿತ್ರವಿದೆ. ಈ ಕಂಬವನ್ನು ಎಷ್ಟು ಬಾರಿ ನಿಲ್ಲಿಸಿದರೂ ಮಾರನೇ ದಿನವೇ ಕೆಳಗೆ ಬೀಳುತ್ತಿದ್ದಿತಂತೆ. ಒಬ್ಬ ಹುಡುಗನ ಕನಸಿನಲ್ಲಿ ತುಂಬು ಗರ್ಭಿಣಿಯನ್ನು ಬಲಿ ಕೊಟ್ಟರೆ ಕಂಬ ನಿಲ್ಲುತ್ತದೆ ಎಂದು ದೇವತೆಯು ಹೇಳಿದಂತೆ ಭಾಸವಾಯಿತು. ಆಗ ರಾಜನಿಗೆ ವಿಷಯ ತಿಳಿದು ಯೋಚನೆಯಲ್ಲಿ ತೊಡಗಿದನು.

ಈ ಕನಸಿನ ವಿಷಯವು ಊರಲೆಲ್ಲಾ ಹರಡಿತು. ಆಗ ರಾಜ ಊರೆಲ್ಲಾ ಡಂಗುರ ಹೊಡೆಸಿ ಪ್ರಚಾರ ಮಾಡಿಸಿದನು. ಆದರೆ ಯಾರೂ ಮುಂದೆ ಬರಲಿಲ್ಲ. ಮದಕರಿನಾಯಕನಿಗೆ ದುಃಖವಾಯಿತು. ಅದನ್ನು ಕಂಡು ಕನಕಮ್ಮ ನಾಗತಿಯು ತಾನೇ ದೇವತೆಗೆ ಬಲಿಯಾಗುವುದಾಗಿ ಹೇಳಿದಳು. ಅವಳು ತುಂಬು ಗರ್ಭಿಣಿಯಾಗಿದ್ದಳು. ನಂತರ ಆಕೆಗೆ ಹೊಸಬಟ್ಟೆ ಉಡಿಸಿ,

ಅರಿಶಿಣ, ಕುಂಕುಮ, ಹೂವು, ಹಾರ ಮೊದಲಾದವುಗಳಿಂದ ಅಲಂಕರಿಸಿದರು. ಈ ಬಸುರಿಯು ದುರ್ಗದ ದೇವತೆಗಳಿಗೆ ವಂದಿಸಿ ಗುಂಡಿಯಲ್ಲಿ ಇಳಿದಳು. ಆಗ ಅವಳ ಮೇಲೆ ಮಣ್ಣುಮುಚ್ಚಿ ಆಕೆಯ ದೇಹದ ಮೇಲೆ ಕಂಬವನ್ನು ನಿಲ್ಲಿಸಿದರು. ಆಗ ಕಂಬವು ಸ್ಥಿರವಾಗಿ ನಿಂತಿತು. ಕೆಲವು ದಿನಗಳ ನಂತರ ಕಂಬದ ಬಳಿ ಬೆಳಗಿನ ಜಾವದಲ್ಲಿ ಲಾಲಿ ಲಾಲಿ ಎಂದು ಹಾಡು ಕೇಳಿಸುತ್ತಿತಂತೆ. ಆಗ ಜನರು ಈ ಕಂಬಕ್ಕೆ ಹಾಲು ಹಾಕಿ ಪೂಜೆ ಮಾಡಿ ಶಾಂತಿ ಮಾಡಿದರು. ಇಂದಿಗೂ ಈ ಕಂಬಕ್ಕೆ ಪೂಜೆ ನೆರವೇರಿಸುತ್ತಾ ಬಂದಿದ್ದಾರೆ.

**ಏಕನಾಥೇಶ್ವರಿ ದೇವಾಲಯ**

ಇದು ಚಿತ್ರದುರ್ಗ ಕೋಟೆಯೊಳಗಿರುವ ಗುಹಾಂತರ ದೇವಾಲಯ. ಪಾಳೆಯಗಾರರ ಮನೆದೇವತೆಯು ಆಗಿದ್ದು, ಇವರು ಯುದ್ಧಕ್ಕೆ ಹೋಗುವ ಮುನ್ನ ಈ ದೇವಿಯ ಅಪ್ಪಣೆಯನ್ನು ಪಡೆಯುತ್ತಿದ್ದರೆಂಬುದು ಜನಪದರಲ್ಲಿ ಮಾಹಿತಿ ಇದೆ. ೫ನೇ ಮದಕರಿನಾಯಕ ಯುದ್ಧಕ್ಕೆ ಹೋಗುವಾಗ ಎಡಬದಿಯ ಹೂವನ್ನು ಈ ದೇವಿ ನೀಡಿದ್ದರಿಂದ ರಾಜ ಯುದ್ಧದಲ್ಲಿ ಸೋತು ದುರ್ಗ ಹೈದರಾಲಿಯ ವಶಕ್ಕೆ ಹೋಯಿತೆಂಬ ಐತಿಹ್ಯವಿದೆ.

**ರಾಯರಬಾವಿ**

ಚಿತ್ರದುರ್ಗದ ಪಾಳೆಗಾರ ಓಬಣ್ಣನಾಯಕನು ಮೊದಲು ವಿಜಯನಗರದ ಸಾಮಂತ ರಾಜನಾಗಿದ್ದನು. ಇವನು ಶ್ರೀಕೃಷ್ಣದೇವರಾಯನ ಬಲಗೈ ಬಂಟ ಮತ್ತು ತುಂಬ ಅಚ್ಚುಮೆಚ್ಚಿನವನಾಗಿದ್ದನು. ಇವನು ರಾಜನೊಂದಿಗೆ ಒಳ್ಳೆಯ ಬಾಂಧವ್ಯ ಹೊಂದಿದ್ದರಿಂದ ಆಸ್ಥಾನದ ಇತರ ವ್ಯಕ್ತಿಗಳಿಗೆ ಓಬಣ್ಣ ನಾಯಕನ ಮೇಲೆ ಅಸೂಯೆ. ಹೀಗಿರುವಾಗ ಒಮ್ಮೆ ಶ್ರೀಕೃಷ್ಣದೇವರಾಯ ಆಸ್ಥಾನದ ಎಲ್ಲಾ ವ್ಯಕ್ತಿಗಳನ್ನು ನಿಮಗೆ ಏನು ಬೇಕು ಕೇಳಿ ಎಂದಾಗ ಪ್ರತಿಯೊಬ್ಬರು ತಮಗೆ ಬೇಕಾದುದ್ದನ್ನು ಬೇಡಿಕೊಳ್ಳುತ್ತಾರೆ. ಆದರೆ ಓಬಣ್ಣನಾಯಕ ಏನೂ ಕೇಳುವುದಿಲ್ಲ. ಆಗ ರಾಜ ಏನು ಬೇಕು ಕೇಳು ಎಂದಾಗ ಏನು ಬೇಡ ನನಗೆ ಸಮಯ ಬಂದಾಗ ಕೇಳುತ್ತೇನೆ ಎಂದು ಹೇಳಿದನು. ಸರಿ ಎಂದು ಸುಮ್ಮನಾಗುತ್ತ ನಂತರ ಕೆಲವು ದಿನಗಳ ಬಳಿಕ ಓಬಣ್ಣ ನಾಯಕನು ತಾನು ಚಿತ್ರದುರ್ಗದ ಕಡೆಗೆ ವಲಸೆ ಹೋಗುವುದಾಗಿ ಹೇಳಿ ಚಿತ್ರದುರ್ಗಕ್ಕೆ ಬಂದು ನೆಲೆಸುತ್ತಾನೆ. ನಂತರ ಕೆಲಕಾಲದ ಬಳಿಕ ಓಬಣ್ಣನಾಯಕ ಬಲಿಷ್ಟವಾದ ಸಾಮ್ರಾಜ್ಯವನ್ನು ಕಟ್ಟಿ ದಕ್ಷತೆಯಿಂದ ಆಡಳಿತ ನಡೆಸುತ್ತಿರುತ್ತಾನೆ. ಆಗ ಶ್ರೀಕೃಷ್ಣದೇವರಾಯನ ಆಸ್ಥಾನದ ವ್ಯಕ್ತಿಗಳು ರಾಜನಿಗೆ ಓಬಣ್ಣ ನಾಯಕನ ಮೇಲೆ ಚಾಡಿಯ ಮಾತುಗಳನ್ನು ಹೇಳುತ್ತಾರೆ. ಓಬಣ್ಣ ನಾಯಕನು ನಿಮ್ಮ ಸರಿಸಮಾನ ಬೆಳೆದು ನಿಮ್ಮ ಮೇಲೆ ದಂಡೆತ್ತಿ ಬರುತ್ತಾನೆಂದು ಹೇಳಿದಾಗ ಆಗ ರಾಜ ಮಾರುವೇಷದಲ್ಲಿ ಚಿತ್ರದುರ್ಗಕ್ಕೆ ಬಂದು ರಾಜನ ಸೈನಿಕರ ಜೊತೆ ನಿಂತು, ಓಬಣ್ಣ ನಾಯಕ ಅಲ್ಲಿನ ಜನಕ್ಕೆ ಏನು ಹೇಳುತ್ತಾನೆ ಎಂದು ಕೇಳಿಸಿಕೊಳ್ಳುತ್ತಿರುತ್ತಾನೆ.

ಆದರೆ ಓಬಣ್ಣನಾಯಕ ಅಲ್ಲಿಯ ಜನಕ್ಕೆ ಶ್ರೀಕೃಷ್ಣದೇವರಾಯರ ಭಾವಚಿತ್ರಕ್ಕೆ ಹೂವಿನಹಾರ ಹಾಕಿದನು. ಅವರ ಗುಣಗಾನ ಮಾಡುವುದನ್ನು ನೋಡಿ ರಾಜ ತಾನು ಓಬಣ್ಣ ನಾಯಕನನ್ನು ತಪ್ಪಾಗಿ ಅರ್ಥಮಾಡಿಕೊಂಡೆ ಎಂದು ತಿಳಿದನು. ಆಗ ಜನರ ಮಧ್ಯಯಿದ್ದ ರಾಜ ವಾಪಾಸ್ಸು ಹೋಗಲು ಬಂದಾಗ ಓಬಣ್ಣನಾಯಕ ರಾಜರನ್ನು ನೋಡಿ ರಾಯರೇ ನೀವು ನಿಮ್ಮ ರಾಜ್ಯ ನೇರವಾಗಿಯೇ ಬರಬಹುದಿತ್ತು. ಏಕೆ ಮಾರುವೇಷದಲ್ಲಿ ಬಂದಿದ್ದೀರಿ ಎಂದಾಗ, ಓಬಣ್ಣ ನಾಯಕನಿಗೆ ನಡೆದ ಇಲ್ಲ ಸಲ್ಲದ ಕುತಂತ್ರದ ಬಗ್ಗೆ ತಿಳಿಸುತ್ತಾನೆ. ನಂತರ ಓಬಣ್ಣ ನಾಯಕ ರಾಯರನ್ನು ಸಿಂಹಾಸನದ ಮೇಲೆ ಕೂರಿಸಿ ರಾಜ ಮಾರ್ಯಾದೆ ಮಾಡುತ್ತಾನೆ. ಆಗ ರಾಯರು ಓಬಣ್ಣನಾಯಕನನ್ನು ನಿನಗೆ ಏನು ಬೇಕು ಎಂದಾಗ ಓಬಣ್ಣ ನಾಯಕ ಹೇಳುತ್ತಾನೆ. ನಾವು ದೇವರನ್ನು ಚಿತ್ರದುರ್ಗದಿಂದ ಹಂಪಿಗೆ ಪೂಜೆಗೆ ತರುತ್ತೇವೆ. ಆಗ ದೇವರ ಪೂಜೆ ಅಥವಾ ಗಂಗೆ ಪೂಜೆ ಮಾಡಲು ಒಂದು ಪುಷ್ಕರಣಿ ಇಲ್ಲ. ಆದ್ದರಿಂದ ಒಂದು ಪುಷ್ಕರಣಿಯನ್ನು ಕಟ್ಟಿಸಿ ಕೊಡಿ ಎಂದು ಕೇಳಿಕೊಳ್ಳುತ್ತಾನೆ. ಆಗ ಶ್ರೀಕೃಷ್ಣದೇವರಾಯರು ಕಟ್ಟಿಸಿದ ಪುಷ್ಕರಣಿಗೆ ರಾಯರಬಾವಿ ಎಂದು ಕರೆಯುತ್ತಿದ್ದರು. ಆದ್ದರಿಂದ ಈ ಬಾವಿಗೆ 'ರಾಯರಬಾವಿ' ಎಂದು ಈಗಲೂ ಜನರು ಕರೆಯುತ್ತಾರೆ. ಇಲ್ಲಿಯ ಹಟ್ಟಿಯನ್ನು 'ರಾಯರ ಹಟ್ಟಿ' ಎನ್ನುತ್ತಿದ್ದರು.

### ವರಸಿದ್ಧಿ ವಿನಾಯಕ

ದುರ್ಗದ ಕೋಟೆಯೊಳಗೆ ಈ ದೇವಸ್ಥಾನವಿದೆ. ಇದನ್ನು ಪಾಳೆಯಗಾರರ ಕಾಲದಲ್ಲಿ ನಿರ್ಮಿಸಲಾಗಿದೆ. ಪಾಳೆಯಗಾರರು ಯುದ್ಧಕ್ಕೆ ಹೋಗುವಾಗ ವಿನಾಯಕನಿಗೆ ಪೂಜೆ ಮಾಡಿ ತೆರಳುತ್ತಿದ್ದರು. ಈ ವಿನಾಯಕನ ವರದಿಂದ ಅವರ ಕಾರ್ಯಗಳು ಯಶಸ್ವಿಯಾಗುತ್ತಿದ್ದವು. ಹೀಗೆ ಪಾಳೆಯಗಾರರಿಗೆ ವರವನ್ನು ನೀಡಿ ಯಶಸ್ವಿಗೊಳಿಸಿದ್ದರಿಂದ ವರಸಿದ್ದಿ ವಿನಾಯಕ ಎಂಬ ಹೆಸರು ಪಡೆದಿತು.

### ಶ್ರೀ ಉತ್ಸವಾಂಬ

ಚಿತ್ರದುರ್ಗದ ದೊಡ್ಡಪೇಟೆ ಬಳಿ ಉಚ್ಚಂಗಮ್ಮನ ದೇವಾಲಯವಿದೆ. ಈ ದೇವತೆಯು ಭರಮಣ್ಣನಾಯಕನ ಭಕ್ತಿಗೆ ಒಲಿದು ಬಂದಳು. ಉಚ್ಚಂಗಿದುರ್ಗದಲ್ಲಿದ್ದ ಈ ದೇವಿಯು ಇಲ್ಲಿಯ ಪಾಳೆಯಗಾರ ಭರಮಣ್ಣ ನಾಯಕನ ಸ್ವಪ್ನದಲ್ಲಿ ನಾನು ಬರುತ್ತೇನೆ ನಿನ್ನ ನಗರಕ್ಕೆ, ನನ್ನನ್ನು ಕರೆದುಕೊಂಡು ಹೋಗು ಎಂದು ಹೇಳಿದ್ದರ ಮೇರೆಗೆ ಈ ನಾಯಕನು ಸಕಲ ವೈಭವ ಸಮೇತ ಉಚ್ಚಂಗಿದುರ್ಗಕ್ಕೆ ಹೋಗಿ ಈ ದೇವಿಯನ್ನು ಕರೆತಂದು ಇಲ್ಲಿ ಸ್ಥಾಪಿಸಿದನು. ಈಗಲೂ ಸಹ ಈ ದೇವಾಲಯವನ್ನು ನೋಡಬಹುದು.

### ಅಕ್ಕತಂಗಿ ಹೊಂಡಗಳು

ದುರ್ಗದ ಬೆಟ್ಟದಲ್ಲಿ ಎರಡು ಹೊಂಡಗಳಿವೆ. ದೊಡ್ಡ ಹೊಂಡ ಅಕ್ಕನದು, ಒಂದು ಹೊಂಡ ಚಿಕ್ಕದಾಗಿರುವುದರಿಂದ ಅದು ತಂಗಿಯದು ಎಂದು ತಿಳಿದುಬರುತ್ತದೆ. ಒಮ್ಮೆ ದುರ್ಗದ

ಕೊನೆಯ ಮದಕರಿನಾಯಕನು ಯುದ್ಧದಲ್ಲಿ ಸೋತು ದುರ್ಗ ಹೈದರಾಲಿಯ ವಶವಾಯಿತು ಎಂದು ಸುದ್ದಿ ತಿಳಿದು ಇಬ್ಬರು ರಾಣಿಯರು ಅರಮನೆಯಿಂದ ಓಡಿ ಬಂದು ಅಕ್ಕ-ತಂಗಿಯರು ಈ ಹೊಂಡಗಳಿಗೆ ಹಾರಿ ಪ್ರಾಣಾರ್ಪಣೆ ಮಾಡಿಕೊಂಡರಂತೆ. ಆದ್ದರಿಂದ ಈ ಹೊಂಡಗಳಿಗೆ 'ಅಕ್ಕ-ತಂಗಿ ಹೊಂಡ' ಎಂಬ ಹೆಸರು ಬಂದಿದೆ. ಈಗಲೂ ಈ ಹೊಂಡಗಳನ್ನು ಕೋಟೆಯೊಳಗೆ ನೋಡಬಹುದು.

**ಸರ್ಜಿರಾಯನ ಬಾಗಿಲು (ರಾಮದೇವರ ಸುತ್ತಿನಕೋಟೆ) :** ಕಹಳೆ, ಬತೇರಿ ಮತ್ತು ಲಾಲ್ ಬತೇರಿಗಳ ನಡುವೆ ಮಧ್ಯದ ಕಣಿವೆ ಮೂಲಕ ಪೂರ್ವಕ್ಕೆ ಹೋದರೆ ದೊರೆಯುವುದೇ ರಾಮದೇವರ ಸುತ್ತಿನಕೋಟೆ. ಒಮ್ಮೆ ಸಿರಾದ ರಂಗಪ್ಪನಾಯಕನ ಮಗ ಕೃಷ್ಣಪ್ಪ ನಾಯಕನು ಚಿತ್ರದುರ್ಗದ ಕಸ್ತೂರಿ ರಂಗಪ್ಪ ನಾಯಕನ ಮಗಳನ್ನು ಮದುವೆಯಾಗಿ ದಿಬ್ಬಣ ಸಮೇತ ಬಂದಾಗ ಜೊತೆಯಲ್ಲಿ ಮಾರುವೇಷದ ಸೈನಿಕರನ್ನು, ಪಿತೂರಿಕಾರರನ್ನು ಕರೆತಂದಿದ್ದು ಮದುವೆ ಮುಗಿದ ರಾತ್ರಿ ದುರ್ಗವೇ ಮಲಗಿದಾಗ ಚಿತ್ರದುರ್ಗವನ್ನು ವಶಪಡಿಸಿಕೊಳ್ಳಲು ಕುತಂತ್ರದಿಂದ ಕೋಟೆಯೊಳಗೆ ಸೈನ್ಯವನ್ನು ಕೃಷ್ಣಪ್ಪ ನಾಯಕನು ನುಗ್ಗಿಸಿದಾಗ ಸುದ್ದಿ ತಿಳಿದ ಕಸ್ತೂರಿ ರಂಗಪ್ಪನಾಯಕನ ಮಗ ಸರ್ಜಿರಾಯ ಗಂಡುಗೊಡಲಿ ಹಿಡಿದು ಸಿರಾದ ಸೈನ್ಯ ಸಮೇತ ತನ್ನ ತಂಗಿ ಗಂಡ ಭಾವನಾದ ಕೃಷ್ಣಪ್ಪನನ್ನು ತುಂಡರಿಸಿದನೆಂದು, ಆ ಯುದ್ಧದಲ್ಲಿ ಇದೇ ಬಾಗಿಲಿನಿಂದ ರಕ್ತ ಧಾರಕಾರವಾಗಿ ಹರಿಯುತ್ತಿದ್ದಿತಂತೆ. ಹೀಗೆ ದುರ್ಗವನ್ನು ರಕ್ಷಿಸಿದ ಸರ್ಜಿರಾಯನ ಸಾಹಸಕ್ಕೆ ಮೆಚ್ಚಿ ಶ್ರೀರಾಮದೇವರ ಬಾಗಿಲನ್ನು ಸರ್ಜಿರಾಯನ ಬಾಗಿಲೆಂದು ಕರೆದರೆಂದು ತಿಳಿದುಬರುತ್ತದೆ.

**ರಾಯದುರ್ಗದ ಉಪ್ಪಾರರು**

"ಒಮ್ಮೆ ರಾಯದುರ್ಗದ ಉಪ್ಪಾರರು ಚಿತ್ರದುರ್ಗದ ಮಾರ್ಗವಾಗಿ ಮಲೆನಾಡಿಗೆ ಮುನ್ನೂರು ಕೋಣಗಳನ್ನು ತೆಗೆದುಕೊಂಡು ಹೋಗುತ್ತಿದ್ದರು. ಈ ಕೋಣಗಳು ರಾಯದುರ್ಗ ಸೀಮೆಗೆ ಸೇರಿದ್ದವು. ಈ ಎಮ್ಮೆಗಳಿಗೆ ನಾಲ್ಕು ಕಾಲುಗಳು ಬಿಳುಪಾಗಿದ್ದವು. ಪಿಂಗಳಗಣ್ಣು, ಹಣೆಯ ಮೇಲೆ ಬಿಳಿಯ ಚುಕ್ಕಿ, ಹೂವು ಬಾಲ; ಇದಕ್ಕೆ ಕೋಡು ಅಣಸು, ಕೊರಳ ಸರಪಣಿ, ಗಂಟೆಯ ಸರ ಇನ್ನಿತರ ಆಭರಣಗಳನ್ನು ಹಾಕಿದ್ದರು. ಈ ರೀತಿಯಲ್ಲಿ ಗುನ್ನಾನೆಗಳಂತೆ ತೋರುತ್ತಿದ್ದ ಮುನ್ನೂರು ಕೋಣಗಳೊಡನೆ ಮಲೆನಾಡಿನಿಂದ ಹೋಳಡಿಕೆಯನ್ನು ತರಲು ಉಪ್ಪಾರರು ಹೋಗುತ್ತಿದ್ದರು. ತಿಮ್ಮಣ್ಣ ನಾಯಕನು ತನ್ನ ಪರಿವಾರದವರೊಡನೆ ಬೆಟ್ಟದ ತುದಿಯನ್ನೇರಿ ಒಂದು ಕೋಡಗಲ್ಲಿನ ಮೇಲೆ ನಿಂತು, ಕೋಟೆಯ ಪಕ್ಕದಲ್ಲಿ ಹಾದು ಹೋಗುವಾಗ ಮುನ್ನೂರು ಕೋಣಗಳನ್ನು ನೋಡಿದನು. ಬೇರೆ ಪಾಳೆಯಗಾರರೊಡನೆ ದಾಳಿ ನಡೆಸಲು ಈ ಅಲಂಕರಿಸಿದ ಕೋಣಗಳ ಮೇಲೆ ಮದ್ದು, ಗುಂಡು ಹೇರಿಕೊಂಡು ಹೋಗುವುದು ಬಹಳ ಅಂದವಾಗಿರುತ್ತದೆ ಎಂದು ಯೋಚಿಸಿ ಆ ಕೋಣಗಳನ್ನು ಹಿಡಿದು ತರುವಂತೆ ಸಮೀಪದಲ್ಲಿ ಇದ್ದ ಪ್ರಧಾನಿಗೆ ಅಪ್ಪಣೆಯಿತ್ತನು. ಪ್ರಧಾನಿ ಅಪ್ಪಣೆಯಂತೆ ತಿಮ್ಮಣ್ಣನಾಯಕನ ದಂಡಿನವರು

ಪ್ರಯಾಣಿಕರನ್ನು ಸುತ್ತುಗಟ್ಟಿ ಎಲ್ಲಾ ಕೋಣಗಳನ್ನು ಕೊಳ್ಳೆಹೊಡೆದು ಚಿತ್ರದುರ್ಗದ ಕೋಟೆಗೆ ತಂದು ಕಟ್ಟಿ ಹಾಕಿದರು".[೫] ಕೋಣಗಳ ಮಾಲೀಕರು ತಿಮ್ಮಣ್ಣನಾಯಕನ ಬಳಿಗೆ ಬಂದು ದುರ್ಗದ ದಂಡಿನವರಿಂದ ತಮಗೆ ಪ್ರಾಪ್ತವಾದ ಕಷ್ಟವನ್ನು ತಿಳಿಸಿ ತಮ್ಮ ಕೋಣಗಳನ್ನು ಹಿಂದಕ್ಕೆ ಕೊಡಿಸಿಕೊಡುವಂತೆ ದೂರು ಹೇಳಿಕೊಂಡರು. ತಿಮ್ಮಣ್ಣನಾಯಕನು ಕೋಣಗಳನ್ನು ಬಿಟ್ಟುಕೊಡಲು ಇಷ್ಟವಿಲ್ಲದವನಾಗಿ ಅವುಗಳನ್ನು ಬಿಡಿಸಿಕೊಳ್ಳಲು ಬಂದಿದ್ದ ಉಪ್ಪಾರರನ್ನು ಸೆರೆಯಲ್ಲಿ ಹಾಕಿಸಿ, ಅವರನ್ನು ಬಿಡಿಸಿಕೊಳ್ಳಲು ಬರುವಂತಹ ರಾಜರನ್ನು ಎದುರಿಸಲು ಸಿದ್ಧರಾಗಿರುವಂತೆ ತನ್ನ ಸೇನಾನಿಗೆ ಆಜ್ಞೆಯನ್ನಿತ್ತನು.

ಅಡಿಕೆಯ ವ್ಯಾಪಾರಕ್ಕಾಗಿ ಹೋದ ಉಪ್ಪಾರರು ಬಹಳ ಕಾಲದವರೆಗೂ ಮನೆಗೆ ಬಾರದಿರುವುದನ್ನು ಕಂಡು ಅವರ ಹೆಂಡತಿ ಮಕ್ಕಳು, ಸಂಬಂಧಿಕರು ಭಯಗೊಂಡು ಹುಡುಕತೊಡಗಿದರು. ಅವರೆಲ್ಲರೂ ಚಿತ್ರದುರ್ಗದ ಕೋಟೆಯಲ್ಲಿ ಸೆರೆಯಾಗಿ ಒಂದು ವರ್ಷದಿಂದ ಶ್ರಮಪಡುತ್ತಿರುವವರೆಂಬ ವರ್ತಮಾನವನ್ನು ಕೇಳಿ ತುಂಬಾ ಭಯಗೊಂಡರು. ಸೆರೆ ಸಿಕ್ಕಿ ಬಿದ್ದ ಕುಟುಂಬದವರು ರಾಯದುರ್ಗ ಸೀಮೆಯಲ್ಲಿದ್ದ ಉಪ್ಪಾರ ಕುಲದ ಯಜಮಾನರ ಬಳಿಗೆ ಬಂದು ತಮ್ಮ ಯಜಮಾನರು ಮತ್ತು ಕೋಣಗಳು ಚಿತ್ರದುರ್ಗ ಕೋಟೆಯಲ್ಲಿ ಸೆರೆ ಬಿದ್ದ ಸಂಗತಿಯನ್ನು ತಿಳಿಸಿದರು. ಕುಲದ ಮುಖ್ಯಸ್ಥರಲ್ಲಿ ಕೆಲವರು ಚಿತ್ರದುರ್ಗದ ಅರಸನ ಬಳಿಗೆ ಹೋಗಿ ಅವನ ದಯವನ್ನು ಪಾಲಿಸಿ ಸೆರೆ ಬಿದ್ದವರನ್ನು ಬಿಡಿಸಿಕೊಂಡು ಬರುವಂತೆ ಕುಟುಂಬದವರು ಪ್ರಾರ್ಥಿಸಿದರು. ಇದನ್ನು ಕುಲದ ಯಜಮಾನರು ಕೇಳಿ ಅವರಲ್ಲಿ ಕೆಲವರು ತಮಗೆ ಯಾವ ಆಲೋಚನೆಯೂ ತಿಳಿಯದು ಎಂದರು. ಇನ್ನೂ ಕೆಲವರು ಅರಸನ ಜೊತೆ ಮಾತನಾಡುವುದು ಹೇಗೆ ಎಂದರು. ಮತ್ತೆ ಕೆಲವರು ಯಾವುದನ್ನು ಕೇಳದೇ ಸುಮ್ಮನಿದ್ದರು. ಕೆಲವರು ಈ ಕೆಲಸವು ತಮ್ಮಿಂದ ಆಗದು ಎಂದು ಹೇಳಿದರು. ಈ ರೀತಿಯಲ್ಲಿ ಸೆರೆ ಬಿದ್ದವರ ಕುಟುಂಬದವರು ನಾವು ಮತ್ತಿತಿಮ್ಮಣ್ಣ ನಾಯಕನ ಭೇಟಿಗೆ ಹೋಗಲಾರೆವು. ಆ ಅರಸನೊಡನೆ ಮಾತನಾಡುವ ಉಪಾಯವು ನಮಗೆ ತಿಳಿಯದು. ಆದರೆ ಕಷ್ಟ ಪಡುವವರನ್ನು ನೋಡಿ ಸುಮ್ಮನಿರುವುದು ಮರ್ಯಾದೆಯಲ್ಲ ಎಂದು ಆಲೋಚಿಸಿ ಒಂದು ದಿನ ದುರ್ಗದ ದೊರೆಗಳಿಗೆ ಕಾಗದ ಬರೆದರು. ನಮ್ಮ ಸೀಮೆಯ ಮುನ್ನೂರು ಜನ ಉಪ್ಪಾರರು, ಮುನ್ನೂರು ಕೋಣಗಳು ನಿಮ್ಮ ಅರಸನ ಬಳಿ ಸೆರೆ ಸಿಕ್ಕಿರುವರು. ಅವರ ಕುಟುಂಬದವರ ಚಿಂತೆಯು ಅಧಿಕವಾಗುತ್ತದೆ. ಈ ಕಾಗದವನ್ನು ನೀವು ಮನ್ನಿಸಿ ಉಪ್ಪಾರ ಕುಲದವರೆಂಬ ಅಭಿಮಾನವಿಟ್ಟು ಸೆರೆಸಿಕ್ಕಿದವರನ್ನು ಬಿಡಿಸಿ ಪುಣ್ಯವನ್ನು ಕಟ್ಟಿಕೊಳ್ಳಿ, ನಿಮ್ಮಿಂದ ನಮ್ಮ ಮಾನವು ಉಳಿಯವುದೆಂದು ನಂಬಿರುವೆವು. ಈ ಕಾಗದವನ್ನು ಬರೆದು ಧೀರನು ನಂಜಿಗಸ್ಥನು ಆದ ಒಬ್ಬ ಉಪ್ಪಾರನ ಸಂಗಡ ಚಿತ್ರದುರ್ಗಕ್ಕೆ ರಾಯದುರ್ಗದ ಉಪ್ಪಾರರ ಯಜಮಾನರು ಕಳುಹಿಸಿಕೊಟ್ಟರು. ಈತನು ಹೆಸರು ತಿಮ್ಮಣ್ಣ; ಕಾಗದವನ್ನು ಓದಿಕೊಂಡು ಅದರ ಅಭಿಪ್ರಾಯವನ್ನು ಅರಿತವನಾಗಿ ಸೆರೆಸಿಕ್ಕಿರುವವರನ್ನು ಸೆರೆಯಿಂದ ಬಿಡಿಸುವುದಾಗಿ ನಿಶ್ಚಯಿಸಿದನು.

ದುರ್ಗದ ಪಾಳೆಯಗಾರನ ಬಳಿ ಬಂದು ತನ್ನ ಕಾಗದದಲ್ಲಿ ಬರೆದದ್ದನ್ನು ವಿವರಿಸಿ, ಸೆರೆ ಬಿದ್ದಿರುವ ತನ್ನ ಕುಲದವರಾದ ಉಪ್ಪಾರರು ಸರ್ಕಾರಕ್ಕೆ ರಾಜಾದಾಯವನ್ನು ಪ್ರತಿ ವರ್ಷ ಸಲ್ಲಿಸುವರು. ಅವರು ನಮ್ಮ ದೇಶದಲ್ಲಿಯೇ ಇರಲಿ ಅಥವಾ ಪರದೇಶದಲ್ಲೇ ಇರಲಿ, ಪ್ರತಿ ವರ್ಷ ಒಂದೊಂದು ವರಹ ರಾಜಾದಾಯವನ್ನು ಸಲ್ಲಿಸುವಂತೆ ಅವರ ಪರವಾಗಿ ನಾನು ನಿಮ್ಮ ರಾಜ್ಯಕ್ಕೆ ಕೈಕಾಗದ ಬರೆದು ಕೊಡುತ್ತೇನೆ. ಅವರು ಪ್ರತಿವರ್ಷ ನಮ್ಮ ರಾಜ್ಯಕ್ಕೆ ಬಂದು ಮುನ್ನೂರು ವರಹದ ಬದುಕನ್ನು ಮಾಡುವರು. ಈ ಮಾತಿಗೆ ತಪ್ಪಿ ನಡೆಯುವುದಿಲ್ಲ. ತನ್ನ ಅರಿಕೆಯನ್ನು ಮನ್ನಿಸಿ ಸೆರೆಸಿಕ್ಕಿರುವ ನನ್ನ ಕುಲದವರನ್ನು, ಅವರ ಕೋಣಗಳನ್ನು ಬಂಧನದಿಂದ ಬಿಡಿಸಬೇಕೆಂದು ಪರಿಪರಿಯಾಗಿ ಬೇಡಿಕೊಂಡನು. ರಾಜ ತಿಮ್ಮಣ್ಣನ ರಾಜಭಕ್ತಿಗೆ ಮೆಚ್ಚಿ ಅವರನ್ನು ಬಂಧನದಿಂದ ಬಿಡಿಸಿದನು. ಸೆರೆಯಲ್ಲಿದ್ದ ಉಪ್ಪಾರರು ಒಂದು ವರ್ಷ ಕಾಲ ಕೋಟೆಯನ್ನು ಕಟ್ಟಲು ಬಲವಾದ ಕಲ್ಲುಗಳನ್ನು ಕೋಣಗಳಿಂದ ಹೇರಿ ಕೋಟೆಯ ಕಲ್ಲುಕಂಭಗಳು, ಉಯ್ಯಾಲೆ ಕಂಬಗಳು, ದೇಗುಲಗಳು, ಶಿಲಾವಿಗ್ರಹಗಳು ಉಪ್ಪಾರರಿಂದಲೇ ನಿರ್ಮಿತವಾದವುಗಳಾಗಿವೆ.

**ಕಳ್ಳಿ ನರಸಪ್ಪಯ್ಯ**

ಕಳ್ಳಿ ನರಸಪ್ಪಯ್ಯ ಕೊನೆಯ ಮದಕರಿ ನಾಯಕನ ಕಾಲದಲ್ಲಿ ಪ್ರಧಾನಿಯಾಗಿದ್ದನು. ಈತನು ಮದಕರಿ ನಾಯಕನಿಗೆ ದ್ರೋಹ ಬಗೆದು ಒಳಸಂಚು ನಡೆಸುತ್ತಾನೆ. ಈತನಿಗೆ ಸಂಬಂಧಿಸಿದ ಐತಿಹ್ಯ ಹೀಗಿದೆ. ವೃದ್ಧ ಕಳ್ಳಿನರಸಪ್ಪಯ್ಯನಿಗೆ ಯಾವಾಗಲೂ ತಾಂಬೂಲ ಮೆಲ್ಲುವ ಚಟ, ಜೊತೆಗೆ ಹೊಗೆಸೊಪ್ಪು ಇರಲೇಬೇಕು. ಕಟಬಾಯಿಂದ ತಾಂಬೂಲ ರಸ ಹರಿದು, ಅದನ್ನು ಒರಸಿಕೊಳ್ಳುತ್ತಿದ್ದ ಅಂಗ ವಸ್ತ್ರವನ್ನೆಲ್ಲ ಕೆಂಪು ಬಣ್ಣಕ್ಕೆ ತಿರುಗಿದ್ದವು. ಈ ಅಭ್ಯಾಸವು ನಾಯಕರಿಗೆ ಅಸಹ್ಯ ತಂದಿತ್ತು. ಆದರೆ ನರಸಪ್ಪನ ಮತಿ ಕುಶಾಗ್ರವಾಗಿರಲು ಈ ಹೊಗೆಸೊಪ್ಪು ಬೆರೆತ ತಾಂಬೂಲವಿರಬೇಕು ಎಂಬುದನ್ನು ರಾಜ ಮನಗಂಡಿದ್ದನು. ಒಮ್ಮೆ ಕೋಟೆಯ ಮೇಲಿನ ಬುರಜೊಂದರ ಮೇಲೆ ರಾಜ ಪ್ರಧಾನಿ ಇಬ್ಬರು ನಿಂತು, ಕಂದಕದ ಆಸುಪಾಸಿನಲ್ಲಿ ಹೊಗೆಸೊಪ್ಪು ಬೆಳೆದಿದ್ದು, ಎಲ್ಲವನ್ನೂ ಮೇಯುತ್ತಿದ್ದ ಕತ್ತೆಗಳು ಹೊಗೆಸೊಪ್ಪಿನ ತಂಟೆಗೆ ಹೋಗುತ್ತಿರಲಿಲ್ಲ. ಇದನ್ನು ಕಂಡು ನಾಯಕರು "ನೋಡಿ ಪ್ರಧಾನಿಗಳೇ ಅಲ್ಲಿ ಕತ್ತೆಗಳು ಮೇಯುತ್ತಿವೆ. ಆದರೆ ಹೊಗೆಸೊಪ್ಪನ್ನು ತಿನ್ನುತ್ತಿಲ್ಲ(ಕತ್ತೆಯೂ ಮೇಯದೇ ಇದ್ದದನ್ನು ನೀವು ತಿನ್ನುತ್ತಿದ್ದೀರಲ್ಲಾ) ಎಂದು ವ್ಯಂಗ್ಯ ಮಾಡಿದನು. ಇದರಿಂದ ಅವಮಾನಿತನಾದ ಪ್ರಧಾನಿ ರಾಜನಿಗೊಂದು ಗತಿ ಕಾಣಿಸಬೇಕೆಂದು ಸಂದರ್ಭಕ್ಕಾಗಿ ಕಾಯುತ್ತಿದ್ದನು. ಹೈದರಾಲಿಯು ಚಿತ್ರದುರ್ಗ ಕೋಟೆಗೆ ಮುತ್ತಿಗೆ ಹಾಕಿದ ಸಂದರ್ಭದಲ್ಲಿ ಒಳಗೊಳಗೆ ಶತ್ರುವಿನ ಕಡೆ ಸೇರಿದ ಪ್ರಧಾನಿ ದುರ್ಗಕ್ಕೆ ದ್ರೋಹ ಬಗೆದ. ಹೈದರಾಲಿಯ ಕೈಸೆರೆಯಾದ ಮದಕರಿನಾಯಕನನ್ನು ಕಂಡು 'ಕತ್ತೆಯೂ ಮೇಯದೆ ಇದ್ದುದನ್ನು ತಿಂದ ತಲೆಯನ್ನು ನೋಡು' ಎಂದು ಹೇಳಿ ಸೇಡು ತೀರಿಸಿಕೊಂಡನಂತೆ.

**ಚೆನ್ನಕೇಶವ ದೇವಾಲಯ**

ಚೆನ್ನಕೇಶವ ದೇವಾಲಯ ನಗರದ ಸಿ.ಕೆ. ಪುರ ಬಡಾವಣೆಯಲ್ಲಿದೆ. ಫೌಜದಾರ ಗೋವಿಂದರಾಯರ ಪೂರ್ವಿಕರು ಪೂನಾ ಕಡೆಯಿಂದ ಚಿತ್ರದುರ್ಗಕ್ಕೆ ಬಂದು ಕೊನೆಯ ಪಾಳೆಯಗಾರರ ಬಳಿ ಸೇವೆ ಸಲ್ಲಿಸುತ್ತಿರುವಾಗ, ಚಿತ್ರದುರ್ಗ ಪತನಾನಂತರ ದುರ್ಗದ ಪಾಳೆಯಪಟ್ಟು ಮೈಸೂರು ರಾಜ್ಯಕ್ಕೆ ಸೇರಿದಾಗ ಟಿಪ್ಪುಸುಲ್ತಾನನ ಬಳಿ ಸೇವೆಗೆ ಸೇರಿದ್ದನು. ಆನಂತರ ಮೈಸೂರು ರಾಜ್ಯವು ಒಡೆಯರ ವಶಕ್ಕೆ ಬಂದಾಗ, ದಿವಾನ್ ಪೂರ್ಣಯ್ಯನವರು ಗೋವಿಂದರಾಯರನ್ನು ಚಿತ್ರದುರ್ಗಕ್ಕೆ ಫೌಜದಾರರನ್ನಾಗಿ ನೇಮಿಸಿದರು. ಗೋವಿಂದರಾಯರು ಸುರಪುರದ ಮೇಲೆ ಲಡಾಯಿಗೆ ಹೋಗಿದ್ದಾಗ, ಅಲ್ಲಿನ ಅಪಾರ ಸಂಪತ್ತನ್ನು ಕೊಳ್ಳೆ ಹೊಡೆದು ಕುದುರೆ, ಒಂಟೆಗಳ ಮೇಲೆ ಐಶ್ವರ್ಯವನ್ನು ಶ್ರೀರಂಗಪಟ್ಟಣಕ್ಕೆ ಸಾಗಿಸುವಾಗ ಒಂದು ಒಂಟೆ ಹೇರನ್ನು ದುರ್ಗದಲ್ಲಿ ಉಳಿಸಿಬಿಟ್ಟರಂತೆ. ಗೋವಿಂದರಾಯರು ನಿವೃತ್ತಿಯ ನಂತರ ದುರ್ಗಕ್ಕೆ ಬಂದು ಸುರಪುರದಿಂದ ತಂದ ಐಶ್ವರ್ಯದಲ್ಲಿ ಸುಂದರ ಲೋಹದಲ್ಲಿ ಮಾಡಿದ ವಿಗ್ರಹಗಳನ್ನು ಗಮನಿಸಿ ಇವುಗಳಿಗೆ ದೇವಮಂದಿರ ನಿರ್ಮಿಸುವ ಮನಸ್ಸಾಗಿ ದೇವಾಲಯಕ್ಕೆ ಬೇಕಾದ ನಿವೇಶನವನ್ನು ಮುಮ್ಮಡಿ ಕೃಷ್ಣರಿಂದ ಪಡೆದು ಸಿ.ಕೆ. ಪುರದಲ್ಲಿ ಚೆನ್ನಕೇಶವ ದೇವಸ್ಥಾನವನ್ನು ನಿರ್ಮಿಸಿದನು.

**ಹೊನ್ನವ್ವ ನಾಗತಿ :** ಈಕೆ ಚಿತ್ರದುರ್ಗದ ಪಾಳೆಯಗಾರ ತಿಮ್ಮಣ್ಣನಾಯಕನ ಮಗಳು. ಈಕೆಯನ್ನು ಹರಪನಹಳ್ಳಿ ಪಾಳೆಯಗಾರ ದಾದಯ್ಯ ನಾಯಕನೊಂದಿಗೆ ವಿವಾಹ ಮಾಡಲಾಗಿತ್ತು. ದಾದಯ್ಯನಿಗೆ ಉಚ್ಚಂಗಿದುರ್ಗವನ್ನು ಉಂಬಳಿಯಾಗಿ ಕೊಟ್ಟು ಸಂತೋಷದಿಂದ ಮಗಳನ್ನು ಕಳುಹಿಸಿದರು. ದಾದಯ್ಯ ಸ್ವಲ್ಪ ದಿನಗಳ ನಂತರ ಮದುವೆಯ ಮೊದಲ ವರ್ಷದಲ್ಲೇ, ದಾದಯ್ಯ ನಾಯಕನಿಗೆ ಉಚ್ಚಂಗಿದುರ್ಗದ ಬಗ್ಗೆ ಚಿತ್ರದುರ್ಗದ ಪಾಳೆಗಾರರ ಮೇಲೆ ದ್ವೇಷ ಒಳಗಿಂದೊಳಗೆ ಬೆಳೆಯುತ್ತಿದ್ದು ಹೊನ್ನವ್ವೆಯನ್ನು ಕೋಟೆಯ ಮೇಲಿಂದ ಬಾವಿಗೆ ತಳ್ಳಿ ಸಾಯಿಸಿದನು. ಹರಪನಹಳ್ಳಿ - ದುರ್ಗದ ಪಾಳೆಯಗಾರರಿಗೆ ನಿರಂತರ ದ್ವೇಷಕ್ಕೆ ಇದೆ ನಾಂದಿಯಾಯಿತು.

**ಲಕ್ಷ್ಮೀಸಿರುವಂತಿ :** ಈಕೆ ತರಿಕೇರೆ ಪಾಳೆಯಗಾರ ಸರ್ಜನಪ್ಪನಾಯಕನ ಮಗಳು. ಈಕೆಗೆ ಒಮ್ಮೆ ಚಿತ್ರದುರ್ಗದ ಚಿಕ್ಕ ಮದಕರಿನಾಯಕನಿಗೆ ಮದುವೆ ನಿಶ್ಚಯವಾಗಿತ್ತು. ಮದುವೆಗೆ ಮದುಮಗ ಮದಕರಿನಾಯಕ ಹೋಗದೆ ಪಟ್ಟದ ಕತ್ತಿ ಕಳುಹಿಸಿ, ಕತ್ತಿಗೆ ಮದುವೆ ಮಾಡಿಕೊಡಬೇಕೆಂದು ಹೇಳಿ ಕಳುಹಿಸಿದ್ದರಿಂದ ಕೋಪಗೊಂಡು, ತರಿಕೇರಿಯ ಪಾಳೆಯಗಾರರಿಗೆ ರಾಜಕುಮಾರಿಯ ಬದಲಾಗಿ ದಾಸಿಯೊಂದಿಗೆ ಕತ್ತಿಗೆ ಮದುವೆ ಮಾಡಿಸಿ ಸೇಡನ್ನು ತೀರಿಸಿಕೊಂಡರಂತೆ. ಇದರಿಂದ ಅವಮಾನಿತನಾದ ಮದಕರಿಯು ಅವರ ಮೇಲೆ ಯುದ್ಧ ಮಾಡಿ ಜಯಗಳಿಸಿ ಲಕ್ಷ್ಮೀಸಿರುವಂತಿಯನ್ನು ಮದುವೆ ಮಾಡಿಕೊಂಡು ಮತ್ತೆ ಚಿತ್ರದುರ್ಗಕ್ಕೆ ಬರುತ್ತಾನೆ.

**ಬಿಚ್ಚುಗತ್ತಿ ಭರಮಣ್ಣನಾಯಕ**

ಬಿಚ್ಚುಗತ್ತಿ ಭರಮಣ್ಣನಾಯಕ ಸದಾ ಯುದ್ಧದಲ್ಲಿ ತೊಡಗಿದ್ದ ಹೆಚ್ಚು. ಈ ಮಾತಿಗೆ ಸಾಕ್ಷಿಯಂತೆ ಆತನ ಹೆಸರಿನಲ್ಲಿ ಬಿಚ್ಚುಗತ್ತಿ ಎಂಬ ವಿಶೇಷ ಬಂದಿದೆ. ಅಂದರೆ ಕತ್ತಿಯನ್ನು ಕೆಳಗಿಡಲು ಪುರುಸೊತ್ತಿಲ್ಲ. ಯಾವಾಗಲೂ ಯುದ್ಧಕ್ಕೆ ಸಿದ್ಧನಾಗಿದ್ದ. ಈತನ ಕಾಲದಲ್ಲಿ ನಡೆದ ದೊಡ್ಡೇರಿ ಕದನ, ಅಣಜಿ ಯುದ್ಧ ಪ್ರಸಿದ್ಧವಾದವು. ದುರ್ಗದ ಗಡಿಗೆ ಸೇರಿದ ಅಣಜಿ ಕೋಟೆಯನ್ನು ನವೀಕರಿಸಿ ಬಲವಾಗಿ ನಿರ್ಮಿಸಲು ಆರಂಭಿಸಿದಾಗ ಹರಪನಹಳ್ಳಿಯವರು ದಂಡೆತ್ತಿ ಬಂದು ಅಡ್ಡಪಡಿಸಿದಾಗ ಆಗ ದುರ್ಗದ ಸೈನಿಕರು ಶತ್ರುಗಳನ್ನು ಸದೆಬಡೆದು ಅವರ ರಕ್ತದಲ್ಲಿ ಮಣ್ಣು ಕಲಿಸಿ ಅಣಜಿಯ ಕೋಟೆಯನ್ನು ಯುದ್ಧದ ನಡುವೆಯೇ ಕಟ್ಟಿ ಮುಗಿಸಿದರೆಂಬ ಐತಿಹ್ಯ ಇದೆ.

**ಸಂತೆಹೊಂಡ**

ಈ ಹೊಂಡವು ಚಿತ್ರದುರ್ಗ ನಗರದ ಮಧ್ಯ ಭಾಗದಲ್ಲಿದೆ. ಇದು ಭರಮಣ್ಣ ನಾಯಕನ ಕಾಲದಲ್ಲಿ ನಿರ್ಮಾಣವಾಗಿದೆ. ಹಿಂದೆ ಸಂತೇಬಾಗಿಲನವರೆಗೆ ಮಾರು ದೂರದಲ್ಲಿಯೇ ಸಂತೇ ನಡೆಯುತ್ತಿತ್ತು. ದುರುಗದ ಸುತ್ತಮುತ್ತಲಿನ ಗ್ರಾಮದವರು ಸಂತೆಗೆಂದು ಕಿಕ್ಕಿರಿದು ಸೇರುತ್ತಿದ್ದರು. ಆ ಜನಕ್ಕೆ ನೀರಿನ ವ್ಯವಸ್ಥೆ ಇರಲಿಲ್ಲವಾಗಿ ಮಣ್ಣಿನ ಗಡಿಗೆಗಳಲ್ಲಿ ತಂದ ನೀರು ಸಾಕಾಗುತ್ತಿರಲಿಲ್ಲ. ಒಮ್ಮೆ ಬೇಸತ್ತ ಜನರೆಲ್ಲ ದೊರೆಗಳ ಬಳಿ ಹೋಗಿ ತಮಗಾಗುತ್ತಿದ್ದ ತೊಂದರೆಯ ಬಗ್ಗೆ ವಿವರಿಸಿದರು. ಅದರಂತೆ ಭರಮಣ್ಣ ನಾಯಕರ ಅಪ್ಪಣೆಯಂತೆ ತನ್ನ ಸೇನಾ ಪರಿವಾರದೊಂದಿಗೆ ಬನ್ನಿಮರದ ಸಮೀಪವೇ ನೀರಿದೆ ಎಂದು ಅರಿತು ಹೊಂಡವನ್ನು ನಿರ್ಮಿಸಲು ಸನ್ನದ್ಧನಾದನು. ಎಷ್ಟೇ ಆಳ ತೆಗೆಸಿದರು ಗಂಗೆಯ ಸುಳಿವಿಲ್ಲವಂತೆ. ಆಗ ಶಾಸ್ತ್ರ ಕೇಳಿಸಿದಾಗ ನರಬಲಿ ಕೊಡಬೇಕೆಂದಾಗ, ಆಗ ನರಬಲಿಯನ್ನು ನೆರವೇರಿಸಿದಾಗ ಅಂದಿನ ರಾತ್ರಿಯೇ ಹೊಂಡ ತುಂಬಿತೆಂದು ಸ್ಥಳೀಯರು ಹೇಳುತ್ತಾರೆ. ಹೊಂಡದ ಪಕ್ಕ ಸಂತೆ ನಡೆಯುತ್ತಿದ್ದರಿಂದ 'ಸಂತೆಹೊಂಡ' ಎಂಬ ಹೆಸರು ರೂಢಿಯಾಗಿ ಬಂದಿದೆ.

**ಕೆನ್ನೆಳ್ಳಿಯನ್ನು ತೊರೆದ ತಿಮ್ಮರಾಹುತರು**

ಕೆನ್ನೆಳ್ಳಿ ಗ್ರಾಮ ಚಳ್ಳಕೆರೆ ತಾಲೂಕಿನಲ್ಲಿ ಕಂಡುಬರುತ್ತದೆ. ಇಮ್ಮಡಿ ಮದಕರಿ ನಾಯಕನು ಅರಸನಾಗಿ ಆಳುತ್ತಿದ್ದಾಗ ಅದೇ ಪ್ರಾಂತ್ಯಕ್ಕೆ ಸೇರಿದ ಕೆನ್ನೆಳ್ಳಿ ಎಂಬ ಗ್ರಾಮದಲ್ಲಿ ಅಂಡದನುಗರ ಸಮುದಾಯ ತಿಮ್ಮರಾಹುತ ಎಂಬುವವನು ಗ್ರಾಮದ ಗೌಡಿಕೆಯನ್ನು ಕೈಗೊಂಡಿದ್ದನು. ಇವನ ಮಗಳು ಲಕ್ಷ್ಮಿ ಅಪರೂಪದ ಸುಂದರಿ. ಅವಳ ಮೇಲೆ ಒಮ್ಮೆ ಮದಕರಿಯ ಕಣ್ಣು ಬಿದ್ದು ಅವಳ ಮೇಲೆ ಮನಸಿಟ್ಟು ಹೆಣ್ಣು ಕೇಳಲು ದಳವಾಯಿಗಳನ್ನು ಕಳುಹಿಸಿದನು. ತಿಮ್ಮರಾಹುತನು ಅಂಡದನುಗರ ಸಮುದಾಯದಲ್ಲಿ ಕಾಮಗೇತಿ ನಾಯಕ ಸಮುದಾಯದವರು ಹೆಣ್ಣು ಕೇಳಲಿಕ್ಕೆ ಹುಕುಮ ಏನಿದೆ ಎಂದು ಪ್ರಶ್ನಿಸಿ ಕಡೆಗೆ ಹೆಣ್ಣು ಕೇಳಲು ಬಂದವರಿಗೆ ಕಾಲಿಗೆ ಹಗ್ಗ ಕಟ್ಟಿ

ಗ್ರಾಮದಿಂದ ಹೊರಕ್ಕೆ ಎಳೆದು ಹಾಕಿಸಿದನು. ಅವರು ಹೋಗಿ ಇಮ್ಮಡಿ ಮದಕರಿಗೆ ನಡೆದ ವಿಷಯವನ್ನು ತಿಳಿಸಿದರು. ಆಗ ಮದಕರಿಯು ಒಂದು ಸೈನಿಕರ ಗುಂಪನ್ನು ಕಳುಹಿಸಿದನು. ಅವರು ಕೆನ್ನಳ್ಳಿ ಗ್ರಾಮಕ್ಕೆ ಬಂದವರೆ ಲೂಟಿ ಮಾಡಲು ತೊಡಗಿದರು. ಹುಲ್ಲು ಬಣವೆ, ಬೆಳೆ, ಮನೆಗಳಿಗೆ ಬೆಂಕಿ ಹಚ್ಚಿದರು. ಕೊನೆಗೆ ತಿಮ್ಮರಾಹುತನ ಮನೆಗೆ ಮುತ್ತಿಗೆ ಹಾಕಿ ಲಕುಮಿಯನ್ನು ಸೆರೆ ಹಿಡಿದರು. ಆಗ ಕೆನ್ನೆಳ್ಳಿಯಲ್ಲಿದ್ದ ಹಿರಿಯ ರಾವುತರು ಹಾಗೂ ಅವರ ಸಂಬಂಧಿಗಳು ಸೇರಿಕೊಂಡು ದುರ್ಗದ ಸೈನಿಕರನ್ನು ಎದುರಿಸಿದರು. ಆಗ ನಡೆದ ಕದನದಲ್ಲಿ ನೂರು ಜನರ ತಲೆಗಳು ಬಿದ್ದವು. ರಾವುತರ ಕಡೆ ಹತ್ತು ತಲೆಗಳು ನೆಲ ಕಚ್ಚಿದವು. ಕಡೆಗೆ ಅರಸರ ಕಡೆಯವರು ಹಿಮ್ಮೆಟ್ಟಬೇಕಾಯಿತು. ಕೆನ್ನಳ್ಳಿಯ ರಾವುತರು ಸತ್ತ ಹತ್ತು ವೀರಯೋಧರಿಗೆ ಕಿಚ್ಚು ಹಾಕಿಸಿದಾಗ ಈ ದುಃಖವನ್ನು ತಾಳಿಕೊಳ್ಳಲಾಗದ ಲಕುಮಿ ನನ್ನಿಂದಾಗಿ ನನ್ನ ಅಣ್ಣಂದಿರು ಪ್ರಾಣ ತೆತ್ತರು ಎಂದು ಅದೇ ಕಿಚ್ಚಿಗೆ ಹಾರಿ ಬಲಿದಾನವಾದಳು. ರಾವುತರು ಇದನ್ನು ಕಂಡು ನಾಳೆ ನಮ್ಮ ಪ್ರಾಣಗಳು ಉಳಿಯಲಾರವು ಎಂದು ತಿಳಿದು ತಮ್ಮ ಮನೆಯ ದೇವರ ಪ್ರತಿಮೆಗಳನ್ನು ಕಿತ್ತು ಬಂಡಿಗಳಲ್ಲಿ ಹಾಕಿಕೊಂಡು ರಾತ್ರಿಯಲ್ಲಿ ದುರ್ಗದ ಪ್ರಾಂತ್ಯವನ್ನು ತೊರೆದು ಇಕ್ಕೇರಿಗೆ ಹೋಗಿ ಮರೆಹೊಕ್ಕರೆಂದು ತಿಳಿದು ಬರುತ್ತದೆ.

### ಚಂದ್ರ ಭೀಮಕವಿಗೆ ಮರಣದಂಡನೆ ತಪ್ಪಿದ್ದು

ಚಂದ್ರ ಭೀಮಕವಿ ಎಂಬುವನು ದುರ್ಗದ ಕೋಟೆಯೊಳಗೆ ನೆಲೆಸಿದ್ದನು. ಚಿತ್ರದುರ್ಗದ ನಾಯಕರ ಕಾಲದಲ್ಲಿದ್ದ ಚಂದ್ರ ಭೀಮಕವಿಗೆ ಸಂಬಂಧಿಸಿದ ಐತಿಹ್ಯ ಹೀಗಿದೆ. ಕಳ್ಳಿ ನರಸಪ್ಪನವರ (ಪ್ರಧಾನಿ) ಏಕೈಕ ಮುದ್ದಿನ ಪುತ್ರಿ ಗಾಯಿತ್ರಿಯನ್ನು ಚಂದ್ರಭೀಮನೆಂಬ ಕವಿ ಅತ್ಯಾಚಾರ ಮಾಡಲು ಯತ್ನಿಸಿ ಸಿಕ್ಕಿಬಿದ್ದಿದ್ದ. ಆ ಕಾರಣವಾಗಿ ಕೆರಳಿ ಕೆಂಡದಂತಾದ ಪ್ರಧಾನಿ ಕಳ್ಳಿ ನರಸಪ್ಪ ಚಂದ್ರಭೀಮಕವಿಗೆ ಮರಣದಂಡನೆ ವಿಧಿಸಿದ್ದು, ನಾಳೆ ಸೂರ್ಯೋದಯವಾಗುವುದರೊಳಗೆ ಶಿಕ್ಷೆ ಜಾರಿಯಾಗುತ್ತದೆಂಬ ಸುದ್ದಿ ದುರ್ಗದಲ್ಲಿ ಹಬ್ಬಿ ಹರಿದಾಡಿತ್ತು.

ಚಂದ್ರ ಭೀಮಕವಿ ಆಸ್ಥಾನ ಕವಿ ಅಲ್ಲದಿದ್ದರೂ ಮುಂದೊಂದು ದಿನ ಆಗುವ ಎಲ್ಲಾ ಲಕ್ಷಣಗಳು ಅವನಲ್ಲಿದ್ದವು. ಸ್ವಯಂ ಮದಕರಿನಾಯಕರೆ ಅವನ ಕಾವ್ಯವಾಚನ ಶೈಲಿಗೆ ಬೆರಗಾಗಿದ್ದರು. ಚಂದ್ರಭೀಮ ಚಂದ್ರನಂತೆ ಕಾಂತಿಯುಳ್ಳ ಚೆಂದದ ತರುಣನಾದರು, ಭೀಮನಂತೆ ಮೈಕಟ್ಟುಳ್ಳ ಆಳಲ್ಲ. ಮಾತಿನಮಲ್ಲ, ಅಂಜಿಕೆ, ನಾಚಿಕೆ ಸ್ವಭಾವದವನಾದರೂ ಲತಾಂಗಿಯರನ್ನು ಕಂಡೊಡನೆ ಪರವಶನಾಗಿ ಅವರ ಚೆಲುವಿನ ಬಗ್ಗೆ ತಟ್ಟನೆ ಕಾವ್ಯ ರಚಿಸುವಷ್ಟು ಜಾಣ್ಮೆ. ಒಂದೇ ಮಾತಿನಲ್ಲಿ ಹೇಳುವುದಾದರೆ ನರಮಾನವರಿಗಾಗಲಿ, ಪಶುಪಕ್ಷಿ ಪ್ರಾಣಿಗಳಿಗಾಗಲಿ ಕನಸಲ್ಲು ಕೆಡುಕನ್ನು ಬಯಸದ ನಿರುಪದ್ರವಿ. ಅಂತಹವನು ಪ್ರಧಾನಿಗಳ ಮನೆಗೆ ನುಗ್ಗಿ ಮಗಳನ್ನು ಅತ್ಯಾಚಾರ ಮಾಡಲೆತ್ನಿಸಿದನೆಂದರೆ ತರುಣಿಯರಂತೂ ನಂಬದೇ ಕವಿಯ ಬಗ್ಗೆ ಮಮ್ಮಲ ಮರುಗಿದರು. ಅವನಂತವನಲ್ಲವೇ ಅಲ್ಲವೆಂದು ಅವರವರೇ ವಾದಕ್ಕಿಳಿದರು. ಗಾಯಿತ್ರಿಯವರ ಮನೆಯಲ್ಲಿ ಅಪ್ಪ-ಅಮ್ಮಂದಿರು ಕೂಡ ಜಗಳವಾಡಿ, ಗಾಯಿತ್ರಿಯ ಮೇಲೆ ಮುನಿದರು.

ಸೆರೆಮನೆಯಲ್ಲಿರುವ ಚಂದ್ರ ಭೀಮನನ್ನು ಭೇಟಿ ಮಾಡಿ ವಾಸ್ತವನ್ನರಿಯಲು ಗೆಳೆಯರಿಗೆ ತವಕವಿದ್ದಿತಾದರೂ ಕಳ್ಳಿ ನರಸಪ್ಪ ಅವಕಾಶ ಮಾಡಿಕೊಡುವ ದಯೆ ತೋರಲಿಲ್ಲ. ಪ್ರಧಾನಿಯವರನ್ನು ಪ್ರಶ್ನಿಸುವ ಎದೆಗಾರಿಕೆ ಯಾರಿಗಿದೆ. ಅನ್ಯಾಯವಾಗಿರೋದು ಅವರ ಪುತ್ರಿಗೆ ಎಂಬ ಭಯ ಸಾಮಾನ್ಯರಲ್ಲಿ ಕಾಡುತ್ತಿತ್ತು. ದೊರೆ ದುರುಗದಲ್ಲಿಲ್ಲವಾಗಿ ಅಹವಾಲು ಮಂಡಿಸುವುದೆಂದು, ತಿಳಿಯದಾಗಿ ಹಿರಿಯ ಕವಿಗಳ ಅಳಲು. ದೊರೆಯು ನಿಡಗಲ್ಲು ದೊರೆಯ ಮೇಲೆ ಕದನಕ್ಕೆ ತೆರಳಿದ್ದಾರೆ. ಇಂತಹ ಸಂದಿಗ್ಧ ಸ್ಥಿತಿಯಲ್ಲಿ ವೈದಿಕ ಮನೆತನದ ಗಾಯಿತ್ರಿಯ ಮೇಲೆ ಜೈನ ಕವಿಯೊಬ್ಬ ಹಾಡು ಹಗಲೇ ಅತ್ಯಾಚಾರಕ್ಕೆ ಯತ್ನಿಸಿದರೆಂದರೆ ಅದು ಆಡಳಿತದಲ್ಲುಂಟಾದ ಶಿಥಿಲತೆಯಂದೇ ಅರಮನೆಯ ಪರಿವಾರದವರು ಖಿನ್ನರಾದರು. ದೊರೆಗಳ ಅನುಪಸ್ಥಿತಿಯಲ್ಲಿ ಕವಿಗೆ ಮರಣ ದಂಡನೆಗೆ ಜಾರಿಯಾಗುವುದನ್ನು ಯಾರು ಒಪ್ಪಲಿಲ್ಲ. ಆದರೂ ಕಳ್ಳಿನರಸಪ್ಪ ಆಗಲೇಬೇಕು ಎನ್ನುತ್ತಿದ್ದನು. ಚಂದ್ರ ಭೀಮ ಕವಿಯನ್ನು ಒಮ್ಮೆ ಕುಚಲಾಯಿ ಎಂಬ ನಾಯಕಸಾನಿ ತನ್ನ ಮನೆಗೆ ಕರೆದೊಯ್ದರು. ಅಲ್ಲಿ ಆಕೆ ಅವನ ಮಗ್ಗಲಿಗೆ ಕೂತು ಮೈ ಮುಟ್ಟಿ ಮಾತಾನಾಡಿದಳು. ಆಗ ಕವಿ ಬೆವುತು ಹೋದ. ನನ್ನ ಬಗ್ಗೆ ಕವಿತೆ ರಚಿಸಿರಿ ಎಂದು, ಗಲ್ಲ ಹಿಡಿದಾಗ ಕೊಸರಿಕೊಂಡನು. ಹೀಗೆ ಕುಚಳಾಂಬ ಇವನೊಬ್ಬ ಗಂಡಸಾ ಎಳೆದೊಯ್ಯಿರಿ ಎಂದು ಗೆಳೆಯರಿಗೆ ತಿಳಿಸಿದಳು. ಇಂತಹ ಕವಿ ಅತ್ಯಾಚಾರ ಮಾಡಲು ಸಾಧ್ಯವೇ. ಗೆಳೆಯರಾದರು ಅದೆಂತಾ ನಂಬಿಯಾರೋ ಇಂತಹ ಸುದ್ದಿಯನ್ನು ಪದ್ಮಮ್ಮ ನಾಗತಿ ಕೂಡ ನಂಬಲಿಲ್ಲ. ಗಾಯಿತ್ರಿ ಮನೆಯ ಬೀದಿಯಲ್ಲಿ ಆ ಕವಿ ಹಾದು ಹೋಗುವಾಗ ಗಾಯಿತ್ರಿಯೇ ಒತ್ತಾಯ ಮಾಡಿ ಕರೆದಾಗ ಸಂಕೋಚದಿಂದಲೇ ಹೋಗಿ ಉಯ್ಯಾಲೆಯ ಮೇಲೆ ಗೊಂಬೆಯಂತೆ ಕೊಟ್ಟ ಹಾಲನ್ನು, ಮಜ್ಜಿಗೆಯಂತೆ ಕುಡಿದಿದ್ದನ್ನು ಗಾಯಿತ್ರಿಯೇ ರಾಣಿಯ ಬಳಿ ವರ್ಣಿಸಿ ನಕ್ಕಿದ್ದಳು. ಆದರೂ ಕವಿಯನ್ನು ಗಾಯಿತ್ರಿ ಇಷ್ಟಪಟ್ಟಿದ್ದು ನಿಜ. ಏನಾದರೂ ಮಾತನಾಡಿ ಎಂದು ಗಾಯಿತ್ರಿ ಕೆಣಕಿ ಅವನ ಗಾಢ ಮೌನವನ್ನು ಒಡೆದಿದ್ದಳು. ನಂಗೆ ಮಾತನಾಡೋಕೆ ಆಗಲ್ಲ, ಎಂದಾಗ ಕಾವ್ಯವಾಚನ ಮಾಡಬಹುದಲ್ಲ ಎಂದು ರಮಿಸಿದಳು. ಹೊರಗೆ ಕಾವಲಿನವರಿದ್ದಾರೆ, ಏನು ತಿಳಿದುಕೊಂಡಾರು, ಅಕಸ್ಮಾತ್ ಪ್ರಧಾನಿಗಳೇ ಆಗಮಿಸಿದರೆ ಅವರು ಕೇಳಿ ಆನಂದಿಸುತ್ತಾರೆ. ಅವಳದ್ದು ಕೋರಿಕೆ, ನಿನ್ನ ಕವಿತೆಗಳೆಂದರೆ ನನಗಿಷ್ಟ. ನನ್ನ ಬಗ್ಗೆ ಕವಿತೆ ಬರೆಯಲ್ವ, ನಾನು ಅಂದವಾಗಿಲ್ವ ಎಂದಾಗ ನೀವು ನನ್ನ ಕವಿತೆಗಿಂತ ಚೆಂದ ಅಂದವನೇ, ನಾಚಿ ನೀರಾಗಿದ್ದ. ವೀಣೆ ನುಡಿಸುವುದನ್ನು ಕಲಿಸುತ್ತೇನೆಂದು ಗಾಯಿತ್ರಿಯೇ ಮುಂದೇ ಬಿದ್ದು ಅವನನ್ನು ಕೂರಿಸಿಕೊಂಡು ಬೆರಳುಗಳನ್ನು ತಡಕುವಾಗ ವೀಣೆಯ ತಂತಿಗಳನ್ನು ವೀಕ್ಷಿಸಬೇಕೋ ಅವಳ ಮುಖಾರವಿಂದವನ್ನು ತಿಳಿಯದಾಗಿ ಪಿಳಿ ಪಿಳಿ ನೋಡುತ್ತಿದ್ದ. ಇವನು ವೀಣೆಯನ್ನು ಕಲಿಯಲ್ಲ, ತನ್ನ ಮನವನ್ನು ಅರಿಯಲ್ಲವೆಂದು ನಿರಾಶೆಯಿಂದ ಸುಮ್ಮನಾದಳು. ಆಗಲೇ ಒಳ ಬಂದ ಗೂಢಾಚಾರನೊಬ್ಬ ತಂದ ಹೊಸ ಸುದ್ದಿ ಏನೆಂದರೆ ಗಾಯಿತ್ರಿ ಮನೆಯಲ್ಲಿ ಕಾಣುತ್ತಿಲ್ಲ ಎಂದು ಪದ್ಮಮ್ಮನಾಗತಿ ಅವರ ಬಳಿ ಹೇಳಿದನು. ಈ ಮಾತು ಕೇಳಿದ ಕಳ್ಳಿನರಸಪ್ಪನು ಆಕೆಯನ್ನು ಗೃಹಬಂಧನದಲ್ಲಿಟ್ಟಿದ್ದರು. ಅದ್ಹೇಗೆ ತಪ್ಪಿಸಿಕೊಂಡಳೆಂದು, ಮನೆಯತ್ತ ಧಾವಿಸಿ ಬಂದ ನರಸಪ್ಪ ಕಾವಲುಗಾರ ಭಟ್ಟರನ್ನು ಕಾಲಿನಿಂದ

ಜಾಡಿಸಿ ಒದ್ದು, ಎಲ್ಲಿ ಹೋದಳು? ಎಂದು ಕೇಳಿದಾಗ ನನಗೆ ತಿಳಿಯದು. ಪ್ರಧಾನಿ ಮಗಳು ನಾಪತ್ತೆಯಾದ ಸುದ್ದಿ ಸಂಜೆಯಾದಂತೆ ದುರ್ಗದ ತುಂಬಾ ಹರಡಿತ್ತು. ಸಮಯ ಆದಂತೆ ಕಳ್ಳಿ ನರಸಪ್ಪನ ಮಗಳು ಯಾವುದಾದರು ಹೊಂಡಕ್ಕೆ ಹಾರಿಕೊಂಡಳೆ ಎಂದು ಗೋಪಾಲಸ್ವಾಮಿ ಹೊಂಡ, ಕಾಮನಭಾವಿ ಹೊಂಡಗಳನ್ನೆಲ್ಲ, ಶೋಧಿಸಲು ಭಟ್ಟರಿಗೆ ಅಪ್ಪಣೆ ಮಾಡಿದ. ಕವಿಯೊಂದಿಗೆ ಓಡಿ ಹೋಗಲು ಅಸಾಧ್ಯ. ಆತನೀಗ ಸೆರೆಯಲ್ಲಿದ್ದಾನೆ. ತನ್ನ ಮುದ್ದಿನ ಮಗಳ ಮೃತ್ಯುವಿಗೆ ಕಾರಣವಾದ ಕವಿಯನ್ನು ಉಳಿಸಬಾರದೆಂದು ನಿಶ್ಚಯಿಸಿ ಆ ಕವಿಗೆ ಮರಣ ದಂಡನೆ ಆಗಬೇಕು ಎಂದು ದೊರೆಗಳಿಗೆ ಸುದ್ದಿ ಕಳುಹಿಸಿ ನೇಣುಗಂಬದ ಬಯಲಿಗೆ ಕರೆತರಲು ತನ್ನ ಆಪ್ತ ಸಿಬ್ಬಂದಿಯನ್ನು ಕಳುಹಿಸಿದನು.

ಗೋಪಾಲಸ್ವಾಮಿ ಆಲಯದ ಜೋಡಿಕಲ್ಲು ಗವಿಯ ಬೃಹದಾಕಾರದ ಕೊಡುಕಲ್ಲುಗಳ ಬಯಲಿಗೆ ಕವಿಯನ್ನು ಎಳೆದು ತರಲಾಯಿತು. ದೊರೆಗಳು ಜೋಡಿ ಪಂಜಿನ ಬೆಳಕಲ್ಲಿ ಅಂಗರಕ್ಷಕ ಮತ್ತಿತರ ಸಿಬ್ಬಂದಿಯೊಡನೆ ಆಗಮಿಸಿದಾಗ ಕಳ್ಳಿ ನರಸಪ್ಪ ವಿನಯದಿಂದ ಸ್ವಾಗತಿಸಿದ. ಎತ್ತರದ ಜಗಲಿಯ ಮೇಲೆ ಹಾಕಿದ್ದ ಆಸನದಲ್ಲಿ ದೊರೆ ಕೂತು ಸೈನಿಕರ ಮಧ್ಯೆ ಬಂಧಿಯಾಗಿದ್ದ ಕವಿಯತ್ತ ನೋಟವನ್ನು ಬೀರಿದಾಗ, ಕವಿ ನಿಂತಲ್ಲೆ ಗದ ಗದ ಚಳಿ ಬಂದವನಂತೆ ನಡುಗಿದ. ನಾನು ಅತ್ಯಾಚಾರ ಮಾಡಿಲ್ಲ ಮಹಾಪ್ರಭು ಇದು ಸತ್ಯ ಎಂದು ಗಳಗಳನೇ ಅತ್ತನು. ದೊರೆ ಅವನನ್ನು ನೇಣುಗಂಬದ ಕೆಳಗೆ ನಿಲ್ಲಿಸುವಂತೆ ಸನ್ನೆ ಮಾಡುತ್ತಲೇ, ಹಿಗ್ಗಿದ ನರಸಪ್ಪ ತಾನೇ ಎಳೆ ತಂದು ನಿಲ್ಲಿಸಿಬಿಟ್ಟನು.

ಪ್ರಭು ತಾವೇನಾದರೂ ವಿಚಾರಣೆ ನಡೆಸುವುದಿದ್ದರೆ ನಡೆಸೋಣವಾಗಲಿ ಸಾಕ್ಷಿಗಳಿದ್ದಾರೆ. ಆಗ ವಿನಮ್ರತೆ ತೋರಿದ. ಹನ್ನೆರಡು ಕೈವಾಡದವರು ತಟ್ಟನೆ ಮುಂದೆ ಬಂದರು. ಅಗತ್ಯವಿಲ್ಲ ಅಂದ ದೊರೆ ಕವಿಯತ್ತ ತಿರುಗಿ ನಿನ್ನ ಕೊನೆಯ ಆಸೆ ಏನಾದರೂ ಇದ್ದರೆ ಹೇಳು. ಈಡೇರಿಸುತ್ತೇವೆ ಎಂದಾಗ, ಕವಿ ಮಹಾಪ್ರಭು, ಸೆರೆಯಲ್ಲಿದ್ದಾಗ ದಂಡಕ ಒಂದನ್ನು ರಚಿಸಿದ್ದೇನೆ. ಈ ದೇಹ ಧರೆಗುರುಳುವ ಮುನ್ನ ತಮ್ಮ ಮುಂದೆ ಹಾಡುವ ಅಭಿಲಾಷೆಯೇ ನನ್ನ ಕೊನೆಯ ಆಸೆ ಎಂದನು. ದೊರೆ ಅಪ್ಪಣೆ ಕೊಟ್ಟನು. ಮದಕರಿ ರಾಜೇಂದ್ರ ದಂಡಕವನ್ನು ಸ್ವಯಂಬದ್ಧವಾಗಿ ಹಾಡ ತೊಡಗಿದಾಗ ದೊರೆ ತನ್ಮಯನಾಗಿ ಕಣ್ಮುಚ್ಚಿದ. ಇನ್ನೊಂದು ಕಡೆ ಪ್ರಧಾನಿ ಸೂರ್ಯೋದಯ ವಾದಿತೆಂದು ಚಪಡಿಸುತ್ತಿದ್ದ. ನನ್ನ ಜೊತೆ ರಂಗದಲ್ಲಿದ್ದು ನನ್ನ ಹೋರಾಟವನ್ನು ಕಣ್ಣಾರೆ ಕಂಡಂತೆ ಚಿತ್ರಿಸಿದ್ದಿಯಲ್ಲ. ಚಂದ್ರಭೀಮ ಎಂದೂ, ಇಲ್ಲಿರುವ ಎಲ್ಲಾ ಸಾಕ್ಷಿಗಳು ನಿನ್ನ ವಿರುದ್ಧವಾಗಿವೆಯಲ್ಲ. ನಿನ್ನ ಪರವಾಗಿ ಒಂದೂ ಸಾಕ್ಷಿಯಿಲ್ಲವೇ? ಎಂದಾಗ ಗಾಯಿತ್ರಿ ಮಾತ್ರ ಸತ್ಯಾಸತ್ಯತೆ ಹೇಳಬಲ್ಲಳು ಪ್ರಭು ಎಂದು ಕವಿ ಹೇಳಿದನು.

ಆಕೆ ಜೀವಂತವಾಗಿದ್ದಾಳೆಂಬುದು ಶಂಕೆಯಾಗಿದೆ ಪ್ರಭು. ಅದಕ್ಕೂ ಇವನೇ ಕಾರಣ ದಯಮಾಡಿ ಕೂಡಲೇ ಇವನಿಗೆ ಶಿಕ್ಷೆ ಜಾರಿಗೊಳಿಸೋಣವಾಗಲಿ ಎಂದು ನರಸಪ್ಪ ಗುಡುಗಿದನು. ಅಷ್ಟರಲ್ಲೇ ಮಹಾರಾಣಿ ಪದ್ಮಮ್ಮನಾಗತಿಯೊಂದಿಗೆ ಧಾವಿಸಿ ಗಾಯಿತ್ರಿಯು ಹೀಗೆ ಹೇಳಿದಳು.

ಇದೆಲ್ಲ ಸುಳ್ಳು ತಾನು ಕವಿಯನ್ನು ಮನಸಾರೆ ಪ್ರೀತಿಸಿದ್ದು ನಿಜ. ಇದನ್ನು ಸಹಿಸದ ತಂದೆಯವರು ಕವಿಯ ಮೇಲೆ ಸುಳ್ಳು ಆರೋಪ ಹೊರಿಸಿದ್ದಾರೆ. ಮಹಾಪ್ರಭು ದಯಮಾಡಿ ಕಾಪಾಡಿ ಎಂದು ಮೊರೆಯಿಟ್ಟಳು. ನೀವೇನು ಹೇಳುತ್ತೀರಿ ಪ್ರಧಾನಿಗಳೇ ಎಂದು ದೊರೆ ಕೇಳಿದಾಗ ಅನ್ಯಧರ್ಮೀಯರನ್ನು ಪ್ರೀತಿಸಿದ್ದು ಅಪಚಾರ, ಅದಕ್ಕೆ ಶಿಕ್ಷೆಯಾಗಲೇಬೇಕು ಎಂದು ದೊರೆಗಳಿಗೆ ಮನವಿ ಮಾಡಿದನು. ಇವರಿಗೆ ವಿವಾಹ ಮಾಡುವುದೇ ಸರಿಯಾದ ಶಿಕ್ಷೆ ಎಂಬುದು ನಮ್ಮ ಅಭಿಪ್ರಾಯ ಎಂದು ದೊರೆ ಅಬ್ಬರದ ನಗೆ ನಕ್ಕಿದನು. ಆಗ ನರಸಪ್ಪನಿಗೆ ಕೋಪ ಬಂದು ಇದೆಂತಹ ಹುಡುಗಾಟದ ಮಾತು ಆಡುತ್ತಿದ್ದೀರಿ ಪ್ರಭು. ಇದನ್ನು ನಿಮ್ಮ ರಾಜಗುರುಗಳಾದ ಮುರುಘಾಸ್ವಾಮಿಗಳೇ ಖಂಡಿತ ಒಪ್ಪುವುದಿಲ್ಲ ತಿಳಿಯಿರಿ ಎಂದು ಹಲ್ಲು ಮಸೆದನು ನರಸಪ್ಪ. ಬಸವಾನುಯಾಯಿಗಳವರು ಅವರಿಂದ ನಮಗೆ ಅಡ್ಡಿಯಾಗದು ಎಂದು ದೊರೆ ಮುಗುಳ್ನಕ್ಕನು.

ಧರ್ಮಕ್ಕಿಂತ ದಯೇ ಮುಖ್ಯ. ಜಾತಿಗಿಂತ ಪ್ರೀತಿ ಮುಖ್ಯ. ಅದು ನಾವು ಕಂಡುಕೊಂಡು ಧರ್ಮ. ಇದು ರಾಜಾಜ್ಞೆ ಕವಿಯನ್ನು ಈಗಲೇ ಬಂಧ ಮುಕ್ತಗೊಳಿಸಿರಿ. ದೊರೆಯ ಆಜ್ಞೆ ಹೊರಬಿತ್ತು. ಬಂಧ ಮುಕ್ತನಾದ ಕವಿಯ ಬಳಿ ಓಡಿ ಗಾಯಿತ್ರಿ ಯಾರ ಎಗ್ಗಿಲ್ಲದೆ ತಬ್ಬಿಕೊಂಡು ಬಿಕ್ಕಿದ್ದಳು. ಕ್ಷಮಿಸಿ ದೊರೆಗಳೇ ನಾವುಗಳು ಇವರ ವಿವಾಹ ಮಾಡುವುದಿಲ್ಲ ಎಂದು ನರಸಪ್ಪ ಸಿಡಿದು ಬಿದ್ದು, ನಾವು ನಿಂತು ಮಾಡುತ್ತೇವೆ ಎಂದೂ ಮಹಾರಾಣಿಯಾದ ಪದ್ಮಮ್ಮನಾಗತಿ ಏರುಧ್ವನಿಯಲ್ಲಿ ಹೇಳಿದ್ದಳು. ಪ್ರೇಮಿಗಳಿಬ್ಬರು ದೊರೆ - ನಾಗತಿಯರ ಪಾದಕ್ಕೆರಗಿದರು. ಆಗ ಪ್ರಧಾನಿ ನನ್ನನ್ನು ನನ್ನ ಮಗಳಿಂದ ದೂರ ಮಾಡಿದ ನಿನ್ನನ್ನು ದುರ್ಗದಿಂದಲೇ ದೂರ ಮಾಡುವೆನೋ ನಾಯಕ, ಸಾಧ್ಯವಾದರೆ ಲೋಕದಿಂದಲೇ ಎನ್ನುತ್ತಾ ತನಗೂ ಕೇಳದಷ್ಟು ಮೆಲ್ಲಗೆ ಗೊಣಗುತ್ತಾ ಕಳ್ಳಿ ನರಸಪ್ಪ ಅಲ್ಲಿಂದ ಕಳಚಿಕೊಂಡನು.

ಚಿತ್ರದುರ್ಗದ ಪಾಳೆಯಗಾರರ ಬಗೆಗೆ ಜನಪದ ಗೀತೆಗಳು ದುರ್ಗದ ಪರಿಸರದಲ್ಲಿ ಇಂದಿಗೂ ಪ್ರಚಲಿತದಲ್ಲಿವೆ.

## ಮದಕರಿ

ಕೋಲನಿ ಕೋಲನ್ನ ಕೋಲೆ ಸಿರಿಗಂದಾದಿ
ಕೋಲನಿ ಕೋಲನ್ನ ಕೋಲೆ ||ಕೋ||

ತಂಗುಳುನ್ನ ಉಂಡಾನು ತಣ್ಣೀರು ಕುಡಿದಾನು
ಮಾಡಿಕೊಂಡೆಂಡರುನು ಮರತಾನು ರನ್ನಾದಿ ||ಕೋ||

ಮಾಡಿಕೊಂಡೆಂಡರುನು ಮರೆತಾನು
ಮದಕರಿ ನಡುದಾನು ಜರುಮಾಲೆ ಜಗಳಕ್ಕೆ ರನ್ನದಿ ||ಕೋ||

ನಡಿದಾನು ಜರುಮಲೆ ಜಗಳಕ್ಕೆ ಮದಕರಿ
ಕಂಚಿನ ಕೋಟೆಗೆ ಗುರಿ ವಡದಾನು ರನ್ನಾದಿ ||ಕೋ||

ಬಿಸಿ ನೀರು ಕುಡಿದಾನು ಬಸವಣ್ಣನ ಬಡಿದಾನು
ಹೋದ ಸೂಳೆರೆನ್ನೆಲ್ಲ ಮರೆತಾನು ರನ್ನಾದಿ ||ಕೋ||

ಹೋದ ಸೂಳೆಯರನ್ನೆಲ್ಲ ಮರೆತನು ಮದಕರಿ
ನಡಿದಾನು ಜರುಮಲೆ ಜಗಳಕ್ಕೆ ರನ್ನಾದಿ ||ಕೋ||

ನಡಿದಾನು ಜರುಮಲೆ ಜಗಳಕ್ಕೆ ಮದಕರಿ
ಕೋಟೆ ಬುರುಜಿಗೆ ಹುರಿ ವಡಿದಾನು ರನ್ನಾದಿ ||ಕೋ||

ಜರುಮಲೆದುಡಗರು ಅರಿಯದ ಬಡ್ಡಿಮಕ್ಳು
ಮಟ ಮಟ ಮದ್ಯಾನುದಾಗೆ ಉರಿ ಉರಿ ಬಿಸಿಲೊತ್ತಿನಾಗೆ
ಕ್ಯಾಕೊಡೆದು ಕೈ ಬೀಸಿ ಕರೆದಾರು ರನ್ನದಿ ||ಕೋ||

ಹೊಸಹಳ್ಳಿ ಊರು ಮುಂದೆ ದೊಡ್ಡದೊಂದು ಬೇವಿನಮರ
ಆಳಿಗೊಂದು ಸೂಳೆ ಬರಲಿಲ್ಲೊ ಮದಕರಿ ರನ್ನಾದಿ ||

## ಮೆದಕೇರಿ ಭೂಪ

ಎಂತ ಮನಿಗಾರ ನೋಡಮ್ಮ
ಮದಕರಿ ಭೂಪನ್ನೆಂತಾ ವಜ್ರ ನೋಡಮ್ಮ
ಏ ಸುತ್ತಮುತ್ತ ಸುರಪಾಣಿ ನಟ್ಟನಡವ ಕೀಲುಕಂಬ
ಕೀಲು ಕಂಬಾನಿಡಕೊಂಡು ಕಿಲಿ ಕಿಲಿ ನಗುತ್ತಾನೆ ||ಪ||
ಏ ಖಾಸೆಯಾಕಿ ರುಮಾಲು ಸುತ್ತ ರೋಷದಲ್ಲಿ ಕಣ್ಣು ಮೀಸೆ
ತಿರಿವಿ ಸಾಹಸದಲಿ ಸಮರಂತನೆಂದು ದೇಶಕೊಂಡಾಡತೈತ್ತಿ
ಏ ಕಾಲೆ ಓಡಾಡಕೆ ಬಿಟ್ಟು, ಕೈಯ ಕಡಿದಾತಕೆ ಬಿಚ್ಚಿ
ಮೀಸೆ ಮೇಲೆ ನಿಂಬೆ ಹಣ್ಣು ಕೈಲಾಸಕ್ಕೆ ತೂರಿಬಿಟ್ಟ
ಏ ಗಡಿಗಟು ರುಮಾಲದವನೆ ಯಡುಗತಿ ತುರಾಯದವನೆ
ಕಬ್ಬಿನ ತುರಾಕಾರುತಂಕ ಒಬ್ಬನೇ ಕಾದಾಡುತ್ತಾನೆ.
ಕುಂತು ಕಡಿದ ಕುಂದಿರ್ಪೆ ತನಕ ನಿಂತು -
ಕಡಿದ ನಿಡಗಲ್ಲು ತನಕ
ಧೀರ ಮದಕರಿ ಕಡಿದ ಸಿರಿಯ ಬಾಗಿಲ ತನಕ ||

## ವೀರ ಮದಕರಿ

ಕೋಲು ಕೋಲು ಅನ್ನಿ ಕೋಲೆ
ಕೋಲನ್ನ ಕೋಲೆ ರನ್ನಾದಿ
ಕೋಲು ಅನ್ನಿ ಕೋಲೆ ||ಕೋ||

ಏ ವತ್ತಿದನು ರಾಜ್ಯವನು ತಗದು ಗುರುವಿನ ಪಾದ
ಮುಟ್ಟಿದನು ಹೊಳೆಯ ಹೊನ್ನೂರ ಮೆದಕೇರಣ್ಣ ಮುಟ್ಟಿದನು
ಹೊಳೆಯ ಹೊನ್ನೂರು
ಇಂತ ಅಚ್ಚುಮೆಚ್ಚು ತಕ್ಕ ರಾಮಗಿರಿ ದೊಡ್ಡೇರಿ
ಕತ್ತಲೀ ನೀ ತಕ್ಕ ಬಾಳ ಮನಿಗಾರ
ಏ ಹೊರಹೊಂಡ ಒಳಹೊಂಡ ಒಳಗೆ ನಾಲ್ಕು ಹೊಂಡ
ಮುರುಗೇ ಮಠವ ಕಟ್ಟಿಸಿದ ಮದಕೇರಣ್ಣ ಮುರಿಗೇ
ಮಠವ ಕಟ್ಟಿಸಿದ ಇಂತು ಅಚ್ಚುಮೆಚ್ಚಿಗೆ ತಕ್ಕ
ರಾಮಗಿರಿ ದೊಡ್ಡೇರಿ ಕತ್ತಲೀ ನೀ ತಕ್ಕ ಬಾಳ ಮನಿಗಾರ ||

ಏ ಉಚ್ಚಂಗಿ ದುರ್ಗಕ್ಕೆ ಸುತ್ತುಕೋಟೆ ಕಟ್ಟಿಸಿದ ಮತ್ತೆ ಜೋಡೊಂಡ
ತೆಗೆಸೀದಾ ಇಂತ ಮೆದಿಕೇರಣ್ಣ ಮತ್ತೆ ಜೋಡೊಂಡ
ತೆಗೆಸೀದಾ ಇಂತ ಸತ್ಯದುಂಚಂಗವುಗೆ ಕಲ್ ಗುಡಿಯ ಕಟ್ಟಿಸಿದ
ದೇವ ನೀನಾವುದಯ್ಯ ಪರಮ ಭೂಪಾಲಾ ||ಕೋ||

ಏ ಆಗುರದ ಸೀಮೆಯೊಳಗೆ ಆರ್‍ನೂರು ಕೆರೆಬಾವಿ
ಏನು ಹೇಳಲಿ ಇದರು ಚೆದರು
ಮೆದಿಕೇರಣ್ಣ ಏನು ಹೇಳಲಿ ಇದರ ಚದರು
ಆಗದಂದೂ ಗೊನೆಬಾಳ ಅಡಿಕೆ ತೆಂಗಿನಕಾಯಿ
ಮೇಲು ದುರುಗದ ಮೇಲೆ ಗಿಣಿಗಳನುಮಂತಾ ||ಕೋ||

## ಧೀರ ಮದಕರಿ

ಕೋಲು ಕೋಲು ಅನ್ನಿ ಕೋಲೆ
ಕೋಲನ್ನ ಕೋಲೆ ರನ್ನಾದಿ
ಕೋಲು ಅನ್ನಿ ಕೋಲೆ ||ಕೋ||

ಏ ಜೀ ಜೀ ಇಂದು ಧೀರ ಮದಕರಿ ರಾಯದುರ್ಗಕ್ಕೆ
ಕಾಮಗೇತು ಇನ್ನಾರಸಿ ಜಗಜಗದಿ ಬೇಟೆಯನಾಡುತ್ತಾ
ನಗುತ ಕುಂತ ಚಲದಿಂದ ಇಂತಾ ಚಿಕ್ಕ ಚಿತ್ತರ ಕಲ್ಲು
ಸಿರಿಪಟ್ನ ನಿಮ್ಮ ||ಕೋ||

ಏ ಅಚ್ಚ ಬೆಳ್ಳನದೊಂದು, ಅಚ್ಚಬೆಳ್ಳನದೊಂದು
ಅಚ್ಚದೊಡ್ಡಿ ಚಿನ್ನ ಗೊಚ್ಚಿನದೊಂದು ಪಾಗು ಸುತ್ತಿದ್ದ

ಮುತ್ತನಾ ತುರಾಯಿ ಮುಂದೆ ಮುಡದಿದ್ದ ಕೊರಳಲಿ
ಹಾವಿನ ದರಿವೆ ಧರಿಸಿದ್ದ ಹಣೆಯಲಿ ತಿಲಕ ಭಂಡಾರವನ್ನು
ಧರಿಸಿದ್ದ ಇಂತಾ ಹಿರಿಯೂರುದೊಳಗಿರುವ ದೊರೆಯ
ಮಕ್ಕಳಿಗೆಲ್ಲ ಒಬ್ಬನೆ ಗಂಡ ||ಕೋ||

ಏ ಬತ್ತಿ ಬಾಣವ ಕೆತ್ತು ಹಾದಿಗೆ ಬಗೆದ ಕತ್ತಿಯಾಗಿಕೊಂಡ
ಪೇಟೆಯಾ ವಕ್ಕಾ ರೈತ ಕೊಂಡರಸಿರನು ಗುಂಡು
ಒಡೆದು ಬಂದು ಲವಲಪ್ಪ
ನಾನು ಧರ್ಮದಗುಳಿ ಇಳಿಸಿ ಭೂಮಿಯ ಗದಲಿಸಿ
ದರಿದು ತಿರಿವಾನಣ್ಣಾ ಹಿರಿಯ ದುರುಗಕ್ಕೆ ||ಕೋ||

**ಕೊನೆ ಟಿಪ್ಪಣಿಗಳು**

೧. ಪುಟ್ಟಣ್ಣ ಎಂ.ಎಸ್., **ಚಿತ್ರದುರ್ಗದ ಪಾಳೆಯಗಾರರು,** ಪು. ೧.

೨. ಚಿತ್ರಲಿಂಗಯ್ಯ ಎಂ.ವಿ., **ನಿಡಗಲ್ಲು ಅರಸರ ವಂಶಾವಳಿ ಒಂದು ವ್ಯಾಸಂಗ ಹರತಿಸಿರಿ,** ಪು. ೨೮೩-೨೮೪).

೩. ಲಕ್ಷ್ಮಣ್ ತೆಲಗಾವಿ(ಸಂ), **ಹುಲ್ಲೂರು ಶ್ರೀನಿವಾಸರ ಐತಿಹಾಸಿಕ ಲೇಖನಗಳು,** ಪು. ೧೧-೧೨.

೪. ಅದೇ.

೫. ಲಕ್ಷ್ಮಣ್ ತೆಲಗಾವಿ, ಎಂ.ವಿ. ಶ್ರೀನಿವಾಸ(ಸಂ), ೧೯೯೫, **ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು,** ಪು. ೧೪೦.



## ಅಧ್ಯಾಯ : ಏಳು

# ಸಮಾರೋಪ

ಜಾನಪದ ಅಧ್ಯಯನ ಒಂದು ಕಾಲಕ್ಕೆ ಸಂಗ್ರಹಣೆಗಾಗಿ ಮಾತ್ರ ಸೀಮಿತವಾಗಿದ್ದು, ಇಂದು ಹೊಸ ಹೊಸ ಚಿಂತನೆಗಳಿಗೆ ಮುಖ ಮಾಡುತ್ತ ವೈಜ್ಞಾನಿಕತೆಯ ಕಡೆ ಸಾಗಿದೆ. ಇತ್ತೀಚಿನ ಜಾನಪದ ಅಧ್ಯಯನವು ಸೂಕ್ಷ್ಮಾತಿಸೂಕ್ಷ್ಮ ಅಂಶಗಳನ್ನು ಗ್ರಹಿಸುತ್ತಿದೆ. ಮುಖ್ಯವಾಗಿ ಜನಪದರಲ್ಲಿ ಅಡಗಿರುವ ಕಥೆ, ಗೀತೆ, ಕಾವ್ಯ, ಗಾದೆ, ಒಗಟು, ನಂಬಿಕೆ ಆಚರಣೆಗಳು ಮತ್ತು ಐತಿಹ್ಯ ಪ್ರಕಾರಗಳು ಶಿಷ್ಟ ಸಾಹಿತ್ಯಕ್ಕಿಂತ ಮಿಗಿಲೆಂಬಂತೆ ತನ್ನ ಛಾಪನ್ನು ಮೂಡಿಸಿವೆ. ಆ ಮೂಲಕವಾಗಿ ವಿಭಿನ್ನ ನೆಲೆಯಲ್ಲಿ ಅಧ್ಯಯನಕ್ಕೆ ಒಳಪಡುವುದರೊಂದಿಗೆ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸುತ್ತಿವೆ.

ಜಾನಪದ ಕ್ಷೇತ್ರವೆಂಬುದು ವಿಸ್ತೃತ ಪರಿಕಲ್ಪನೆಯಾಗಿದ್ದು, ಇದರಲ್ಲಿ ಐತಿಹ್ಯಗಳು ಬಹುಮುಖ್ಯ ಪಾತ್ರವಹಿಸುತ್ತವೆ. ಇತ್ತೀಚಿನ ದಿನಗಳಲ್ಲಿ ಐತಿಹ್ಯಗಳ ಅಧ್ಯಯನದ ಮಹತ್ವ ಹೆಚ್ಚುತ್ತಿದ್ದು ಈ ಹಿಂದೆ ಅನೇಕ ಜಾನಪದ ವಿದ್ವಾಂಸರು ಐತಿಹ್ಯಗಳ ಸಂಗ್ರಹ, ಸಂಪಾದನೆ, ಬರಹಗಳ ಜೊತೆ ವೈಜ್ಞಾನಿಕ ವಿಶ್ಲೇಷಣೆ ಮತ್ತು ಚರಿತ್ರೆಗೆ ಪೂರಕ ಆಕರವಾಗಿ ಅಧ್ಯಯನಗಳು ನಡೆಯುತ್ತಿವೆ. ಇದರಿಂದಾಗಿ ಚರಿತ್ರೆಯನ್ನು ಪುನರ್ ಪರಿಶೀಲನೆಗೆ ಒಳಪಡಿಸುವ ಮಹತ್ತರ ಬೆಳವಣಿಗೆಗಳು ಕಂಡು ಬರುತ್ತವೆ.

ಜನಪದ ಸಾಹಿತ್ಯ ಪ್ರಕಾರಗಳಲ್ಲಿ ಐತಿಹ್ಯಕ್ಕೆ ಪ್ರಮುಖ ಸ್ಥಾನವಿದೆ. ಐತಿಹ್ಯಗಳನ್ನು ಸೂಕ್ಷ್ಮವಾಗಿ ಪರಿಶೀಲಿಸುತ್ತಾ ಹೋದಂತೆ ನಾಡಿನ ಸಾಂಸ್ಕೃತಿಕ ಪರಂಪರೆಯನ್ನು ಅರಿಯಬಹುದು. ಮಾನವನ ಅನುಭವ ಚಿಂತನೆಗಳ ಅಭಿವ್ಯಕ್ತಿಯಾದ ಐತಿಹ್ಯಗಳು ನಿಸರ್ಗ ಸಂಬಂಧ, ದೈವ ಸಂಬಂಧ ಹಾಗೂ ಮಾನವ ಸಂಬಂಧಗಳನ್ನು ಸಾಂಸ್ಕೃತಿಕವಾಗಿ ಕಟ್ಟಿಕೊಡುತ್ತವೆ. ಐತಿಹ್ಯವು ಕಾಲ್ಪನಿಕತೆ ಅಲ್ಲ, ಅದು ದಂತಕತೆಯಲ್ಲ. ಸತ್ಯಸಂದತೆಯನ್ನು ತನ್ನಲ್ಲಿ ಹುದುಗಿಸಿಕೊಂಡಿರುತ್ತದೆ. ಒಂದು ಸಂಗತಿಯನ್ನು ವಿವರಿಸುತ್ತ ಅದಕ್ಕೆ ಸಮರ್ಥನೆಯಾಗಿ ಕುರುಹುಗಳನ್ನು ಅಥವಾ ಸಾಕ್ಷಿ, ಪುರಾವೆಗಳನ್ನು ಸಾಕ್ಷೀಕರಿಸುತ್ತದೆ.

ಜನಪದ ಪರಂಪರೆಯಾದ ಐತಿಹ್ಯದಲ್ಲಿ ಸಂಸ್ಕೃತಿಯ ಅಂದಿನ ಸಮಾಜದ ವಾಸ್ತವ ಬದುಕನ್ನು ಹಾಗೂ ಘಟನಾವಳಿಗಳು ಜೊತೆಗೆ ಅನುಭವಗಳು ಮೌಖಿಕವಾಗಿ ದಾಖಲೀಕರಣ

ಗೊಳ್ಳುತ್ತವೆ. ಈ ದೃಷ್ಟಿಕೋನದಿಂದಲೇ ಚಿತ್ರದುರ್ಗ ಪರಿಸರದ ಪಾರಂಪರಿಕ ಇತಿಹಾಸವು ಮೌಖಿಕ ಸಾಹಿತ್ಯದ ಮೂಲಕ ಸಮೃದ್ಧವಾಗಿ ಹರಡಿಕೊಂಡಿದೆ. ವ್ಯಕ್ತಿ, ಸ್ಥಳ, ಘಟನಾ ಮತ್ತು ಪುರಾಣಗಳಿಂದಲೂ ಪ್ರಾಚೀನ ಕಾಲದ ಸಮಾಜವನ್ನು ಮೌಖಿಕ ಸಾಹಿತ್ಯದಲ್ಲಿ ಅಳವಡಿಸಲ್ಪಟ್ಟಿದೆ. ವ್ಯಕ್ತಿಯಿಂದ ಸಮಷ್ಟಿಯವರೆಗೆ ಭೌತಿಕದಿಂದ-ಬೌದ್ಧಿಕತೆಯವರೆಗೆ ಮತ್ತು ಭೂತ, ವರ್ತಮಾನ - ಭವಿಷತ್ತಿನ ಕಡೆಗೆ ಪ್ರತಿಯೊಂದು ಘಟನೆ, ಸನ್ನಿವೇಶಗಳನ್ನು, ಅನುಭವಗಳನ್ನು ಕೂಡಿಟ್ಟಿರುವ ಪ್ರವೃತ್ತಿಯು ಇಂದಿಗೂ ಜೀವಂತವಾಗಿವೆ.

ಒಂದು ಪ್ರದೇಶದ ಸಾಂಸ್ಕೃತಿಕ ಪರಂಪರೆಯು ದಾಖಲೆಗೊಂಡ ಇತಿಹಾಸದಿಂದ ಸಿಗುತ್ತದೆ ಎನ್ನುವ ವಾದ ಸತ್ಯಕ್ಕೆ ದೂರವಾದದ್ದು. ಸಾಂಸ್ಕೃತಿಕ ಇತಿಹಾಸವೆಂದರೆ ಅದು ಮೌಖಿಕ ಸಂಸ್ಕೃತಿಯೇ ಆಗಿದೆ. ಈ ಸಾಂಸ್ಕೃತಿಕ ದೃಷ್ಟಿಯಲ್ಲಿ ಚರಿತ್ರೆಕಾರರು ಕೆನೆಪದರ ನೀತಿಯಿಂದ ನೇತ್ಯಾತ್ಮಕ ಮತ್ತು ಇತ್ಯಾತ್ಮಕ ಧೋರಣೆಗಳನ್ನು ಹೊಂದಿದ್ದಾರೆ. ಈ ಚರಿತ್ರೆಕಾರರು ಪ್ರಾದೇಶಿಕ ಪರಂಪರೆಗೆ ಕುರಿತಾದ ಸಂಸ್ಕೃತಿ ವಿಶ್ಲೇಷಣೆಗಳನ್ನು ತೀರಾ ವೈಭವೀಕರಿಸುತ್ತ ದಾಖಲು ಚರಿತ್ರೆಯನ್ನು ಮಾತ್ರ ಮಾನ್ಯ ಮಾಡಿಕೊಂಡು ಬಂದಿದ್ದಾರೆ. ಪ್ರಮುಖವಾಗಿ ವ್ಯಕ್ತಿ ಸಂಬಂಧಿಸಿದ ಐತಿಹ್ಯಗಳು ಘಟನೆಗಳಿಂದ ಆಧಾರಿತವಾಗಿರುತ್ತವೆ ಹಾಗೂ ವಾಸ್ತವ ಬದುಕಿಗೆ ಹತ್ತಿರವಾಗಿರುತ್ತವೆ. ಪುರಾಣ ಮತ್ತು ವಾಸ್ತವಗಳಿಂದ ವ್ಯಕ್ತಿಗೆ ಸಂಬಂಧಿಸಿದ ಐತಿಹ್ಯಗಳು ಕಲ್ಪನೆ, ಬಣ್ಣನೆಗಳಿಂದ ಅತಿಶಯೋಕ್ತಿಯೆಂಬಂತೆ ಕಂಡುಬಂದರೂ ಸಹ ಸಾಮಾಜಿಕ ಅಂಶಗಳಿಂದ ಹೊರತಾಗಿರುವುದಿಲ್ಲ.

ಸ್ಥಳ ಐತಿಹ್ಯಗಳು ಜನಪದ ಪರಂಪರೆಗಳಲ್ಲಿ ಹೆಚ್ಚು ಮಹತ್ವಪೂರ್ಣವಾದವು. ಭೌಗೋಳಿಕವಾಗಿ ಮತ್ತು ಸಾಂಸ್ಕೃತಿಕವಾಗಿ ವೈವಿಧ್ಯಮಯದಿಂದ ಕೂಡಿರುವುದರ ಜೊತೆಗೆ ವೈಜ್ಞಾನಿಕ ಅಂಶಗಳನ್ನು ಒಳಗೊಂಡಿರುತ್ತವೆ. ಈ ದೃಷ್ಟಿಯಿಂದ ಜನಪದರಲ್ಲಿ 'ಸ್ಥಳ ಮಹಿಮೆ' ಮತ್ತು 'ಪುಣ್ಯ ಸ್ಥಳ' ಎನ್ನುವ ಪರಿಕಲ್ಪನೆಗಳು ಬೆಳೆದಿರಲು ಕಾರಣವಾಗಿವೆ. 'ಬಿಳಿನೀರು ಚಿಲುಮೆ', 'ಹಾಲು ರಾಮೇಶ್ವರ', 'ನಾಯಕನಹಟ್ಟಿ ಕ್ಷೇತ್ರ' ಮತ್ತು 'ನುಂಕೇಮಲೆ', 'ಹೊಸಗುಡ್ಡ' ಈ ಸ್ಥಳಗಳು ಚಿತ್ರದುರ್ಗ ಪರಿಸರದಲ್ಲಿ 'ಸ್ಥಳ ಮಹಿಮೆ' ಮತ್ತು 'ಪುಣ್ಯ ಸ್ಥಳ'ಗಳಾಗಿವೆ. ಈ ಮೂಲಕ ಪ್ರಕೃತಿಯ ನಿಗೂಢ ಸತ್ಯವನ್ನು ಅರಿತ ಜನಪದರು ಪ್ರಕೃತಿಯನ್ನು ಆರಾಧಿಸಿಕೊಂಡು ಬಂದರು. ಈ ಪ್ರಕೃತಿಯ ಅಮೂರ್ತಶಕ್ತಿಯನ್ನು ದರ್ಶನ ಮಾಡಿಕೊಂಡು ತಮ್ಮ ಬದುಕಿನಲ್ಲಿ ಆಧ್ಯಾತ್ಮಿಕತೆಯೆಡೆಗೆ ಸಾಗುತ್ತಾ ಪ್ರಕೃತಿ ಮತ್ತು ಮಾನವ ಸಂಬಂಧಗಳನ್ನು ಇನ್ನಷ್ಟು ಭದ್ರಗೊಳಿಸಿಕೊಂಡು ಬಂದಿದ್ದಾರೆ.

ಯಾವುದೇ ಸ್ಥಳ, ವ್ಯಕ್ತಿ ಸಂಬಂಧಿಸಿದ ಐತಿಹ್ಯಗಳಲ್ಲಿ ಘಟನೆಗಳಿಲ್ಲವಾದರೆ ಐತಿಹ್ಯವಾಗುವುದಿಲ್ಲ. ಯಾವುದೋ ಒಂದು ಸನ್ನಿವೇಶ ಅಥವಾ ಸಂದರ್ಭಕ್ಕೆ ಅನುಸಾರವಾಗಿ ಘಟಿಸಿದ ಘಟನೆಗಳು ಕಥನ ರೂಪಗಳಾಗುತ್ತವೆ. ಇಂತಹ ಘಟನೆಗಳು ಅತಿಮಾನುಷವಾಗಿರದೇ, ಕಾಲ್ಪನಿಕವಾಗಿರದೇ ನೈಜತೆಯಿಂದ ಕೂಡಿರುತ್ತವೆ. ಈ ಮೂಲಕ ಪ್ರತಿಯೊಂದು ಘಟನೆಗಳಿಗೂ ಹಿನ್ನೆಲೆಯೆಂಬುದು ಅದು ಸಾಮಾಜಿಕ ಮತ್ತು ವೈಯಕ್ತಿಕ ಅಂಶವನ್ನು ಸಮೀಕರಿಸಿಕೊಂಡಿರುತ್ತವೆ. ಬಹುಮುಖ್ಯವಾಗಿ ಗ್ರಾಮದ ಉದ್ಧಾರಕ್ಕಾಗಿ ಪರೋಪಕಾರ್ಥವಾಗಿ ತ್ಯಾಗ, ಬಲಿದಾನ ಮಾಡಿಕೊಳ್ಳುವ ಘಟನೆಗಳು

ಮತ್ತು ಹೆಣ್ಣಿನಶೀಲ, ಪಾವಿತ್ರತೆಯ ಪ್ರಶ್ನೆ ಬಂದರೂ ಸಹಗಮನಗೊಳ್ಳುವಂತಹ ಸನ್ನಿವೇಶಗಳು ಸಾಮಾಜಿಕ ಅಂಶಗಳಾಗಿವೆ. ಈ ಘಟನೆಗಳು ಸಮಾಜದಲ್ಲಿನ ಮೌಢ್ಯಾಚರಣೆಗಳ ನೈಜತೆಯನ್ನು ತಿಳಿಯಪಡಿಸುತ್ತವೆ. ಇದರಿಂದಾಗಿ ವ್ಯಕ್ತಿಯ ಆರಾಧನೆಯ ಹಿಂದಿರುವ ನೈಜಾಂಶವನ್ನು ತಿಳಿಯಲು ಐತಿಹ್ಯಗಳು ಸಹಕಾರಿಯಾಗುತ್ತವೆ. ಈ ಪರಿಸರದ ಗ್ರಾಮಗಳಲ್ಲಿ ವೀರಗಲ್ಲುಗಳು, ಕರುವುಗಲ್ಲು, ಲಿಂಗಮುದ್ರೆಕಲ್ಲು, ಗರುಡಗಲ್ಲು ಕಂಡುಬರುತ್ತವೆ. ಜೊತೆಗೆ ಕೆಲವಾರು ಕಡೆಯಲ್ಲಿ ಮಹಾಸತಿಕಲ್ಲುಗಳು ಕಂಡುಬರುತ್ತವೆ. ಈ ಭೌತಿಕ ವಸ್ತುಗಳ ಹಿಂದಿರುವ ಸತ್ಯವನ್ನು ಘಟನಾ ಐತಿಹ್ಯಗಳು ತಿಳಿಯಪಡಿಸುತ್ತವೆ.

ಮನುಕುಲದ ಚರಿತ್ರೆ ತುಂಬಾ ಆಸಕ್ತಿದಾಯಕವಾದದ್ದು. ಆಹಾರ ಸಂಗ್ರಹಣೆ, ಬೇಟೆ, ಪಶುಪಾಲನೆ, ಕೃಷಿ ಈ ಹಂತಗಳಲ್ಲಿ ವಿಕಸನಗೊಂಡ ಮಾನವ ಸಂಸ್ಕೃತಿ ಇಂದು ಅತ್ಯಂತ ಸಂಕೀರ್ಣ ರೂಪ ತಾಳಿ, ಇಂದು ನೂರಾರು ಕವಲುಗಳಲ್ಲಿ ಆಕ್ರಮಿಸಿಕೊಂಡಿದೆ. ಬೇಟೆ, ಪಶುಪಾಲನೆ ಮತ್ತು ಕೃಷಿ ಹಂತಗಳಲ್ಲಿ ಉಗಮಗೊಂಡಿರಬಹುದಾದ ದೈವದ ಕಲ್ಪನೆ ಮುಂತಾದವುಗಳನ್ನು ಆಧುನಿಕತೆಯಲ್ಲಿ ಕೂಡ ಈ ಪರಿಸರದ ತಳಸಮುದಾಯಗಳವರು ಉಳಿಸಿಕೊಂಡು ಬಂದಿದ್ದಾರೆ.

ಚಿತ್ರದುರ್ಗ ಪರಿಸರದಲ್ಲಿ ಆದಿವಾಸಿಗಳು ಮತ್ತು ಪಶುಪಾಲಕ ಬುಡಕಟ್ಟು ವರ್ಗಗಳು ಹೆಚ್ಚಾಗಿ ಕಂಡು ಬರುತ್ತವೆ. ಇವರು ಈಗಲೂ ಸಹ ಅರೆ ವಲಸಿಗರಾಗಿಯೇ ಜೀವನ ಸಾಗಿಸುತ್ತಿದ್ದು, ಪಶುಗಳ ಕಾಯಕದಲ್ಲಿ ನಿರತರಾಗಿದ್ದಾರೆ. ಆರಂಭ ಕಾಲದಿಂದಲೂ ವಲಸೆ ಜೀವನ ಮಾಡಿಕೊಂಡು ಬಂದ ಆದಿವಾಸಿಗಳು, ಪಶುಪಾಲಕ ಬುಡಕಟ್ಟುಗಳು ನಿತ್ಯಜೀವನದಲ್ಲಿ ಅನುಭವಿಸಿದ ಕಷ್ಟ ಕಾರ್ಪಣ್ಯಗಳು, ಅಘಾತಗಳು ಮತ್ತು ಅಪಾಯಗಳ ನೈಜವಾದ ಚಿತ್ರಣವನ್ನು ಆ ಕಾಲ ಸಂದರ್ಭಕ್ಕೆ ಅನುಸಾರವಾಗಿ ಉಳಿಸಿಕೊಂಡು ಬಂದಿದ್ದಾರೆ.

ಪಶುಪಾಲಕ ಬುಡಕಟ್ಟುಗಳ ನೆಲೆಯಾಗಿರುವ ಚಿತ್ರದುರ್ಗ ಪರಿಸರಕ್ಕೆ ತನ್ನದೇ ಸಾಂಸ್ಕೃತಿಕ ಹಿನ್ನೆಲೆಯಿದೆ. ಆದಿಯಿಂದಲೂ ಪಶುಪಾಲನೆಯನ್ನು ಉಳಿಸಿಕೊಂಡು ಬಂದಿದ್ದಾರೆ. ಈ ಸಮುದಾಯಗಳು ತಮ್ಮ ಕುಲಕಸುಬಾಗಿ ಕೈಗೊಂಡು ಬದುಕಿನುದ್ದಕ್ಕೂ ಪಶುಪಾಲನೆ ಸಂದರ್ಭದಲ್ಲಿ ಜರುಗಿದ ಘಟನೆಗಳು, ಅವಘಡಗಳು ಮೌಖಿಕ ಪರಂಪರೆಯಲ್ಲಿವೆ. ಕಾಡುವಾಸಿಗಳಾದ ಇವರು ಪ್ರಕೃತಿಯಲ್ಲಿ ಜರುಗುವಂತಹ ಸನ್ನಿವೇಶಗಳನ್ನು ಬಹಳ ಹತ್ತಿರದಿಂದಲೇ ಕಾಣುತ್ತ, ಅನುಭವವನ್ನು ಪಡೆದಿರುತ್ತಾರೆ. ಹಾಗಾಗಿ ಅವರಲ್ಲಿರುವ ಆಚರಣೆಗಳು, ಸಂಪ್ರದಾಯಗಳು ಪ್ರಕೃತಿದತ್ತವಾದ ವೈಜ್ಞಾನಿಕ ಅಂಶದಿಂದ ಕೂಡಿರುತ್ತವೆ. ಇವು ವರ್ತಮಾನದ ಪರಿಸ್ಥಿತಿಗೆ ತೀರ ವಾಸ್ತವ ಎನ್ನುವಂತಿವೆ. ಪಶುಪಾಲಕರು ಪ್ರಕೃತಿ ಆರಾಧಕರು. ಭೌತಿಕ ಜಗತ್ತಿಗೆ ಹೆಚ್ಚು ಮಹತ್ವವನ್ನು ಕೊಡುತ್ತಾರೆ. ಇವರು ತಮ್ಮ ಸಮುದಾಯದ ಮೂಲ ಪುರುಷನನ್ನೇ ಆರಾಧ್ಯ ದೈವವನ್ನಾಗಿ ಮಾಡಿಕೊಂಡಿರುತ್ತಾರೆ. ಈ ಸಾಂಸ್ಕೃತಿಕ ವೀರರ, ಮೂಲ ಪುರುಷರ ಸುತ್ತ ಅನೇಕ ಪುರಾಣ,

ಐತಿಹ್ಯ, ಕಥೆ, ಪವಾಡಗಳು ಹುಟ್ಟಿಕೊಂಡಿವೆ. ಈ ಸಾಂಸ್ಕೃತಿಕ ವೀರರ ಕುರಿತಾಗಿ ಇತಿಹಾಸವು ಲಿಖಿತವಾಗಿರದೆ ಮೌಖಿಕವಾಗಿರುತ್ತವೆ. ಕಥೆ, ಗೀತೆ, ಐತಿಹ್ಯಗಳು ಹೆಚ್ಚು ಮಹತ್ವವೆನಿಸಿಕೊಳ್ಳುತ್ತವೆ. ಹಾಗಾಗಿ ಈ ಸ್ವರೂಪದ ಜನಪದರು ಪರಂಪರೆಯ ಸ್ಮೃತಿಯನ್ನು ಅಲಿಖಿತ ರೂಪದಲ್ಲಿ ಉಳಿಸಿಕೊಂಡು ಬಂದಿರುತ್ತಾರೆ. ದಾಖಲೆಗೊಂಡ ಚರಿತ್ರೆಯಲ್ಲಿ ನಿರ್ಲಕ್ಷ್ಯಕ್ಕೆ ಒಳಗಾದವರು ಎಂದರೆ ತಳಸಮುದಾಯಗಳು. ಇವರ ಸಾಮಾಜಿಕ ಬದುಕನ್ನು ಅವಗಾಹನೆಗೆ ಗುರಿ ಮಾಡುತ್ತಾ ಪ್ರಭುತ್ವಶಾಹಿಗಳ ಮತ್ತು ಪುರೋಹಿತಶಾಹಿಗಳ ಪರಂಪರೆಯನ್ನು ದಾಖಲಿಸಲಾಗಿದೆ.

ಐತಿಹ್ಯಗಳು ಒಂದು ಸಮುದಾಯದ ಸಾಂಸ್ಕೃತಿಕ ಕಥನಗಳ ಲಕ್ಷಣಗಳನ್ನು ಹೊಂದಿವೆ. ಯಾವುದೋ ಒಂದು ದೈವಕ್ಕೆ ಸಂಬಂಧಿಸಿದಂತೆ, ದೈವ ಹುಟ್ಟಿಕೊಂಡಿರುವುದಕ್ಕೆ ನಿರ್ದಿಷ್ಟ ಕಾಲ ಅವಧಿ ಇರುವುದಿಲ್ಲ. ಆದರೆ ದೈವ ಹುಟ್ಟಿಕೊಂಡಿರುವುದಕ್ಕೆ ಆಧಾರಗಳನ್ನು ಗ್ರಹಿಸಬಹುದು. ಚಳ್ಳಕೆರೆಮ್ಮ, ಗೌರಸಮುದ್ರ ಮಾರಮ್ಮ, ಅಕ್ಕರಾಯಮ್ಮ, ಒಡ್ನಹಳ್ಳಿ ಮಾರಮ್ಮ ಇನ್ನೂ ಮುಂತಾದವರು. ಈ ದೈವಗಳಿಗೆ ಸಂಬಂಧಿಸಿದಂತೆ ಹುಟ್ಟು- ಬದುಕು, ಸಾವಿನ ತರುವಾಯ ದೈವಕ್ಕೇರಿರುವುದರ ಬಗ್ಗೆ ಐತಿಹ್ಯಗಳು ಹುಟ್ಟಿಕೊಂಡಿರುತ್ತವೆ. ಇವುಗಳು ಜನಪದರ ಚಾರಿತ್ರಿಕ ಪರಂಪರೆಯಾಗಿರುವುದಲ್ಲದೆ ಸಂಸ್ಕೃತಿಯ ಪ್ರತೀಕವೆಂತಲೂ ತಿಳಿಯಲಾಗಿದೆ. ಆದಿಮ ಕಾಲದಿಂದ ಆಧುನಿಕ ಯುಗದವರೆಗೆ ತಾವು ನಡೆದು ಬಂದ ಹಾದಿಯ ಬಗ್ಗೆ ಕಥನಗಳ ಮೂಲಕ ಚರಿತ್ರೆಯನ್ನು ಕಟ್ಟಿಕೊಂಡಿದ್ದಾರೆ.

ತಳಸಮುದಾಯಗಳಲ್ಲಿ ಕಂಡುಬರುವ ಸಾಂಸ್ಕೃತಿಕ ನಾಯಕರು ದೈವ ಸಮಾನಕ್ಕೇರಿ ಪೂಜಿತಗೊಳ್ಳುತ್ತಾರೆ. ಆದರೆ ಅವರು ವಾಸ್ತವವಾಗಿ ಸಮುದಾಯದ ಮೂಲ ಪುರುಷರು ಹಾಗೂ ಸಮುದಾಯದ ಏಳ್ಗೆಗಾಗಿ ಶ್ರಮಿಸಿದವರು. ಹಾಗಾಗಿ ಇವರಿಗಿರುವ ಸಮುದಾಯ ನಿಷ್ಠತೆ ಮತ್ತು ಇವರ ನೈತಿಕ ಬದುಕನ್ನು ಸಮುದಾಯಗಳು ಆದರ್ಶವೆನ್ನುವಂತೆ ಕಾಣುತ್ತಿದ್ದಾರೆ. ಹೀಗೆ ಆದರ್ಶವಾಗಿರುವ ಸಮುದಾಯದ ವ್ಯಕ್ತಿಗಳು ಪುರಾಣ ಸ್ಪರ್ಶದಿಂದ ಅವರ ಆದರ್ಶಮಯವಾದ ಜೀವನವನ್ನು ಗೌಣವಾಗಿಬಿಟ್ಟಿವೆ. ಹಾಗಾಗಿ ಐತಿಹ್ಯಗಳ ಅಧ್ಯಯನವು ವಾಸ್ತವ ಬದುಕಿನ ಅರ್ಥಗ್ರಹಿಕೆಗೆ ಸಹಕಾರಿಯಾಗುತ್ತವೆ.

ಪುರಾಣಗಳು ಎಂದೋ ಆಗಿ ಹೋದ ಘಟನೆಗಳನ್ನು ಕಥನ ರೂಪದಲ್ಲಿ ಕಟ್ಟುತ್ತಾ ತಮ್ಮ ಅಸ್ತಿತ್ವವನ್ನು ಕಾಯ್ದುಕೊಳ್ಳುತ್ತಿರುತ್ತವೆ. ಬಹುಮುಖ್ಯವಾಗಿ ಧರ್ಮ ಮತ್ತು ಸಾಮಾಜಿಕ ಬದುಕನ್ನು ಸರಿಯಾಗಿ ಬೆರಸಿಕೊಂಡು ಸಮಾಜದಲ್ಲಿ ನೈತಿಕ ಮೌಲ್ಯಗಳೆಂಬಂತೆ ಕಾಣಲಾಗುತ್ತವೆ. ಈ ನೈತಿಕ ಮೌಲ್ಯಗಳು ವ್ಯಕ್ತಿ ಮತ್ತು ಸಮುದಾಯಗಳಲ್ಲಿ ಕಾಲಾನುಕರಣೆಯಿಂದ ಮರುಹುಟ್ಟು ಪಡೆಯುತ್ತಿರುತ್ತವೆ. ಜನಪದರ ಜೀವನದ ಮೇಲೆ ಪ್ರಭಾವ ಬೀರುತ್ತಾ ಜನಪದ ಮತ್ತು ಪುರಾಣಗಳು ಅನುಸಂಧಾನ ಮಾಡಿಕೊಳ್ಳುತ್ತವೆ. ಈ ಮೂಲಕವಾಗಿ ವ್ಯಕ್ತಿ ಸಂಬಂಧಿತ ಐತಿಹ್ಯಗಳು ಸಾಮಾಜಿಕ ವಾಸ್ತವತೆಯ ಜೊತೆಗೆ ಪುರಾಣದ ಸಹ ಸಂಬಂಧವನ್ನು ಪಡೆದುಕೊಂಡಿರುತ್ತವೆ.

ಜನಪದ ಪರಂಪರೆಗಳನ್ನು ವಾಸ್ತವಕ್ಕೆ ದೂರವಾದವು ಅಥವಾ ವದಂತಿ, ದಂತಕಥೆಗಳೆನ್ನುವ ವಿದ್ವಾಂಸರ ಪೂರ್ವಗ್ರಹ ಪೀಡಿತ ಮನೋಭಾವನೆಯು ಖಂಡಾನಾರ್ಹ. ಈ ಪೂರ್ವಗ್ರಹ

ಪೀಡನೆಯಿಂದಲೇ ಮೌಖಿಕ ಪರಂಪರೆಯು ವಿದ್ವಾಂಸರ ವಲಯದಲ್ಲಿ ಔಪಚಾರಿಕವಾಗಿ ಜ್ಞಾನಶಿಸ್ತಾಗಿ ಚರ್ಚಿತಗೊಂಡಿಲ್ಲ. ಜನಪದ ಐತಿಹ್ಯಗಳನ್ನು ಅಲಕ್ಷಿತದಿಂದ ಕಾಣುತ್ತ ಬಂದಿದ್ದಾರೆ. ರಾಜಮಹಾರಾಜರ ಕುರಿತ ಸಾಮಂತ, ಪಾಳೆಯಗಾರರ ಕುರಿತ ಈ ಮೌಖಿಕ ಕುರುಹುಗಳು ಇಂದಿಗೂ ಉಳಿದುಕೊಂಡು ಬಂದಿವೆ. ಈ ರಾಜಮಹಾರಾಜರಿಗೆ ಸಂಬಂಧಿಸಿದ ಐತಿಹ್ಯಗಳು ಯುದ್ಧ ಘಟನಾವಳಿಗಳು, ದಾನ ದತ್ತಿಗಳು ಮುಂತಾದವುಗಳ ಬಗೆಗೆ ಐತಿಹ್ಯಗಳಲ್ಲಿ ಗಮನಿಸಬಹುದು. ದಾಖಲೆ ಚರಿತ್ರೆಯನ್ನು ಸತ್ಯವೆಂದು ತಿಳಿದಿರುವ ಚರಿತ್ರೆಕಾರರು ಮೌಖಿಕ ಸಾಹಿತ್ಯದ ಐತಿಹ್ಯಗಳಲ್ಲಿರುವ ನೈಜತೆಯನ್ನು ತಿಳಿಯಬೇಕಾದ ಅಗತ್ಯ ಇಂದಿಗೆ ಮಹತ್ವ ಪೂರ್ಣದ್ದಾಗಿದೆ.

ಚಿತ್ರದುರ್ಗ ಪರಿಸರದಲ್ಲಿ ಸಾಮಾನ್ಯವಾಗಿ ಪಾಳೆಯಗಾರರ ಮೂಲದ ಬಗೆಗೆ ಚರ್ಚೆ ಮಾಡುವಾಗ, ಮೌಖಿಕ ಪರಂಪರೆಯಲ್ಲಿ ಬಂದ ಐತಿಹ್ಯಗಳನ್ನು ಬಳಸಿಕೊಂಡಿರುವುದನ್ನು ಕಾಣುತ್ತೇವೆ. ಸೈದ್ಧಾಂತಿಕವಾಗಿ ಒಪ್ಪಿಕೊಳ್ಳುತ್ತಿದ್ದರೂ ಅವುಗಳ ಉಲ್ಲೇಖ ಪಾಳೆಯಗಾರರ ಮೂಲವನ್ನು ಗುರುತಿಸಲು ಅಧ್ಯಯನದಲ್ಲಿ ಕಾಣುತ್ತೇವೆ. ರಾಜಕೀಯ ಇತಿಹಾಸದಲ್ಲಿ ಪ್ರಮುಖ ರಾಜಮನೆತನಗಳಿಗಿಂತ ಪಾಳೆಯಗಾರರ ಬಗೆಗೆ ವಿಶೇಷ ಮಾಹಿತಿ ದೊರೆಯುತ್ತವೆ. ಇವುಗಳ ಬಗ್ಗೆ ಜನಪದ ವೀರಗೀತೆಗಳು, ಲಾವಣಿಗಳು, ಐತಿಹ್ಯಗಳು ಇನ್ನೂ ಮುಂತಾದವು ಚರಿತ್ರೆ ಅಧ್ಯಯನಕ್ಕೆ ಸೂಕ್ತವಾದ ಆಕರಗಳಾಗಿವೆ.

ಈ ಮೂಲಕ ಐತಿಹ್ಯಗಳು ಪ್ರಾಚೀನ-ಆಧುನಿಕ ಕಾಲಘಟ್ಟದವರೆಗೆ ವಾಸ್ತವ ಸಮಾಜವನ್ನು ಅರ್ಥೈಸುತ್ತವೆ. ಮನುಷ್ಯ ಜೀವನದ ಎಲ್ಲಾ ಅವಸ್ಥೆಗಳನ್ನು ಐತಿಹ್ಯದಲ್ಲಿ ಗರ್ಭೀಕರಿಸಿಕೊಂಡಿರುವ ಸಂಗತಿಗಳು ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಅನನ್ಯತೆ ಹೊಂದಿರುವುದರಿಂದ ಎಲ್ಲಾ ಶಾಸ್ತ್ರಗಳ ಅಧ್ಯಯನಕ್ಕೂ ಭದ್ರವಾದ ಬುನಾದಿಯೊಂದು ಐತಿಹ್ಯಗಳ ಮೂಲಕ ಕಂಡುಬರುತ್ತದೆ.

*** ಅಧ್ಯಯನದ ಫಲಿತಗಳು**

೧. ಚಿತ್ರದುರ್ಗ ಪರಿಸರವು ಭೌಗೋಳಿಕವಾಗಿ ಹುಲ್ಲುಗಾವಲು, ಕುರುಚಲ ಕಾಡುಗಳು, ಬಯಲು ಪ್ರದೇಶವಾಗಿದ್ದು, ಪ್ರಾದೇಶಿಕ ಹಿನ್ನೆಲೆಯಲ್ಲಿ ಐತಿಹ್ಯಗಳು ವೈವಿಧ್ಯಮಯವಾಗಿವೆ.

೨. ಈ ಪರಿಸರದಲ್ಲಿನ ಐತಿಹ್ಯಗಳು ದ್ವಿಭಾಷಾ(ಕನ್ನಡ-ತೆಲುಗು) ಭೂಮಿಕೆಯಲ್ಲಿ ಕಂಡುಬರುತ್ತವೆ.

೩. 'ಐತಿಹ್ಯ-ಇತಿಹಾಸ' ಎಂಬ ಪರಿಕಲ್ಪನೆಗಳಲ್ಲಿ ಪದಸಾಮೀಪ್ಯವಿದ್ದಂತೆ. ವಸ್ತು ಮತ್ತು ಆಶಯಗಳಲ್ಲಿ ಭಿನ್ನತೆಗಳನ್ನು ಕಾಣಬಹುದಾಗಿದೆ.

೪. ಐತಿಹ್ಯಗಳು ರಚನೆಯಾಗಿರಬಹುದಾದ ಮೂಲ ಹಿನ್ನೆಲೆಯನ್ನು ಗಮನಿಸಿದರೆ ಅವು ವ್ಯಕ್ತಿ, ಸ್ಥಳ, ಘಟನಾ, ಪ್ರಾಣಿ, ಪಕ್ಷಿ, ಪ್ರಕೃತಿಗೆ(ಭೌತಿಕ-ಜೈವಿಕ) ಸಹಜ ಸಂಗತಿಗಳಾಗಿ ಹುಟ್ಟಿಕೊಂಡವು ಎನ್ನಬಹುದಾಗಿದೆ.

೫. ಐತಿಹ್ಯಗಳು ಅತಿಮಾನುಷ ಕಲ್ಪನೆಗಳಾಗಿರದೆ ಹೆಚ್ಚು ವಾಸ್ತವ ಸಂಗತಿಗಳನ್ನು ಹಿಡಿದಿಟ್ಟಿರುತ್ತವೆ.

೬. ಈ ಪರಿಸರದಲ್ಲಿ ಸ್ಥಳನಾಮಗಳು ಪಶುಪಾಲನೆಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿರುವುದರಿಂದ ಈ ಪರಿಸರದಲ್ಲಿ ಹಟ್ಟಿ ಸಂಸ್ಕೃತಿಯನ್ನು ಕಾಣಬಹುದು.

೭. ಚಿತ್ರದುರ್ಗ ಪರಿಸರದಲ್ಲಿ ಪಶುಪಾಲಕರಿಗೆ ಸಂಬಂಧಿಸಿದ ಐತಿಹ್ಯಗಳು ಮೌಖಿಕ ಸಂಸ್ಕೃತಿಯುಳ್ಳವೆ ಹೊರತು ದಾಖಲೆ ಚರಿತ್ರೆಯಲ್ಲಿ ಕಂಡು ಬರುವುದು ತೀರಾ ವಿರಳ.

೮. ಈ ಪರಿಸರದಲ್ಲಿ ನಂಬಿಕೆ, ಸಂಪ್ರದಾಯಗಳು, ಆಚರಣೆಗಳು ಮತ್ತು ಹಬ್ಬ-ಜಾತ್ರೆಗಳು ಬಹುತೇಕವಾಗಿ ಸಮುದಾಯನಿಷ್ಟವಾಗಿರುವುದು ಕಂಡುಬರುತ್ತವೆ.

೯. ಈ ವ್ಯಕ್ತಿ ಐತಿಹ್ಯಗಳಲ್ಲಿ ವ್ಯಕ್ತಿಯ ವಿಶಿಷ್ಟ ಗುಣಗಳಿಂದ ವೀರ, ತ್ಯಾಗ, ಪ್ರಾಮಾಣಿಕತೆ, ಬಲಿದಾನ, ನಿಷೇಧ ಗೊಂಡವರ ಚರಿತ್ರೆಯು ಬಹುತೇಕವಾಗಿ ಕಂಡುಬರುತ್ತದೆ.

೧೦. ಪ್ರಾಚೀನ ಕಾಲದಲ್ಲಿ ಶೀಲ ಪಾವಿತ್ರ್ಯಕ್ಕೆ ಹೆಚ್ಚು ಮಹತ್ವ ಕೊಟ್ಟಿದ್ದರಿಂದ ಮಹಿಳೆಯರು ಮಹಾಸತಿ ಆಚರಣೆಗೆ ಬಲಿ ಆಗುತ್ತಿದ್ದರು. ಆದರೆ ಈ ಸತಿ ಆಚರಣೆಯು ಮೂಲತಃ ವೈದಿಕ ಧರ್ಮದ ಸಂಸ್ಕೃತಿಯಿಂದ ಪಶುಪಾಲಕ ಸಮುದಾಯದ ಮೇಲೆ ಹೇರಲ್ಪಟ್ಟಿದೆ. ಈ ದೃಷ್ಟಿಯಿಂದ ಇದು ಸಾಮಾಜಿಕ ಅಧ್ಯಯನಕ್ಕೆ ಹೆಚ್ಚು ಪೂರಕವಾದ ಪ್ರದೇಶವಾಗಿದೆ.

೧೧. ಈ ಪರಿಸರದಲ್ಲಿ ಬರುವ ಪಾಳೆಯಗಾರರ ಕುರಿತಂತೆ ಬೇಟೆ, ಪಶುಪಾಲನೆ ಮತ್ತು ಪಾಳೆಯಗಾರಿಕೆ ಈ ಮೂರನ್ನು ಮೇಳೈಸಿಕೊಂಡು ಇಲ್ಲಿನ ಐತಿಹ್ಯಗಳು ಪ್ರತಿನಿಧಿಸುತ್ತವೆ.

೧೨. ಈ ಪರಿಸರದಲ್ಲಿ ರಾಮ-ಸೀತೆ, ಹಿಡಿಂಬ, ರಾವಣ ಮತ್ತು ಪಾಂಡವರು ಮುಂತಾದ ಪುರಾಣ ವ್ಯಕ್ತಿಗಳನ್ನು ಸ್ಥಳೀಯ ಐತಿಹ್ಯಗಳೊಂದಿಗೆ ಸಮೀಕರಣವಾಗಿರುವುದರ ಬಗ್ಗೆ ತಿಳಿದುಬರುತ್ತದೆ. ಜೊತೆಗೆ ಪುರಾಣ ಪ್ರಸಿದ್ಧ ವ್ಯಕ್ತಿಗಳು, ಅವರು ಜೀವನದ ಯಾವುದೋ ಕಾಲಘಟ್ಟದಲ್ಲಿ ಸ್ಥಳೀಯವಾಗಿ ಜೀವಿಸಿದ್ದಾರೆಂಬ ಪ್ರತೀತಿಗಳ ಬಗ್ಗೆ ಇಲ್ಲಿ ಐತಿಹ್ಯಗಳು ಲಭ್ಯವಾಗುತ್ತವೆ.



# ಅನುಬಂಧ

೧. ವಕ್ತೃಗಳ ವಿವರ
೨. ಪರಾಮರ್ಶನ ಗ್ರಂಥಗಳು
೩. ಸಾಂಸ್ಕೃತಿಕ ಪದಕೋಶ
೪. ಚಿತ್ರದುರ್ಗ ಜಿಲ್ಲೆಯ ನಕಾಶೆ
೫. ಛಾಯಾಚಿತ್ರಗಳು

# ೧. ವಕ್ತೃಗಳ ವಿವರ

| ಕ್ರಸಂ | ಹೆಸರು | ಗಂಡು/ಹೆಣ್ಣು | ವಯಸ್ಸು | ವಿದ್ಯಾಭ್ಯಾಸ | ವೃತ್ತಿ/ಕಸುಬು | ಸಮುದಾಯ | ಸ್ಥಳ | ಮಾಹಿತಿ ಸಂಗ್ರಹ |
|---|---|---|---|---|---|---|---|---|
| ೧. | ಕೃಷ್ಣಮೂರ್ತಿ | ಗಂಡು | ೮೪ | ೧೦ನೇ ತರಗತಿ | ಗುತ್ತಿಗೆದಾರರು | ನಾಯಕ | ಚಿತ್ರದುರ್ಗ ಕೆಳಗೋಟೆ | ಚಿತ್ರದುರ್ಗ ಸ್ಥಳ ಐತಿಹ್ಯ |
| ೨. | ಈರಣ್ಣ | ಗಂಡು | ೫೯ | ಇಲ್ಲ | ವ್ಯವಸಾಯ | ನಾಯಕ | ಬಿ.ಜಿ.ಕೆರೆ | ಬಿಜಿಕೆರೆ ಸ್ಥಳ ಐತಿಹ್ಯ |
| ೩. | ಮಾರುತಿ | ಗಂಡು | ೩೫ | ಬಿ.ಎ | ವ್ಯವಸಾಯ | ರೆಡ್ಡಿ | ಗುಡ್ಡದರಂಗವ್ವನ ಹಳ್ಳಿ | ಗುಡ್ಡದರಂಗವ್ವನಹಳ್ಳಿ ಸ್ಥಳ ಐತಿಹ್ಯ |
| ೪. | ನಾಗರಾಜ. | ಗಂಡು | ೩೬ | ಬಿ.ಇಡಿ | ಶಿಕ್ಷಕರು | ಗೊಲ್ಲ | ಮಲ್ಲಪುರ | ಪಿಳ್ಳೆಕೆರನಹಳ್ಳಿ |
| ೫. | ವಿಜಯ ಕುಮಾರ್.ಡಿ. | ಗಂಡು | ೩೦ | ಎಂ.ಎ | ರೈಲ್ವೆ ನೌಕರ | ಆದಿ ಕರ್ನಾಟಕ | ಚಿತ್ರದುರ್ಗ ನಗರ | ಓಬಳದೇವರ ಗುಡ್ಡ |
| ೬. | ಕುಮಾರಪ್ಪ | ಗಂಡು | ೬೫ | ೪ನೇ ತರಗತಿ | ದೋಬಿ ಕೆಲಸ | ಮಡಿವಾಳ | ಚಿತ್ರದುರ್ಗ ನಗರ | ಜೋಗಿಮಟ್ಟಿ |
| ೭. | ಶಿವಕುಮಾರ್ ಎಂ.ಎನ್. | ಗಂಡು | ೪೫ | ಇಲ್ಲ | ಹೋಟೆಲ್ ಮಾಲೀಕರು | ಮಡಿವಾಳ | ಚಿತ್ರದುರ್ಗ ನಗರ | ಚಂದ್ರವಳ್ಳಿ |
| ೮. | ಎಂ.ಎಸ್. ಪುರಂದರ | ಗಂಡು | ೫೯ | ಸಿಪಿಇಡಿ | ಮಾ.ಗ್ರಾ.ಪಂ. ಸದಸ್ಯರು | ಮಡಿವಾಳ | ಮುಸ್ಟೂರು | ಚಿನ್ನಹಗರಿ |
| ೯. | ಕೃಷ್ಣ ಮೂರ್ತಿ | ಗಂಡು | ೮೪ | ೧೦ನೇ ತರಗತಿ | ಗುತ್ತಿಗೆದಾರರು | ನಾಯಕ | ಚಿತ್ರದುರ್ಗ ಕೆಳಗೋಟೆ | ಹಿಡಂಬಿ ಪಟ್ಟಣ |
| ೧೦. | ಜೋಸಯ್ಯ | ಗಂಡು | ೬೨ | ೧೦ನೇ ತರಗತಿ | ನಿವೃತ್ತಿ ನೌಕರ | ನಾಯಕ | ರಾಯಪುರ | ಮೊಳಕಾಲ್ಮೂರು |

| | | | | | | | | |
|---|---|---|---|---|---|---|---|---|
| ೧೧. | ಕುಮಾರಸ್ವಾಮಿ | ಗಂಡು | ೭೦ | ಪಿಯುಸಿ | ಕೃಷಿಕರು | ಲಿಂಗಾಯಿತ | ದೇವಸಮುದ್ರ | ಜಟಿಂಗರಾಮೇಶ್ವರ |
| ೧೨. | ಮಲ್ಲಿಕಾರ್ಜುನ | ಗಂಡು | ೩೫ | ಎಂ.ಎ. | ಅತಿಥಿ ಉಪನ್ಯಾಸಕರು | ಆದಿ ದ್ರಾವಿಡ | ದೇವಸಮುದ್ರ | ಏಕಾಂತತೀರ್ಥ |
| ೧೩. | ಮಲ್ಲಿಕಾರ್ಜುನ | ಗಂಡು | ೩೫ | ಎಂ.ಎ. | ಅತಿಥಿ ಉಪನ್ಯಾಸಕರು | ಆದಿ ದ್ರಾವಿಡ | ದೇವಸಮುದ್ರ | ಸೀತಾ ದೋಣಿ |
| ೧೪. | ಬೊಮ್ಮಲಿಂಗಪ್ಪ | ಗಂಡು | ೪೦ | ಬಿ.ಎ. | ವ್ಯವಸಾಯ | ನಾಯಕ | ಬೊಮ್ಮದೇವರ ಹಳ್ಳಿ | ಬೊಮ್ಮದೇವರಹಳ್ಳಿ ಸ್ಥಳ ಐತಿಹ್ಯ |
| ೧೫. | ರಮೇಶ | ಗಂಡು | ೪೨ | ೩ನೇ ತರಗತಿ | ವ್ಯವಸಾಯ | ನಾಯಕ | ನಾಗಸಮುದ್ರ | ನಾಗಸಮುದ್ರ ಸ್ಥಳ ಐತಿಹ್ಯ |
| ೧೬. | ಪಾಪಮ್ಮ | ಹೆಣ್ಣು | ೪೮ | ಇಲ್ಲ | ಕೂಲಿ | ನಾಯಕ | ಕಪ್ಪಡ ಬಂಡೆ ಹಟ್ಟಿ | ಕಪ್ಪಡ ಬಂಡೆ ಹಟ್ಟಿ ಸ್ಥಳ ಐತಿಹ್ಯ |
| ೧೭. | ಅಜ್ಜಯ್ಯ | ಗಂಡು | ೩೫ | ಎಂ.ಎ., ಬಿ.ಇಡಿ. | ಸಂಶೋಧನಾ ವಿದ್ಯಾರ್ಥಿ | ನಾಯಕ | ರಾಮದುರ್ಗ | ದೋಣಮಂಡಲ ಹಟ್ಟಿ ಸ್ಥಳ ಐತಿಹ್ಯ |
| ೧೮. | ತಿಪ್ಪೇಸ್ವಾಮಿ | ಗಂಡು | ೫೮ | ಎಂ.ಎ. | ವ್ಯವಸಾಯ | ಗೊಲ್ಲರು | ಕರಿಯೋಬಿನ ಹಳ್ಳಿ | ಕರಿಯೋಬಿನಹಳ್ಳಿ ಸ್ಥಳ ಐತಿಹ್ಯ |
| ೧೯. | ತಿಪ್ಪೇಸ್ವಾಮಿ | ಗಂಡು | ೬೮ | ೧೦ನೇ ತರಗತಿ | ರಾಜಕಾರಣಿ | ನಾಯಕ | ಎತ್ತಿನಹಟ್ಟಿ | ಎತ್ತಿನಹಟ್ಟಿ ಸ್ಥಳ ಐತಿಹ್ಯ |
| ೨೦. | ಮುತ್ತಯ್ಯ | ಗಂಡು | ೭೮ | ಇಲ್ಲ | ವ್ಯವಸಾಯ | ನಾಯಕ | ನಲಗೇತನಹಟ್ಟಿ | ನಲಗೇತನಹಟ್ಟಿ ಸ್ಥಳ ಐತಿಹ್ಯ |
| ೨೧. | ಪಾಲಮ್ಮ | ಹೆಣ್ಣು | ೫೬ | ಇಲ್ಲ | ಕೂಲಿ | ನಾಯಕ | ಬಗ್ಗಲರಂಗವ್ವನ ಹಳ್ಳಿ | ಬಗ್ಗಲರಂಗವ್ವನಹಳ್ಳಿ ಸ್ಥಳ ಐತಿಹ್ಯ |
| ೨೨. | ಶಿವರಾಜ್.ಜಿ.ಓ. | ಗಂಡು | ೨೮ | ಎಂ.ಎ., ಬಿ.ಇಡಿ. | ಸಂಶೋಧನಾ ವಿದ್ಯಾರ್ಥಿ | ನಾಯಕ | ಭೀಮಗೊಂಡನ ಹಳ್ಳಿ | ಭೀಮಗೊಂಡನಹಳ್ಳಿ ಸ್ಥಳ ಐತಿಹ್ಯ |

| | | | | | | | | |
|---|---|---|---|---|---|---|---|---|
| ೨೩. | ಪಾಲಯ್ಯ ಜೆ.ಪಿ. | ಗಂಡು | ೫೮ | ೩ನೇ ತರಗತಿ | ವ್ಯವಸಾಯ | ನಾಯಕ | ಸೂರಮ್ಮನಹಳ್ಳಿ | ಶ್ರೀಶೈಲ ಮಲ್ಲಯ್ಯನ ಎತ್ತುಗಳು/ ಸುಕ್ಲಮಲ್ಲಿನಾಯಕ/ ರೆಪ್ಪಲಸೂರಿ |
| ೨೪. | ಗೌಡ್ರು ಗಟ್ಟಯ್ಯ | ಗಂಡು | ೮೫ | ಇಲ್ಲ | ವ್ಯವಸಾಯ | ನಾಯಕ | ಸೂರಮ್ಮನಹಳ್ಳಿ | ಒಂಟಿಕೊಂಬು ಬುಲ್ಲಾವು |
| ೨೫. | ಸಣ್ಣಪಾಲಯ್ಯ | ಗಂಡು | ೪೮ | ವಯಸ್ಕರ ಶಿಕ್ಷಣ | ಕುರಿಗಾಯಿ | ನಾಯಕ | ಸೂರಮ್ಮನಹಳ್ಳಿ | ಸುಕ್ಲಮಲ್ಲಿನಾಯಕ |
| ೨೬. | ಬೋರಯ್ಯ | ಗಂಡು | ೭೫ | ಇಲ್ಲ | ದನಗಾಯಿ | ನಾಯಕ | ಬುಕ್ಕಾಂಬೂದಿ | ಗೌರಸಮುದ್ರ ಮಾರಮ್ಮ/ ಕೊಡಗಲು ಬೊಮ್ಮಂತರಾಜ |
| ೨೭. | ನಾಗರಾಜ | ಗಂಡು | ೩೦ | ೭ನೇ ತರಗತಿ | ವ್ಯವಸಾಯ | ನಾಯಕ | ಬುಕ್ಕಾಂಬೂದಿ | ಕೊಡಗಲು ಬೊಮ್ಮಂತರಾಜ |
| ೨೮. | ಪಾಲಯ್ಯ | ಗಂಡು | ೫೩ | ಇಲ್ಲ | ಕುರಿಗಾಯಿ | ನಾಯಕ | ಗೌರಸಮುದ್ರ | ಗೌರಸಮುದ್ರ ಮಾಹಿತಿ |
| ೨೯. | ಅಂಗಡಿ ಈರಣ್ಣ | ಗಂಡು | ೬೦ | ಇಲ್ಲ | ಕಿರಾಣಿ ಅಂಗಡಿ | ನಾಯಕ | ಬುಕ್ಕಂಬೂದಿ | ಕೊಡಗಲು ಬೊಮ್ಮನ ಸಮಾಧಿ |
| ೩೦. | ತಿಪ್ಪೇಸ್ವಾಮಿ | ಗಂಡು | ೬೫ | ೭ನೇ ತರಗತಿ | ವ್ಯವಸಾಯ | ಲಿಂಗಾಯಿತ | ಬುಕ್ಕಂಬೂದಿ | ಕೊಡಗಲು ಬೊಮ್ಮನಾಯಕ |
| ೩೧. | ದೊಡ್ಡಕಾಟಯ್ಯ | ಗಂಡು | ೬೦ | ಇಲ್ಲ | ವ್ಯವಸಾಯ | ನಾಯಕ | ಕಾಕಿ ಬೋರಯ್ಯನ ಹಟ್ಟಿ | ಗೌರಸಮುದ್ರ ಮಾರಮ್ಮ |
| ೩೨. | ಗಟ್ಟಪ್ಪನಾಯಕ | ಗಂಡು | ೫೩ | ವಯಸ್ಕರ ಶಿಕ್ಷಣ | ವ್ಯಾಪಾರಿ | ನಾಯಕ | ದೇವರಹಳ್ಳಿ | ಅಕ್ಕರಾಯಮ್ಮ |
| ೩೩. | ಗುರುನಾಥ | ಗಂಡು | ೪೨ | ಎಂ.ಎ. ಪಿಎಚ್.ಡಿ | ಉಪನ್ಯಾಸಕರು | ಆದಿ ಕರ್ನಾಟಕ | ಬೆಳಗಟ್ಟ | ಯರಗಟ್ಟನಾಯಕ |

| | | | | | | | | |
|---|---|---|---|---|---|---|---|---|
| ೩೪. | ಮಲ್ಲಯ್ಯ | ಗಂಡು | ೫೬ | ಇಲ್ಲ | ಕುರಿಗಾಯಿ | ನಾಯಕ | ಕರ್ನಾರಹಟ್ಟ | ಯರಗಟ್ಟನಾಯಕ |
| ೩೫. | ಕ್ಯಾತಮ್ಮ | ಹೆಣ್ಣು | ೫೨ | ಇಲ್ಲ | ಜಾನಪದ ಕಲಾವಿದರು | ನಾಯಕ | ಸೂರಮ್ಮನಹಳ್ಳಿ | ಗಾದ್ರಿಪಾಲನಾಯಕನ ಜೀವನ ಚರಿತ್ರೆ |
| ೩೬. | ಬೋರಮ್ಮ | ಹೆಣ್ಣು | ೫೪ | ಇಲ್ಲ | ಜಾನಪದ ಕಲಾವಿದರು | ನಾಯಕ | ಸೂರಮ್ಮನಹಳ್ಳಿ | ಗಾದ್ರಿಪಾಲನಾಯಕನ ಕಥನ |
| ೩೭. | ದೊರೆಬೈಯ್ಯಣ್ಣ | ಗಂಡು | ೫೨ | ಇಲ್ಲ | ಸ್ಥಳೀಯ ರಾಜಕಾರಣಿ | ನಾಯಕ | ನನ್ನಿವಾಳ | ಗಾದ್ರಿಪಾಲನಾಯಕನ ಕಥನ |
| ೩೮. | ಪಾಪಣ್ಣ | ಗಂಡು | ೩೮ | ಬಿ.ಲಿಬ್ | ಗ್ರಂಥಪಾಲಕರು | ನಾಯಕ | ನನ್ನಿವಾಳ | ಗಾದ್ರಿಪಾಲನಾಯಕನ ಕಥನ |
| ೩೯. | ಪಾಪನಾಯಕ | ಗಂಡು | ೩೮ | ಇಲ್ಲ | ಪೂಜಾರಿ | ನಾಯಕ | ಕಂಪಳದೇವರಟ್ಟಿ | ಪಾಪನಾಯಕನ ಕಥನ |
| ೪೦. | ಮಲ್ಲಿಕಾರ್ಜುನಪ್ಪ | ಗಂಡು | ೬೦ | ಇಲ್ಲ | ವ್ಯವಸಾಯ ಕಲಾವಿದರು | ನಾಯಕ | ತುಮಕೂರ್ಲಹಳ್ಳಿ | ಪಾಪನಾಯಕನ ಕಥನ |
| ೪೧. | ರಾಯಮ್ಮ | ಹೆಣ್ಣು | ೬೦ | ಇಲ್ಲ | ವ್ಯವಸಾಯ | ನಾಯಕ | ತುಮಕೂರ್ಲಹಳ್ಳಿ | ಪಾಪನಾಯಕನ ಕಥನ |
| ೪೨. | ತಿಪ್ಪೇಸ್ವಾಮಿ | ಗಂಡು | ೫೩ | ಎಂ. ಎ | ಪ್ರಿನ್ಸಿಪಾಲರು | ನಾಯಕ | ನಲಗೇತನಹಟ್ಟಿ | ಚಳ್ಳಕೆರೆ ಅಜ್ಜನಗುಡಿ ಮಾಹಿತಿ |
| ೪೩. | ಬೋರಯ್ಯ | ಗಂಡು | ೭೮ | ಇಲ್ಲ | ಕಿಲಾರಿ | ನಾಯಕ | ಕಾತ್ರಿಕೇನಹಟ್ಟಿ | ಪಾಮುಡ್ಲು ಗುರುನಾಥನ ಕಥನ |
| ೪೪. | ಗುರುಸ್ವಾಮಿ | ಗಂಡು | ೫೨ | ೧೦ನೇ ತರಗತಿ | ವ್ಯವಸಾಯ | ನಾಯಕ | ಕಾತ್ರಿಕೇನಹಟ್ಟಿ | ಪಾಮುಡ್ಲು ಗುರುನಾಥನ ಕಥನ |
| ೪೫. | ಆನಂದ | ಗಂಡು | ೪೬ | ಬಿ.ಇಡಿ | ಶಿಕ್ಷಕರು | ನಾಯಕ | ಇಂಗಳದಾಳ್ | ಪಾಮುಡ್ಲು ಗುರುನಾಥನ ಕಥನ |
| ೪೬. | ಗಾದ್ರಿಪಾಲಯ್ಯ | ಗಂಡು | ೬೪ | ೧೦ನೇ ತರಗತಿ | ನಿವೃತ್ತಿ ನೌಕರ | ನಾಯಕ | ಚಿತ್ರದುರ್ಗ ಕೆಳಗೋಟೆ | ಪಾಮುಡ್ಲು ಗುರುನಾಥನ ಕಥನ |

| | | | | | | | | |
|---|---|---|---|---|---|---|---|---|
| ೪೭. | ನಿಜಲಿಂಗಪ್ಪ | ಗಂಡು | ೬೦ | ಬಿ.ಎ | ವ್ಯವಸಾಯ | ಗೊಲ್ಲ | ಕೋಡಿಹಳ್ಳಿ (ಹಿರಿಯೂರು) | ಕಾಡುಗೊಲ್ಲರ ಮೂಲ ಹಿನ್ನೆಲೆ/ಜುಂಜಪ್ಪನ ಕಥನ |
| ೪೮. | ರಂಗಜ್ಜಿ | ಹೆಣ್ಣು | ೭೦ | ಇಲ್ಲ | ಕುರಿಗಾಯಿ | ಗೊಲ್ಲ | ಇಕ್ಕನೂರು | ಕಾಡುಗೊಲ್ಲರ ಮೂಲ ಹಿನ್ನೆಲೆ |
| ೪೯. | ತಿಮ್ಮಣ್ಣ | ಗಂಡು | ೬೨ | ಇಲ್ಲ | ವ್ಯವಸಾಯ | ಗೊಲ್ಲ | ಕೊಂಡ್ಲಹಳ್ಳಿ | ಕರಡಿಗೊಲ್ಲ ಬೆಡಗಿನ ಹಿನ್ನೆಲೆ |
| ೫೦. | ಚಿತ್ತಯ್ಯ | ಗಂಡು | ೪೦ | ಪಿಯುಸಿ | ಕುರಿಗಾಯಿ | ಗೊಲ್ಲ | ಉಪ್ಪಾರಹಟ್ಟಿ | ತಾಳಿಕಟ್ಟದ ಗೊಲ್ಲರ ಹಿನ್ನೆಲೆ |
| ೫೧. | ನಾಗರಾಜ | ಗಂಡು | ೪೦ | ಎಲ್.ಎಲ್.ಬಿ | ವಕೀಲರು | ಗೊಲ್ಲ | ಮ್ಯಾಕ್ಲೂರಹಳ್ಳಿ | ಈರಕರಿಯಣ್ಣ |
| ೫೨. | ಕಾಟಪ್ಪ | ಗಂಡು | ೬೭ | ಇಲ್ಲ | ವ್ಯವಸಾಯ | ಗೊಲ್ಲ | ಕಲಮರಹಳ್ಳಿ | ಕೋಣನತಮ್ಮಜ್ಜ |
| ೫೩. | ಸಣ್ಣಚಿತ್ತಮ್ಮ | ಗಂಡು | ೬೦ | ಇಲ್ಲ | ಆಡುಸಾಕಾಣಿಕೆ | ಗೊಲ್ಲ | ಬೇತೂರುಪಾಳ್ಯ | ಹಂದಿಸಿರಿಯಣ್ಣ |
| ೫೪. | ದೊಡ್ಡಕರಿಯಪ್ಪ | ಗಂಡು | ೫೮ | ೧೦ನೇ ತರಗತಿ | ಪೋಲಿಸ್ ಇಲಾಖೆ | ಗೊಲ್ಲ | ಮದ್ದನಕುಂಟೆ | ಈರದಿಮ್ಮವ್ವ-ಈರನಾಗಣ್ಣ |
| ೫೫. | ಮಾರಕ್ಕ | ಹೆಣ್ಣು | ೭೦ | ಇಲ್ಲ | ಕುರಿಸಾಕಾಣಿಕೆ | ಗೊಲ್ಲ | ಕರಿಓಬನಹಳ್ಳಿ | ಈರೋಬಿ |
| ೫೬. | ದಂಡೀರಣ್ಣ | ಗಂಡು | ೫೦ | ಇಲ್ಲ | ತೆಂಗಿನಕಾಯಿ ವ್ಯಾಪಾರಿ | ಗೊಲ್ಲ | ಪಿಲಾಲಿ | ಈರಮಾಸ್ತಮ್ಮ |
| ೫೭. | ಸಣ್ಣಪಾತಣ್ಣ | ಗಂಡು | ೪೫ | ೧೦ನೇ ತರಗತಿ | ಕುರಿಗಾಯಿ | ಗೊಲ್ಲ | ಹರ್ತಿಕೋಟೆ | ಕೊಂಡದ ಕಾಟವ್ವ |
| ೫೮. | ಎತ್ತಪ್ಪ ಗೌಡ | ಗಂಡು | ೬೭ | ಇಲ್ಲ | ಕುರಿಗಾಯಿ | ಗೊಲ್ಲ | ವೇಣುಕಲ್ಲುಗುಡ್ಡ | ಎತ್ತಪ್ಪನ ಕಥನ |
| ೫೯. | ಗೌಡ್ರು ಗಟ್ಟಯ್ಯ | ಗಂಡು | ೮೦ | ಇಲ್ಲ | ಕೃಷಿಕರು | ನಾಯಕ | ಸೂರಮ್ಮನಹಳ್ಳಿ | ಸೂರಮ್ಮನಹಳ್ಳಿ ಸ್ಥಳ ಐತಿಹ್ಯ |
| ೬೦. | ಜಿ.ಪಿ. ಮಲ್ಲಿಕಾರ್ಜುನ | ಗಂಡು | ೩೮ | ಬಿ.ಪಿ.ಇಡಿ | ಶಿಕ್ಷಕರು | ನಾಯಕ | ಸೂರಮ್ಮನಹಳ್ಳಿ | ಸೂರಮ್ಮನಹಳ್ಳಿ ಸ್ಥಳ ಐತಿಹ್ಯ |

| | | | | | | | | |
|---|---|---|---|---|---|---|---|---|
| ೬೧. | ಪತ್ಲರ ಓಬಯ್ಯ | ಗಂಡು | ೫೩ | ಇಲ್ಲ | ವ್ಯವಸಾಯ | ನಾಯಕ | ಸೂರಮ್ಮನಹಳ್ಳಿ | ಸೂರಮ್ಮನಹಳ್ಳಿ ಸ್ಥಳ ಐತಿಹ್ಯ |
| ೬೨. | ಗಾದ್ರಿಪಾಲಯ್ಯ | ಗಂಡು | ೫೨ | ಇಲ್ಲ | ಕಿಲಾರಿ | ನಾಯಕ | ಮುತ್ತಿಗಾರಹಳ್ಳಿ (ರೊಪ್ಪ) | ಶ್ರೀಶೈಲ ಮಲ್ಲಯ್ಯನ ಎತ್ತಗಳು |
| ೬೩. | ಶುಕ್ಲ ಮಲ್ಲಯ್ಯ | ಗಂಡು | ೩೮ | ಇಲ್ಲ | ಕಿಲಾರಿ | ನಾಯಕ | ಕರ್ನಾರಹಟ್ಟಿ (ರೊಪ್ಪ) | ಶ್ರೀಶೈಲ ಮಲ್ಲಯ್ಯನ ಎತ್ತಗಳು |
| ೬೪. | ಓಬಯ್ಯ | ಗಂಡು | ೫೩ | ಇಲ್ಲ | ಕಿಲಾರಿ | ನಾಯಕ | ಸೂರಮ್ಮನಹಳ್ಳಿ | ಗಾದ್ರಿಪಾಲ ನಾಯಕ ದೈವದ ಎತ್ತಗಳು |
| ೬೫. | ಪೂಜ್ಯಾಪ್ಪ | ಗಂಡು | ೮೦ | ಇಲ್ಲ | ಕೃಷಿಕರು | ಗೊಲ್ಲ | ನಾಗಗೊಂಡನ ಮಠ | ಚಿಲುಮೆ ಸ್ವಾಮಿ |
| ೬೬. | ಗುರುಸಿದ್ಧಪ್ಪ | ಗಂಡು | ೭೮ | ಬಿ.ಎ. | ಸಂಗೀತ ಶಿಕ್ಷಕರು | ಲಿಂಗಾಯತ | ನಾಗಗೊಂಡನ ಮಠ | ಚಿಲುಮೆ ಸ್ವಾಮಿ |
| ೬೭. | ಕೆಂಜಡಿಯಪ್ಪ | ಗಂಡು | ೫೬ | ಇಲ್ಲ | ದನಗಾಯಿ | ಗೊಲ್ಲ | ನಾಗಗೊಂಡನ ಮಠ | ಚಿಲುಮೆ ಸ್ವಾಮಿ |
| ೬೮. | ಜಗಲೂರಯ್ಯ | ಗಂಡು | ೮೦ | ಇಲ್ಲ | ಪೋತುರಾಜ | ನಾಯಕ | ಹೊಸಬೇಡರಹಟ್ಟಿ | ಚಳ್ಳಕೆರಮ್ಮ ದೇವತೆ |
| ೬೯. | ಗೋಪಾಲಯ್ಯ | ಗಂಡು | ೫೪ | ಇಲ್ಲ | ಪೋತುರಾಜ | ನಾಯಕ | ಹೊಸಬೇಡರಹಟ್ಟಿ | ಚಳ್ಳಕೆರಮ್ಮ ದೇವತೆ |
| ೭೦. | ಲಲಿತಮ್ಮ | ಹೆಣ್ಣು | ೫೨ | ಇಲ್ಲ | ಗೃಹಿಣಿ | ಬೋವಿ | ಉಳ್ಳಾರ್ತಿ | ಉಳ್ಳಾರ್ತಿ ಗೌರಮ್ಮ |
| ೭೧. | ಭೂಮಜ್ಜಿ | ಹೆಣ್ಣು | ೬೪ | ಇಲ್ಲ | ಜನಪದ ಕಲಾವಿದೆ | ಗೊಲ್ಲ | ಉಳ್ಳಾರ್ತಿ | ಉಳ್ಳಾರ್ತಿ ಗೌರಮ್ಮ |

| | | | | | | | | |
|---|---|---|---|---|---|---|---|---|
| ೭೨. | ಪುಟ್ಟಮ್ಮ | ಹೆಣ್ಣು | ೫೦ | ಇಲ್ಲ | ಸಮಾಜ ಸೇವೆ ಕಲಾವಿದೆ | ನಾಯಕ | ಉಳ್ಳಾರ್ತಿ | ಉಳ್ಳಾರ್ತಿ ಗೌರಮ್ಮ |
| ೭೩. | ವೀರಭದ್ರ ನಾಯಕ | ಗಂಡು | ೭೫ | ಪಿಯುಸಿ | ನಿವೃತ್ತ ನೌಕರ | ನಾಯಕ | ಚಳ್ಳಕೆರೆ | ಚಿತ್ರದುರ್ಗ ಪಾಳೆಯಗಾರರು |
| ೭೪. | ವೀರಭದ್ರ ನಾಯಕ | ಗಂಡು | ೭೫ | ಪಿಯುಸಿ | ನಿವೃತ್ತ ನೌಕರ | ನಾಯಕ | ಚಳ್ಳಕೆರೆ | ಚಳ್ಳಕೆರಮ್ಮ |
| ೭೫. | ವೀರಣ್ಣ | ಗಂಡು | ೮೫ | ಟಿ.ಸಿ.ಎಚ್. | ನಿವೃತ್ತ ನೌಕರ | ನಾಯಕ | ಚಳ್ಳಕೆರೆ | ಚಳ್ಳಕೆರಮ್ಮ |
| ೭೬. | ರವಿವರ್ಮ | ಗಂಡು | ೪೫ | ಬಿ.ಇ. | ಕಂಪ್ಯೂಟರ್ ಗ್ರಾಫಿಕ್ಸ್ | ನಾಯಕ | ಚಳ್ಳಕೆರೆ | ಚಳ್ಳಕೆರೆ ಐತಿಹ್ಯ |
| ೭೭. | ಚಿತ್ತಯ್ಯ | ಗಂಡು | ೪೩ | ಎಂ.ಎ. | ಉಪನ್ಯಾಸಕರು | ಗೊಲ್ಲ | ಚಳ್ಳಕೆರೆ | ಚಳ್ಳಕೆರೆ ಐತಿಹ್ಯ |
| ೭೮. | ಕರಿಯಮ್ಮ | ಹೆಣ್ಣು | ೮೨ | ಇಲ್ಲ | ಹಾಡುಗಾರ್ತಿ | ಗೊಲ್ಲ | ಉಪ್ಪಾರಹಟ್ಟಿ | ಗೌರಸಮುದ್ರ ಮಾರಮ್ಮ ಹಾಡು |
| ೭೯. | ಈರಮ್ಮ | ಹೆಣ್ಣು | ೭೨ | ಇಲ್ಲ | ಜನಪದ ಹಾಡುಗಾರ್ತಿ | ಗೊಲ್ಲ | ಕ್ಯಾತಗೊಂಡನ ಹಳ್ಳಿ | ಗೌರಸಮುದ್ರ ಮಾರಮ್ಮ ಹಾಡು |
| ೮೦. | ಬೊಮ್ಮಯ್ಯ | ಗಂಡು | ೩೦ | ಎಂ.ಕಾಂ. | ಉಪನ್ಯಾಸಕರು | ನಾಯಕ | ನಲಗೇತನಹಟ್ಟಿ | ನಲಗೇತನಹಟ್ಟಿ ಐತಿಹ್ಯ |
| ೮೧. | ಬೋರೇಶಿ | ಗಂಡು | ೩೩ | ಎಂ.ಎ. ಪಿಎಚ್.ಡಿ. | ಅತಿಥಿ ಉಪನ್ಯಾಸಕರು | ಪ.ಜಾ. | ನಲಗೇತನಹಟ್ಟಿ | ನಲಗೇತನಹಟ್ಟಿ ಐತಿಹ್ಯ |
| ೮೨. | ಬೊಮ್ಮಣ್ಣ | ಗಂಡು | ೬೫ | ೭ನೇ ತರಗತಿ | ಕೃಷಿಕರು | ನಾಯಕ | ಗೌರಸಮುದ್ರ | ತುಮ್ಮಲು ಐತಿಹ್ಯ |

| | | | | | | | | |
|---|---|---|---|---|---|---|---|---|
| ೮೩. | ಮಾರಮ್ಮ | ಹೆಣ್ಣು | ೪೮ | ಇಲ್ಲ | ಹೂವಿನ ವ್ಯಾಪಾರಿ | ನಾಯಕ | ಗೌರಸಮುದ್ರ | ತುಮ್ಮಲು ಐತಿಹ್ಯ |
| ೮೪. | ತಿಪ್ಪೇಸ್ವಾಮಿ | ಗಂಡು | ೭೨ | ಇಲ್ಲ | ಕುಲ ವೃತ್ತಿ ಹೆಳವರು | ಹೆಳವ | ಗೋಪನಹಳ್ಳಿ | ದೈವಗಳ ಮತ್ತು ಸಾಂಸ್ಕೃತಿಕ ನಾಯಕರ ಬಗ್ಗೆ |
| ೮೫. | ದೊರೆ ಬೈಯ್ಯಣ್ಣ | ಗಂಡು | ೬೫ | ಪಿಯುಸಿ | ವ್ಯವಸಾಯ ಮಾ.ಜಿ.ತಾ.ಸ. | ನಾಯಕ | ನನ್ನಿವಾಳ | ಗಾದ್ರಿಪಾಲ ನಾಯಕನ ಕಥನ |
| ೮೬. | ಪಾಪಣ್ಣ ಎಸ್. | ಗಂಡು | ೪೬ | ಎಂ.ಲಿಬ್ | ಗ್ರಂಥಪಾಲಕ | ನಾಯಕ | ನನ್ನಿವಾಳ | ನನ್ನಿಯಮ್ಮ ಐತಿಹ್ಯ |
| ೮೭. | ರೆಹಮಾನ್ ಮುತವಲಿ | ಗಂಡು | ೭೨ | ಬಿ.ಎ. | ಗರೀಬ್‌ಸಾಬ್ ಮಠದ ಅಧ್ಯಕ್ಷರು | ಮುಸ್ಲಿಂ | ಗರೀಬ್‌ಸಾಬ್ ಮಠ(ಚಳ್ಳಕೆರೆ) | ಗರೀಬ್‌ಸಾಬ್ ಐತಿಹ್ಯ |
| ೮೮. | ತಿರುಗೊಂಡಪ್ಪ | ಗಂಡು | ೫೪ | ಬಿ.ಎ. | ಕೃಷಿಕರು | ಗೊಲ್ಲ | ದೊಡ್ಡೇರಿ | ಗರೀಬ್‌ಸಾಬ್ ಐತಿಹ್ಯ |
| ೮೯. | ಶ್ರೀನಿವಾಸ | ಗಂಡು | ೩೬ | ಬಿ.ಎ. | ಪಾನ್‌ಶಾಪ್ | ಗೊಲ್ಲ | ಹಿರಿಯೂರು | ಹಿರಿಯೂರು ಐತಿಹ್ಯ |
| ೯೦. | ಮಂಜುನಾಥ ಸ್ವಾಮಿ | ಗಂಡು | ೩೫ | ಎಂ.ಎ. | ಕಂಪ್ಯೂಟರ್ ಗ್ರಾಫಿಕ್ಸ್ | ಪ.ಜಾ. | ಹಿರಿಯೂರು | ಹಿರಿಯೂರು ಐತಿಹ್ಯ |
| ೯೧. | ವೀರಣ್ಣ | ಗಂಡು | ೫೬ | ಎಂ.ಎ. | ಪ್ರಾಂಶುಪಾಲರು | ಕುಂಚಿಟಿಗ | ಧರ್ಮಪುರ | ಧರ್ಮಪುರ ಐತಿಹ್ಯ |
| ೯೨. | ಕರಿಯಣ್ಣ | ಗಂಡು | ೫೮ | ಇಲ್ಲ | ಕೃಷಿಕರು | ಕುರುಬ | ಹರಿಯಬ್ಬೆ | ಹರಿಯಬ್ಬೆ ಐತಿಹ್ಯ |
| ೯೩. | ಗೀತಾ | ಹೆಣ್ಣು | ೪೩ | ಎಂ.ಎ. ಬಿ.ಎಡ್. | ಉಪನ್ಯಾಸಕರು | ಕುರುಬ | ಹರಿಯಬ್ಬೆ | ಹರಿಯಬ್ಬೆ ಐತಿಹ್ಯ |
| ೯೪. | ನಾಗರಾಜ | ಗಂಡು | ೪೮ | ಎಂ.ಎ. | ಉಪನ್ಯಾಸಕರು | ಕುಂಚಿಟಿಗ | ಹಿರಿಯೂರು | ಕಣಜನಹಳ್ಳಿ |

| | | | | | | | | |
|---|---|---|---|---|---|---|---|---|
| ೯೫. | ಗೌಡರ ಪಾಲಯ್ಯ | ಗಂಡು | ೬೦ | ೯ನೇ ತರಗತಿ | ವ್ಯವಸಾಯ | ನಾಯಕ | ಮಾರಮ್ಮನಹಳ್ಳಿ | ಬಿಳಿನೀರು ಚಿಲುಮೆ ಐತಿಹ್ಯ |
| ೯೬. | ಸೂರ್ಯ ಪಾಪಯ್ಯ | ಗಂಡು | ೭೨ | ೧೦ನೇ ತರಗತಿ | ವ್ಯವಸಾಯ | ನಾಯಕ | ಮಾರಮ್ಮನಹಳ್ಳಿ | ಬಿಳಿನೀರು ಚಿಲುಮೆ ಐತಿಹ್ಯ |
| ೯೭. | ಪಾಲಮ್ಮ | ಹೆಣ್ಣು | ೫೧ | ಇಲ್ಲ | ಕೂಲಿ | ನಾಯಕ | ಮಾರಮ್ಮನಹಳ್ಳಿ | ಈರಣ್ಣ ಕಥೆ |
| ೯೮. | ಗುಡಿಕಾಟಯ್ಯ | ಗಂಡು | ೫೫ | ಇಲ್ಲ | ಕುರಿಗಾಯಿ | ನಾಯಕ | ಮಾರಮ್ಮನಹಳ್ಳಿ | ಈರಣ್ಣ ಕಥೆ |
| ೯೯. | ಓಬಮ್ಮ | ಹೆಣ್ಣು | ೮೦ | ಇಲ್ಲ | ಜನಪದ ಕಲಾವಿದೆ | ನಾಯಕ | ಮಾರಮ್ಮನಹಳ್ಳಿ | ಈರಣ್ಣ ಕಥೆ |
| ೧೦೦. | ಗೊಂಚಿಕಾರ ಪಾಪನಾಯಕ | ಗಂಡು | ೭೫ | ಇಲ್ಲ | ಕೃಷಿಕರು | ನಾಯಕ | ತುಮಕೂರ್ಲಹಳ್ಳಿ | ಮಲಿಯಮ್ಮನ ಐತಿಹ್ಯ |
| ೧೦೧. | ಮಲ್ಲಿಕಾರ್ಜುನ | ಗಂಡು | ೫೪ | ಇಲ್ಲ | ವ್ಯವಸಾಯ | ನಾಯಕ | ತುಮಕೂರ್ಲಹಳ್ಳಿ | ಮಲಿಯಮ್ಮನ ಐತಿಹ್ಯ |
| ೧೦೨. | ರಾಯಕ್ಕ | ಹೆಣ್ಣು | ೬೮ | ಇಲ್ಲ | ಗೃಹಿಣಿ | ನಾಯಕ | ತುಮಕೂರ್ಲಹಳ್ಳಿ | ಮಲಿಯಮ್ಮನ ಐತಿಹ್ಯ |
| ೧೦೩. | ಬೋರಯ್ಯ | ಗಂಡು | ೫೨ | ಇಲ್ಲ | ಕುರಿಗಾಯಿ | ನಾಯಕ | ತುಮಕೂರ್ಲಹಳ್ಳಿ | ಕೊಡಗಲು ಬೊಮ್ಮಯ್ಯನ ಐತಿಹ್ಯ |
| ೧೦೪. | ಮಹಾರಾಜ | ಗಂಡು | ೩೮ | ಎಂ.ಎ. | ಉಪನ್ಯಾಸಕರು | ನಾಯಕ | ದೇವಸಮುದ್ರ | ಸೀತಾದೋಣಿ ಐತಿಹ್ಯ |
| ೧೦೫. | ಹುಲುಗಪ್ಪ | ಗಂಡು | ೫೨ | ಇಲ್ಲ | ಕೂಲಿ | ಪ.ಜಾ. | ದೇವಸಮುದ್ರ | ಸೀತಾದೋಣಿ ಐತಿಹ್ಯ |
| ೧೦೬. | ಬಸಮ್ಮ | ಹೆಣ್ಣು | ೫೬ | ಇಲ್ಲ | ಕೃಷಿಕರು | ನಾಯಕ | ದೇವಸಮುದ್ರ | ಸೀತಾದೋಣಿ ಐತಿಹ್ಯ |

| | | | | | | | | |
|---|---|---|---|---|---|---|---|---|
| ೧೦೭. | ಲಿಂಗಪ್ಪ | ಗಂಡು | ೪೦ | ಬಿ.ಎ. | ಕೃಷಿಕರು | ನಾಯಕ | ಬೊಮ್ಮದೇವರ ಹಳ್ಳಿ | ಬೊಮ್ಮದೇವರ ಹಳ್ಳಿ, ಐತಿಹ್ಯ |
| ೧೦೮. | ದೇವೇಂದ್ರಪ್ಪ | ಗಂಡು | ೩೮ | ೧೦ನೇ ತರಗತಿ | ವ್ಯವಸಾಯ | ನಾಯಕ | ಬೊಮ್ಮದೇವರ ಹಳ್ಳಿ | ಬೊಮ್ಮದೇವರ ಹಳ್ಳಿ, ಐತಿಹ್ಯ |
| ೧೦೯. | ಬೊಮ್ಮಯ್ಯ | ಗಂಡು | ೫೨ | ಇಲ್ಲ | ವ್ಯವಸಾಯ | ನಾಯಕ | ನಾಗಸಮುದ್ರ | ನಾಗಸಮುದ್ರ ಐತಿಹ್ಯ |
| ೧೧೦. | ಗೌರಮ್ಮ | ಹೆಣ್ಣು | ೩೮ | ಇಲ್ಲ | ಕೃಷಿಕರು | ನಾಯಕ | ನಾಗಸಮುದ್ರ | ನಾಗಸಮುದ್ರ ಐತಿಹ್ಯ |
| ೧೧೧. | ತಿಮ್ಮಣ್ಣ | ಗಂಡು | ೮೪ | ಇಲ್ಲ | ಗಾರೆಕೆಲಸ | ಬೋವಿ | ನಾಗಸಮುದ್ರ | ನಾಗಸಮುದ್ರ ಐತಿಹ್ಯ |
| ೧೧೨. | ಲಸುಮಕ್ಕ | ಹೆಣ್ಣು | ೪೮ | ಇಲ್ಲ | ಕಟ್ಟಡ ಕಾರ್ಮಿಕರು | ಬೋವಿ | ಭಟ್ಟರಹಳ್ಳಿ | ಭಟ್ಟರಹಳ್ಳಿ ಐತಿಹ್ಯ |
| ೧೧೩. | ಮಹಾಂತೇಶ್ | ಗಂಡು | ೩೦ | ಎಂ.ಎ. | ಸಂಶೋಧಕರು | ಬೋವಿ | ಭಟ್ಟರಹಳ್ಳಿ | ಭಟ್ಟರಹಳ್ಳಿ ಐತಿಹ್ಯ |
| ೧೧೪. | ಪಾಲಯ್ಯ | ಗಂಡು | ೫೪ | ಇಲ್ಲ | ಕೃಷಿಕರು | ನಾಯಕ | ಕಪ್ಪಡ ಬಂಡೆಹಟ್ಟಿ | ಕಪ್ಪಡ ಬಂಡೆಹಟ್ಟಿ ಐತಿಹ್ಯ |
| ೧೧೫. | ಜಿ. ಪಾಲಯ್ಯ | ಗಂಡು | ೪೩ | ಎಂ.ಎ. | ಶಿಕ್ಷಕರು | ನಾಯಕ | ನಾಯಕನಹಟ್ಟಿ | ನಾಯಕನಹಟ್ಟಿ ಐತಿಹ್ಯ |
| ೧೧೬. | ಕಮಲಮ್ಮ | ಹೆಣ್ಣು | ೩೬ | ಎಂ.ಎ. | ಗೃಹಿಣಿ | ನಾಯಕ | ನಾಯಕನಹಟ್ಟಿ | ನಾಯಕನಹಟ್ಟಿ ಐತಿಹ್ಯ |
| ೧೧೭. | ದಾಸರ ಬೋರಯ್ಯ | ಗಂಡು | ೬೨ | ೭ನೇ ತರಗತಿ | ನೀರಗಂಟಿ | ನಾಯಕ | ಕುಧಾಪುರ | ಕುಧಾಪುರ ಐತಿಹ್ಯ ಬೋರೇದೇವರಹಟ್ಟ |

| | | | | | | | | |
|---|---|---|---|---|---|---|---|---|
| ೧೧೮. | ಪಾಲಮ್ಮ | ಹೆಣ್ಣು | ೫೬ | ಇಲ್ಲ | ಕೃಷಿಕರು | ನಾಯಕ | ಕುಧಾಪುರ | ಕುಧಾಪುರ ಐತಿಹ್ಯ |
| ೧೧೯. | ಅಜ್ಜಯ್ಯ | ಗಂಡು | ೪೫ | ಎಂ.ಎಸ್.ಸಿ. | ಶಿಕ್ಷಕರು | ನಾಯಕ | ಕಂಪಳದೇವರ ಹಟ್ಟಿ | ಕಂಪಳದೇವರ ಹಟ್ಟಿ ಐತಿಹ್ಯ |
| ೧೨೦. | ರೇವಣ್ಣ | ಗಂಡು | ೪೫ | ಪಿಯುಸಿ | ಪೂಜಾರಿ | ನಾಯಕ | ಕಂಪಳದೇವರ ಹಟ್ಟಿ | ಕಂಪಳದೇವರ ಹಟ್ಟಿ ಐತಿಹ್ಯ |
| ೧೨೧. | ಓಬಯ್ಯ | ಗಂಡು | ೬೮ | ಇಲ್ಲ | ಕೃಷಿಕರು | ನಾಯಕ | ಕಂಪಳದೇವರ ಹಟ್ಟಿ | ಕಂಪಳದೇವರ ಹಟ್ಟಿ ಐತಿಹ್ಯ |
| ೧೨೨. | ನಾಗರಾಜ | ಗಂಡು | ೫೦ | ಪಿಯುಸಿ | ಟೈಲರ್ | ನಾಯಕ | ಮುಷ್ಟಲಗುಮ್ಮಿ | ಮುಷ್ಟಲಗುಮ್ಮಿ ಐತಿಹ್ಯ |
| ೧೨೩. | ಕಾಂತರಾಜ | ಗಂಡು | ೫೪ | ಬಿ.ಇಡಿ. | ಶಿಕ್ಷಕರು | ಲಿಂಗಾಯತ | ಮುಷ್ಟಲಗುಮ್ಮಿ | ಮುಷ್ಟಲಗುಮ್ಮಿ ಐತಿಹ್ಯ |
| ೧೨೪. | ತಮ್ಮಯ್ಯ | ಗಂಡು | ೫೪ | ಇಲ್ಲ | ಕೃಷಿಕರು | ನಾಯಕ | ಮ್ಯಾಸರಹಟ್ಟಿ | ಮುತ್ತಿಗಾರಹಳ್ಳಿ ಐತಿಹ್ಯ |
| ೧೨೫. | ಬೋರಯ್ಯ | ಗಂಡು | ೪೬ | ಎಂ.ಲಿಬ್ | ಗ್ರಂಥಪಾಲಕರು | ನಾಯಕ | ಮ್ಯಾಸರಹಟ್ಟಿ | ಮುತ್ತಿಗಾರಹಳ್ಳಿ ಐತಿಹ್ಯ |
| ೧೨೬. | ಲಕ್ಷ್ಮಿದೇವಿ | ಹೆಣ್ಣು | ೩೬ | ಇಲ್ಲ | ಕೃಷಿಕರು | ನಾಯಕ | ಪೆತ್ತಮ್ಮರಹಟ್ಟಿ | ಅರವಜ್ಜಿ ಐತಿಹ್ಯ |
| ೧೨೭. | ತಮ್ಮಯ್ಯ | ಗಂಡು | ೫೪ | ಇಲ್ಲ | ವ್ಯವಸಾಯ | ನಾಯಕ | ಪೆತ್ತಮ್ಮರಹಟ್ಟಿ | ಅರವಜ್ಜಿ ಐತಿಹ್ಯ |
| ೧೨೮. | ಗಟ್ಟಪ್ಪನಾಯಕ | ಗಂಡು | ೫೩ | ಇಲ್ಲ | ವ್ಯಾಪಾರ | ನಾಯಕ | ದೇವರಹಳ್ಳಿ | ಗಡಾಲಗಂಗಿ ಐತಿಹ್ಯ |

| | | | | | | | | |
|---|---|---|---|---|---|---|---|---|
| ೧೨೯. | ನಾಗವೇಣಿ | ಹೆಣ್ಣು | ೪೦ | ಬಿ.ಎ. | ಗೃಹಿಣಿ | ನಾಯಕ | ಮಹಾದೇವಪುರ | ಮಹಾದೇವಪುರ ಐತಿಹ್ಯ |
| ೧೩೦. | ಕಾಟಯ್ಯ | ಗಂಡು | ೪೪ | ಇಲ್ಲ | ವ್ಯವಸಾಯ | ನಾಯಕ | ರಾಮಸಾಗರ | ನಲಟಬ್ಬ ಐತಿಹ್ಯ |
| ೧೩೧ | ತಿಪ್ಪೇಸ್ವಾಮಿ | ಗಂಡು | ೩೦ | ಎಂ.ಎ. | ವ್ಯವಸಾಯ | ನಾಯಕ | ಮಹಾದೇವಪುರ | ಮಹಾದೇವಪುರ ಐತಿಹ್ಯ |
| ೧೩೨. | ಪಾಪಣ್ಣ | ಗಂಡು | ೫೬ | ಇಲ್ಲ | ಕೂಲಿಕಾರ್ಮಿಕರು | ನಾಯಕ | ಕೊಮ್ಮನಪಟ್ಟಿ | ನುಂಕೇಮಲೆ ಐತಿಹ್ಯ |
| ೧೩೩. | ಗೋವಿಂದಪ್ಪ | ಗಂಡು | ೪೩ | ಎಂ.ಎ. | ಉಪನ್ಯಾಸಕರು | ನಾಯಕ | ಮೇಗಳಹಟ್ಟಿ | ನುಂಕೇಮಲೆ ಐತಿಹ್ಯ |
| ೧೩೪. | ಬೋರಮ್ಮ | ಹೆಣ್ಣು | ೪೮ | ಬಿ.ಇಡಿ | ಶಿಕ್ಷಕಿ | ನಾಯಕ | ಚಿತ್ರದುರ್ಗ | ಕಣಿವೆ ಮಾರಮ್ಮ ಐತಿಹ್ಯ |
| ೧೩೫. | ಮಂಜುನಾಥ | ಗಂಡು | ೩೮ | ಎಂ.ಎ. | ಪೋಲೀಸ್ | ನಾಯಕ | ಚಿತ್ರದುರ್ಗ | ಕಣಿವೆ ಮಾರಮ್ಮ ಐತಿಹ್ಯ |
| ೧೩೬. | ಸುರೇಶ | ಗಂಡು | ೩೫ | ಬಿ.ಎ. | ಪೋಲೀಸ್ | ನಾಯಕ | ಚಿತ್ರದುರ್ಗ | ಕಣಿವೆ ಮಾರಮ್ಮ ಐತಿಹ್ಯ |
| ೧೩೭. | ಈಶ್ವರಪ್ಪ | ಗಂಡು | ೪೦ | ಬಿ.ಇಡಿ | ಶಿಕ್ಷಕರು | ನಾಯಕ | ನಾಯಕನಹಟ್ಟಿ | ತಿಪ್ಪೇಸ್ವಾಮಿ ಐತಿಹ್ಯ |
| ೧೩೮. | ತಿಪ್ಪೇಸ್ವಾಮಿ | ಗಂಡು | ೪೬ | ಬಿ.ಎ. | ಕೃಷಿಕರು | ನಾಯಕ | ನಾಯಕನಹಟ್ಟಿ | ತಿಪ್ಪೇಸ್ವಾಮಿ ಐತಿಹ್ಯ |



## ೨. ಪರಾಮರ್ಶನ ಗ್ರಂಥಗಳು


೧. ಅಂಬಳಿಕೆ ಹಿರಿಯಣ್ಣ, ೧೯೯೪, **ಜಾನಪದ ಲೋಚನ**, ಪ್ರಜ್ವಲ ಪ್ರಕಾಶನ, ಬೆಂಗಳೂರು.

೨. ಅಂಬಳಿಕೆ ಹಿರಿಯಣ್ಣ, ೨೦೦೦, **ಜನಪದ ಪ್ರಕ್ರಿಯೆ; ಹಾಂಕೋದೃಷ್ಟಿ**, ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಅನ್ನಪೂರ್ಣಮ್ಮ, ೨೦೦೭, **ಮ್ಯಾಸಬೇಡರ ಸಾಂಸ್ಕೃತಿಕ ನಾಯಕಿಯರು ಒಂದು ಅಧ್ಯಯನ**, ಪಿಎಚ್.ಡಿ. ಮಹಾಪ್ರಬಂಧ(ಅಪ್ರಕಟಿತ), ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ಅರವಿಂದ ಮಾಲಗತ್ತಿ, ೧೯೯೯, **ಪುರಾಣ ಮತ್ತು ದೇಶೀ ವಾದ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೫. ಆಂಜಿನೇಯ, ೧೯೮೯, **ಚಿತ್ರದುರ್ಗ ರಾಜ ಮನೆತನದ ವಂಶಾವಳಿ**, ಗೌರಿ ಪ್ರಕಾಶನ,

೬. ಆರ್ವಿಯಸ್ ಸುಂದರಂ., ೧೯೭೬, **ಜನಪದ ಸಾಹಿತ್ಯದ ಮೂಲ ತತ್ವಗಳು**, ಅರ್ಕಾವತಿ ಪ್ರಕಾಶನ, ಮೈಸೂರು.

೭. ಈಶ್ವರಪ್ಪ ಎಂ.ಜಿ., ೧೯೯೫, **ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೮. ಕರಿಬಸಪ್ಪ, ೨೦೦೯, **ಬಳ್ಳಾರಿ ಜಿಲ್ಲೆಯ ಐತಿಹ್ಯಗಳು**, ಸಾಯಿಮಣಿ ಪ್ರಕಾಶನ, ಹೊಸಪೇಟೆ.

೯. ಕ.ರಾ.ಕೃ(ಸಂ), ೧೯೭೫, **ಚಿತ್ರಕಲ್ಲು ಮದಕರಿ**, ಜಾನಪದ ಅಕಾಡೆಮಿ, ಬೆಂಗಳೂರು.

೧೦. ಕಮಲಾ ಹಂಪನಾ, ೨೦೦೦, **ವೀರವನಿತೆ ಓಬವ್ವ**, ತುಂಗಾ ಕಾಂಪ್ಲೆಕ್ಸ್, ಗಾಂಧಿನಗರ, ಬೆಂಗಳೂರು.

೧೧. ಕೃಷ್ಣಮೂರ್ತಿ ಹನೂರು(ಸಂ), **ಜನಪದ ವೀರಗೀತೆಗಳು**, ೧೯೮೭, ಪ್ರಸಾರಾಂಗ, ಮಾನಸ ಗಂಗೋತ್ರಿ, ಮೈಸೂರು.

೧೨. ಕೃಷ್ಣಮೂರ್ತಿ ಹನೂರು(ಸಂ), ೨೦೦೫, **ಸಾವಿರದ ಸಿರಿಬೆಳಗು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩. ಕೃಷ್ಣಮೂರ್ತಿ ಹನೂರು, ೧೯೯೩, **ಮ್ಯಾಸಬೇಡರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೪. ಕೃಷ್ಣಮೂರ್ತಿ ಹನೂರು, ೨೦೦೪, **ನುಡಿಶೋಧ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೧೫. ಕೃಷ್ಣಮೂರ್ತಿ ಹನೂರು, ೨೦೦೩, **ಕತ್ತಾಲ ದಾರಿ ದೂರ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೬. ಕೆಳದಿ ಗುಂಡಾ ಜೋಯಿಸ, **ಬಿದನೂರಿನ ಕೆಳದಿನಾಯಕರು,** ೧೯೮೦, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು.

೧೭. ಕೊಸಾಂಬಿ.ಡಿ.ಡಿ.(ಮೂಲ)., ವೇಣುಗೋಪಾಲ್.ಟಿ.ಎಸ್. ಮತ್ತು ಶೈಲಜಾ(ಅನು), ೨೦೦೩, **ಪುರಾಣ ಮತ್ತು ವಾಸ್ತವ,** ಚಿಂತನ ಪ್ರಕಾಶನ, ಉತ್ತರ ಕನ್ನಡ.

೧೮. ಗಂಗಾಧರ ದೈವಜ್ಞ, ೨೦೦೦, **ಬುಡಕಟ್ಟು ಸಮಾಜ: ಹುಟ್ಟು-ಸಾವಿನ ನಡುವೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೯. ಗಂಡುಗಲಿ ಟಿ.ಎನ್., ೧೯೯೫, **ನೋಡಬನ್ನಿ ಚಿತ್ರದುರ್ಗ,** ಮದಕರಿ ಪ್ರಕಾಶನ, ಚಿತ್ರದುರ್ಗ.

೨೦. ಗಂಡುಗಲಿ ಟಿ.ಎನ್., ೧೯೯೫, **ಪ್ರಮುಖ,** ಹರ್ಷ ಪ್ರಿಂಟರ್ಸ್, ಮೈಸೂರು.

೨೧. ಗಿರಿಜ ಟಿ., ೧೯೯೧, **ಚಿತ್ರದುರ್ಗ ಜಿಲ್ಲಾ ದರ್ಶನ,** ರೇಖಾ ಪ್ರಕಾಶನ, ದಾವಣಗೆರೆ.

೨೨. ಗುರುಲಿಂಗಯ್ಯ ಎಂ., ೨೦೦೧, **ಕರ್ನಾಟಕದ ಗೊಲ್ಲ ಸಮುದಾಯ,** ಶಕ್ತಿ ಪ್ರಿಂಟರ್ಸ್ ಮತ್ತು ಪಬ್ಲಿಕೇಶನ್ಸ್, ಬೆಂಗಳೂರು.

೨೩. ಗುರುಪ್ರಸಾದ್ ಸಿ.ಟಿ., ೨೦೦೫, **ಏಳು ಊರಿನ ದೇವತೆಗಳು ಒಂದು ಅಧ್ಯಯನ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೪. ಗುರುಪ್ರಸಾದ್ ಸಿ.ಟಿ., ೨೦೧೪, **ನೀಲಗಾರರು ಸಂಕಥನ,** ಬಂಗಾರಿ ಪಬ್ಲಿಕೇಷನ್, ಶಿಗ್ಗಾಂವಿ.

೨೫. ಗೋಪಾಲ್ ಆರ್.(ಸಂ), ೨೦೦೫, **ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ.

೨೬. ಚಿಕ್ಕಣ್ಣ ಯೆಣ್ಣೆಕಟ್ಟೆ, ೨೦೦೧, **ತುಮಕೂರು ಜಿಲ್ಲಾ ಜಾನಪದ ಸಾಹಿತ್ಯ,** ಗಡಿನಾಡ ಜಾನಪದ ಸಂಪರ್ಕ ಕೇಂದ್ರ, ಸಿರಾ.

೨೭. ಚಿದಾನಂದಮೂರ್ತಿ.ಎಂ., ೧೯೭೫, **ವೀರಗಲ್ಲುಗಳು ಮತ್ತು ಮಾಸ್ತಿಗಲ್ಲುಗಳು,** ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೨೮. ಚಿದಾನಂದಮೂರ್ತಿ.ಎಂ., ೧೯೭೭, **ಗ್ರಾಮೀಣ,** ಮಲ್ಲಿಗೆ ಗ್ರಂಥಮಾಲೆ-೩೧, ಬೆಂಗಳೂರು.

೨೯. ಚಿದಾನಂದಮೂರ್ತಿ.ಎಂ., ೧೯೯೧, **ಕರ್ನಾಟಕ ಸಂಸ್ಕೃತಿ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩೦. ಜವರೇಗೌಡ ದೇ., ೨೦೦೧, **ಜಾನಪದ ಅಧ್ಯಯನ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೩೧. ಜೀ.ಶಂ.ಪರಮಶಿವಯ್ಯ, ೧೯೬೭, **ಜಾನಪದ ಬರಹಗಳು,** ಸಾಗರ ಪ್ರಕಾಶನ, ಬೆಂಗಳೂರು.

೩೨. ತ.ರಾ.ಸು. ೧೯೮೭, **ದುರ್ಗಾಸ್ತಮಾನ,** ಕಾವ್ಯಾಲಯ, ಮೈಸೂರು.

೩೩. ತಿಪ್ಪೇರುದ್ರಸ್ವಾಮಿ ಎಚ್., ೨೦೧೦, **ಕರ್ನಾಟಕ ಸಂಸ್ಕೃತಿ ಸಮೀಕ್ಷೆ,** ಡಿ.ವಿ.ಕೆ. ಪ್ರಕಾಶಕರು, ಮೈಸೂರು.

೩೪. ದಾಸೇಗೌಡ.ಜಿ.ವಿ., ೧೯೯೬, **ಜಾನಪದವನ್ನು ಕುರಿತು,** ಚೇತನ ಬುಕ್ ಹೌಸ್, ಮೈಸೂರು.

೩೫. ದಾಸೇಗೌಡ.ಜಿ.ವಿ., ೨೦೦೩, **ಕನ್ನಡ ಐತಿಹ್ಯಗಳು,** ಚೇತನ ಬುಕ್ ಹೌಸ್, ಮೈಸೂರು.

೩೬. ದೇವಿಪ್ರಸಾದ್ ಚಟ್ಟೋಪಾಧ್ಯಾಯ, ೨೦೧೧, **ಲೋಕಾಯತ,** ನವಕರ್ನಾಟಕ ಪ್ರಕಾಶನ, ಬೆಂಗಳೂರು.

೩೭. ಪ್ರಭಾಕರ ನಾ., ೧೯೯೧, **ಮದಕರಿ ನಾಡಿನಲ್ಲಿ,** ಸಂಜಯ್ ಪ್ರಿಂಟರ್ಸ್, ಮೈಸೂರು.

೩೮. ಪುಟ್ಟಣ್ಣ ಎಂ.ಎಸ್., ೧೯೯೭, **ಚಿತ್ರದುರ್ಗದ ಪಾಳಯಗಾರರು,** ಕಾವ್ಯಾಲಯ ಪ್ರಕಾಶಕರು, ಮೈಸೂರು.

೩೯. ಪುಟ್ಟಸ್ವಾಮಿ ಬಿ.ಎಸ್., ೨೦೦೭, **ಕೈಫಿಯತ್ತು ಕಂಡ ಮೈಸೂರು ರಾಜಕೀಯ ಚರಿತ್ರೆ,** ಮುದ್ದುಶ್ರೀ ಗ್ರಂಥಮಾಲೆ, ಬೆಂಗಳೂರು.

೪೦. ಪುರುಷೋತ್ತಮ ಬಿಳಿಮಲೆ, ೧೯೯೦, **ಕರಾವಳಿ ಜಾನಪದ,** ಮಂಗಳೂರು ವಿಶ್ವವಿದ್ಯಾಲಯ, ಮಂಗಳಗಂಗೋತ್ರಿ, ಮಂಗಳೂರು.

೪೧. ಪುರುಷೋತ್ತಮ ಬಿಳಿಮಲೆ ಮತ್ತು ಚಲುವರಾಜು, ೧೯೯೬, **ಹಂಪಿ ಜಾನಪದ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೨. ಪುರುಷೋತ್ತಮ ಬಿಳಿಮಲೆ, ೧೯೯೭, **ಕೂಡುಕಟ್ಟು,** ಮಲ್ಲಾಡಿಹಳ್ಳಿ; ಆನಂದಕಂದ ಗ್ರಂಥಮಾಲೆ.

೪೩. ಪುರುಷೋತ್ತಮ ಬಿಳಿಮಲೆ, ೧೯೯೯, **ಕುಮಾರರಾಮ ಮತ್ತು ಕುಮ್ಮಟದುರ್ಗ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೪. ಪುರುಷೋತ್ತಮ ಬಿಳಿಮಲೆ, ೧೯೯೯, **ಹುಲಿಗೆಮ್ಮೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೫. ಬಸವರಾಜ ಸಿ., ೨೦೧೦, **ಚಿತ್ರದುರ್ಗ ಕೋಟೆಯ ಐತಿಹ್ಯಗಳು**(ಎಂ.ಫಿಲ್. ಅಪ್ರಕಟಿತ ನಿಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೬. ಬೋರಲಿಂಗಯ್ಯ ಹಿ.ಚಿ., ೨೦೦೦, **ಬುಡಕಟ್ಟು ದೈವಾರಾಧನೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೭. ಬೋರಲಿಂಗಯ್ಯ ಹಿ.ಚಿ., ೨೦೦೧, **ಉಜ್ಜನಿ ಚೌಡಮ್ಮ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೪೮. ಮಂಜುನಾಥ ನಾಯಕ್ ಕೆ., ೨೦೧೫, **ಚಿತ್ರದುರ್ಗ ಜಿಲ್ಲಾ ದರ್ಶನ**, ಪಾರ್ವತಿ ಪ್ರಕಾಶನ, ಪಂಡರಹಳ್ಳಿ, ಚಿತ್ರದುರ್ಗ ತಾಲೂಕು.

೪೯. ಮಂಜುನಾಥ ಬೇವಿನಕಟ್ಟಿ, ೧೯೯೪, **ಜನಪದ ಸಂಸ್ಕೃತಿ**, ತೇಜಸ್ವಿನಿ ಪ್ರಕಾಶನ, ಹ್ಯಾರಡ.

೫೦. ಮಂಜುನಾಥ ಬೇವಿನಕಟ್ಟಿ, ೧೯೯೪, **ಮಲಿಯಮ್ಮ ನಿನ್ನಾಲ್ಕುದೋ... ಉದೋ...**, ಅಂಬಿಕ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್, ಹೊಸಪೇಟೆ.

೫೧. ಮಂಜುನಾಥ ಬೇವಿನಕಟ್ಟಿ, ೧೯೯೭, **ವಿಜಯನಗರ ಸಾಂಸ್ಕೃತಿಕ ಆಯಾಮಗಳು**, ಶ್ರೀವಿದ್ಯಾ ವಿಜಯನಗರ ಹಂಪಿ ಹೆರಿಟೇಜ್ ಟ್ರಸ್ಟ್, ಹೊಸಪೇಟೆ.

೫೨. ಮಂಜುನಾಥ ಬೇವಿನಕಟ್ಟಿ, ೨೦೦೩, **ಜನ ಜಾನಪದ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೩. ಮಂಜುನಾಥ ಬೇವಿನಕಟ್ಟಿ, ೨೦೦೪, **ದೇಸೀ ಚಹರೆ**, ರೂಪ ಪ್ರಕಾಶನ, ಮೈಸೂರು.

೫೪. ಮಂಜುನಾಥ ಬೇವಿನಕಟ್ಟಿ, ೨೦೦೭, **ಕನ್ನಡ ಜನಪದ ನಂಬಿಕೆಗಳು**, ಜ್ಯೋತಿ ಪ್ರಕಾಶನ, ಮೈಸೂರು.

೫೫. ಮಂಜುನಾಥ ಬೇವಿನಕಟ್ಟಿ, ೨೦೦೯, **ಕರ್ನಾಟಕ ಜನಪದ ಸ್ತ್ರೀ ದೈವಗಳ ಸಾಂಸ್ಕೃತಿಕ ಪದಕೋಶ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೬. ಮಂಜುನಾಥ ಬೇವಿನಕಟ್ಟಿ, ೨೦೧೦, **ಪರಿಷೆ V/s ಮಾನ್ಯೇವು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೭. ಮರಿಕುಂಟೆ ತಿಪ್ಪೇಸ್ವಾಮಿ, ೨೦೧೨, **ಮೊಳಕಾಲ್ಮೂರು ದರ್ಶನ**, ಪ್ರಣತಿ ಪ್ರಕಾಶನ, ಚಿತ್ರದುರ್ಗ.

೫೮. ಮೀರಾಸಾಬಿಹಳ್ಳಿ ಶಿವಣ್ಣ, ೧೯೯೯, **ಗೊಲ್ಲ ಕಡಗ**, ಸಿ.ವಿ.ಜಿ. ಪ್ರಕಾಶನ, ಬೆಂಗಳೂರು.

೫೯. ಮೀರಾಸಾಬಿಹಳ್ಳಿ ಶಿವಣ್ಣ, ೧೯೯೯, **ದುರುಗ ಜಾನಪದ**, ಶಕ್ತಿ ಮುದ್ರಣ ಮತ್ತು ಪ್ರಕಾಶನ, ಬೆಂಗಳೂರು.

೬೦. ಮೀರಾಸಾಬಿಹಳ್ಳಿ ಶಿವಣ್ಣ, ೨೦೦೩, **ಮ್ಯಾಸ ಮಂಡಲ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೬೧. ಮುತ್ತಯ್ಯ ಎಸ್.ಎಂ., ೨೦೦೮, **ಕನ್ನಡ ಜನಪದ ಮಹಾಕಾವ್ಯಗಳು ಮತ್ತು ಪ್ರತಿಸಂಸ್ಕೃತಿ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೬೨. ಮೊಗಳ್ಳಿ ಗಣೇಶ್, ೧೯೯೩, **ಮೌಖಿಕ ಕಥನ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೩. ಮೊಗಳ್ಳಿ ಗಣೇಶ್, ೨೦೦೫, **ಆದಿಮ,** ಸಾರಾಂಗ ಪ್ರಕಾಶನ, ತಿಪಟೂರು.

೬೪. ಮೊಗಳ್ಳಿ ಗಣೇಶ್, ೨೦೦೯, **ಅವ್ಯಕ್ತ ಚರಿತ್ರೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೫. ಮೊಗಳ್ಳಿ ಗಣೇಶ್, ೨೦೧೧, **ಹಂಪಿ ಜೀವಜಾಲ ಜಾನಪದ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೬. ಮೈಲಹಳ್ಳಿ ರೇವಣ್ಣ, ೧೯೮೪, **ಚಿತ್ರದುರ್ಗ ಸುತ್ತಲಿನ ಜಾನಪದ ಕಾವ್ಯಗಳು,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೬೭. ರಮೇಶ ಸ.ಚಿ., ೨೦೧೦, **ಕರ್ನಾಟಕದ ಜಾನದ ಆಚರಣೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೮. ರಮೇಶ ಸ.ಚಿ., ೨೦೦೧, **ಬೇಟೆ : ಸಾಂಸ್ಕೃತಿಕ ಪದಕೋಶ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೯. ರಾಮಚಂದ್ರೇಗೌಡ ಹಿ.ಶಿ.(ಸಂ), ೨೦೦೪, **ಜಾನಪದ ಗ್ರಹಿಕೆ : ಪರಿಕಲ್ಪನೆ,** ಕನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೭೦. ರಾಜಶೇಖರಪ್ಪ ಬಿ., (ಸಂ), **ಚಿತ್ರದುರ್ಗ ಪಾಳೆಗಾರರ ದಾಖಲೆಗಳು,** ೨೦೦೭, ಕರ್ನಾಟಕ ರಾಜ್ಯ ಪತ್ರಗಾರ ಇಲಾಖೆ, ಬೆಂಗಳೂರು.

೭೧. ರಾಜಶೇಖರಪ್ಪ ಬಿ., ೨೦೦೧, **ದುರ್ಗ ಶೋಧನ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೭೨. ರಾಜಶೇಖರಪ್ಪ ಬಿ., ೨೦೦೧, **ನಿರಂತರ,** ಶ್ರೀ ಲೋಕ ಪಾವನಿ ಪ್ರಕಾಶನ, ಪಾಂಡವಪುರ.

೭೩. ರಾಜಶೇಖರಪ್ಪ ಬಿ., ೨೦೦೧, **ಇತಿಹಾಸ ಕಥನ,** ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು.

೭೪. ರಾಜಾಗತ್ತಿ ಪರುಶರಾಮಪ್ಪ ನಾಯಕ, ೧೯೬೧, **ಚಿತ್ರದುರ್ಗದ ಗಜಕೇಸರಿ,** ಚಿತ್ರದುರ್ಗ ಪ್ರಕಾಶನ, ಚಿತ್ರದುರ್ಗ.

೭೫. ರಾಮದಾಸ ಎಸ್. ರೆಡ್ಡಿ, ೨೦೦೯, **ಚಿತ್ರದುರ್ಗ ಜಿಲ್ಲೆಯ ಪ್ರಾಕ್ಚಾರಿತ್ರಿಕ ಅಧ್ಯಯನ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೭೬. ರೈಸ್ ಬಿ.ಎಲ್., ೧೯೦೩, **ಎಪಿಗ್ರಾಫಿಯಾ ಕರ್ನಾಟಿಕ್, ಸಂಪುಟ-೧೧, ಚಿತ್ರದುರ್ಗ ಜಿಲ್ಲೆ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೭೭. ರೇಖಾ ಎಸ್.ಟಿ., ೨೦೧೩, **ಪಂಚಗಣಾಧೀಶ್ವರರು : ಪಡವಾಡಗಳು ಸಾಂಸ್ಕೃತಿಕ ಸಂಕಥನ,** ತನುಮನ ಪ್ರಕಾಶನ, ಮೈಸೂರು.

೭೮. ರಾಗೌ, ೨೦೧೨, **ನಮ್ಮ ಒಗಟುಗಳು,** ಡಿವಿಕೆ ಮೂರ್ತಿ ಪ್ರಕಾಶನ, ಮೈಸೂರು.

೭೯. ಲಕ್ಕಪ್ಪಗೌಡ ಎಚ್.ಜೆ.(ಸಂ), ೨೦೦೦, **ಜಾನಪದ ಕೈಪಿಡಿ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೮೦. ಲಕ್ಷ್ಮಣ್ ತೆಲಗಾವಿ (ಸಂ), **ವೀರಮುದ್ದಣ್ಣ ವಿರಚಿತ ಚಿತ್ರದುರ್ಗದ ಲಡಾಯಿ ಲಾವಣಿ,** ೨೦೧೦, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.

೮೧. ಲಕ್ಷ್ಮಣ್ ತೆಲಗಾವಿ (ಸಂ), **ಹರತಿಸಿರಿ,** ೧೯೮೭, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.

೮೨. ಲಕ್ಷ್ಮಣ್ ತೆಲಗಾವಿ, ೧೯೯೭, **ಇದು ಚಿತ್ರದುರ್ಗ,** ಸ್ವಾತಿ ಪ್ರಕಾಶನ,

೮೩. ಲಕ್ಷ್ಮಣ್ ತೆಲಗಾವಿ, ಶ್ರೀನಿವಾಸ ಎಂ.ವಿ.(ಸಂ), ೧೯೯೫, **ಹುಲ್ಲೂರು ಜೋಯಿಸರ ಸಂಶೋಧನಾ ಲೇಖನಗಳು,** ಹುಲ್ಲೂರು ಜೋಯಿಸ ಗ್ರಂಥ ಪ್ರಕಟಣ ಸಮಿತಿ, ಚಿತ್ರದುರ್ಗ.

೮೪. ಲಕ್ಷ್ಮಣ್ ತೆಲಗಾವಿ, ಶ್ರೀನಿವಾಸ ಎಂ.ವಿ.(ಸಂ), ೧೯೭೭, **ಹುಲ್ಲೂರು ಜೋಯಿಸರ ಐತಿಹಾಸಿಕ ಲೇಖನಗಳು,** ಹುಲ್ಲೂರು ಜೋಯಿಸ ಗ್ರಂಥ ಪ್ರಕಟಣ ಸಮಿತಿ, ಚಿತ್ರದುರ್ಗ.

೮೫. ಲಕ್ಷ್ಮಣ್ ತೆಲಗಾವಿ, ೨೦೦೪, **ಚಿತ್ರದುರ್ಗ ಜಿಲ್ಲಾ ಇತಿಹಾಸ ಅಧ್ಯಯನದ ವ್ಯಾಪಕತೆ ಮತ್ತು ಸಾಧ್ಯತೆ,** ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.

೮೬. ಲಕ್ಷ್ಮಣ್ ತೆಲಗಾವಿ, **ಚಿತ್ರದುರ್ಗದ ನಾಯಕ ಅರಸರು, ರಾಜಕೀಯ,** ೨೦೦೯, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.

೮೭. ಲಕ್ಷ್ಮಣ್ ತೆಲಗಾವಿ, ೨೦೧೦, **ಎಪ್ಪತ್ತೇಳು ಪಾಳೇಗಾರರು,** ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.

೮೮. ಲಕ್ಷ್ಮಣ್ ತೆಲಗಾವಿ ಮತ್ತು ಕೆ. ವೆಂಕಣಚಾರ್ (ಸಂ), ೧೯೭೯, **ಐತಿಹಾಸಿಕ ಚಿತ್ರದುರ್ಗ,** ಬೃಂದಾವನ ಮುದ್ರಣ, ಸರಸ್ವತಿಪುರಂ, ಮೈಸೂರು.

೮೯. ಲಕ್ಷ್ಮಣ್ ತೆಲಗಾವಿ, ೧೯೭೪, **ಚಿತ್ರಕಲ್ಲು,** ಜಿಲ್ಲಾ ಇತಿಹಾಸ ಪ್ರದರ್ಶನ ಸ್ಮರಣ ಸಂಚಿಕೆ, ಚಿತ್ರದುರ್ಗ.

೯೦. ಲಕ್ಷ್ಮಣ್ ತೆಲಗಾವಿ(ಸಂ), ೧೯೭೮, **ಚಿನ್ಮೂಲಾದ್ರಿ,** ಮದಕರಿ ಬಳಗದ ವಾರ್ಷಿಕ ಸಂಚಿಕೆ, ಮೈಸೂರು.

೯೧. ಲಕ್ಷ್ಮಣ್ ತೆಲಗಾವಿ(ಸಂ), ೧೯೭೯, **ಚಂದ್ರವಳ್ಳಿ,** ಜಿಲ್ಲಾ ಇತಿಹಾಸ ಸಂಶೋಧನ ಮಂಡಳಿ, ಚಿತ್ರದುರ್ಗ.

೯೨. ಲಕ್ಷ್ಮಣ್ ತೆಲಗಾವಿ(ಸಂ), ೧೯೮೭, **ಹರತಿಸಿರಿ–ಎಚ್.ವಿ. ವೀರನಾಯಕ ಹರತಿ ನೆನಪಿನ ಸಂಪುಟ,** ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.

೯೩. ಲಕ್ಷ್ಮಣ್ ತೆಲಗಾವಿ, ೧೯೯೭, **ಇದು ಚಿತ್ರದುರ್ಗ,** ಪ್ರಸಾರಾಂಗ, ಸ್ವಾತಿ ಪ್ರಕಾಶನ, ಬೆಂಗಳೂರು.

೯೪. ಲಕ್ಷ್ಮಣ್ ತೆಲಗಾವಿ(ಸಂ), ೨೦೦೩, **ಸ್ಥಳೀಯ ಚರಿತ್ರೆ : ಅಧ್ಯಯನದ ಸ್ವರೂಪ ಮತ್ತು ತಾತ್ವಿಕತೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯೫. ಲಕ್ಷ್ಮಣ್ ತೆಲಗಾವಿ, ೨೦೦೪, **ಇತಿಹಾಸಕಾರ ಎಚ್.ವಿ. ವೀರನಾಯಕ, 'ಹರತಿ',** ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.

೯೬. ಲಕ್ಷ್ಮೀದೇವಿ ಎಲ್., ೨೦೧೧, **ಅವಿಭಜಿತ ಕೋಲಾರ ಜಿಲ್ಲೆಯ ಐತಿಹ್ಯಗಳು,** ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.

೯೭. ಲಿಂಗಯ್ಯ ಡಿ., ೨೦೦೩, ಜಾನಪದ ಸ್ವರೂಪ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೯೮. ವಸು ಎಂ.ವಿ., ೨೦೦೧, **ದಕ್ಷಿಣ ಕರ್ನಾಟಕದ ಅರಸು ಮನೆತನಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯೯. ವಾಸುದೇವ ಬಡಿಗೇರ, ೨೦೦೨, **ಶಿರಸಂಗಿ ಕಾಳಮ್ಮ: ಸಾಂಸ್ಕೃತಿಕ ಅಧ್ಯಯನ,** ಶ್ವೇತಾ-ಭಾಗೀರಥಿ ಪ್ರಕಾಶನ, ಹೊಸಪೇಟೆ.

೧೦೦. ವಾಸುದೇವನ್.ಸಿ.ಎಸ್., ೨೦೦೧, **ಹಂಪಿ ಪರಿಸರದ ಕೆರೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦೧. ವಿರೂಪಾಕ್ಷಿ ಪೂಜಾರಹಳ್ಳಿ, ೧೯೯೯, **ಗಾದಿರಿಪಾಲನಾಯಕ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦೨. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೨, **ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦೩. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬, **ಚಿನ್ನಹಗರಿ,** ಸಿರಿ ಪ್ರಕಾಶನ, ಬಳ್ಳಾರಿ.

೧೦೪. ವಿಶ್ವನಾಥ, ೧೯೯೬, **ಸ್ಥಳನಾಮಗಳು,** ಸಂವಹನ ಪ್ರಕಾಶನ, ಮೈಸೂರು.

೧೦೫. ವೀರಣ್ಣ ದಂಡೆ, ೧೯೯೨, **ಜಾನಪದ,** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೧೦೬. ವೀರಣ್ಣ ದಂಡೆ, ೧೯೯೩, **ಕನ್ನಡ ಜಾನಪದ ಪ್ರಜ್ಞೆ,** ಕವಿಮಾರ್ಗ ಪ್ರಕಾಶನ, ಕಲಬುರ್ಗಿ.

೧೦೭. ವೀರಣ್ಣ ದಂಡೆ, ೨೦೦೩, **ದೇಸಿ(ಸಂಪುಟ-೧ ಮತ್ತು ೨),** ಭಾಗ್ಯಶ್ರೀ ಎಂಟರ್‌ಪ್ರೈಸಸ್, ಬೆಂಗಳೂರು.

೧೦೮. ವೀರಣ್ಣ ದಂಡೆ ಮತ್ತು ಶ್ರೀಪಾದಶೆಟ್ಟಿ(ಸಂ), ೨೦೦೬., **ಸುವರ್ಣ ಜಾನಪದ ಲೇಖನಗಳು,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೧೦೯. ವೇಣು ಬಿ.ಎಲ್., ೨೦೧೦, **ಚಿತ್ರದುರ್ಗದ ವೀರಪಾಳೆಯಗಾರರ ಕಥೆಗಳು,** ಶ್ರೀಮಾನ್ ಪ್ರಿಂಟೆಕ್ಸ್, ಬೆಂಗಳೂರು.

೧೧೦. ವೇಣು ಬಿ.ಎಲ್., **ಚಿತ್ರದುರ್ಗದ ಕಲ್ಲಿನ ಕೋಟೆ,** ೨೦೧೪, ವಸಂತ ಪ್ರಕಾಶನ, ಬೆಂಗಳೂರು.

೧೧೧. ವೇಣು ಬಿ.ಎಲ್., **ಗಂಡುಗಲಿ ಮದಕರಿನಾಯಕ,** ೨೦೧೩, ಗೀತಾಂಜಲಿ ಪುಸ್ತಕ ಪ್ರಕಾಶನ, ಶಿವಮೊಗ್ಗ.

೧೧೨. ಶಂಕರನಾರಾಯಣ ತೀ.ನಂ., ೧೯೮೨, **ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು,** ಪ್ರಸಾರಾಂಗ; ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೧೩. ಶಂ.ಬಾ. ಜೋಷಿ, ೧೯೯೯, ಶಂಬಾ ಕೃತಿ ಸಂಪುಟ-೧, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೧೧೪. ಶಿವಶಂಕರ್ ಚಕ್ಕೆರೆ, ೨೦೦೩, **ಜಾನಪದ ತಂತ್ರಜ್ಞಾನ,** ಕರ್ನಾಟಕ ಜಾನಪದ ಯಕ್ಷಗಾನ ಅಕಾಡೆಮಿ, ಬೆಂಗಳೂರು.

೧೧೫. ಶ್ರೀಧರಮೂರ್ತಿ ಮ., ೧೯೭೯, **ಚಿತ್ರದುರ್ಗ,** ಐಬಿಎಚ್ ಪ್ರಕಾಶನ, ಬೆಂಗಳೂರು.

೧೧೬. ಶೇಷಶಾಸ್ತ್ರೀ ಆರ್., ೨೦೦೪, **ಕರ್ನಾಟಕದ ವೀರಗಲ್ಲುಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೧೭. ಶೇಷಶಾಸ್ತ್ರಿ.ಆರ್., ೨೦೦೪, **ಕರ್ನಾಟಕದ ವೀರಗಲ್ಲುಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೧೮. ಸರಸ್ವತಿ ವಿಜಯ್‌ಕುಮಾರ್, ೧೯೯೭, **ರತ್ನತ್ರಯರು ಮತ್ತು ಜಾನಪದ,** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೧೧೯. ಸುರೇಶ ಬಿ., **ಚಿತ್ರದುರ್ಗ -ದಾವಣಗೆರೆ ಜಿಲ್ಲೆಗಳ ದೇವಾಲಯಗಳು,** ೨೦೦೯, ಸಂಶೋಧನ ಪ್ರಕಾಶನ, ಬಾಲೇನಹಳ್ಳಿ, ಚಳ್ಳಕೆರೆ(ತಾ).

೧೨೦. ಸುಬ್ಬಣ್ಣ ರೈ.ಎ., ೧೯೯೪, **ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು,** ಮುಂಬೈ ವಿಶ್ವವಿದ್ಯಾಲಯ, ಮಾರೆ ಜೂನಿಯರ್ ಛೇಂಬರ್, ಮಾಣಿ, ಮುಂಬೈ.

೧೨೧. ಸೋಮಶೇಖರ ಎಸ್.ವೈ., ೨೦೦೪, **ಜಟ್ಟಂಗಿ ರಾಮೇಶ್ವರ ಸಾಂಸ್ಕೃತಿಕ ದರ್ಶನ,** ಸುಮೇಧ ಪ್ರಕಾಶನ, ದೇವಸಮುದ್ರ, ಮೊಳಕಾಲ್ಮೂರು ತಾಲೂಕು, ಚಿತ್ರದುರ್ಗ ಜಿಲ್ಲೆ.

೧೨೨. ಸೋಮಶೇಖರ ಎಸ್.ವೈ., ೨೦೦೯, **ವಿಜಯನಗರ ಕಾಲದ ಸೈನ್ಯ ವ್ಯವಸ್ಥೆ ಮತ್ತು ಯುದ್ಧನೀತಿ,** ಸಂಚಿಕೆ ಪ್ರಕಾಶನ, ಚಿತ್ರದುರ್ಗ.

೧೨೩. ಹರ್ತಿಕೋಟೆ ವೀರೇಂದ್ರ ಸಿಂಹ(ಸಂ), ೨೦೦೨, **ಘಟ್ಟಿಹೊಸಹಳ್ಳಿ ಗಟ್ಟಿಗ,** ವಾಲ್ಮೀಕಿ ಸಂಪದ, ಚಿತ್ರದುರ್ಗ.

೧೨೪. ಹುಲ್ಲೂರು ಶ್ರೀನಿವಾಸ ಜೋಯಿಸರು, **ಚಿತ್ರದುರ್ಗ ಬಖೈರು,** ೨೦೦೯, ತಳಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ.

೧೨೫. ಹೆಬ್ಬಾಲೆ ಕೆ. ನಾಗೇಶ್, ೨೦೦೫, **ಕಾವೇರಿ ಜಾನಪದ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೨೬. ಹೆಬ್ಬಾಲೆ ಕೆ. ನಾಗೇಶ್, ೨೦೧೧, **ಬಹುಸಂಸ್ಕೃತಿ ಮತ್ತು ದೇಸಿ ಜಾತ್ರೆಗಳ ಮಹಾಸಮನ್ವಯ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಆಂಗ್ಲ ಕೃತಿಗಳು**

೧. ಕಿಟ್ಟೆಲ್.ಆರ್.ಎಫ್.(ಸಂ), ೧೯೮೩, **ಎ ಕನ್ನಡ-ಇಂಗ್ಲೀಷ್ ಡಿಕ್ಷನರಿ,** ನ್ಯೂಡೆಲ್ಲಿ; ಏಷಿಯನ್ ಎಜ್ಯುಕೇಷನಲ್ ಸರ್ವೀಸಸ್.

೨. ಗೋಪಾಲ್.ಎಮ್.ಎಚ್., ೧೯೭೮, **ದ ಹಿಸ್ಟೋರಿ ಆಫ್ ದ ವಿಜಯನಗರ ಎಂಪೈರ್(೧೩೦೮-೧೫೬೯),** ಬಾಂಬೆ; ಪಾಪ್ಯುಲರ್ ಪ್ರಕಾಶನ್.

೩. ಗೋಪಾಲ್ ಬಿ.ಆರ್., ೧೯೮೫, **ವಿಜಯನಗರ ಇನ್‌ಸ್ಕ್ರಿಪ್‌ಶನ್ಸ್(ವ್ಯಾಲ್ಯೂಮ್-I),** ಮೈಸೂರು; ಡೈರೆಕ್ಟರೇಟ್ ಆಫ್ ಆರ್ಕಿಯೋಲಜಿ ಅಂಡ್ ಮ್ಯೂಜಿಯಂ.

೪. ಚನ್ನಬಸಪ್ಪ ಎಸ್. ಪಾಟೀಲ್, ೧೯೯೨, **ಟೆಂಪಲ್ಸ್ ಆಫ್ ರಾಯಚೂರ್ ಅಂಡ್ ಬಳ್ಳಾರಿ ಡಿಸ್ಟ್ರಿಕ್ಟ್ಸ್,** ಮೈಸೂರ್; ಡೈರೆಕ್ಟರೇಟ್ ಆಫ್ ಆರ್ಕಿಯೋಲಜಿ ಅಂಡ್ ಮ್ಯೂಜಿಯಂ.

೫. ನೀಲಕಂಠಶಾಸ್ತ್ರಿ.ಕೆ.ಎ., ೨೦೦೭, **ಹಿಸ್ಟ್ರಿ ಆಫ್ ಸೌತ್ ಇಂಡಿಯಾ,** ನ್ಯೂಯಾರ್ಕ್; ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್.



## ೩. ಸಾಂಸ್ಕೃತಿಕ ಪದಕೋಶ

೧. ಆವು = ಹಸು - ಆಕಳು

೨. ಎತ್ತಿನಗೂಡು = ದೇವರೆತ್ತುಗಳು ನೆಲೆ ನಿಲ್ಲುವ ಸ್ಥಳ, ಹಟ್ಟಿ.

೩. ಒಡಪು = ಎತ್ತಿನಗೂಡಿನ ಮಧ್ಯ ಇರುತ್ತದೆ. ಕೆಂಡ ಉರಿಸುವುದು. ಇದನ್ನು ಬೂದಿ, ಧೂಳಿತ ಇತ್ಯಾದಿ.

೪. ಉದಿ-ಪದಿ = ದೇವರೆತ್ತುಗಳಿಗೆ ಪೌಳಿಯಾಕಾರವಾಗಿ(ತುಗ್ಗಲಿ, ಲೆಕ್ಕಿ, ಬಂದರಕಿ ಗಿಡದ ಸೊಪ್ಪಿನಿಂದ ಕಟ್ಟಿರುತ್ತಾರೆ.

ಪದಿ = ಲೆಕ್ಕಿ, ಬಂದರಕಿ ಸೊಪ್ಪುನಿಂದಾಗಿ ಬಾಗಿಲು ಆಕಾರವಾಗಿ ತಡಿಕೆ ಕಟ್ಟಿರುತ್ತಾರೆ.

೫. ಕಂಪಳ = ಗುಂಪು.

೬. ಕಾಸು = ಹಬ್ಬ-ಆಚರಣೆಗಳಲ್ಲಿ ಪೂಜೆಯ ನಂತರ ಕರಿಕಂಬಳಿ ಮೇಲೆ ನಿಯಮದಂತೆ ಕಾಸು ಎಂದು ನಾಣ್ಯವನ್ನು ಇರಿಸಿ ನಮಸ್ಕರಿಸುತ್ತಾರೆ.

೭. ಕಿಲಾರಿ = ದೇವರೆತ್ತುಗಳನ್ನು ಕಾಯುವನನ್ನು ಕಿಲಾರಿ ಎಂದು ಕರೆಯುತ್ತಾರೆ.

೮. ಗುಡ್ಡೆ = ಸಮಾಧಿ

೯. ಗೂಡು = ಅರಣ್ಯ ಪ್ರದೇಶದಲ್ಲಿ ಆಯಾ ಸಾಂಸ್ಕೃತಿಕ ನಾಯಕನ ಹೆಸರಿನಲ್ಲಿ ಎತ್ತುಗಳಿಗೆ ತಂಗಲು ಹಟ್ಟಿಯನ್ನು ಕಟ್ಟಿರುತ್ತಾರೆ.

೧೦. ಗೊಡಗು = ದೇವರ ಕಾರ್ಯದಲ್ಲಿ ಬಳಸುವ ವಸ್ತು, ಛತ್ರಿ, ಕೊಡೆ ಆಕಾರವಾಗಿ ಇರುತ್ತದೆ.

೧೧. ಗೊಡ್ಡು ಆಕಳು = ಬಂಜೆ ಹಸು.

೧೨. ಗೊರಸು = ದನಕರುಗಳ ಕಾಲಿನ ಗೊರಚು - ಪಾದ

೧೩. ಚೆಟ್ಲು = ಗಿಡ, ಸಸಿ, ಮರ.

೧೩. ದಡ್ಡಿ = ದನಕರಗಳು ವಾಸಿಸುವ ಸ್ಥಳ. ಇದಕ್ಕೆ ಹಟ್ಟಿ ಎನ್ನುವರು.

೧೫. ದಿಂಪನಗುಡ್ಡೆ = ಶವವನ್ನು ಊಳುವ ಮೊದಲು ಊರಿನ ಸಮೀಪವೇ ಒಂದು ತಂಗಡಿ ಗಿಡಕ್ಕೆ ಕಲ್ಲಿನ ಗುಡ್ಡೆ ಹಾಕುವರು. ಶವ ಹಿಂದೆ ಹೋದ ಪ್ರತಿಯೊಬ್ಬರು ಒಂದೊಂದು ಕಲ್ಲನ್ನು ರಾಶಿ ಹಾಕುವರು.

೧೬. ನೋಮು = ಧಾರ್ಮಿಕ ಆಚರಣೆಗಳಲ್ಲಿ ಕಂಡುಬರುವ ಪದ್ಧತಿ. ಇದನ್ನು ನಿಯಮ ಎನ್ನುವರು.

೧೭. ಪರವು = ಆಯಾ ಸಾಂಸ್ಕೃತಿಕ ನಾಯಕನ ಹೆಸರಲ್ಲಿ ಬೇಡ ಸಮುದಾಯದಲ್ಲಿ ಜವುಳ ತೆಗಿಸುವಾಗ ಬಲಿ ಕೊಟ್ಟು ಮಾಂಸದ ಅಡುಗೆ ಸೇವನೆ ಮಾಡುತ್ತಾರೆ. ಇದನ್ನು ಅಲ್ಲಿಯೇ ಖಾಲಿ ಮಾಡಿ ಬರುವುದು.

೧೮. ಪಿಲಿಗುಂಡ್ಲು = ಹುಲಿ ಕಲ್ಲುಗಳು.

೧೯. ಭತ್ಯೆ = ಇದೊಂದು ಧಾರ್ಮಿಕ ಕಾಯಕ. ಕಿಲಾರಿಯಾದವನು ಅಡವಿಯಿಂದ ಗ್ರಾಮಗಳಿಗೆ ತೆರಳಿ, ಅಕ್ಕಿ, ಧಾನ್ಯ, ಬೇಳೆಕಾಳು, ತರಕಾರಿಗಳನ್ನು ಸಂಗ್ರಹ ಮಾಡಿಕೊಂಡು ಬರುವುದು.

೨೦. ಮೀಸಲು = ಹಬ್ಬ, ಜಾತ್ರೆ ಸಂದರ್ಭದಲ್ಲಿ ದೇವರಿಗೆ ಹಾಲನ್ನು ಮೀಸಲಾಗಿ, ಮಡಿಯಿಂದ ಬರಿಗಾಲಲ್ಲಿ ನಡೆದುಕೊಂಡೆ ಹೋಗಿ ದೇವರಿಗೆ ಒಪ್ಪಿಸುವುದು.

೨೧. ಮುತ್ತಿಗಾರು = ಹಿರಿಯರು.

೨೨. ವಡೇಲು ಎತ್ತುಗಳು = ಮೂಲ ಶ್ರೀ ಶೈಲ ಮಲ್ಲಯ್ಯನ ಎತ್ತುಗಳಿಂದ ಆಗಲಿ ಹೋದ ಎತ್ತುಗಳು. ಇದುವರೆಗೂ ಇವುಗಳನ್ನು ಮೂಲ ಎತ್ತುಗಳಲ್ಲಿ ಸೇರಿಸುವುದಿಲ್ಲ.

೨೩. ವಲಬು = ಸರಹದ್ದು, ವ್ಯಾಪ್ತಿ.

೨೪. ವಾಸೆ = ಬಲಿ ಕೊಡುವುದು. ಕುರಿಯನ್ನು ಅಂಗಾತ ಮಲಗಿಸಿಕೊಂಡು ಕತ್ತನ್ನು ಕುಯ್ಯುವುದು.

೨೫. ಸೂರ್ಯನ ಮೊಕ್ಕು = ಬೇಡ ಸಮುದಾಯದ ಪ್ರತಿ ಹಬ್ಬ-ಜಾತ್ರೆ ಹಾಗೂ ಎತ್ತಿನಗೂಡಗಳಲ್ಲಿ ಸಾಮೂಹಿಕವಾಗಿ ಗುಡಿಯ ಅಂಗಳದಲ್ಲಿ ಪೂಜಾರಿ, ಕಿಲಾರಿ ಜೊತೆಗೂಡಿ ಸೂರ್ಯನಿಗೆ ಕೈಮುಗಿಯುವುದು. ಏಳು ಹೆಜ್ಜೆ ಮುಂದಕ್ಕೆ ಮುಗಿಯುತ್ತ ಹೋಗುವುದು.



## ೪. ಚಿತ್ರದುರ್ಗ ಜಿಲ್ಲೆಯ ನಕಾಶೆ





ಕಂಪಳ ದೇವರ ಗುಡಿ, ಕಂಪಳದೇವರಹಟ್ಟಿ.



ದಡ್ಡಿ ಸೂರ್ಯನಾಯಕನ ಗುಡಿ, ಹಿರೇಹಳ್ಳಿ.




ಜಟ್ಟಂಗಿ ರಾಮೇಶ್ವರ ದೇವಾಲಯ, ಮೊಳಕಾಲ್ಮೂರು(ತಾ).



ಕೋಟೆ ಪ್ರದೇಶದಲ್ಲಿರುವ ಮುರುಘಾ ಮಠ, ಚಿತ್ರದುರ್ಗ.



ತಿಪ್ಪೇಸ್ವಾಮಿ ಜಾತ್ರೆ, ನಾಯಕನಹಟ್ಟಿ.



ಹಿಡಿಂಬೇಶ್ವರ ದೇವಾಲಯ, ಚಿತ್ರದುರ್ಗ.



ಚನ್ನಕೇಶವ ದೇವಾಲಯ, ನಲಗೇತನಹಟ್ಟಿ.



ಈರಗಾರ ಈರಣ್ಣನ ಪೌಳಿ, ಮಾರಮ್ಮನಹಳ್ಳಿ



ಆದಿಮಾನವನ ಕುರುಹುಗಳು, ಅಡವಿ ಸೂರಮ್ಮನಹಳ್ಳಿ.




ತುಪ್ಪದಮ್ಮನ ಗೋಡೆಚಿತ್ರ, ನುಂಕೇಮಲೆ ಪ್ರದೇಶ.



ಕೊಡಗಲು ಬೋಮ್ಮನಾಯಕನ ಕೋಟೆ, ಊಟಿಕುಂಟೆ(ಮುತ್ತಿಗಾರರ ಕಾವಲು).



ಮಾಸ್ತಿಗಲ್ಲು, ತುಮ್ಮಲು, ಗೌರಸಮುದ್ರ.



ಗೌರಸಮುದ್ರ ಮಾರಮ್ಮ ಐಕ್ಯವಾದ ಸ್ಥಳ, ತುಮ್ಮಲು.



ಬೋರೆ ದೇವರ ಗುಡಿ, ಬೋರದೇವರ ಹಟ್ಟಿ(ಕುದಾಪುರ).



ಗೌರಸಮುದ್ರ ಮಾರಮ್ಮ ದೇವಾಲಯ, ಗೌರಸಮುದ್ರ.



ಮುತ್ತಿಗಾರು ದೇವರ ಎತ್ತುಗಳು, ನನ್ನಿವಾಳ.



ಬಳೇಗಾರನ ಸಮಾಧಿ, ತುಮ್ಮಲು.



ದೇವರ ಎತ್ತುಗಳ ಕಿಲಾರಿಗಳು, ನನ್ನಿವಾಳ.



ಅಡವಿ ಮಲಿಯಮ್ಮ, ತುಮಕೂರ್ಲಹಳ್ಳಿ.




ಯರಗಟ್ಟನಾಯಕನ ದೇವಾಲಯ, ಬೆಳಗಟ್ಟ.



ಕಂಪಳ ದೇವರ ಪೌಳಿ, ಕಂಪಳದೇವರಹಟ್ಟಿ.



ಗೌರಸಮುದ್ರ ಮಾರಮ್ಮ ಸಿಡಿ ಉತ್ಸವ, ಗೌರಸಮುದ್ರ.



ತಿಪ್ಪೇಸ್ವಾಮಿ ಹೊರಮಠ, ನಾಯಕನಹಟ್ಟಿ.



ಶ್ರೀಶೈಲ ಮಲಯ್ಯನ(ಮುತ್ತಿಗಾರರ) ಎತ್ತುಗಳ ಪೌಳಿ, ಮುತ್ತಿಗಾರರ ಕಾವಲು.



ದೀಪಸ್ತಂಭ, ಬ್ರಹ್ಮಗಿರಿ.



ಕಡೆಗಂಭ, ಮಿಂಚೇರಿ.



ಮಾನವ ಆಕಾರದ ಶಿಲೆ(ರಾಕ್ಷಸ ಕಲ್ಲು),
ಕುಮತಿ.



ಶ್ರವಣಕುಮಾರನ ಶಿಲೆ, ಧರ್ಮಪುರ.


ಗುರುನಾಥ ದೇವಾಲಯ, ಓಬಣ್ಣನಹಳ್ಳಿ.


ನಾಗರ ಹೆಡೆಕಟ್ಟಿದ ಹಬ್ಬ,
ಕಂಪಳದೇವರಹಟ್ಟಿ.


ಸತಿಕಲ್ಲು, ಗಂಜಿಗಟ್ಟಿ.


ದೀಪಸ್ತಂಭ, ತುಮ್ಮಲು.



ರಾಮದೇವಾಲಯ, ಚಿಕ್ಕೇರಹಳ್ಳಿ.



ನುಂಕಪ್ಪನ ದೇವಸ್ಥಾನ, ನುಂಕೇಮಲೈ.



ಸೀತಾ ದೋಣಿ, ಮೊಳಕಾಲ್ಮೂರು(ತಾ).




ಗಾದ್ರಿಪಾಲನಾಯಕ ದೇವಸ್ಥಾನ, ಸೂರಮ್ಮನಹಳ್ಳಿ.



ಕಂಪಳರಂಗ ಜಾತ್ರೆಯಲ್ಲಿ ಪಾಪನಾಯಕನ ದೇವರ ಎತ್ತುಗಳನ್ನು ಮೆರೆಸುತ್ತಿರುವುದು.



ಡಿಕ್ಕಿ ಹಬ್ಬದಲ್ಲಿ ಭಾಗವಹಿಸಿರುವ ಮಹಿಳೆಯರು, ನನ್ನಿವಾಳ.


ಪಾರ್ವತಿ ಪರಮೇಶ್ವರರು ನಂದಿವಾಹನ ಇಳಿಸಿದ ಸ್ಥಳ, ನನ್ನಿವಾಳ.


ಮೆರವಣಿಗೆಯಲ್ಲಿ ನನ್ನಿವಾಳ ಕಟ್ಟೆಮನೆಯ ದೊರೆ.


ಡೀಬಿ ಸಲಾಂ ಕೊಡುವ ಕುಲದ ಹಿರಿಯರು. ನನ್ನಿವಾಳ.



ಗುಹಾಂತರ ದೇವಾಲಯ ಮತ್ತು ಕೋಟೆ, ಹೊಸಗುಡ್ಡ.



ಗುಹಾಂತರ ದೇವಾಲಯ, ಹೊಸಗುಡ್ಡ.



ಚಿನ್ನಹಗರಿ ನದಿ.



ಚಳ್ಳಕೇರಮ್ಮ ದೇವಸ್ಥಾನ, ಚಳ್ಳಕೆರೆ.



ಕಾಟೇಮಲ್ಲನಾಯಕನ ಸಮಾಧಿ, ಹೊಸಗುಡ್ಡ.



ಗರೀಬ್ ಸಾಬ್ ಮಠ, ಚಳ್ಳಕೆರೆ.

